# ಗುಡ್ಡದ ಮಲ್ಲಯ್ಯ (ಮೀನಗುಂದಿ ಮಲ್ಲಯ್ಯ)
# ಆಚರಣೆ ಒಂದು ಜಾನಪದೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕ

ಜಿ. ವೆಂಕಟೇಶ

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ







ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಗುಡ್ಡದ ಮಲ್ಲಯ್ಯ [ಮೀನಗುಂದಿ ಮಲ್ಲಯ್ಯ] ಆಚರಣೆ ಒಂದು ಜಾನಪದೀಯ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ

ಜಿ. ವೆಂಕಟೇಶ

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬.

೨೦೦೨-೨೦೦೩

# ಸಂಶೋಧಕರ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ **'ಗುಡ್ಡದ ಮಲ್ಲಯ್ಯ (ಮೀನಗುಂದಿ ಮಲ್ಲಯ್ಯ) ಆಚರಣೆ ಒಂದು ಜಾನಪದೀಯ ಅಧ್ಯಯನ'** ಎಂಬ ವಿಷಯವನ್ನು ಕುರಿತು ಸಂಶೋಧನೆ ಮಾಡಿದುದರ ಫಲ ಈ ಮಹಾಪ್ರಬಂಧ. ೨೦೦೨-೦೩ನೇ ಶೈಕ್ಷಣಿಕ ಸಾಲಿನ ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. ಈ ಮೊದಲು, ಈ ಮಹಾಪ್ರಬಂಧವನ್ನು ವಿಶ್ವವಿದ್ಯಾನಿಲಯದ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೦೫-೦೬-೨೦೦೩
ಸ್ಥಳ : ವಿದ್ಯಾರಣ್ಯ

(ಜಿ. ವೆಂಕಟೇಶ)
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬.

# ಮಾರ್ಗದರ್ಶಕರ ಪ್ರಮಾಣ ಪತ್ರ

ಜಿ.ವೆಂಕಟೇಶ ಇವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ **‘ಗುಡ್ಡದ ಮಲ್ಲಯ್ಯ (ಮೀನಗುಂದಿ ಮಲ್ಲಯ್ಯ) ಆಚರಣೆ ಒಂದು ಜಾನಪದೀಯ ಅಧ್ಯಯನ’** ಎಂಬ ಮಹಾ ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ೨೦೦೨-೦೩ನೇ ಶೈಕ್ಷಣಿಕ ಸಾಲಿನ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಈ ಮಹಾ ಪ್ರಬಂಧ ಭಾಗಶಃವಾಗಲಿ, ಪೂರ್ಣವಾಗಿ ಆಗಲಿ ಬೇರಾವುದೇ ಉದ್ದೇಶ ಅಥವಾ ಯಾವುದೇ ಪದವಿಗಾಗಿ ಈ ಹಿಂದೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೦೫-೦೬-೨೦೦೩
ಸ್ಥಳ : ವಿದ್ಯಾರಣ್ಯ.

ಮಾರ್ಗದರ್ಶಕರು

**(ಮಂಜುನಾಥ ಬೇವಿನಕಟ್ಟಿ)**
ಮುಖ್ಯಸ್ಥರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬.

# ನಿವೇದನೆ

ನನಗೆ ಮೊದಲಿನಿಂದಲೂ ಜಾನಪದ ಕ್ಷೇತ್ರದಲ್ಲಿ ಅಧ್ಯಯನ ಕೈಗೊಳ್ಳಬೇಕೆಂದು ತುಂಬಾ ಆಸಕ್ತಿಯಿತ್ತು. ಕಾರಣ ವಕ್ತೃಗಳನ್ನು ಸಂದರ್ಶಿಸಿ, ಅವರ ಆಚಾರ-ವಿಚಾರ, ಅವರಲ್ಲಿರುವ ಹಾಡು, ಕಥೆ, ಒಡಪು ಮುಂತಾದವುಗಳನ್ನು ಸಂಗ್ರಹಿಸಿ ಅವರೊಂದಿಗೆ ಬೆರೆಯುವುದೆಂದರೆ; ನನಗೆ ಎಲ್ಲಿಲ್ಲದ ಆಸಕ್ತಿ. ಈ ಹಿನ್ನೆಲೆಯಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಜಾನಪದ ಅಧ್ಯಯನ ವಿಭಾಗದಲ್ಲಿ ಅಧ್ಯಯನ ಕೈಗೊಳ್ಳಲು ಅವಕಾಶ ಸಿಕ್ಕಿದ್ದಕ್ಕೆ ನನಗೆ ತುಂಬಾ ಖುಷಿಯಾಗಿದೆ. 'ಶ್ರೀ ಆದಿ ಮೀನಗೊಂದಿ ಮಲ್ಲಯ್ಯ'ನ ಕ್ಷೇತ್ರಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯವನ್ನು ತುಂಬಾ ವ್ಯವಸ್ಥಿತವಾಗಿ ಮಾಡಿರುವೆನು. ವಿಶೇಷವಾಗಿ ಹಾಡುಗಳನ್ನು ಸಂಗ್ರಹಿಸುವಾಗ ಬಹಳ ಉತ್ಸುಕನಾಗಿ ಕಾರ್ಯ ನಿರ್ವಹಿಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದೇನೆ.

ಮೊದಲಿಗೆ ನನಗೆ ಅಕ್ಷರದೀಕ್ಷೆ ಕೊಡಿಸಿ, ನಾನು ಅರಳುವ ಮುನ್ನವೇ ಮರೆಯಾದ ಅಮ್ಮನನ್ನು ಸ್ಮರಿಸುತ್ತಾ, ನನ್ನೆಲ್ಲಾ ಸಿಟ್ಟು-ಸೆಡವುಗಳನ್ನು ಸಹಿಸಿಕೊಂಡು ಪ್ರೀತಿಯಿಂದಲೇ ಓದು ಎಂದು ಬೆನ್ನುತಟ್ಟಿದ ಅಪ್ಪನಿಗೆ ಪ್ರಣಾಮಗಳು. ನನ್ನ ಓದು ಮತ್ತು ಬದುಕಿನ ಬಗ್ಗೆ ಅಪಾರ ಕಾಳಜಿ ಹಾಗೂ ಪ್ರೀತಿಯನ್ನು ಇಟ್ಟು, ನನ್ನನ್ನು ಸಲುಹಿದ ದೊಡ್ಡಣ್ಣನಿಗೆ, ತಾಯಿ ಮಮತೆ ತೋರಿ ಬೆಳೆಸಿದ ನನ್ನ ದೊಡ್ಡತ್ತಿಗೆಗೆ, ನನ್ನ ಅಧ್ಯಯನಕ್ಕೆ ಆಗಾಗ್ಗೆ ಎಲ್ಲಾ ವಿಧದಲ್ಲಿ ಸಹಕರಿಸಿ, ಚರ್ಚಿಗಿಳಿದು ಅಧ್ಯಯನಕ್ಕೆ ಮತ್ತಷ್ಟು ಪ್ರೋತ್ಸಾಹ ನೀಡಿದ ಸಣ್ಣಣ್ಣನಿಗೆ, ಹನುಮಣ್ಣನಿಗೆ ಹಾಗೂ ಪರಶುರಾಮಣ್ಣನಿಗೆ ಮತ್ತು ನನ್ನ ಎಲ್ಲಾ ಅತ್ತಿಗೆಯರಿಗೆ ನನ್ನ ಕೃತಜ್ಞತೆಗಳು. ಸಂಶೋಧನೆಯಲ್ಲಿ ನನಗೆ ಸಹಕರಿಸಿ ಸಿದ್ಧಬರಹದಲ್ಲಿ ತನ್ನ ಪಾಲನ್ನು ನೀಡಿದ ಮಗಳು ಆದಿಲಕ್ಷ್ಮಿ, ಅಳಿಯ ಹೊನ್ನೂರುಸ್ವಾಮಿ ಹಾಗೂ ಎಲ್ಲಾ ಪುಟಾಣಿಗಳಿಗೆ ನಾನು ಚಿರಋಣಿ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಮಾಡಲು ಅವಕಾಶ ಕಲ್ಪಿಸಿಕೊಟ್ಟ ಕುಲಪತಿಗಳಾದ ಡಾ.ಎಂ.ಎಂ.ಕಲಬುರ್ಗಿ ಮತ್ತು ಈಗಿನ ಕುಲಪತಿಗಳಾದ ಡಾ.ಎಚ್.ಜೆ. ಲಕ್ಕಪ್ಪಗೌಡರು ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಕುಲಸಚಿವರಾದ ಪ್ರೊ.ಮಲ್ಲೇಪುರಂ ವೆಂಕಟೇಶ ಅವರಿಗೂ ಮತ್ತು ಈಗಿನ ಕುಲಸಚಿವರಾದ ಡಾ.ಕೆ.ವಿ. ನಾರಾಯಣ ಅವರಿಗೆ ನಾನು ಕೃತಜ್ಞನಾಗಿರುತ್ತೇನೆ.

ನಾನು ಅಧ್ಯಯನ ಕೈಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟು, ನನ್ನ ಸೋಮಾರಿತನಗಳನ್ನೆಲ್ಲಾ ಸಹಿಸಿಕೊಂಡು ಪ್ರೀತಿಯಿಂದಲೇ ಮಾರ್ಗದರ್ಶನ ಮಾಡಿದ ಪ್ರೀತಿಯ ಗುರುಗಳು, ಜಾನಪದ ವಿಭಾಗದ ಮುಖ್ಯಸ್ಥರೂ ಆದ ಡಾ. ಮಂಜುನಾಥ ಬೇವಿನಕಟ್ಟಿಯವರಿಗೆ ನಾನು ಚಿರಋಣಿ.

ವಿಭಾಗದ ಅಧ್ಯಾಪಕರುಗಳಾದ ಡಾ.ಸ.ಚಿ.ರಮೇಶ್,ಡಾ.ಮೋಗಳ್ಳಿ ಗಣೇಶ್,ಡಾ.ಹೆಚ್.ಕೆ. ನಾಗೇಶ್, ಡಾ.ಹರಿಶ್ಚಂದ್ರ ದಿಗ್ಸಂಗೀಕರ್,ಡಾ. ಸಿ.ಟಿ. ಗುರುಪ್ರಸಾದ್ ಅವರಿಗೂ ಹಾಗೂ ವಿಭಾಗದ ಬೋಧಕೇತರ ಸಿಬ್ಬಂದಿಗೂ ನನ್ನ ಕೃತಜ್ಞತೆಗಳು. ನನ್ನ ಅಧ್ಯಯನದಲ್ಲಿ ಸೂಕ್ತ ಸಲಹೆ ಸೂಚನೆ ಗಳನ್ನು ನೀಡಿದ ಪ್ರೀತಿಯ ಗುರುಗಳು, ವಿದ್ವಾಂಸರೂ ಆದ ಡಾ.ಮೃತ್ಯುಂಜಯ ಹೊರಕೇರಿ, ಡಾ.ಶಾಂತಿನಾಥ ದಿಬ್ಬದ, ಡಾ. ಶ್ರೀಮತಿ ಶಾರದ, ಶ್ರೀ ಮಾನಕರಿ ಶ್ರೀನಿವಾಸಾಚಾರ್ಯ, ಶ್ರೀ ಜಿ. ಆರ್. ವೆಂಕಟೇಶಲು, ಶ್ರೀ ಗೋಪಾಲ, ಶ್ರೀ ಕರಿಯಪ್ಪ ಅವರಿಗೆ ನನ್ನ ಕೃತಜ್ಞತೆಗಳು. ನನಗೆ ಕ್ಷೇತ್ರಕಾರ್ಯದಲ್ಲಿ ತನ್ನೆಲ್ಲಾ ಕೆಲಸಗಳನ್ನು ಬದಿಗಿರಿಸಿ, ನನ್ನೊಂದಿಗೆ ಸಹಕರಿಸಿ ಕ್ಷೇತ್ರ ಕಾರ್ಯವನ್ನು ಕೈಗೊಂಡು, ಅವರ ಮನೆಯಲ್ಲಿಯೇ ಉಳಿದುಕೊಳ್ಳಲು ವ್ಯವಸ್ಥೆ ಕಲ್ಪಿಸಿ, ಮರೆಯಲಾಗದ ಅನುರಾಗವನ್ನು ಕಲ್ಪಿಸಿಕೊಟ್ಟ ಎಳ್ಳಾರ್ತಿಯ ಜಾಜಿ ದೇವೇಂದ್ರಪ್ಪನವರಿಗೆ ನಾನು ಚಿರಋಣಿ. ಹಾಗೂ ಅಷ್ಟೇ ಪ್ರೀತಿ-ವಿಶ್ವಾಸಗಳಿಂದ ನನ್ನ ಮೇಲೆ ಪ್ರೀತಿ ತೋರಿದ ಜಾಜಿಯವರ ಅಜ್ಜಿ, ಅಮ್ಮ, ಅಪ್ಪ, ತಮ್ಮ ರಾಘವೇಂದ್ರ ಹಾಗೂ ಕುಟುಂಬದ ಎಲ್ಲರಿಗು ನಾನು ಕೃತಜ್ಞನಾಗಿರುತ್ತೇನೆ.

ನಾನು ಸಂಶೋಧನೆಯ ಕ್ಷೇತ್ರಕ್ಕೆ ಕಾಲಿಟ್ಟ ಸಂದರ್ಭದಲ್ಲಿ ಬಳ್ಳಾರಿಯ ಆಶೀರ್ವಾದ ಶಾಲೆಯಲ್ಲಿ ಶಿಕ್ಷಕನಾಗಿ ಸೇವೆ ಸಲ್ಲಿಸಿದ್ದೆ. ಆಗ ನನಗೆ ಸಹಕರಿಸಿದ ಎಲ್ಲಾ ನನ್ನ ಸಿಬ್ಬಂದಿವರ್ಗದವರಿಗೂ, ವೆಂಕಟೇಶ ಮೂರ್ತಿ, ಶರಣಪ್ಪ, ಗಂಗಾಧರ ಪತ್ತಾರ್, ಶ್ರೀನಿವಾಸ, ನಾಗರಾಜ, ಬಸವರಾಜ, ಸುರೇಶ, ನಾಗರಾಜ, ಜಿ.ವೆಂಕಟೇಶ್ ಐಹೊಳೆ ಮುಂತಾದ ನನ್ನ ಶಿಕ್ಷಕವೃಂದದ ಬಳಗಕ್ಕೆ, ಬಳ್ಳಾರಿಯ ಬೆಸ್ಟ್ ಶಾಲೆಯಲ್ಲಿ ಶಿಕ್ಷಕನಾಗಿ ಸೇರಿ ಕಾರ್ಯನಿರ್ವಹಿಸುವಾಗ ಕನ್ನಡ ವಿಭಾಗದ ಹಿರಿಯರೂ, ಸಾಹಿತಿಗಳೂ ಆದ ಹವಾಲ್ದಾರ್ ರಘುನಾಥ್, ಮಲ್ಲಿಕಾರ್ಜುನ, ಮಂಜುನಾಥ ಇವರುಗಳು ನನ್ನ ಸಂಶೋಧನೆಯನ್ನು ಗಮನಿಸಿ ಸಮಯದ ಅಭಾವವನ್ನು ಅರಿತು ಪ್ರೀತಿಯಿಂದಲೇ ನನ್ನ ಪಾಲಿನ ಪಾಠಗಳನ್ನು ಕೆಲವೊಮ್ಮೆ ಅವರೇ ನಿರ್ವಹಿಸಿ ನನ್ನ ಈ ಪ್ರಬಂಧ ರಚನೆಗೆ ಸಹಕರಿಸಿ ಪ್ರೋತ್ಸಾಹ ನೀಡಿದ ಅವರಿಗೆ, ಪ್ರಾಂಶುಪಾಲರಿಗೆ, ನಿರ್ದೇಶಕರುಗಳಿಗೆ, ಕಾರ್ಯದರ್ಶಿಗಳಿಗೆ ಹಾಗೂ ನನ್ನ ಸಿಬ್ಬಂದಿ ವರ್ಗದ ಎಲ್ಲರಿಗೂ ನನ್ನ ಕೃತಜ್ಞತೆಗಳು. ಪ್ರೀತಿಯಿಂದಲೇ ''ಯಾವಾಗ್ಲೂ ಏನನ್ನೋ ಬರೀತಾ ಇರ್‍ತಿರಲ್ಲ ಸಾರ್!! ಅದೇನು?'' ಎಂದು ಪ್ರಶ್ನಿಸುತ್ತಲೇ ನನ್ನ ಪರಿಸ್ಥಿತಿಗೆ ಸಹಕರಿಸಿ, ''ನೀವು ಡಾಕ್ಟ್ರು ಅಂತ ಯಾವಾಗ ಆಗ್ತೀರಾ ಸಾರ್'' ಎಂದು ಕೇಳಿ ನನ್ನ ಸಂಶೋಧನೆಯ ಕಾರ್ಯವನ್ನು ಎಚ್ಚರಿಸುತ್ತಿದ್ದ ನನ್ನ ಪ್ರೀತಿಯ ವಿದ್ಯಾರ್ಥಿ ಬಳಗಕ್ಕೆ ಹೃದಯ ಪೂರ್ವಕ ಕೃತಜ್ಞತೆಗಳು.

ನನಗೆ ಅಧ್ಯಯನದ ಪೂರ್ವಪರ ವಿಚಾರಗಳನ್ನು ತಿಳಿಸಿ ಹೇಳಿದ ಮಾವನವರಾದ ಸಣ್ಣ ಶಿವರಾಂ, ಕುಮಾರಸ್ವಾಮಿ, ಅಕ್ಕ ವಿ.ಸಿ.ವಾಣಿ, ಉಮಾ ವಿ. ಪಾಟೀಲ್, ಲತಾ, ಸೀತಾ ಅವರಿಗೆ ಸಂಶೋಧನ ಸಂದರ್ಭದಲ್ಲಿ ಚರ್ಚೆಗಿಳಿದು ಸಹಕರಿಸಿದ ಗೆಳೆಯ ಹಾಗೂ ಹಿರಿಯರಾದ ಚಂದ್ರಶೇಖರ್ ಸಾಂಬ (ಮರಿಯಮ್ಮನಹಳ್ಳಿ), ಸಣ್ಣ ಪಾಪಯ್ಯ, ಊಳೂರು ಬಸವರಾಜ, ಶಿಕ್ಷಕ ಮಿತ್ರ ಹಾಲೇಶ್, ಮೈಲಾರಪ್ಪ, ಪುಟ್ಟ ರಂಗಪ್ಪ, ಕೆ.ಹೆಚ್. ರಮೇಶ್, ಕೃಷ್ಣ, ಶ್ರೀಕಾಂತ, ಮೋಹನ್, ರವಿ, ವೀರೇಶ್, ಅಪ್ಪಯ್ಯ, ಗೊನಾಳ ರಮೇಶ್, ಹಮ್ಮಿಗಿ ನಾಗರಾಜ, ಕವಿತಾರಾಣಿ, ಕವಿತಾ, ಅಡಿವೆಪ್ಪ, ನಂದಿಹಳ್ಳಿ ನಾಗರಾಜ, ಮೃತ್ಯುಂಜಯ, ಬಣಕಾರ ವೀರೇಶ, ರಾಜು ಮುಂತಾದ ನನ್ನ ಎಲ್ಲಾ ಗೆಳೆಯರಿಗೆ, ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿನ ಸಂಶೋಧನಾ ಮಿತ್ರರಾದ ಸಿ. ಮಂಜುನಾಥ, ಶ್ಯಾಂಮೂರ್ತಿ, ಟಿ. ರೇವಣ್ಣ, ಚಂದ್ರಪ್ಪ ಉಪ್ಪಾರ ಮುಂತಾದವರಿಗೆ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನೆಯ ಕಾರ್ಯದಲ್ಲಿ ತನ್ನ ಕೆಲಸಗಳನ್ನು ಬದಿಗೊತ್ತಿ ನನ್ನೊಂದಿಗೆ ಚರ್ಚಿಸಿ, ಸಹಕರಿಸಿ ನನ್ನೆಲ್ಲಾ ಬರವಣಿಗೆ ವಿಮರ್ಶಕನಾಗಿ ನಿಂತ ಅಳಿಯ ಕೆ.ರಮೇಶಕುಮಾರ ವಾಲ್ಮೀಕಿಗೆ ನಾನು ಸದಾ ಚಿರಋಣಿ. ತಮ್ಮ ತಾಯಪ್ಪನಿಗೆ, ಮಗ ಹಾಗೂ ಮಿತ್ರನಾದ ಶಿವಪ್ಪನಿಗೆ ಗೆಳೆಯರಾದ ಬಿ.ವಿ. ಪ್ರಕಾಶ, ಎ.ಎಂ.ಪಿ. ವೀರೇಶ ಸ್ವಾಮಿ, ಜಂಬೂರಿ ಕೊಟ್ರೇಶ್, ಸುಭಾಷ, ಶೇಕಣ್ಣ, ಮಲ್ಲಿಕಾರ್ಜುನ ಹೀಗೆ ಎಲ್ಲಾ ನನ್ನ ಗೆಳೆಯರಿಗೆ ನನ್ನ ಕೃತಜ್ಞತೆಗಳು.

ಕ್ಷೇತ್ರ ಕಾರ್ಯಕ್ಕೆ ಹೊರಟಾಗ ಕ್ಷೇತ್ರದಲ್ಲಿ ಸಹಕರಿಸಿ, ಮಾಹಿತಿ ನೀಡಿದ ವಿದ್ವಾಂಸರಾದ ಸುಬ್ರಹ್ಮಣ್ಯ ಶಾಸ್ತ್ರಿಯವರಿಗೆ, ಮುದ್ದ ಬಸವನಗೌಡರಿಗೆ, ಮಲ್ಲಪ್ಪಯ್ಯ ಒಡೆಯರಿಗೆ, ಕಪಿಲಮುನಿ ಒಡೆಯರಿಗೆ, ಗೊರವರಿಗೆ, ವಗ್ಗರಿಗೆ, ಸುಶೀಲಮ್ಮ, ಹನುಮಣ್ಣ, ದುರುಗಮ್ಮನವರಿಗೆ, ಆಗಸರ ತಿಕ್ಕ ಹನುಮಂತಪ್ಪ, ಹಾಡುಗಾರ ಸಿದ್ಧಪ್ಪನವರಿಗೆ, ಗುಂಡು ಶೇಷಗಿರೆಪ್ಪ, ಪ್ರಾರಂಭದ ದಿನಗಳಲ್ಲಿ ಕ್ಷೇತ್ರ ಕಾರ್ಯದಲ್ಲಿ ನನ್ನಷ್ಟೇ ಆಸಕ್ತಿಯನ್ನು ಹೊಂದಿ, ನನಗಿಂತ ಒಂದು ಹೆಜ್ಜೆ ಮುಂದೆಯೇ ವಕ್ತೃಗಳಿಗೆ ಸಂಬಂಧಪಟ್ಟ ಪ್ರಶ್ನೆಗಳನ್ನು ಹಾಕಿ ಸಂಶೋಧನೆಯ ಗಟ್ಟಿತನಕ್ಕೆ ಕಾರಣರಾದ ಹಿರಿಯ ಎಳ್ಳಾರ್ಥಿ ಪ್ರಹ್ಲಾದ ಅವರಿಗೆ, ಬಡಿಗೆ ಆಟದ ಛಾಯಾ ಚಿತ್ರಗಳನ್ನು ಬಹಳಷ್ಟು ಶ್ರಮವಹಿಸಿ ಕ್ಲಿಕ್ಕಿಸಿದ ಗೆಳೆಯ ಎಳ್ಳಾರ್ತಿಯ ಪ್ರಸಾದ ಅವರಿಗೆ ಹಾಗೂ ಎಳ್ಳಾರ್ತಿಯ ಎಲ್ಲಾ ನನ್ನ ಗೆಳೆಯರಿಗೆ ಕೃತಜ್ಞತೆಗಳು. ಕೊನೆಗೆ ನನ್ನ ಎಲ್ಲಾ ವಕ್ತೃಗಳಿಗೂ ಮತ್ತೊಮ್ಮೆ ನಮನಗಳನ್ನು ಸಲ್ಲಿಸುವೆ.

**- ಜಿ. ವೆಂಕಟೇಶ್.**

# ಪರಿವಿಡಿ

## ಅನುಬಂಧ

ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಗಿನ್ನು ಬಿ.ಎ. ದ್ವಿತೀಯ ವರ್ಷದಲ್ಲಿ ನಾನು ವ್ಯಾಸಂಗ ಮಾಡುತ್ತಿದ್ದೆ. ನನ್ನ ಸ್ನೇಹಿತ ದಸರಾ ಹಬ್ಬಕ್ಕೆಂದು ಮೀನಗೊಂದಿ ಮಲ್ಲಯ್ಯನ ಗುಡ್ಡಕ್ಕೆ ಹೋಗೋಣ ಬಾ ಅಂತ ಕರೆದಿದ್ದ. ಆದರೆ ಕಾರಣಾಂತರದಿಂದ ನನಗೆ ಹೋಗಲು ಆಗಲಿಲ್ಲ. ಪ್ರತಿಬಾರಿಯೂ ಅವರ ಮನೆದೇವರಾದ ಸ್ವಾಮಿ ಮಲ್ಲಯ್ಯನ ಬನ್ನಿಗೆ ಆತ ಬೆಂಬಿಡದೆ ಒತ್ತಾಯಿಸಿದಾಗ ನನಗೆ ಹೋಗಲು ಅನುಕೂಲವಾಗಲೇ ಇಲ್ಲ. ಆದರೆ ಬಡಿಗೆ ಆಟದ ವಿಶೇಷತೆಯ ಬಗ್ಗೆ ಸ್ವಲ್ಪ ಸ್ವಲ್ಪ ಮಟ್ಟಿಗೆ ತಿಳಿಸಿದ್ದ. ಎಂ.ಎ. ಪದವಿಯನ್ನು ನಂದಿಹಳ್ಳಿ ಸ್ನಾತಕೋತ್ತರ ಕೇಂದ್ರದಲ್ಲಿ ಮಾಡುತ್ತಿರುವಾಗ ಒಂದು ಜಾತ್ರೆಯ ವಿಷಯದ ಬಗ್ಗೆ ದತ್ತ ಕಾರ್ಯ ಬರೆಯಬೇಕಾಗಿತ್ತು. ನಾನು ನಮ್ಮ ನಗರದ ಸಮೀಪದಲ್ಲಿರುವ ಕರಿಮಾರಮ್ಮನ ಜಾತ್ರೆಯ ಬಗ್ಗೆ ಬರೆದೆ. ನನ್ನ ಮಾಮನವರಾದ ಸಣ್ಣ ಶಿವರಾಂ ಅವರು ಮೀನಗೊಂದಿ ಮಲ್ಲಯ್ಯನ ಜಾತ್ರೆಯ ಬಗ್ಗೆ ಬರೆಯ ತೊಡಗಿದರು. ಅವರ ಊರಾದ ಕೆ.ಕೆ.ಹಾಳ ಮಲ್ಲಯ್ಯನ ಕ್ಷೇತ್ರದ ಹತ್ತಿರ ವಿಲ್ಲದಿದ್ದರೂ ಕ್ಷೇತ್ರದ ಪರಿಚಯ, ನಡಾವಳಿ ಇರುವಂತಹ ಊರುಗಳ ಬಗೆಗೆ, ಆಚರಣೆಯ ಬಗ್ಗೆ ಮಾಹಿತಿಗಳು ಲಭ್ಯವಾದವು.

ಇಷ್ಟಾದರೂ ನಾನು ದಸರಾ ಬನ್ನಿಗೆ ಮಲ್ಲಯ್ಯನ ಕುರಿತ ಬಹಳಷ್ಟು ಕೌತುಕದ ಅಂಶಗಳನ್ನು ತಿಳಿದುಕೊಂಡಿದ್ದೆ. ಬಡಿಗೆ ಆಟದಲ್ಲಿ ಹೆಣಗಳು ಉರುಳುವ ವಿವರವನ್ನು ಬರಿ ಇನ್ನೊಬ್ಬರಿಂದ ಕೇಳುತ್ತಿದ್ದರೆ ಎಷ್ಟು ಭಯ ಮತ್ತು ಆಶ್ಚರ್ಯಗಳಾಗುತ್ತವೆ. ಇನ್ನು ಸ್ವತಃ ನೋಡಿದರೆ ಅದೆಂತಹ ಅನುಭವ. ಇಂಥ ವಿಷಯದ ಮೇಲೆ. ಪಿಹೆಚ್.ಡಿ. ಮಾಡಬೇಕು ಎಂದು ಆಗಲೇ ನಾನು ಸಂಕಲ್ಪ ಮಾಡಿದ್ದೆ. ಅದು ನೆರವೇರಿದ್ದು ನನಗೆ ಹಂಪಿ ವಿಶ್ವವಿದ್ಯಾಲಯದ ಜಾನಪದ ವಿಭಾಗದಲ್ಲಿ ಅಧ್ಯಯನ ಮಾಡಲು ಅವಕಾಶ ದೊರಕಿದಾಗ ರೌದ್ರವಾದ ಈ ಬಡಿಗೆ ಆಟ ಯಾವುದೇ ನಮ್ಮ ಜನಪದ ಸಂಸ್ಕೃತಿಯ ಆಚರಣೆಯಲ್ಲಿ ಕಾಣಸಿಗದು. ಇದು ಒಂದು ರೀತಿ ವಿಶೇಷವಾದ ಆಟವೇ ಸರಿ. ಬನ್ನಿಯ ದಿನ ರಾಕ್ಷಸರನ್ನು ಸಂಹರಿಸಲು ಮೆರವಣಿಗೆಯಲ್ಲಿ ಹೊರಟ ಶ್ರೀ ಮಲ್ಲಯ್ಯ ಮಾಳಮ್ಮರ ಉತ್ಸವ ಮೂರ್ತಿಗಳು ರಾಕ್ಷಸ ಪಡೆಯನ್ನು ತಲುಪುತ್ತವೆ. ಇವರ ಸಹಾಯಕರಾಗಿ ಬಡಿಗೆದಾರರೂ ಇವರ ಹಿಂದೆ ಹೊರಡುತ್ತಾರೆ. ಸುಮಾರು ಸಾವಿರಕ್ಕಿಂತ ಮೇಲ್ಪಟ್ಟು ಬಡಿಗೆಗಳಿರುತ್ತವೆ. ಆ ರಾತ್ರಿ ಪಂಜು ಮತ್ತು ಇಲಾಲುಗಳ ಬೆಳಕಿನಲ್ಲಿ ರೌದ್ರಾಕಾರವಾಗಿ ಕಾಣುವ ಪ್ರತಿ ಊರಿನ ಬಡಿಗೆ ಆಟದ ತಂಡಗಳು ಬೆರೆತು ವೀರಾವೇಶದಿಂದ ಅಣಕ ಯುದ್ಧ ಮಾಡುತ್ತಾ ಮಾಳಾ ಮಲ್ಲೇಶ್ವರರ ಉತ್ಸವ ಮೂರ್ತಿಗಳ ಹಿಂದೆ ಸಾಗುತ್ತಾರೆ. ಈ ಅಣಕ ಯುದ್ಧದಲ್ಲಿ ಪ್ರತಿ ಬನ್ನಿಗೆ ಸಹಜವಾಗಿ ಕನಿಷ್ಠ ಇಬ್ಬರಾದರೂ ಹೆಣಗಳಾಗಿ ಉರುಳುತ್ತಾರೆ. ಸುಮಾರು ೫೦೦ ಜನರಿಗೆ (ಬಡಿಗೆದಾರರಿಗೆ) ತಲೆಗಳು

ಒಡೆಯುತ್ತವೆ. ಇಷ್ಟೆಲ್ಲಾ ಸಾವು ನೋವುಗಳು ಸಂಭವಿಸುವುದು ಪೊಲೀಸ್ ಇಲಾಖೆಯ ಸಮ್ಮುಖದಲ್ಲಾದರೂ ಯಾವ ಕೇಸ್‌ಬುಕ್ ಆಗದೇ ಇರುವುದೇ ತುಂಬಾ ವಿಶೇಷ. ಈ ಕ್ಷೇತ್ರದ ಜನರಿಗೆ ಈ ಆಟ ಸಮ್ಮತವಾಗಿದೆ. ಎಷ್ಟೇ ಪ್ರಾಣಗಳು ಹೋದರೂ, ಪ್ರಾಣಗಳಿಗೆ ಅಪಾಯ ಬಂದೊದಗಿದರು ಜನರು ಹೆದರದೆ ಇದು ಸ್ವಾಮಿ ಮಲ್ಲಯ್ಯನಿಗೆ ನಾವು ಸಲ್ಲಿಸುವ ಸೇವೆ. ಯಾರು ನಿಷ್ಠೆಯಿಂದ ಇರಲಾರರೋ ಅಂಥವರನ್ನು ಸ್ವಾಮಿ ಕರ್‍ಕೊಂಡು ಬಿಡ್ತಾನೆ. ಅಂದರೆ ಸತ್ತು ಹೋಗ್ತಾರೆ ಎನ್ನುವ ನಂಬಿಕೆ ಅವರಲ್ಲಿದೆ.

ದಮ್ಮೂರಿನ ಜಯಮ್ಮ ಈ ಕುರಿತು ; ''ಈ ಆಟ ನಡೀಬೇಕಾದದ್ದೇ, ಈ ಆಟ ನಡದ್ರೇನೇ ಬನ್ನಿಗೆ ಒಂದು ರೀತಿ ಕಳೆ. ಇಲ್ಲಾಂದ್ರೆ ಇದು ಜಾತ್ರೆನೇ ಆಗಾದಿಲ್ಲ''. ಇದು ಕೇವಲ ಜಯಮ್ಮಳ ಅಭಿಪ್ರಾಯವಾಗಿಲ್ಲ. ಕ್ಷೇತ್ರದ ಬಹಳಷ್ಟು ಜನ ಇದೇ ತೆರನಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಶ್ರೀ ಆದಿ ಮೀನಗೊಂದಿ ಮಲ್ಲಯ್ಯನ ಆಚರಣೆಗಳಲ್ಲಿಯೇ ವಿಶೇಷವಾದ ಆಚರಣೆಯಾಗಿರುವ ಈ ಬಡಿಗೆ ಆಟದ ಹುಟ್ಟು, ಅದರ ಪ್ರಾಬಲ್ಯ ಹೇಗಾಯಿತು, ಆ ಹಿನ್ನೆಲೆಯಲ್ಲಿರುವ ಕಥೆ, ಐತಿಹ್ಯ, ಪುರಾಣಗಳು ಮತ್ತಿತರೆ ಅಂಶಗಳನ್ನು ವಕ್ತೃಗಳಿಂದ ಕಲೆಹಾಕಿ, ಅವರ ಹೇಳಿಕೆಯ ಆಧಾರದ ಹಿನ್ನೆಲೆಯಲ್ಲಿ ವಿವರಣಾತ್ಮಕವಾಗಿ ಅಧ್ಯಯನ ಮಾಡುವುದು ಪ್ರಮುಖ ಉದ್ದೇಶವಾಗಿದೆ.

ಮಲ್ಲಯ್ಯ, ಮೈಲಾರ, ಮೈಲಾರಲಿಂಗ, ಗುಡದಯ್ಯ ಎಂದೆಲ್ಲಾ ಕರೆಯಿಸಿಕೊಳ್ಳುವ ಈ ದೇವರು ಕರ್ನಾಟಕ, ಮಹಾರಾಷ್ಟ್ರ, ನೆರೆಯ ಆಂಧ್ರಪ್ರದೇಶಗಳಲ್ಲಿ ಪ್ರಮುಖ ದೈವವಾಗಿ ಗೋಚರಿಸಿ, ಜಾತಿ, ಮತ, ವರ್ಗಗಳ ಎಲ್ಲೆಯನ್ನು ಮೀರಿದ ಸಂಕೀರ್ಣ ಸಂಪ್ರದಾಯ ಇದಾಗಿದೆ. ಕರ್ನಾಟಕ ಮತ್ತು ಮಹಾರಾಷ್ಟ್ರಗಳ ವಿದ್ವಾಂಸರು ಈ ದೇವರ ಕುರಿತು ಸಾಕಷ್ಟು ಅಧ್ಯಯನಗಳನ್ನು ನಡೆಸಿದ್ದಾರೆ. ಆದರೆ ಆಂಧ್ರದ ಆಲೂರು ತಾಲೂಕಿನ ಶ್ರೀ ಆದ ಮೀನಗೊಂದಿ ಮಲ್ಲಯ್ಯನ ಕುರಿತ ಅಧ್ಯಯಗಳು ಅತಿ ವಿರಳವಾಗಿವೆ. ಈ ಹಿನ್ನೆಲೆಯಲ್ಲಿ ಮೀನಗೊಂದಿ ಮಲ್ಲಯ್ಯನ ಆಚರಣೆಯನ್ನು ಜಾನಪದ ಹಿನ್ನೆಲೆಯಲ್ಲಿ ನೋಡುವುದು ಪ್ರಮುಖ ಉದ್ದೇಶವಾಗಿದೆ.

ಜನಪದ ಆಚರಣೆಗಳೆಂದೊಡನೆ ಅವೈಜ್ಞಾನಿಕ ಸಂಗತಿಗಳೆಂದು ಮೂಗುಮುರಿಯುವ ಶಿಷ್ಟಲೋಕವೊಂದಿದೆ. ಯಾವುದೇ ಜಾನಪದೀಯ ಆಚರಣೆಯಿರಲಿ ಅದು ಒಂದು ವರ್ಗದ ಒಟ್ಟು ಸಾಂಸ್ಕೃತಿಕ ಚರಿತ್ರೆಯನ್ನು ಬಿತ್ತರಿಸುತ್ತಿರುತ್ತದೆ. ದೈವಿಕ ಆಚರಣೆಯಲ್ಲೂ ಈ ಅಂಶವನ್ನು ಗುರುತಿಸಲು ಸಾಧ್ಯವಿದೆ. ಹಿಂದೊಮ್ಮೆ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಜೀವಿಸುತ್ತಿದ್ದ ದ್ರಾವಿಡ ಪರಂಪರೆ ನಾಗರೀಕತೆ ಬೆಳೆದಂತೆಲ್ಲ ಬುಡಕಟ್ಟು ವ್ಯವಸ್ಥೆಯಿಂದ ಜಾರಿತು. ತಾಯಿಯೇ ಕುಟುಂಬದ ನಿರ್ದೇಶಕ ಮತ್ತು ನಿಯಂತ್ರಕ ಶಕ್ತಿ ಆಗಿದ್ದ ಆ ದಿನಗಳಲ್ಲಿ ಹಲವು ಜನಾಂಗಗಳ ಮಧ್ಯೆ ಏರ್ಪಡುತ್ತಿದ್ದ ಸ್ತ್ರೀ ನೇತೃತ್ವದ ಸಂಘರ್ಷಗಳೇ ರಕ್ಷಕಿ

ಆಗಿದ್ದ ಮಾತೃ ನಿಯೋಗವನ್ನು ನೆನಪಿಸಿಕೊಳ್ಳುವ ಆಚರಣೆಗಳಾಗಿ ನಮ್ಮ ಮುಂದಿವೆ. ಕರ್ನಾಟಕದ ಗ್ರಾಮ ದೇವತೆಗಳ ಪರಿಕಲ್ಪನೆ ಮತ್ತು ಆಚರಣೆ ಇಂಥದ್ದೇ ನೆಲೆಯಿಂದ ಹುಟ್ಟಿಕೊಂಡಂಥದ್ದು. ಇಲ್ಲಿ ಗ್ರಾಮದೇವತೆಗಳೆಂದರೆ; ಆ ಊರಿನ ಅಥವಾ ಒಂದು ಜನಾಂಗದ ಅಥವಾ ಒಂದು ವರ್ಗದ ಪ್ರತಿನಿಧಿ.

ಅಕ್ಷರಬಾರದ ನಿರಕ್ಷರ ಕುಕ್ಷಿಗಳ ಲೋಕವಾದ ಜಾನಪದ ಹಲವಾರು ಒಳ ಹೊರ ಸಂಗತಿಗಳನ್ನು ಸ್ಫುರಿಸುತ್ತದೆ. ಪ್ರಸ್ತುತ ಸಂಶೋಧನೆಗಾಗಿ ತೆಗೆದುಕೊಳ್ಳಲಾಗಿರುವ ವಿಷಯ ಇಂಥದ್ದೇ ಸ್ವರೂಪವನ್ನು ಪಡೆದಿದೆ. ಶಿವ ಅಥವಾ ಮಲ್ಲಯ್ಯ ಇಲ್ಲಿ ಶಿವ ಎನ್ನುವುದು ಶಿಷ್ಟಪರಿಕಲ್ಪನೆ. ಮಲ್ಲಯ್ಯ ಎನ್ನುವುದು ಜನಪದೀಯ ಪರಿಲ್ಪನೆ. ಮಲ್ಲಯ್ಯ, ಮೈಲಾರ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವ ಈ ದೇವತೆ, ಗಡಿ ಆಂಧ್ರ ಕರ್ನಾಟಕದ ಎಳ್ಳಾರ್ಥಿ, ನೆಣಕಿ, ಸುಳುವಾಯಿ, ಬಸರಕೋಡು, ಹಡ್ಲಿಗಿ, ಗೂಳ್ಯಂ, ಅರಿಕೆರೆ, ಬಿಳಿಹಾಳು ಮುಂತಾದ ಊರಿನವರು ಒಂದೆಡೆ ಸೇರಿಕೊಂಡು ಆಚರಿಸುವ ಒಂದು ವಿಶಿಷ್ಟ ಜಾನಪದೀಯ ಆಚರಣೆಯಾಗಿದೆ.

ಗುಡ್ಡದ ಮಲ್ಲಯ್ಯ ಎಂದೇ ಕರೆಯಿಸಿಕೊಳ್ಳುವ ಈ ಹೊತ್ತಿನ ಶಿಷ್ಟ ಶಿವನ ಹೆಸರಿನಲ್ಲಿ ನಡೆಯುವ ಭೀಕರ ಆಚರಣೆ ಎದೆ ನಡುಗಿಸಿ ನೋಡುಗರನ್ನು ಪಲಾಯನ ಮಾಡಿಸುವಷ್ಟು ಕ್ರೂರವಾಗಿದೆ. ಕರ್ನಾಟಕದ ಇತರೆ ಯಾವುದೇ ಭಾಗದಲ್ಲಿ ನಡೆಯದಿರುವ ಈ ಆಚರಣೆ ಅಧ್ಯಯನಕ್ಕೆ ಯೋಗ್ಯವಾಗಿದೆ.

ಒಟ್ಟುಗುಡ್ಡದ ಮಲ್ಲಯ್ಯನ ಜಾತ್ರೆಯ ಕಥೆ ಮತ್ತು ವೈಶಿಷ್ಟ್ಯ ಇಂತಿದೆ. ಪ್ರತಿ ವರ್ಷ ಅಕ್ಟೋಬರ್ ತಿಂಗಳ ದಸರಾ ಹಬ್ಬದಂದು ನಡೆಯುವ ಈ ಜಾತ್ರೆ, ಕರ್ನಾಟಕದಾದ್ಯಂತ ನಡೆಯುವ ಆಚರಣೆಗೆ ದಂತ ಕಥೆಗಳು ಇರುವಂತೆ ಈ ಆಚರಣೆಗೂ ಒಂದು ದಂತಕಥೆಯಿದೆ. ಅದೇನೆಂದರೆ; ಹಿಂದೆ ಆ ಗುಡ್ಡದ ಪ್ರದೇಶದಲ್ಲಿ ಒಬ್ಬ ರಾಕ್ಷಸ ವಾಸಮಾಡುತ್ತಿದ್ದ. ಅವನು ಅಲ್ಲಿಯ ಸುತ್ತಲೂ ಹಳ್ಳಿ ಜನ-ದನಗಳಿಗೆ ಕಾಟ ಕೊಡುತ್ತಿದ್ದ. ರಾಕ್ಷಸನ ಉಪಟಳವನ್ನು ತಾಳಲಾರದೆ ಜನರು ಅಲ್ಲೇ ವಾಸವಾಗಿದ್ದ ದೈವಭಕ್ತ ಮಲ್ಲಯ್ಯನ ಮೊರೆ ಹೋದರು. ಆಗ ಮಲ್ಲನು ತನ್ನ ಶಕ್ತಿಯಿಂದ ರಾಕ್ಷಸನನ್ನು ಹಿಂದಕ್ಕೆ ತಳ್ಳುತ್ತಾನೆ. ಆದರೆ ಇದರ ಮಧ್ಯೆ ಮಲ್ಲಯ್ಯ ಮತ್ತು ರಾಕ್ಷಸನಿಗೆ ಒಂದು ಒಪ್ಪಂದ ಏರ್ಪಡುತ್ತದೆ. ಅದೇನೆಂದರೆ ಪ್ರತಿ ವರ್ಷ ಒಂದು ದಿನ ತನ್ನ ಸ್ಥಳದಲ್ಲಿ ಕನಿಷ್ಠಪಕ್ಷ ಒಂದು ತೊಟ್ಟು ನರ ರಕ್ತವಾದರೂ ತನಗೆ ಆಹಾರವಾಗಿ ಕೊಡಬೇಕು ಎಂದು. ಅದೇ ಇಂದಿಗೂ ಸಾಗುತ್ತಾ ಬಂದಿದೆ.

ಹೀಗೆ ರಾಕ್ಷಸನ ಕಾಟ ತಪ್ಪಿಸಿದ ದೈವಭಕ್ತ ಮಲ್ಲಯ್ಯನ ಹೆಸರಿನಲ್ಲಿ ಪ್ರತಿವರ್ಷ ಈ ಹಿಂದೆ ಉಲ್ಲೇಖಿಸಿದ ಗ್ರಾಮಗಳ ಜನರು ಸೇರಿ ಈ ಗುಡ್ಡದಲ್ಲಿ ಒಂದು ವಿಶಿಷ್ಟ ಪೂಜೆ ಕೈಗೊಳ್ಳುತ್ತಾರೆ. ಇದನ್ನು ಗುಡ್ಡದ ಮಲ್ಲಯ್ಯನ ಮಹಿಮೆ ಅಥವಾ ಜಾತ್ರೆ ಎಂದು ಕರೆಯುತ್ತಾರೆ.

ಹಲವಾರು ಜಾತಿ ಜನಾಂಗದವರು ಯಾವುದೇ ಬೇಧಭಾವವಿಲ್ಲದೆ ಹಲವಾರು ಗ್ರಾಮಗಳಿಂದ ಬಂದು ಆಚರಿಸುವ ಗುಡ್ಡದ ಮಲ್ಲಯ್ಯನ ಜಾತ್ರೆಗೆ ಆಯಾ ಊರಿನಿಂದ ಒಂದೊಂದು ಕರ್ತವ್ಯವನ್ನು ಪೂರೈಸಲಾಗುತ್ತದೆ. ಎಳ್ಳಾರ್ಥಿ, ನೆಣಕಿ, ಸುಳುವಾಯಿಯಿಂದ ಒಂದೊಂದು ರೀತಿಯ ಪೂಜೆಯ ಸಾಮಗ್ರಿಗಳನ್ನು ತರುವ ವಾಡಿಕೆಯಿದೆ. ಒಂದು ಊರಿನಿಂದ ಕಳಸ ತಂದರೆ ಮತ್ತೊಂದು ಊರಿನಿಂದ ಕುಂಭ ತರಲಾಗುತ್ತದೆ. ಮಗದೊಂದು ಊರಿನಿಂದ ದೇವರ ಮೂರ್ತಿಯನ್ನು ತರಲಾಗುತ್ತದೆ. ಜಾತ್ರೆಯ ದಿನ ಎಲ್ಲರೂ ಸೇರಿ ಅದನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಸುತ್ತ ಹಳ್ಳಿಯಿಂದ ನಿರ್ಧಿಷ್ಟ ಪ್ರದೇಶಕ್ಕೆ [illegible] ಸಂತೋಷದಿಂದ ಬರುವ ಬೇರೆ ಬೇರೆ ಊರಿನ ಜನ ತಮ್ಮ ಊರಿಗೆ ಒಂದೊಂದು ಕಟ್ಟೆಯನ್ನು ಕಟ್ಟಿಕೊಂಡು ಅದರ ಮುಂದೆ ತಮ್ಮ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾರೆ. ಬೇರೆ ಬೇರೆ ಊರುಗಳಿಂದ ತರುವ ಹಣಸಿನ ಬಡಿಗೆ, ಇಲಾಲು ಎನ್ನುವ ಪಂಜುಗಳನ್ನು ಹಿಡಿದುಕೊಂಡು ಹಲಗೆ ಬಾರಿಸುತ್ತ ರಾತ್ರಿಯಿಡೀ ಎಲ್ಲರೂ ಒಂದಾಗಿ ಕುಣಿಯುತ್ತಾರೆ. ಇಲ್ಲಿ ಭಾವೈಕ್ಯತೆ ಪ್ರದರ್ಶನವಾಗುತ್ತದೆ. ಮುಂಜಾನೆ ದೇವರನ್ನು ಗಂಗೆಯಿಂದ ಕರೆತರುವ ಕಾರ್ಯಕ್ರಮವಿರುತ್ತದೆ. ದೇವರನ್ನು ಹೊತ್ತುತರುವ ಕಾರ್ಯವನ್ನು ಹಿಂದೆಯೇ ನೇಮಕಗೊಂಡಿರುವ ಪೂಜಾರಿ ನೆರವೇರಿಸುತ್ತಾನೆ. ದೇವರ ಮುಂದೆ ಜನರು ಮೊಹರಂ ಮಾದರಿಯಲ್ಲಿ ಕುಣಿಯುತ್ತಾ ದೇವರ ಪ್ರಸಾದವೆಂದು ಪರಿಗಣಿತವಾಗುವ ಬಂಢಾರವನ್ನು ಮೈಕೈಗಳಿಗೆಲ್ಲಾ ಬಳಿದುಕೊಂಡು ಉಗ್ಗುತ್ತಾ ಮೈಮರೆತು ಕುಣಿಯುತ್ತಾ ಸಾಗುತ್ತಾರೆ. ಈ ಕುಣಿತ ಹಲಗೆ ಬಡಿತಕ್ಕೆ ತಕ್ಕಂತೆ ಇರುತ್ತದೆ. ಕುಣಿಯುವ ಜನರು ಕೈಯಲ್ಲಿ ಹಣಸಿನ ಬಡಿಗೆ ಇಲಾಲುಗಳನ್ನು ಹಿಡಿದುಕೊಂಡಿರುತ್ತಾರೆ. ಮಲ್ಲಯ್ಯ ಮತ್ತು ರಾಕ್ಷಸನ ಮಧ್ಯ ಆದ ಒಪ್ಪಂದದಂತೆ ಒಂದು ನಿರ್ಧಿಷ್ಟ ಸ್ಥಳಕ್ಕೆ ಬಂದು ನಾಲ್ಕು ಹನಿ ರಕ್ತವನ್ನು ಪೂಜಾರಿಯ ತೊಡೆಯಿಂದ ತೆಗೆದು ಚೆಲ್ಲಲಾಗುತ್ತದೆ. ಇದಾದ ನಂತರ ಮೂರ್ತಿ ಬೆಟ್ಟದ ಮೇಲಿನ ಗರ್ಭಗುಡಿಗೆ ಸಾಗುತ್ತದೆ.

ಮುಂದಿನ ಘಟ್ಟ ಅತ್ಯಂತ ಕ್ರೂರ ಮತ್ತು ಅಮಾನುಶ್ಯವಾದುದು. ದೇವರು ಗರ್ಭಗುಡಿಗೆ ಸಾಗಿದಾಕ್ಷಣವೇ ವಿವಿಧ ಊರಿನ ಜನರು ಒಂದು ಕಡೆ ಸೇರಿಕೊಂಡು ಹಳೆಯ ದ್ವೇಶಕ್ಕೋ ಅಥವಾ ಮುಂದಿನ ಕಾರ್ಯಕ್ರಮಗಳಲ್ಲಿ ತಾವೇ ಕುಣಿಯಬೇಕೆಂಬ ಹಟಕ್ಕೋ ಜಗಳ ಶುರುವಾಗುತ್ತದೆ. ಹೀಗೆ ಶುರುವಾದ ಜಗಳ ಒಂದು ಭೀಕರ ರಣರಂಗವಾಗಿ ಮಾರ್ಪಡುತ್ತದೆ. ಕೈಯಲ್ಲಿರುವ ಇಲಾಲು ಮತ್ತು ಹಣಸಿನ ಬಡಿಗೆಗಳಿಂದ ಭೀಕರವಾಗಿ ಹೊಡೆದಾಡುತ್ತಾರೆ. ಕೊನೆಗೆ ಈ ಹೊಡೆದಾಟ ಎಂಟ್ಹತ್ತು ಹೆಣಗಳು ಬೀಳಲು

ಕಾರಣವಾಗುತ್ತದೆ. ಯಾವುದರ ಪರಿವಿಲ್ಲದೆ ದೇವರು ಗರ್ಭಗುಡಿಗೆ ಸಾಗುತ್ತಿದ್ದರೆ ಇದು ತಮಗೆ ಸಂಬಂಧಿಸಿಲ್ಲವೆಂಬಂತೆ ಪೊಲೀಸರು ಮೂಕ ಪ್ರೇಕ್ಷಕರಾಗಿ ನೋಡುತ್ತಾ ನಿಂತಿರುತ್ತಾರೆ. ಯಾವ ಊರಿನವರು ಹೆಚ್ಚು ಬಲಿಯಾಗಿರುತ್ತಾರೋ ಜಾತ್ರೆ ಮುಗಿದ ಮಾರನೇ ದಿನದಿಂದಲೇ ತಮ್ಮೂರಿನವರನ್ನು ಬಲಿ ತೆಗೆದುಕೊಂಡ ಮತ್ತೊಂದು ಊರಿನವರನ್ನು ಮುಂದಿನ ಜಾತ್ರೆಯಲ್ಲಿ ಹೇಗೆ ಬಲಿ ತೆಗೆದುಕೊಳ್ಳಬೇಕೆನ್ನುವ ಉಪಾಯ ತಯಾರಿಯಾಗುತ್ತಿರುತ್ತದೆ. ಹೆಚ್ಚು ಕೊಲೆಗೀಡಾದ ಊರಿನ ಜನ ಇದನ್ನು ತಮ್ಮೂರಿನ ಪ್ರತಿಷ್ಠೆಯೆಂದೇ ತೆಗೆದುಕೊಳ್ಳುತ್ತಾರೆ.

ಹೀಗೆ ಹೊಡೆದಾಟ, ರಕ್ತಪಾತ, ಕೊಲೆ, ಕ್ರೌರ್ಯಗಳ ಮಧ್ಯೆ ಗರ್ಭಗುಡಿ ಸೇರುವ ಮಲ್ಲಯ್ಯ ಹಿಂದೆ ರಾಕ್ಷಸನಿಂದ ಕಾಪಾಡು ಎಂದು ಜನರು ಬೇಡಿದ್ದ ತಪ್ಪಿಗೆ ಅನೇಕ ಜೀವಗಳ ಬಲಿದಾನಕ್ಕೆ ಕಾರಣನಾಗಿದ್ದಾನೆ. ಕೊನೆಗೆ ಇದೆಲ್ಲವನ್ನೂ ನಿಲ್ಲಿಸುವ ಆಜ್ಞೆಯಂತೆ ಪೂಜಾರಿ ಜನರ ಕಡೆ ಮುಖ ಮಾಡಿ 'ಬಹುಪರಾಕ್' ಹಾಕುತ್ತಾನೆ. ಪರಾಕು ಹಾಕುವ ಸಮಯ ಬಂದೊಡನೆ ಎಲ್ಲಾ ಜನರು ಪೂಜಾರಿಯ ದೈವವಾಣಿಯನ್ನು ಮೈಯೆಲ್ಲಾ ಕಿವಿಯಾಗಿಸಿಕೊಂಡು ಕೇಳುತ್ತಾರೆ. ಪ್ರತಿ ವರ್ಷಕ್ಕೊಮ್ಮೆ ಬೇರೆ ಬೇರೆ ರೀತಿಯಲ್ಲಿ ಕಾಣಿಕೆ ಹೇಳುವ ಮಲ್ಲಯ್ಯನ ಹೇಳಿಕೆಯನ್ನು ಭವಿಷ್ಯವೆಂದು ಜನರು ಭಾವಿಸುತ್ತಾರೆ.

ಪರಾಕು ಹೇಳಿದ ಮೇಲೆ ಪೂಜಾರಿ ಆ ವರ್ಷದ ಬೆಳೆಯ ದರಗಳ ಭವಿಷ್ಯವನ್ನು ಹೇಳುತ್ತಾನೆ. ಈಗಲೂ ಆ ಭಾಗದ ಜನರು ಪೂಜಾರಿ ಹೇಳುವ ಬೆಳೆ ದರಗಳನ್ನು ಅವಲಂಬಿಸಿಯೇ ಉತ್ತುವ, ಬಿತ್ತುವ ಕಾರ್ಯಕ್ಕೆ ಕೈ ಹಾಕುತ್ತಾರೆ. ಯಾವ ಬೆಳೆಯ ಬೆಲೆ ಹೆಚ್ಚೆಂದು ಪೂಜಾರಿ ಹೇಳುತ್ತಾನೋ, ಹೆಚ್ಚಾಗಿ ಅಂತಹ ಬೆಳೆಯನ್ನೇ ಬೆಳೆಯುವ ರೈತ ಪೂಜಾರಿಯ ವಾಕ್ಯಗಳನ್ನು ನಿಗೂಢ ರಹಸ್ಯ ಎನ್ನುವಂತೆ ಪರಿಪಾಲಿಸುತ್ತಾನೆ. ಪರಾಕು ಹೇಳಿಕೆಯ ಅರ್ಥ ಮತ್ತು ಬೆಲೆದರಗಳನ್ನು ಪಾರಿವಾಳಗಳ ಕಾಲಿಗೆ ಕಟ್ಟಿ ತಮ್ಮ ತಮ್ಮ ಹಳ್ಳಿಗಳಿಗೆ ಕಳುಹಿಸುತ್ತಾರೆ. ಅಂದರೆ ಜಾತ್ರೆಗೆ ಹೋದವರು ಊರನ್ನು ತಲುಪುವ ಮೊದಲೇ ದೈವವಾಣಿ ತಮಗಿಂತ ಮುಂಚೆ ಊರು ಸೇರಿದರೆ ಒಳಿತು ಎನ್ನುವ ನಂಬಿಕೆ ಆ ಭಾಗದ ಜನರಿಗೆ ಈಗಲೂ ಇದೆ. ಇಷ್ಟಕ್ಕೆ ಈ ಜಾತ್ರೆ ಮುಕ್ತಾಯವನ್ನು ಕಾಣುತ್ತದೆ.

ಒಂದು ಹೇಳಿಕೆಯ ಪ್ರಕಾರ ಮೈಲಾರಲಿಂಗ ಮತ್ತು ಗುಡ್ಡದ ಮಲ್ಲಯ್ಯ ಒಂದೇ ಎನ್ನುವ ಭಾವನೆ ಇದೆ. ಹೀಗಾಗಿ ಇಲ್ಲಿಯ ನರಬಲಿಯನ್ನು ಬಿಟ್ಟರೆ ಪೂಜಾ ವಿಧಾನ, ಕುಣಿತದ ವಿಶೇಷ. ಆಚಾರ ವಿಚಾರಗಳು ಒಂದೇ ಸಮನಾಗಿವೆ. ಮೈಲಾರದಲ್ಲಿ ಕಂಡುಬರುವ ಗೊರವರ ಕುಣಿತ ಮಲ್ಲಯ್ಯನ ಜಾತ್ರೆಯಲ್ಲೂ ಕಂಡು ಬರುತ್ತದೆ.

ದೈವದ ಹೆಸರಿನಲ್ಲಿ ನಡೆದುಕೊಂಡು ಬಂದಿರುವ ಈ ಎಲ್ಲಾ ಆಚರಣೆಗಳು ಕರ್ನಾಟಕದ ಬೇರೆ ಬೇರೆ ದೈವಾಚರಣೆಯ ಸಂದರ್ಭದಲ್ಲಿ ಹಲವು ಬಗೆಯಲ್ಲಿ ಗೋಚರವಾಗುತ್ತದಾದರೂ ಗಡಿ ಆಂಧ್ರ ಕರ್ನಾಟಕ ಭಾಗದ ಗುಡ್ಡದ ಮಲ್ಲಯ್ಯನ ಆಚರಣೆ ಒಂದು ಬಗೆಯಲ್ಲಿ ಭಿನ್ನವೆನಿಸದೇ ಇರದು. ಕ್ರೌರ್ಯ ಮತ್ತು ಜೀವ ಹಾನಿಗೆ ಕಾರಣವಾಗುವ ಇಂತಹ ಒಂದು ಆಚರಣೆ ಕೊನೆಯಾಗುವ ಪ್ರಮೇಯವೇ ಇಲ್ಲಿ ಬಂದು ಒದಗಿಲ್ಲ. ವರ್ಷಕ್ಕೊಮ್ಮೆ ನಡೆಯುವ ಈ ಜಾತ್ರೆ ವರ್ಷವಿಡೀ ಜನರ ನಿತ್ಯ ಜೀವನದ ಸಾಮಾಜಿಕ, ಆರ್ಥಿಕ ರಂಗದ ಅತಿ ಮುಖ್ಯ ಚಟುವಟಿಕೆಯ ಭಾಗವಾಗಿ ಉಳಿಯುತ್ತದೆ. ಬಲಿಯ ಸಂದರ್ಭವನ್ನು ಅನೇಕ ರೀತಿಯಲ್ಲಿ ಅರ್ಥೈಸುವ ಪರಿಪಾಟಗಳು ಚಾಲ್ತಿಯಲ್ಲಿವೆ. ಅದರಲ್ಲಿ ಒಂದು ಹೇಳಿಕೆ ಹೀಗಿದೆ; '' ಊರಿಗೆ ಸಾಕಷ್ಟು ಕಾಟಕೊಡುತ್ತಿದ್ದ ರಾಕ್ಷಸ ಒಪ್ಪಂದಕ್ಕೆ ಬಂದು ನಾಲ್ಕು ಹನಿ ರಕ್ತ ಕೇಳಿದರೂ ಅಷ್ಟಕ್ಕೆ ತೃಪ್ತನಾಗದೇ, ಮಲ್ಲಯ್ಯನನ್ನು [illegible] ಹೊತ್ತು ಸಾಗಿಸುವ ಸಂದರ್ಭವನ್ನೇ ಕಾಯುತ್ತಾ ಕುಳಿತು ಜನರ ಮನಸ್ಸಿನ ಮೇಲೆ ಆಕ್ರಮಣ ಮಾಡಿ ತಮ್ಮೊಳಗೇ ಹೊಡೆದಾಡಿ ಸಾಯುವಂತೆ ಮಾಡುತ್ತಾನೆ''. ಬಲಿಗೆ ಸಂಬಂಧಿಸಿ ಆ ಭಾಗದಲ್ಲಿ ಯಾವುದೇ ತರಹದ ಹೇಳಿಕೆಗಳಿದ್ದರೂ ಆಧುನಿಕವಾಗಿ ಇದನ್ನು ಬೇರೆ ರೀತಿಯಲ್ಲಿ ಅರ್ಥೈಸಿಕೊಳ್ಳಬಹುದು.

ಯಾವುದೇ ಜನಪದ ಆಚರಣೆಯಾಗಿರಲಿ, ಅದರ ಒಟ್ಟು ಆಶಯ ಕೇವಲ ಆಚರಣೆಯಷ್ಟೇ ಆಗಿರದೇ, ಅದರಲ್ಲಿ ಒಂದು ಸಮೂಹ, ಒಂದು ಭಾಗದ ಸಂಸ್ಕೃತಿಯ ಜೀವಂತ ಗತ ಬೇರುಗಳಿರುತ್ತವೆ. ಇಂಥದನ್ನು ಗುಡ್ಡದ ಮಲ್ಲಯ್ಯನ ಆಚರಣೆಯನ್ನು ಅಧ್ಯಯನಕ್ಕೊಳಪಡಿಸುವುದರ ಮೂಲಕ ಅದರ ಆಶಯ ಮತ್ತು ಪ್ರಸ್ತುತತೆಯನ್ನು ಎತ್ತಿ ತೋರಿಸುವುದೇ ನನ್ನ ಸಂಶೋಧನೆಯ ಮುಖ್ಯ ಪರಿಕಲ್ಪನೆಯಾಗಿದೆ. ಕರ್ನಾಟಕದಲ್ಲಿ ಈ ದೇವರ ಕುರಿತ ಅಧ್ಯಯನಗಳನ್ನು ಗಮನಿಸಿದಾಗ ಡಾ॥ ಎಂ.ಬಿ.ನೇಗಿನಹಾಳರ 'ಮೈಲಾರಲಿಂಗ-ಖಂಡೋಬ' ಈ ಕೃತಿ ಸಾಂಸ್ಕೃತಿಕ ಅಧ್ಯಯನದಲ್ಲಿ ತುಂಬಾ ಕುತೂಹಲಕಾರಿ ಯಾದ ಮಾನವಶಾಸ್ತ್ರೀಯ ಮಾಹಿತಿಯನ್ನು ನೀಡುವ ಒಂದು ಮೌಲಿಕ ಗ್ರಂಥವಾಗಿ ನಿಂತಿದೆ. ಪ್ರಸ್ತುತ ಮೈಲಾರ ದೇವರ ಸಂಪ್ರದಾಯವನ್ನು ಇಲ್ಲಿ ತಕ್ಕಮಟ್ಟಿಗೆ ತೌಲನಿಕವಾಗಿ ವಿವೇಚಿಸಿದ್ದಾರೆ. ಇವರು ತಮ್ಮದೇ ಆದ ಸಂಶೋಧನಾ ಪ್ರಬಂಧಗಳ ಸಂಕಲನದಲ್ಲಿ 'ಹಿರೇ ಮೈಲಾರದ ಶಾಸನಗಳು, ಶಾಸನಗಳಲ್ಲಿ ಮೈಲಾರ ಮತ್ತು ಮಾಳಚಿ ಇನ್ನೂ ಕೆಲವು ಪ್ರಾಚೀನ ಉಲ್ಲೇಖಗಳು, ಮಹಾರಾಷ್ಟ್ರದಲ್ಲಿ ಮೈಲಾರಲಿಂಗನ ಸಂಪ್ರದಾಯ, ಜಾನಪದ ದೇವರು ಜುಂಜಪ್ಪ, ಹೀಗೆ ಮುಂತಾಗಿ ಈ ದೇವರ ಕುರಿತು ಲೇಖನಗಳನ್ನು ಬರೆದಿದ್ದಾರೆ. 'ಜಾನಪದ ಸಾಹಿತ್ಯ ದರ್ಶನ ಭಾಗ - ೧೩'ರಲ್ಲಿ ಮೈಲಾರಲಿಂಗ ಎಂಬ ಶೀರ್ಷಿಕೆಯಡಿ ಈ ದೇವರಿಗೆ ಸಂಬಂಧಿಸಿದಂತೆ ಡಾ. ಭೋಜರಾಜ ಪಾಟೀಲ, ಡಾ. ಬಸವರಾಜ ಸೊಪ್ಪಿಮಠ , ಡಾ. ಎಂ. ಎಂ. ಪಡಶೆಟ್ಟಿ, ಡಾ. ರಾಮು ಇಟ್ಟಣ್ಣನವರ, ಶ್ರೀ ಹ.ಕ. ರಾಜೇಗೌಡ, ಡಾ. ಆರ್ಸಿಯಸ್ ಸುಂದರಂ ಮತ್ತು ಡಾ. ಎಂ.ಬಿ. ನೇಗಿನಹಾಳರು ಲೇಖನಗಳನ್ನು ಬರೆದಿದ್ದಾರೆ. ಜೊತೆಗೆ ಡಾ. ಮಂಜುನಾಥ ಬೇವಿನಕಟ್ಟಿ, ಬಿ. ಎಸ್. ಕುಲಕರ್ಣಿ, ಡಾ. ಸೂರ್ಯನಾಥ ಕಾಮತ್, ಎಂ.ಬಿ. ಕಣವಿ, ಪಾಂಡುರಂಗ ದೇಸಾಯಿ, ಶೇಖರ ಪೂಜಾರ,

ಡಾ. ಎಂ. ಚಿದಾನಂದಮೂರ್ತಿ, ದೇವೇಂದ್ರಕುಮಾರ ಹಕಾರಿ ಡಾ. ಶ್ರೀನಿವಾಸ ರಿತ್ತಿ, ಡಾ. ಶಂಬಾ ಜ್ಯೋಶಿ ಹೀಗೆ ಹಲವಾರು ವಿದ್ವಾಂಸರು ಈ ದೇವರ ಕುರಿತು ಸಾಕಷ್ಟು ಅಧ್ಯಯನಗಳನ್ನು ಕೈಗೊಂಡು ಪುಸ್ತಕಗಳನ್ನು ಹಾಗೂ ಲೇಖನಗಳನ್ನು ಬರೆದಿದ್ದಾರೆ. ಅಲ್ಲದೇ ಈ ದೇವರ ಕುರಿತ ಕಥೆ, ಐತಿಹ್ಯ, ಪುರಾಣ, ಹಾಡುಗಳು, ಒಗಟು, ಗಾದೆ ಮತ್ತಿತರೆ ಸಾಹಿತ್ಯಿಕ ಅಂಶಗಳನ್ನು ಸಹ ಸಂಗ್ರಹಿಸಿ ವಿವರಿಸಿದ ಪ್ರಕಟಣೆಗಳು ಸಾಕಷ್ಟು ದೊರೆಯುತ್ತವೆ. ಮಹಾರಾಷ್ಟ್ರದ ವಿದ್ವಾಂಸರಲ್ಲಿ ಈ ದೇವರ ಕುರಿತು ಸಾಕಷ್ಟು ಚರ್ಚೆ ನಡೆದಿವೆ. ಶ್ರೀ ಜಿ.ಎಚ್.ಖರೆ, ಶ್ರೀ ರಾಂ.ಚಿಂ.ಢೇರೆ, ಶ್ರೀ ಪಾಠಕ್ ಮೊದಲಾದ ವಿದ್ವಾಂಸರು ಈ ದೇವರ ಕುರಿತಾಗಿ ಅಧ್ಯಯನಗಳನ್ನು ಕೈಗೊಂಡು ಅನೇಕ ಅಂಶಗಳನ್ನು ಪ್ರಕಟಿಸಿದ್ದಾರೆ. ಅಂತಿಮವಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರದ ವಿದ್ವಾಂಸರು ಹಿರೇಮೈಲಾರವೇ ಎಲ್ಲಾ ಮೈಲಾರ ಕ್ಷೇತ್ರಗಳಿಗೆ ಮೂಲ ಎಂದು ತೋರಿಸಿದ್ದಾರೆ. ಜೊತೆಗೆ ಒಪ್ಪಿದ್ದಾರೆ ಕೂಡ.

ಆದರೆ ಇದೇ ಮೈಲಾರ ಸಂಪ್ರದಾಯಕ್ಕೆ ಸೇರಿದ ಆಂಧ್ರಪ್ರದೇಶದ ಆಲೂರಿನ ತಾಲೂಕಿನ ಬಳಿಯಿರುವ ಶ್ರೀ ಆದಿಮೀನಗೊಂದಿ ಕ್ಷೇತ್ರದ ಬಗ್ಗೆ ಹೆಚ್ಚಾಗಿ ಅಧ್ಯಯನ ನಡೆಯದೇ ಅನಾಥವಾಗಿದೆ. ಆದರೂ ಈ ಕ್ಷೇತ್ರಕ್ಕೆ ಕೆಲ ವಿದ್ವಾಂಸರು ಆಗಮಿಸಿ ಅಧ್ಯಯನವನ್ನು ಕೈಗೊಂಡಿದ್ದಾರೆ. ಅವರಲ್ಲಿ ಡಾ.ಎಂ.ಬಿ.ನೇಗಿನಹಾಳರು ಪ್ರಮುಖರು. ಅವರು ತಮ್ಮ 'ಮೈಲಾರಲಿಂಗ ಖಂಡೋಬ' ಕೃತಿಯಲ್ಲಿ ಈ ಕ್ಷೇತ್ರದ ಆಚರಣೆಗಳನ್ನು ಅವಶ್ಯವಾದಲ್ಲೆಲ್ಲಾ ತೌಲನಿಕ ರೀತಿಯಲ್ಲಿ ಬಿಂಬಿಸುತ್ತಾ , ಅನುಬಂಧದಲ್ಲಿ ಈ ಕ್ಷೇತ್ರದ ಆಚರಣೆ, ಸ್ಥಾನಿಕರ ಕುರಿತು, ನಂಬಿಕೆಗಳು ಮತ್ತಿತರೆ ಅಂಶಗಳನ್ನು ಸ್ಥೂಲವಾಗಿ ವಿವರಿಸಿದ್ದಾರೆ. ಆಚರಣೆಯ ವಿಶಿಷ್ಟ ಅಂಶಗಳನ್ನು ಗಮನಿಸಿ ಮಲ್ಲಯ್ಯನ ಕ್ಷೇತ್ರಕ್ಕೆ ಸಂಬಂಧಿಸಿದ ಮೂಲದ ಅಂಶಗಳು ಇವಾಗಿರಬಹುದೆಂದು ಊಹಿಸಿ, ಈ ಕ್ಷೇತ್ರದ ಬಗ್ಗೆ ಅಧ್ಯಯನ ಮಾಡುವ ಸಂಶೋಧಕರಿಗೆ ಜವಾಬ್ದಾರಿಯನ್ನು ಹೋಲಿಸಿದ್ದಾರೆ. ಮತ್ತೊಬ್ಬ ವಿದ್ವಾಂಸರಾದ ಡಾ.ಮಂಜುನಾಥ ಬೇವಿನಕಟ್ಟಿಯವರು ತಮ್ಮ 'ಮೈಲಾರಲಿಂಗನ ಕಾವ್ಯ' ಕೃತಿಯಲ್ಲಿ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಈ ಕ್ಷೇತ್ರಕ್ಕೆ ಸಂಬಂಧಿಸಿದ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಜೊತೆಗೆ ಅನುಬಂಧದಲ್ಲಿ ಸಂಕಥಕ ಕಲ್ಪಿಸಿಕೊಟ್ಟ ಮೀನಗೊಂದಿ ಮಲ್ಲಯ್ಯನ ಆಚರಣೆಯ ವಿವರಗಳನ್ನು ಯಥಾವತ್ತಾಗಿ ಬಳಸಿಕೊಂಡಿದ್ದಾರೆ. ನಂತರ ಬಡಿಗೆ ಆಟದ ಬಗ್ಗೆ ದಿನಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳು, ವಾರಪತ್ರಿಕೆಗಳಲ್ಲಿ ಪ್ರಕಟವಾದ ಬರಹಗಳು ಬಿಟ್ಟರೆ ಯಾವುದೇ ರೀತಿಯ ಅಧ್ಯಯನ ಈ ಕ್ಷೇತ್ರದಲ್ಲಿ ಇದುವರೆಗೆ ನಡೆದಿಲ್ಲ. ಪ್ರಾರಂಭದಲ್ಲಿ ತಿಳಿಸಿದಂತೆ ಬಡಿಗೆ ಆಟದ ರೌದ್ರತೆಯನ್ನು ಓದಿದೊಡನೆ, ಇಲ್ಲ ಕೇಳಿದೊಡನೆ ಈ ಆಚರಣೆ ಕೌತುಕ ಹುಟ್ಟಿಸದೇ ಇರದು. ಇಂತಹ ಅನೇಕ ಆಚರಣೆಗಳ ಒಳಹುಗಳನ್ನು ಗಮನಿಸುತ್ತಾ ಹೋದಂತೆ ಹಿರೇಮೈಲಾರದ ಮೈಲಾರ ದೇವರ ಸಂಪ್ರದಾಯಕ್ಕೆ ಹೋಲಿಸುತ್ತಾ ಹೋದಂತೆ ಕೆಲವು ಸಹಜ ಅಂಶಗಳಿದ್ದರೂ ಬಹುತೇಕವಾಗಿ ಭಿನ್ನ ತೆರವಾಗಿರುವ ಆಚರಣೆಗಳು ಬೆಳಕಿಗೆ ಬಂದವು.

ರೋಜಾದ ಹೂವಿನ ಅಲಂಕಾರವಾಗಲೀ, ಬಡಿಗೆಯಾಟವಾಗಲೀ, ಭೌಗೋಳಿಕ ವಿವರವಾಗಲೀ, ಗೊರವರ ಪದ್ಧತಿಯಾಗಲೀ, ಗೊರವಮ್ಮನವರು ಇಲ್ಲದಿರುವಿಕೆಯಾಗಲಿ, ಹರಿಜನರಿಗೆ ಯಾವುದೇ ರೀತಿಯಲ್ಲಿ ಸ್ಥಾನಿಕತೆಯನ್ನು (ಬಸವಿಯರನ್ನು ಹೊರತುಪಡಿಸಿ) ಒದಗಿಸದೇ ಇಲ್ಲದಿರುವುದಾಗಲೀ ಹೀಗೆ ಆಚರಣೆಯ ಹಲವಾರು ಅಂಶಗಳು ವಿಶಿಷ್ಟವಾಗಿ ಕಂಡು ಬಂದಿದ್ದರಿಂದ ಅಧ್ಯಯನವನ್ನು ಬರೀ ನನ್ನ ಕ್ಷೇತ್ರಕ್ಕೊಂದೇ ಸೀಮಿತಗೊಳಿಸದೆ ಹಿರೇಮೈಲಾರದ ಸಂಪ್ರದಾಯದೊಂದಿಗೆ ತೌಲನಿಕವಾಗಿ ಕೈಗೊಂಡು ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿದ್ದೇನೆ. ಮೀನಗೊಂದಿ ಮಲ್ಲಯ್ಯನ ಪ್ರತಿಯೊಂದು ಆಚರಣೆಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುವ ಮೂಲಕ ಜೊತೆಗೆ ಲಭ್ಯವಾದ ಶಾಸನಗಳ ಆಧಾರದಿಂದ ಸ್ವಾಮಿ ಮಲ್ಲಯ್ಯನ ಕ್ಷೇತ್ರದ ಮೂಲವನ್ನು ಹುಡುಕುವುದು ಹಾಗೂ ಆದಿ ಮೀನಗೊಂದಿಯೇ ಇಡೀ ಮೈಲಾರ ಕ್ಷೇತ್ರಗಳಿಗೆ ಮೂಲ ಎಂದು ಸಮರ್ಥಿಸಲು ಬೇಕಾದ ಆಧಾರಗಳನ್ನು ಜೋಡಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ನನ್ನ ಅಧ್ಯಯನಕ್ಕೆ ಕ್ಷೇತ್ರಕಾರ್ಯವೇ ಕೇಂದ್ರಬಿಂದುವಾಗಿರುವುದರಿಂದ ಕ್ಷೇತ್ರದ ಸುತ್ತ ಹಳ್ಳಿಗಳಿಗೆ ತೆರಳಿ ಅವರ ಜನ-ಜೀವನ, ಸ್ವಾಮಿ ಮಲ್ಲಯ್ಯನನ್ನು ಆರಾಧಿಸುವ ರೀತಿ, ಹೀಗೆ ವಾರ್ಷಿಕ ಆಚರಣೆ ಹಾಗೂ ಜೀವನಾವರ್ತನದ ಆಚರಣೆಯ ಹಿನ್ನೆಲೆಯಲ್ಲಿ ಜನಾಂಗೀಯ ಅಧ್ಯಯನವನ್ನು ಮಾಡಿದ್ದೇನೆ. ಜೊತೆಗೆ ಇದೊಂದು ಕ್ಷೇತ್ರದ ಜಾನಪದೀಯ ಅಧ್ಯಯನವಾಗಿರುವುದರಿಂದ ಭಕ್ತರು ದೇವರ ಬಗ್ಗೆ ಇಟ್ಟುಕೊಂಡಿರುವ ನಂಬಿಕೆಗಳನ್ನು, ಆಚರಣೆಯ ವಿಧಿ-ವಿಧಾನಗಳನ್ನು ಸಾಹಿತ್ಯಿಕವಾಗಿ ದೊರೆತ ಅಂಶಗಳನ್ನು, ದೇವಸ್ಥಾನದ ಸ್ಥಾನಿಕರ ಕುರಿತು ಅಧ್ಯಯನ ಮಾಡುವುದ ಮೂಲಕವೂ ಸಹ ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿದ್ದೇನೆ. ಸಾಧ್ಯವಾದಷ್ಟು ವಕ್ತೃಗಳಿಂದ ಆಚರಣೆಗಳ ಬಗ್ಗೆ ವಿಷಯಗಳನ್ನು ಸಂಗ್ರಹಿಸಿ, ಸಿಕ್ಕ ಲಿಖಿತ ಆಧಾರಗಳನ್ನು ಬಳಸಿಕೊಂಡು ಬೇಕಾದ ಅಧ್ಯಾಯಗಳಿಗೆ ಸಂಬಂಧಿಸಿದಂತೆ ಬೇಕಾದ ರೀತಿಯಲ್ಲಿ ಬಳಸಿ, ವಕ್ತೃಗಳ ವಿವರಗಳೊಂದಿಗೆ ವಿಶ್ಲೇಷಣಾತ್ಮಕವಾಗಿ ವಿವರಿಸಿದ್ದೇನೆ. ಒಟ್ಟಾರೆಯಾಗಿ ಸ್ವಾಮಿ ಮಲ್ಲಯ್ಯನ ಕುರಿತು ನನ್ನ ಕ್ಷೇತ್ರದ ಜೊತೆಗೆ ಮೈಲಾರ ಕ್ಷೇತ್ರದ ಅಧ್ಯಯನ ಕೈಗೊಂಡಿರುವುದರಿಂದ ಆಚರಣೆಗಳ ಒಳ ತಿಳಿವುಗಳನ್ನು ತಿಳಿದುಕೊಂಡ ಹೆಮ್ಮೆ, ಸಂತಸ ನನ್ನದಾಗಿದೆ.

ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಥೆಗಳು, ಹಾಡುಗಳು, ಐತಿಹ್ಯಗಳು, ಪುರಾಣ ಕಥೆಗಳು, ಒಡಪುಗಳು ಹೀಗೆ ಮುಂತಾದವನ್ನು ಸಾಧ್ಯವಾದ ಮಟ್ಟಿಗೆ ಕಲೆ ಹಾಕಿದ್ದೇನೆ. ಆದರೂ ಕೆಲವು ಅಂಶಗಳು ನನ್ನ ಕೈತಪ್ಪಿ ಹೋಗಿರಬಹುದು. ಕಾರಣ ಜನಪದ ಸಾಹಿತ್ಯವನ್ನು ಒಂದೇ ಹಂದರದ ಅಡಿಯಲ್ಲಿ ಬಂಧಿಸಿಡುವುದು ಅಸಾಧ್ಯವೇ ಸರಿ.

# ಶ್ರೀ ಆದಿ ಮೀನಗೊಂದಿ ಮಲ್ಲಯ್ಯನ ಮೂಲ

ಅಧ್ಯಾಯ - ೨

# ಶ್ರೀ ಆದಿ ಮೀನಗೊಂದಿ ಮಲ್ಲಯ್ಯನ ಮೂಲ

ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಗೆ ಸೇರಿದ 'ಮಣ್ಣು ಮೈಲಾರ' ಮೈಲಾರಲಿಂಗನ ಮೂಲಸ್ಥಾನವೆಂದು ಖ್ಯಾತವೆತ್ತಿದೆ. ಅನಂತರ ಪ್ರಸಿದ್ಧಿ ಪಡೆದ ಇನ್ನೊಂದು ದೊಡ್ಡ ಕ್ಷೇತ್ರ ಧಾರವಾಡ ಜಿಲ್ಲೆಯಲ್ಲಿನ ದೇವರಗುಡ್ಡ (ಪಾಂಡುರಂಗರಾವ್ ದೇಸಾಯಿ; ೧೧೬) ಎಂದು ಮೂಲದ ಬಗ್ಗೆ ಹೇಳಲಾಗುತ್ತದೆ. ಆದರೆ ಇದೇ ಬಳ್ಳಾರಿ ಜಿಲ್ಲೆಯಲ್ಲಿ ಅಂದರೆ ಒಂದು ಕಾಲಕ್ಕೆ ಪ್ರಾಂತ್ಯವಾರು ವಿಂಗಡಣೆ ಇಲ್ಲದಿದ್ದ ಸಂದರ್ಭದಲ್ಲಿ ಒಂದೇ ಪ್ರಭುತ್ವದ ಅಡಿಯಲ್ಲಿ ಆಳ್ವಿಕೆಯಲ್ಲಿದ್ದ ಇಂದಿನ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆಲೂರು ತಾಲೂಕಿನ ಶ್ರೀ ಆದಿಮೀನಗೊಂದಿಯು ಮತ್ತೊಂದು ಪ್ರಸಿದ್ಧ ಕ್ಷೇತ್ರವಾಗಿದೆ. ಪ್ರಚಾರದಿಂದ ಮತ್ತು ಭೌಗೋಳಿಕವಾಗಿ ಮೂಲೆಯಲ್ಲಿರುವುದರಿಂದ ಅಲ್ಲಿ ನಡೆಯುವ ಜಾತ್ರೆ ಇತ್ಯಾದಿ ಉತ್ಸವಗಳು ಬಹಿರಂಗ ಗೊಂಡಿಲ್ಲ. ಕಲ್ಯಾಣಿ ಚಾಲುಕ್ಯರ ಅರಸನಾದ ಜಗದೇಕ ಮಲ್ಲನ ಕಾಲದ ತೆಕ್ಕಲಕೋಟೆ ಶಾಸನ ಕ್ರಿ.ಶ. ೧೦೧೭ರದ್ದಾಗಿದ್ದು, ಅದರಲ್ಲಿ ಮೈಲಾರ ದೇವರು ಎಂದು ಪ್ರಥಮಬಾರಿಗೆ ಉಲ್ಲೇಖಗೊಂಡಿರುವ ಅಂಶವನ್ನು ನೋಡಿದರೆ, ಸ್ವಾಮಿ ಮಲ್ಲಯ್ಯನ ಮೂಲ ಕ್ಷೇತ್ರ ಯಾವುದು ಎಂಬುದರ ಬಗ್ಗೆ ಕುತೂಹಲ ಮೂಡುತ್ತದೆ. ಮೀನಗೊಂದಿ ಕ್ಷೇತ್ರದ ಮಲ್ಲಯ್ಯನ ಮೂಲವನ್ನು ಕ್ಷೇತ್ರಕಾರ್ಯದ ಮೂಲಕ ಕೆದಕುತ್ತಾ ಹೋದಂತೆಲ್ಲ ವಿಶಿಷ್ಟ ಅಂಶಗಳು ಬೆಳಕಿಗೆ ಬಂದಿವೆ. 'ಗಿರಿಮ್ಯಾಲ ಗಿರಿ, ಮೇಲ್ಗಿರಿ' ಎಂಬ ಗಾದೆಗಳು ಆಲೂರು, ಆದವಾನಿ ತಾಲೂಕಿನಾದ್ಯಂತ ಪ್ರಚಲಿತವಾಗಿದೆ. ಹಾಗೂ ಈ ಎರಡು ಉಕ್ತಿಗಳಿಂದ ಮಲ್ಲಯ್ಯನ ಮೂಲವನ್ನು ಹುಡುಕುವ ಸಾಧ್ಯತೆಗಳಿವೆ. ದೊರೆಯುವ ಶಾಸನಗಳು, ಶಿಷ್ಟ ಸಾಹಿತ್ಯ ಇವೆಲ್ಲವುಗಳು ಒಂದು ನಾಡಿನ, ಒಂದು ಕ್ಷೇತ್ರದ , ಒಂದು ಊರಿನ ಮಾಹಿತಿಯನ್ನು, ಚರಿತ್ರೆಯನ್ನು, ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಎಷ್ಟು ಸಹಾಯಕವಾಗುವುವೋ, ಅದೇ ತೆರನಾಗಿ ಮೌಖಿಕ ಪರಂಪರೆಯ ಕವಚದಲ್ಲಿ ಅಡಗಿಕೊಂಡಂತಹ ಪುರಾಣ ಮುಂತಾದವು ವಿಫುಲ ಮಾಹಿತಿಯನ್ನು ನೀಡುತ್ತವೆ. ಎಷ್ಟೋ ಸಾರಿ ಒಂದು ನಾಡಿನ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವಲ್ಲಿ ಶಿಷ್ಟ ಸಾಹಿತ್ಯಕ್ಕಿಂತ ಗಟ್ಟಿಯಾದ ಆಧಾರಗಳಾಗಿ ನಿಲ್ಲುವಂತಹವು ಮೌಖಿಕ ಪರಂಪರೆಯ ಆಧಾರಗಳು. ಅಂತೆಯೇ ಶ್ರೀ ಮೀನಗೊಂದಿ ಮಲ್ಲಯ್ಯನ ಬಗ್ಗೆ ಈ ಪ್ರದೇಶದ ಶಿಷ್ಟ ಸಾಹಿತ್ಯ, ಜನಪದ ಸಾಹಿತ್ಯ, ಜೊತೆಗೆ ಶಾಸನಗಳು ಪ್ರಮುಖ ಆಧಾರವನ್ನು ನೀಡಿವೆ. ಶ್ರೀ ಆದಿ ಮೀನಗೊಂದಿ ಮಲ್ಲಯ್ಯನ ಆಚರಣೆಗಳ ಆಧಾರದಿಂದ, ಭೌಗೋಳಿಕ ವಿವರಗಳಿಂದ, ಒಡಪು, ಹಾಡು, ಕಥೆ, ಐತಿಹ್ಯ, ಪುರಾಣ ಮುಂತಾದ ಅಂಶಗಳಿಂದ, ಅತಿ ಮುಖ್ಯವಾಗಿ ಶಾಸನಾಧಾರದಿಂದ ಶ್ರೀ ಆದಿ ಮೀನಗೊಂದಿ ಮಲ್ಲಯ್ಯನ ಕ್ಷೇತ್ರವೇ ಎಲ್ಲಾ ಮೈಲಾರ ಕ್ಷೇತ್ರಗಳಿಗೆ ಮೂಲ ಎಂದು ಸಾಬೀತುಪಡಿಸುವ ಅಂಶಗಳನ್ನು ಈ ಕೆಳಗೆ ಒಂದೊಂದಾಗಿ ವಿವರಿಸಿದ್ದೇನೆ.

## ೨.೧. ಸ್ಥಳ ನಾಮ :

ಶ್ರೀ ಆದಿ ಮೀನಗೊಂದಿ ಎಂಬ ಸ್ಥಳನಾಮದ ಹಿಂದೆ ಪೂರ್ವ ಪದವಾಗಿ ಬರುವಂತಹ 'ಆದಿ' ಎಂಬುದು ವಿಶೇಷವಾಗಿ ಪ್ರಥಮ ಎಂಬುದನ್ನು ನಿರ್ದೇಶಿಸುತ್ತದೆ. ಮೈಲಾರಲಿಂಗ ಸಂಪ್ರದಾಯವಿರುವ ಯಾವ ಗ್ರಾಮದಲ್ಲಿಯೂ ಈ ಪದ ಪ್ರಯೋಗ ದೊರೆಯಲಾರದು. ಈ ದೃಷ್ಟಿಯಿಂದ ಇದು 'ಮೂಲ ಕ್ಷೇತ್ರ' ಎಂಬ ಮಾಹಿತಿ ಸ್ಥಳದ ಹೆಸರಿನಿಂದ ದೊರೆಯುತ್ತದೆ. ಇನ್ನು ಮೀನಗೊಂದಿ ಎಂಬುದನ್ನು ಮೀನ + ಗೊಂದಿ ಎಂದು ಬಿಡಿಸಿಕೊಂಡಾಗ 'ಗೊಂದಿ' ಎಂಬುದು ಗುಂದ, ಕುಂದ ಎಂಬುದರ ಮತ್ತೊಂದು ರೂಪ. ಇದರರ್ಥ ಬೆಟ್ಟ, ಗುಡ್ಡ, ಎತ್ತರವಾದ ಸ್ಥಳ ಎಂಬಿತ್ಯಾದಿ ಅರ್ಥವನ್ನು ಕಲ್ಪಿಸಬಹುದಾಗಿದೆ. ಮೀನ ಎಂಬುದು ಬೆಟ್ಟದ ಆಕಾರವನ್ನು ಸೂಚಿಸುತ್ತದೆ. ಈ ಹೆಸರಿಗೆ ಬೆಂಬಲವೆಂಬಂತೆ ವೈದಿಕರ ಬಾಯಲ್ಲಿ ಮತ್ಸ್ಯಾಚಲ ಎಂದು ಸಂಸ್ಕೃತೀಕರಣಗೊಂಡಿದೆ. ಮತ್ಸ್ಯ ಎಂದರೆ ಮೀನು. ಅಚಲ ಎಂದರೆ ಚಲಿಸಲಾರದ್ದು, ಸ್ಥಿರವಾದದ್ದು ಎಂಬ ಅರ್ಥ ಸಿಗುತ್ತದೆ. ಇವೆರಡು ಒಂದಕ್ಕೊಂದು ತಾಳೆಯಾಗಿ ಸ್ಥಳನಾಮವು ವೈಜ್ಞಾನಿಕದ ಪ್ರಕಾರ ಭೌಗೋಳಿಕ ನಾಮ ನಿರ್ದೇಶನವನ್ನು ಮಾಡುತ್ತದೆ. ಮತ್ಸ್ಯಾಚಲ ಎಂಬ ಹೆಸರು ಇಂದು ಜನರಲ್ಲಿ ಚಾಲ್ತಿಯಲ್ಲಿರುವುದು ತುಂಬಾ ಕಡಿಮೆ. ಬದಲಾಗಿ ಮೀನಗೊಂದಿ, ದೇವರಗುಡ್ಡ,ಮಲ್ಲಯ್ಯನ ಗುಡ್ಡ ಎಂದೆಲ್ಲಾ ಕರೆಯಲಾಗುತ್ತಿದೆ. ಇನ್ನು ಮೌಖಿಕ ಪರಂಪರೆಯನ್ನು ಅವಲಂಬಿಸಿ ಹೇಳುವುದಾದರೆ, ಇಲ್ಲಿ ಸಂದರ್ಶಿಸಿದ ಸುಮಾರು ಜನರ ಅಭಿಪ್ರಾಯದಿಂದ ಮೀನಗೊಂದಿ ಮಲ್ಲಯ್ಯನೇ ಮೂಲ ಎಂದು ಹೇಳುವುದು ಸಹಜ.

## ೨.೨. ಹೂವಿನ ಅಲಂಕಾರ :

ಮನುಷ್ಯನಿಗೆ ದೇವರ ಕಲ್ಪನೆ ಮೂಡಿದ್ದು ಅವಿಸ್ಮರಣೀಯ ಘಟನೆ. ಆದಿಕಾಲದಲ್ಲಿ ಮಾನವನು ಬೇಟೆಯಾಡುತ್ತ, ಆಹಾರ ಸಂಗ್ರಹಿಸುತ್ತ ಜೀವನ ನಡೆಸುತ್ತಿದ್ದನು. ಆತನು ನಿರಂತರವಾಗಿ ಪ್ರಕೃತಿಯೊಡನೆ ಸೆಣಸಬೇಕಾಗಿತ್ತು. ಮಳೆ, ಗುಡುಗು, ಸಿಡಿಲು, ಕಾಳ್ಗಿಚ್ಚು ಮುಂತಾಗಿ ಪ್ರಕೃತಿಯಲ್ಲಿ ನಡೆವ ಇಂಥ ಘಟನೆಗಳು ಆತನಲ್ಲಿ ಭಯ ಹುಟ್ಟಿಸಿದವು. ಇಂಥ ಶಕ್ತಿಯನ್ನು ಎದುರಿಸಲು ಆತನು ದೊಡ್ಡದೊಡ್ಡ ಬಂಡೆಗಳಿರುವ ಗುಹಾಲಯಗಳಲ್ಲಿ ಆಶ್ರಯ ಪಡೆದನು. ಪ್ರಕೃತಿಯ ಪ್ರತಿಯೊಂದು ಘಟನೆಗಳನ್ನು ಸೂಕ್ಷ್ಮವಾಗಿ ಗಮನಿಸಿದ ಆದಿ ಮಾನವ ಅವುಗಳ ಹಿಂದೆ ಮಹತ್ತರವಾದ ಒಂದು ಶಕ್ತಿ ಅಡಿಗಿದೆ ಎಂದು ಕಲ್ಪಿಸಿಕೊಂಡ. ಆತನಿಗೆ ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂಥ ಶಕ್ತಿಗಳ ಬೆಂಬಲ ಅವಶ್ಯಕವೆನಿಸಿತು. ಅಂತಹ ಶಕ್ತಿಗೆ ಶರಣಾಗತನಾಗಿ ಆರಾಧಿಸತೊಡಗಿದ. ಮರವನ್ನು, ಗಾಳಿಯನ್ನು, ಬೆಟ್ಟವನ್ನು, ಸೂರ್ಯ-ಚಂದ್ರರನ್ನು ಹೀಗೆ ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲೂ ದೇವರ ಕಲ್ಪನೆಯನ್ನು ಕಂಡು, ಅವುಗಳನ್ನು ಆರಾಧಿಸುವ ಮೂಲಕ ತನ್ನ ಜೀವನದ ಸುಖವನ್ನು ಕಂಡುಕೊಂಡ. ಹಾಗೆಯೇ ಮುಂದುವರಿದು, ದೇವರುಗಳು ಸಹ ನಮ್ಮಂತಹ ಆಕಾರವನ್ನೇ ಹೊಂದಿರುತ್ತವೆ ಎಂದು ತಿಳಿದು ಕಲ್ಲುಗಳ ಮೇಲೆ, ಮಣ್ಣಿನಿಂದಲೂ, ಮರದ ದಿಮ್ಮಿಗಳ ಮೇಲೆ ಮನುಷ್ಯಾಕೃತಿಯನ್ನು ಕೆತ್ತಿ ಅವುಗಳನ್ನು ಶಕ್ತಿಯ ಸ್ವರೂಪಗಳನ್ನಾಗಿ ಮಾರ್ಪಡಿಸಿ ಆರಾಧಿಸುತ್ತಾ ಬಂದ.

ಈ ರೀತಿ ಮನುಷ್ಯ ಮೂರ್ತಿಗಳನ್ನು ಕಂಡುಕೊಳ್ಳುವ ಪೂರ್ವದಲ್ಲಿ ಪ್ರಕೃತಿಯನ್ನು ಪೂಜಿಸುತ್ತಾ ಬಂದ ಎನ್ನುವ ಅಂಶವನ್ನು ಈಗಾಗಲೇ ಮೇಲೆ ತಿಳಿಸಿದೆ. ಮೂರ್ತಿಗಳು ಉದ್ಭವಿಸುವ ಪೂರ್ವದಲ್ಲಿಯೇ ಹೆಣ್ಣು ದೇವತೆಯನ್ನು ಹೂವಿನ ಪ್ರತಿರೂಪ ಎಂದು ಭಾವಿಸಿ ಹೂವನ್ನು ಪೂಜಿಸತೊಡಗಿದ. ಈ ರೀತಿ ಹೂವನ್ನು ದೈವವೆಂದು (ಹೆಣ್ಣು ದೇವತೆ) ಅಲಂಕರಿಸಿ ಪೂಜಿಸುವ ಧಾರ್ಮಿಕ ವಿಧಿ-ವಿಧಾನಗಳು ಸುಮಾರು ವರ್ಷಗಳ ಹಿಂದೆಯೇ ಆಚರಿಸುತ್ತಾ ಬಂದಿರುವುದು ಸ್ಪಷ್ಟ.

ನನ್ನ ಅಧ್ಯಯನದಲ್ಲಿ ಈ ತೆರನಾದ ಆಚರಣೆ ಇನ್ನೂ ಜೀವಂತವಾಗಿರುವುದು ಬಹಳ ವಿಶೇಷವೇ ಆಗಿದೆ. ದಸರಾ ಬನ್ನಿಯ ಸಮಯದಲ್ಲಿ ಸ್ವಾಮಿ ಮಲ್ಲಯ್ಯ ಮತ್ತು ಮಾಳಮ್ಮನ ಉತ್ಸವ ಮೂರ್ತಿಗಳ ಮೆರವಣಿಗೆ ತೆರಳುತ್ತದೆ. ಮಲ್ಲಯ್ಯನ ಉತ್ಸವ ಮೂರ್ತಿಯಲ್ಲಿ ಬಿಳಿ ಅಶ್ವದ ಮೇಲೆ ಮಲ್ಲಯ್ಯನ ಬೆಳ್ಳಿಯ ವಿಗ್ರಹವಿದೆ. ಆದರೆ ಮಾಳಮ್ಮನ ಉತ್ಸವ ಮೂರ್ತಿಯ ಬಿಳಿ ಅಶ್ವದ ಮೇಲೆ ಯಾವುದೇ ಮೂರ್ತಿಯಿಲ್ಲ. ಬದಲಿಗೆ ರೋಜಾದ ಹೂವಿನ ಅಲಂಕಾರವನ್ನು ಮಾಡಿರುತ್ತಾರೆ. ರೋಜದ ಹೂವು ಅಂದರೆ ಕಮಲ. ಕಮಲದ ಹೂವಿನ್ಯಾಗ ಈಯಮ್ಮ ಹುಟ್ಯಾಳೆ'' ಎಂದು ಗಣಾಚಾರಿಗಳು ಹೇಳುತ್ತಾರೆ. ''ಇಲ್ಲಿ ಗಂಗಿ ಮಾಳಮ್ಮಳಿಗೆ ಪ್ರತ್ಯೇಕವಾದ ಮೂರ್ತಿಯಿಲ್ಲ. ಮಲ್ಲೇಶ್ವರನಿಗೆ ವಿಗ್ರಹವಿದೆ. ಗಂಗಿ ಮಾಳಮ್ಮಗ ಕುದುರೆಯ ಮೇಲೆ ರೋಜೇದ ಹೂವಿದೆ. ಅದೇ ಆಕೆಯ ಪ್ರತಿರೂಪ. ಹೂವಿನಲ್ಲಿ ಪದ್ಮಾಸನೆ, ಪದ್ಮಕಲೆ, ಪದ್ಮ ಲೋಕೈಕ ಪೂಜಿತೆ ಅಂತ ಕೇಳ್ತೀರ್ತಿವಲ್ಲಾ ಆ ಪದ್ಮಾಸನದಲ್ಲಿ ಆಕೆ ಅಡಗಿರುತ್ತಾಳೆ'' ಎಂದು ನೆರಣಿಕೆ ಸುಬ್ರಹ್ಮಣ್ಯ ಸ್ವಾಮಿಗಳು ಹೇಳುತ್ತಾರೆ. ರಾಕ್ಷಸ ವಧೆಯಲ್ಲಿ ಇವಳ ಪ್ರತೀಕವಾಗಿ 'ರೋಜಾದ ಹೂ' ಇರುತ್ತದೆ. ಅಲ್ಲಿ ಈ ಹೂವಿನ ಸನ್ನಿಧಿಯಲ್ಲಿಯೇ ರಾಕ್ಷಸವಧೆ ನಡೆಯುತ್ತದೆ. ಈ ಅಂಶ ನಮ್ಮನ್ನು ಮತ್ತೆ ಮೂರ್ತಿ ಪೂಜೆಯ ಹಿಂದಿನ ಕಾಲಕ್ಕೆ ಒಯ್ಯುತ್ತದೆ (ಡಾ. ಎಂ.ಜಿ. ನೇಗಿನಹಾಳ : ೧೯೯೨:೨೪೭).

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಮಾಳಮ್ಮಳಿಗೆ ಮೂರ್ತಿ ಇಲ್ಲದೇ ಇರುವುದು ಇದೇ ಕ್ಷೇತ್ರದಲ್ಲಿ. ಉಳಿದಂತೆ ಮಲ್ಲಯ್ಯನ ಎಲ್ಲಾ ಕ್ಷೇತ್ರಗಳಲ್ಲಿ ಮಾಳಮ್ಮಳಿಗೆ ಮೂರ್ತಿಯಿದೆ. ಆದರೆ ಈ ರೀತಿಯ ರೋಜಾದ ಹೂವಿನ ಅಲಂಕಾರವನ್ನು ನಾವು ಕಾಣಲಾರೆವು. ಮೂರ್ತಿ ಪೂಜೆಯ ಹಿಂದಿನ ಕಾಲದಿಂದಲೂ ಈ ಪದ್ಧತಿ ಇಂದಿಗೂ ಸಾಗಿ ಬಂದಿರುವುದು ಸೋಜಿಗವೇ ಸರಿ. ಯಾವ ಮಲ್ಲಯ್ಯನ ಕ್ಷೇತ್ರಗಳಲ್ಲಿ ಈ ತೆರನಾದ ಪದ್ಧತಿ ಇಲ್ಲದೇ ಇರುವುದರಿಂದ ಶ್ರೀ ಆದಿ ಮೀನಗೊಂದಿ ಮಲ್ಲಯ್ಯನ ಕ್ಷೇತ್ರವೇ ಪುರಾತನವಾದದ್ದು ಎನ್ನುವುದರಲ್ಲಿ ಯಾವ ಅನುಮಾನವಿಲ್ಲ.

ಶಾಸನಗಳ ಹಿನ್ನೆಲೆಯಲ್ಲಿ ನೋಡಿದಾಗ ಆಂಧ್ರದ ವೆಲುಪಗೊಂಡ(ಸಂಗಾರೆಡ್ಡಿ.ಜಿ)ದ ಕ್ರಿ.ಶ.೧೧೯೯ರ ಶಾಸನದಲ್ಲಿ 'ಮೈಲಾರ ದೇವರು' ಎಂದಿದೆ. ಆದರೆ ಅದಕ್ಕಿಂತ ಪೂರ್ವದಲ್ಲಿ ದೊರೆತ ಶಾಸನಗಳಲ್ಲಿ 'ಮಾಳಿ' ಎಂದಿರುವ ಉಲ್ಲೇಖ ನಮಗೆ ಸಿಗುತ್ತದೆ. ಅಂದರೆ ಸ್ವಾಮಿ ಮಲ್ಲಯ್ಯನಿಗಿಂತ ಮುಂಚೆ ಮಾಳಮ್ಮ ಎನ್ನುವ ದೇವತೆ ಇದ್ದಳೆಂಬುದು ನಮಗೆ ಸ್ಪಷ್ಟ. ಈ ಹಿನ್ನೆಲೆಯಲ್ಲಿ ಗಂಗಿ ಮಾಳಮ್ಮಳಿಗೆ ರೋಜಾದ ಹೂವಿನ ಅಲಂಕಾರದ ಪದ್ಧತಿಯನ್ನು ನೋಡಿದಾಗ ಈ ಮಾತು ಸತ್ಯವೆನಿಸದೇ ಇರದು.

೨. ಗದ್ದೆ ಮನೆ ಶಾಸನ :(ಎಂ.ಎ.ಆರ್. ೧೯೨೩ - ಪು. ೮೩, ಸು.ಕ್ರಿ.ಶ. ೭ನೇ ಶತಮಾನ) ''......ಬೆಳೆಯ ಮಾಳಿ ಕಾದೋನ್ ಕಲ್ಯಾಣಂ ಅಕ್ಕೆರೆವೊನ್ ಪಞ್ಚಮ....'' ಇಲ್ಲಿ ಮಾಳಿ ಎಂಬುದು ವ್ಯಕ್ತಿಯ ಹೆಸರಾಗಿದೆ.

೩. ಕ್ರಿ.ಶ. ಸು. ೭೫೦ (ಕೆ.೧, ವ್ಯಾಲ್ಯುಂ ೩) ಎರಡನೇ ಕೀರ್ತಿವರ್ಮನ ಆಡೂರು ಶಾಸನದಲ್ಲಿ ಸಿಂದರಸರ ಬಗ್ಗೆ ಹೇಳಿದೆ. ಮುಂದೆ ದೊರೆತ ದೇವಿ ಹೊಸೂರು ಮುಂತಾದ ಶಾಸನದಲ್ಲಿ 'ಮಾಳತೀದೇವಿ ಲಬ್ಧ ವರ ಪ್ರಸಾದ' ಎಂದಿದೆ.

೪. ಕ್ರಿ.ಶ. ೮೩೦ರ ಶಿಕಾರಿಪುರ ಶಾಸನದಲ್ಲಿ (ವಿ. ಇ. ಸಿ. ೭) ''ಗುಡ್ಡರ ಪುಬ್ಬಾಮಿಗಂಗೆ ಮಾಳಿಞ್ಗ ಗಾಮಿತ್ತಿಯಂಗೆ ಪುಟ್ಟಿದ'' ಮಾಳಿಞ್ಗಗಾಮಿತ್ತಿ ಎಂಬ ಸ್ತ್ರೀ ನಾಮವಿದೆ (ಡಾ. ಎಂ.ಬಿ. ನೇಗಿನಹಾಳ; ೧೯೯೯:೧೨೩-೧೨೪).

ಹೀಗೆ ಹಲವಾರು ಶಾಸನಗಳಲ್ಲಿ ಮಾಳಿಯ ಉಲ್ಲೇಖ ನಮಗೆ ಸಿಗುತ್ತದೆ. ಮುಂಚಿತವಾಗಿಯೇ ಮಾಳಿ ದೇವಿ ಅಥವಾ ಗಂಗಿ ಮಾಳಮ್ಮಳ ಕಲ್ಪನೆ ನಮ್ಮ ಜನಪದರಲ್ಲಿ ಮೂಡಿ ಆಕೆ ಪ್ರಖ್ಯಾತ ದೇವತೆಯಾಗಿರಬೇಕು. ನಂತರ ಮಲ್ಲೇಶ್ವರನನ್ನು ಪುರಾಣಗಳ ಕಲ್ಪನೆಯಲ್ಲಿ ಮೂಡಿಸಿ ಒಂದು ಪ್ರತ್ಯೇಕ ದೈವತ್ವಕ್ಕೆ ಏರಿಸಿದಂತಿದೆ. ಈ ಸಂದರ್ಭದಲ್ಲಿ ಒಂದು ಉದಾಹರಣೆಯನ್ನು ನೋಡಬಹುದು ನಮ್ಮ ಸುತ್ತ ಮುತ್ತ ಬೇವಿನ ಮರ ಹುಟ್ಟಿಕೊಂಡಾಗ ನಮ್ಮ ಜನಪದರು ಅದರ ಪಕ್ಕದಲ್ಲಿಯೇ ರಾಗಿ (ಬೋಧಿ ವೃಕ್ಷ) ಗಿಡವನ್ನು ನೆಡುತ್ತಾರೆ. ಬೇವಿನ ಮರ ಶಕ್ತಿ ದೇವತೆಯ ಸಂಕೇತವಾಗಿದೆ. ಶಕ್ತಿ ದೇವತೆಯಾದ ಬೇವಿನ ಗಿಡವೇ ಮೊದಲು ಹುಟ್ಟಿ ನಂತರ ಅದರ ಪಕ್ಕದಲ್ಲಿ ರಾಗಿ ಗಿಡವನ್ನು ನೆಟ್ಟು ಅವೆರಡು ದೊಡ್ಡದಾದಾಗ ಮದುವೆ ಮಾಡಿಸುತ್ತಾರೆ. ಅಂದರೆ ಇಲ್ಲಿ ಹೆಣ್ಣು ದೇವತೆಯೇ ಮೊದಲು ಎಂಬುದು ಸ್ಪಷ್ಟ. ಈ ಮಾಳಿಯ ಶಾಸನಗಳ ಆಧಾರದ ಹಿನ್ನೆಲೆಯಲ್ಲಿ ಗಂಗಿ ಮಾಳಮ್ಮನ ಪ್ರತಿರೂಪವಾಗಿ ರೋಜಾದ ಹೂವಿನ ಅಲಂಕಾರ ನೋಡಿದರೆ ಈ ಮಾತು ಸತ್ಯವೆನ್ನಿಸುತ್ತದೆ. ಜೊತೆಗೆ ಶ್ರೀ ಆದಿಮೀನಗೊಂದಿ ಕ್ಷೇತ್ರದ ಬಹುತೇಕ ಜನರು ಈ ದೇವರ ಹೆಸರನ್ನು ''ಶ್ರೀ ಮಾಳಾಸಹಿತ ಮಲ್ಲೇಶ್ವರ'' ಎಂದು ಕರೆದಿರುವುದು ಇದೇ ಕ್ಷೇತ್ರ ಮೂಲವೆಂದೆನಿಸುತ್ತದೆ.

## ೨.೩. ಮಗಲಾಯ (ಬಡಿಗೆ ಆಟ) :

ಮನುಷ್ಯ ಮೂಲತಃ ಪ್ರಕೃತಿಯ ಮಡಿಲಲ್ಲಿ ಬೆಳೆದು ಎಲ್ಲಾ ಪ್ರಾಣಿಗಳಂತೆ ಇವನು ಕೂಡಾ ಒಬ್ಬನಾಗಿದ್ದ. ಅವನು ಬೇಟೆಯಿಂದಲೇ ತನ್ನ ಆಹಾರವನ್ನು ಕಂಡುಕೊಂಡು ಪ್ರಾಣಿಗಳ ಬೇಟೆಗೆ ಅವಶ್ಯವಾದ ಆಯುಧಗಳನ್ನು ಬಳಸತೊಡಗಿದ. ಕೊಡಲಿ, ಈಟಿ, ಬಡಿಗೆ, ಬರ್ಚಿ, ಕಲ್ಲು ಮುಂತಾದ ಆಯುಧಗಳನ್ನು ಬಳಸಿ ಬೇಟೆಯಾಡುತ್ತಿದ್ದ. ಬೇಟೆಯ ಸಂದರ್ಭದಲ್ಲಿ ತನ್ನ ಪಂಗಡದೊಂದಿಗೆ ವಿಚಿತ್ರವಾದ ಧ್ವನಿಯನ್ನು ಮಾಡುತ್ತ (ಹುರ್ರ, ಹುರ್ರ...) ಪ್ರಾಣಿಗಳನ್ನು ಅಟ್ಟಿಸಿಕೊಂಡು ಹೋಗಿ ಬೇಟೆಯಾಡುತ್ತಿದ್ದರು. ಈ ಹಿನ್ನೆಲೆಯಲ್ಲಿ ಅವನು ವಿಕಾಸ ಹೊಂದುತ್ತ ಸಾಮಾಜಿಕ ಬದುಕನ್ನು ಕಂಡುಕೊಂಡು ಗುಹೆಗಳಲ್ಲಿ ವಾಸಿಸುತ್ತ ಬಂದ. ತನ್ನ ಮೇಲೆ ಬೇರೆ ಪಂಗಡಗಳಿಂದ ಅಪಾಯ ಒದಗಿದಾಗ ಹೊಡೆದಾಡಿ ತನ್ನ ಪ್ರದೇಶವನ್ನು ರಕ್ಷಿಸಿಕೊಳ್ಳುತ್ತಿದ್ದ. ಹೀಗೆ ಈ ಆದಿಮಾನವರು ತಂಡಗಳಾಗಿ ಮಾರಣಾಯುಧಗಳನ್ನು ಹಿಡಿದು ಹೊಡೆದಾಡುವಾಗ ಸಾಕಷ್ಟು ಸಾವುನೋವುಗಳು ಸಂಭವಿಸುತ್ತಿದ್ದವು.

ಇದು ಆದಿ ಮಾನವರ ಬದುಕು ಆದರೆ, ಇಂತಹದೇ ತದ್ರೂಪವಾದ ಆಚರಣೆ ಈಗಲೂ ಸುಮಾರು ಸಾವಿರಾರು ವರ್ಷಗಳ ಆದಿಮಾನವನ ವರ್ತನೆಯನ್ನು ಧಾರ್ಮಿಕತೆಯ ನೆಪದಲ್ಲಿ ಭಕ್ತಿಯ ಮೌಢ್ಯತೆಯಲ್ಲಿ ಶ್ರೀ ಆದಿ ಮೀನಗೊಂದಿ ಕ್ಷೇತ್ರದಲ್ಲಿ ಮಗಲಾಯ ಅಥವಾ ಬಡಿಗೆ ಆಟ ದಂಥ ಕ್ರೌರ್ಯ ಆಚರಣೆ ಇನ್ನೂ ಜೀವಂತವಾಗಿ ಸಾಗಿ ಬಂದಿರುವುದು ಅಚ್ಚರಿಯೇ ಆಗಿದೆ. ದಸರಾ ಸಮಯದ ಬನ್ನಿಯಲ್ಲಿ ದೇವರ ಗುಡ್ಡದ ಬೆಟ್ಟಕ್ಕೆ ಸುಮಾರು ಎಂಟು-ಹತ್ತು ಹಳ್ಳಿಗಳಿಂದ ಭಕ್ತರು ಹಣಸಿನ ಬಡಿಗೆಗಳನ್ನು ಹಿಡಿದು, ಪಂಜುಗಳ ಸಮೇತರಾಗಿ ರಾತ್ರಿ ಹತ್ತರ ಸುಮಾರಿಗೆ ಬೆಟ್ಟದ ಬಳಿ ತಲುಪುತ್ತಾರೆ. ಪ್ರತಿ ಊರಿನವರು ಪ್ರತ್ಯೇಕ ಪಂಗಡಗಳಾಗಿ ಗಿರಿಯನ್ನು ಹತ್ತುವುದು ಮತ್ತು ಮುಖ್ಯ ಬೀದಿಗೆ ತೆರಳುವುದು ಮಾಡುತ್ತಲೇ ಇರುತ್ತಾರೆ. ಹಲಗೆಯ ಸದ್ದಿಗೆ ತಮ್ಮ ಇಚ್ಛಾನುಸಾರ ಕುಣಿಯುತ್ತ ಹುರ್ರ, ಹುರ್ರ ಎಂದು ಅರಚುತ್ತಾ ವಿಚಿತ್ರವಾಗಿ ಕೇಕೆ ಹಾಕುತ್ತಾರೆ. ಹೀಗಿರುವಾಗ ಬೇರೆ ತಂಡಗಳು ಎದುರಾಗುವುದು ಸಹಜ. ಆಗ ಆ ತಂಡಗಳ ಮೇಲೆ ಬಡಿಗೆಗಳನ್ನು ಎತ್ತುತ್ತಲೇ ರೋಷ, ಕೆಚ್ಚು ಬಿಂಬಿಸುತ್ತಲೇ ಅಣಕ ಯುದ್ಧ ಮಾಡುತ್ತಾರೆ. ರಾತ್ರಿ ಸುಮಾರು ಒಂದರ ಹೊತ್ತಿಗೆ ಶ್ರೀ ಮಾಳಾಸಹಿತ ಮಲ್ಲೇಶ್ವರರಿಗೆ ಮದುವೆಯ ಕಾರ್ಯ ಮುಗಿದಾದ ಮೇಲೆ ಬೆಟ್ಟದಿಂದ ದೇವರ ಮೆರವಣಿಗೆ ಮುಖ್ಯ ಬೀದಿಗೆ ಸಾಗುತ್ತದೆ. ಆಗ ಪ್ರತಿ ಊರಿನವರು ದೇವರನ್ನು ಸ್ವಾದೀನಪಡಿಸಿಕೊಳ್ಳುವ ಕೆಚ್ಚನ್ನು ಮೈಗೂಡಿಸಿಕೊಂಡು ಅಣಕ ಯುದ್ಧ ಮಾಡುತ್ತಲೇ ಹೋರಾಡುತ್ತಾರೆ. ಈ ಬಡಿಗೆ ಆಟದ ರೀತಿಯನ್ನು ಮತ್ತೊಮ್ಮೆ ಕಣ್ಣೆದುರಿಗೆ ತಂದುಕೊಂಡರೆ ಸಾಕು ಎಂಥವರಿಗೂ ಮೈ ನಡುಗುತ್ತದೆ. ಗೋಸಿಗಳನ್ನು ಕಟ್ಟಿಕೊಂಡು, ಕೈಯಲ್ಲಿ ಹಣಸಿನ ಬಡಿಗೆಗಳನ್ನು ಹಿಡಿದು ಪಂಜುಗಳ ಬೆಳಕಿನಲ್ಲಿ ಅವರ ಮುಖಗಳು ಕೆಂಪೇರಿ ಹುರ್ರ ಹುರ್ರ ಎಂಬ ವಿಚಿತ್ರ ಧ್ವನಿಯ ಮೂಲಕ ಬಜಾರದ ಉದ್ದಗಲಕ್ಕೂ ಕಾಣುವ ರೌದ್ರಾಕಾರದ ಚಿತ್ರಣ ಆದಿ ಮಾನವನ ಬೇಟೆಯ ಹಾಗೂ ಯುದ್ಧದ ಬದುಕನ್ನು ನೆನಪಿಗೆ ತರದೆ ಇರದು. ಈ ಬಡಿಗೆ ಆಟದ ಬಗ್ಗೆ ಒಂದು ಐತಿಹ್ಯ ಹೀಗಿದೆ.

ಈ ಕ್ಷೇತ್ರದ ಭಕ್ತರಿಗೆ, ರೈತರಿಗೆ ಮತ್ತು ಪ್ರಜೆಗಳಿಗೆ ಮಣಿ ಮಲ್ಲಾಸುರ ಎಂಬ ರಾಕ್ಷಸರು ತುಂಬಾ ಕಾಟ ಕೊಡುತ್ತಿದ್ದರು. ಇವರಿಂದ ಭಕ್ತರನ್ನು ಪಾರು ಮಾಡುವ ಸಲುವಾಗಿ ಮಾಳಾ ಮಲ್ಲೇಶ್ವರರು ರಾಕ್ಷಸರನ್ನು ಸಂಹರಿಸಲು ಮುಂದಾದಾಗ ಭಕ್ತರು, ರೈತರು, ಕುರಿಗಳನ್ನು ಕಾಯುವವರು ಇನ್ನು ಮುಂತಾದವರೆಲ್ಲಾ ಸೇರಿ 'ಸ್ವಾಮಿ ನಮ್ಮ ಸಲುವಾಗಿ ನೀವೊಂದೇ ಘಾಸಿಯಾಗ ಬೇಡ್ರೀ, ನೀವು ಯಾವತ್ತಾದರೂ, ಯಾವಾಗಾದರೂ ನಮ್ಮನ್ನು ಕರೀರಿ ಅವತ್ತಿನ ದಿವಸ ಬಡಿಗೆ, ಕೊಡ್ಲಿ ಮುಂತಾದವನ್ನು ತಗಂಡು ನಿಮ್ಮಿಂದೆ ಬರ್ತೀವಿ ಅಂತ ಹೇಳಿ ಅವತ್ತಿಗೆ ಮಲ್ಲೇಶ್ವರ, ಮಾಳಮ್ಮ ಮತ್ತು ಭಕ್ತರು ಈ ರೀತಿ ಒಪ್ಪಂದ ಮಾಡಿಕೊಂಡರಂತೆ. ಹೀಗೆ ದೇವರೊಡಗೂಡಿ ಭಕ್ತರು ಬಡಿಗೆ, ಕೊಡ್ಲಿ ಮತ್ತಿತರೆ ಮಾರಣಾಯುಧಗಳನ್ನು ಹಿಡಿದು ರಾಕ್ಷಸರನ್ನು ಬನ್ನಿಯದಿನ ಸಂಹರಿಸಲು ಹೋಗುತ್ತಾರೆ. ಅದೇ ಇವತ್ತಿಗೂ ನಿರಂತರವಾಗಿ ಸಾಗಿ ಬಂದಿರುವ ಆಟ ಈ ಬಡಿಗೆ ಆಟ. ಈ ರೀತಿಯಾಗಿ ಕ್ಷೇತ್ರದ ಧರ್ಮಾಧಿಕಾರಿಗಳಾದ ಮಲ್ಲಪ್ಪಯ್ಯ ಒಡೆಯರು ಬಡಿಗೆ ಆಟದ ಬಗ್ಗೆ ಐತಿಹ್ಯ ತಿಳಿಸಿರುವರು.

ಮೇಲಿನ ಐತಿಹ್ಯ, ರಾಕ್ಷಸರನ್ನು ಸಂಹರಿಸಲು ರಕ್ಷಪಡೆಗೆ ತೆರಳುವಲ್ಲಿ ಬಡಿಗೆ ಆಟದ ಆಚರಣೆಯ ವಿಧಾನವನ್ನು ಗಮನಿಸಿದಾಗ ಇಂತಹ ಯಾವುದೇ ತೆರನಾದ ಆಚರಣೆ ಮಲ್ಲಯ್ಯನ ಇತರೆ ಕ್ಷೇತ್ರಗಳಲ್ಲಿ ನಾವು ಕಾಣಲಾರೆವು. ಈ ಮೀನಗೊಂದಿ ಬೆಟ್ಟದಲ್ಲಿ ಗುಹಾಲಯ, ಮತ್ತಿತರ ಗುಡಿಗಳು, ಸ್ಥಾನಿಕರ ಮನೆಗಳನ್ನು ಬಿಟ್ಟರೆ ಜನ ವಸತಿಯ ಪ್ರದೇಶ ಇದಾಗಿಲ್ಲ . ಈ ಮೊದಲು ಇಲ್ಲಿ ಹಾಳೂರೊಂದು ಇದ್ದಿರುವ ಆಧಾರಗಳಿವೆ. ಈಗಂತೂ ಯಾವುದೇ ಜನ ವಸತಿ ಇರುವುದಿಲ್ಲ. ಜಾತ್ರೆಯ ದಿನದಂದು ಸುತ್ತ ಊರಿನವರು ಬಂದು ದೇವರ ಆಚರಣೆಯನ್ನು ಮಾಡುತ್ತಾರೆ. ಇಂತಹ ಆಚರಣೆ ಬೇರೆ ಯಾವ ಮಲ್ಲಯ್ಯನ ಕ್ಷೇತ್ರದಲ್ಲಿ ಕಾಣಸಿಗದು. ಹಿರೇ ಮೈಲಾರದಲ್ಲಿ ಈ ರೀತಿಯ ಬಡಿಗೆ ಆಟದ ಆಚರಣೆ ಪದ್ಧತಿ ಇದ್ದುದರ ನಿರ್ದೇಶನವನ್ನು ನೇಗಿನ ಹಾಳರು ವಿವರಿಸಿದ್ದಾರೆ. ಹಿಂದಿನ ಕಾಲದಲ್ಲಿ ಬಂದ ಭಕ್ತರೆಲ್ಲ ಎರಡು ಪಂಗಡಗಳಾಗಿ ದೇವಸ್ಥಾನದಿಂದ ಪಲ್ಲಕ್ಕಿಯ ಮುಂದೆ ಸಾಗುತ್ತಿದ್ದರಂತೆ. ಕೈಯಲ್ಲಿ ದೊಣ್ಣೆ, ಬಡಿಗೆಗಳನ್ನು ಹಿಡಿದು ಅಣಕಯುದ್ಧ ಮಾಡುತ್ತ ಸಾಗು ತ್ತಿದ್ದರು. ಆದರೆ ಅಣಕ ಯುದ್ಧ ಹಲವಾರು ಸಂದರ್ಭಗಳಲ್ಲಿ ನಿಜಯುದ್ಧವೇ ಆಗಿ ಪರಿಣಮಿಸ ತೊಡ ಗಿತಂತೆ. ಹಾಗಾಗಿ ಆ ಕ್ರಮ ವರ್ಜಿತವಾಯಿತು. ಆದರೆ ಮೀನಗುಂದಿಯಲ್ಲಿ ಇದೇ ತೆರನಾದ ಅಣಕ ಯುದ್ಧದ ಆಚರಣೆ ಚಾಲ್ತಿಯಲ್ಲಿದ್ದು, ಪ್ರತಿ ಬನ್ನಿಗೆ ಸುಮಾರು ಜನರಿಗೆ ತಲೆಗಳು ಒಡೆಯುತ್ತವೆ. ಅಲ್ಲದೆ, ಕನಿಷ್ಠಪಕ್ಷ ಎರಡರಿಂದ ಮೂರರವರೆಗೆ ನರಬಲಿ ಆಗುತ್ತಲೇ ಇವೆ. ಈ ರೀತಿ ಎಷ್ಟೇ ಹೆಣಗಳು ಉರುಳಿದರೂ ಕೇಸ್ ದಾಖಲಾಗುವುದೇ ಇಲ್ಲ. ಈ ಆಟದ ಮತ್ತಷ್ಟು ವಿವರಗಳನ್ನು ' ಆಚರಣೆಗಳು' ಎಂಬ ಅಧ್ಯಾಯದಲ್ಲಿ ವಿವರಿಸಿದ್ದೇನೆ.

ಇಲ್ಲಿ ನಾವು ಒಂದು ಅಂಶವನ್ನು ಸ್ಪಷ್ಟ ಮಾಡಿಕೊಳ್ಳಬೇಕು. ಯಾವುದೇ ಒಂದು ಸತ್ವ (ಗಟ್ಟಿತನ) ಇರುವಂತಹ ಆಚರಣೆ ಬಹಳ ದಿನಗಳವರೆಗೆ ಉಳಿಯುತ್ತದೆ. ಸತ್ವ ಇರಲಾರದ್ದು ಹೆಚ್ಚು ದಿನಗಳವರೆಗೆ ಉಳಿಯುವುದಿಲ್ಲ. ಈ ಕ್ಷೇತ್ರದ ಬಹುತೇಕ ಜನರು ಈ ಆಟದ ಬಗ್ಗೆ ತಮ್ಮದೇ ಆದ ನಿಲುವನ್ನು ತಳೆದಿದ್ದಾರೆ. ''ಈ 'ಬಡಿಗೆ' ಆಟ ನಿಲ್ಲಂಗಿಲ್ಲ. ಅದು ತಪ್ಪದಲೇ ಇರಬೇಕು. ಈ ಆಟ ಇದ್ರೇನೇ ಈ ಜಾತ್ರೆಗೆ ಒಂದು ಕಳೆ'' ಎಂದು ಹೇಳುತ್ತಾರೆ. ಜೊತೆಗೆ ಇಂತಹ ಆಟ ಪ್ರಪಂಚದಲ್ಲಿ ಎಲ್ಲೂ ಸಿಗುವುದಿಲ್ಲ. ಅಷ್ಟು ಪುರಾತನವಾದದ್ದು ಎಂಬ ಅಭಿಪ್ರಾಯವನ್ನು ಪಡುತ್ತಿದ್ದಾರೆ. ಇವರ ಈ ನಿಲುವು ಸತ್ಯವೆನಿಸುತ್ತದೆ. ಈ ಮೇಲಿನ ಎಲ್ಲಾ ಸಹಾರಣಗಳನ್ನು ಪರಿಶೀಲಿಸಿದಾಗ ಸ್ವಾಮಿ ಮಲ್ಲಯ್ಯನ ಮೂಲ ಶ್ರೀ ಆದಿ ಮೀನಗುಂದಿ ಕ್ಷೇತ್ರವೇ ಆಗಿದ್ದು, ಇಲ್ಲಿಯ ಬಡಿಗೆಯ ಆಚರಣೆ ಮೈಲಾರಕ್ಕೆ ಹೋದಂತಿದೆ. ಅಲ್ಲಿ ಇದೇ ತೆರನಾದ ಆಚರಣೆ ಸ್ವಲ್ಪ ದಿನಗಳವರೆಗೆ ನಡೆದು ಅಳಿದು ಹೋಗಿದೆ. ಈ ಸಂದರ್ಭದಲ್ಲಿ ಜನಪದರು ಆಡುವ ಒಂದು ಮಾತು ನೆನಪಾಗುತ್ತದೆ. ''ನಡುವಂತರದಲ್ಲಿ ಬಂದದ್ದು, ನಡುವಂತರದಲ್ಲಿ ಹೋಗ್ತೈತೆ'' ಈ ಮಾತು ಅಕ್ಷರಶಃ ಸತ್ಯವೆಂದು ಜನಪದರು ನಂಬುತ್ತಾರೆ. ಆದಿ ಮೀನಗುಂದಿಯಲ್ಲಿ ಪುರಾತನದಿಂದಲೂ ಬಂದಂತಹ ಈ ಬಡಿಗೆ ಆಚರಣೆ ಈಗಲೂ ಅದೇ ಸೊಗಡಿನಲ್ಲಿ ಸಾಗಿ ಬಂದಿರುವುದನ್ನು ನೋಡಿದರೆ, ಇದೇ ಕ್ಷೇತ್ರವೇ ಮೂಲವೆಂದು ಹೇಳಲು ಅಭ್ಯಂತರವಿಲ್ಲ.

## ೨.೪. ಭೌಗೋಳಿಕ ವಿವರದ ಹಿನ್ನೆಲೆ :

ಮೈಲಾರ ದೇವಸ್ಥಾನದ ಸುತ್ತ ಚತುಷ್ಕೋಣಾಕಾರದ ಪೌಳಿಯಿದೆ. ಪೌಳಿ ಈಶಾನ್ಯ ಭಾಗದಲ್ಲಿ ಮಾತ್ರ ಒಂದಿಷ್ಟು ಶಿಥಿಲವಾಗಿದೆ. ಈಗ ಪೂರ್ವ, ದಕ್ಷಿಣ ಮತ್ತು ಉತ್ತರಗಳಿಂದ ಪ್ರವೇಶ ದ್ವಾರಗಳಿವೆ. ಪೂರ್ವದ ದ್ವಾರವು ಭವ್ಯವೂ, ವೈಭವಪೂರ್ಣವೂ ಆಗಿದ್ದು, ಕಲ್ಯಾಣ ಚಾಲುಕ್ಯರ ಕಾಲದ ರಚನೆ ತೋರುತ್ತದೆ. ಮುಖ್ಯ ದೇವರಾದ ಶ್ರೀ ಮೈಲಾರಲಿಂಗನ ದೇವಾಲಯ ಇದರ ಮಧ್ಯದಲ್ಲಿದ್ದು ಸಾಕಷ್ಟು ದೊಡ್ಡದಾಗಿದೆ. ವಿಸ್ತೃತವಾದ ಗರ್ಭಗೃಹ, ಸುಕನಾಸಿ ಮತ್ತು ರಂಗ ಮಂಟಪದ ಭಾಗಗಳು ಪ್ರಾಚೀನ ಕಾಲದ ರಚನೆಗಳಾಗಿವೆ. ಹಿರೇಮೈಲಾರದ ಸ್ವಯಂಭೂ ಲಿಂಗದ ಸುತ್ತ ಸುಮಾರು ಅರ್ಧ ಅಂಗುಲದ ಪೊಳ್ಳು ಇದ್ದು, ನಡುವೆ ಲಿಂಗ ಉಂಟಾಗಿದೆ. ದೇವರಗುಡ್ಡದ ಲಿಂಗದ ತಲೆಯ ಮೇಲೆ ಕಚ್ಚು ಬಿದ್ದಿದೆ. ಈ ಕಚ್ಚು ಹುತ್ತದಿಂದ ಲಿಂಗವನ್ನು ಹೊರ ತೆಗೆಯುವಾಗ ಕೈತಪ್ಪಿ ಗುದ್ದಲಿಯ ಪೆಟ್ಟಿನಿಂದಾದುದೆಂದು ಹೇಳಲಾಗುತ್ತದೆ. ಶಿರಿಮನಿಯಲ್ಲಿರುವ ಲಿಂಗ ಬಂಡೆಗಲ್ಲಿನಿಂದ ಮೇಲೆ ಎದ್ದಿರುವುದನ್ನು ಯಾರು ಗುರುತಿಸಬಹುದು. ಪ್ರೇಮಪುರದಲ್ಲಿರುವ ಸಣ್ಣದ ಮೂಲಲಿಂಗ ಹೆಚ್ಚು ಎತ್ತರವಿಲ್ಲ. ಯಾತಗಿರಿ ಮೈಲಾಪುರದ ಲಿಂಗ ಇನ್ನೂ ವಿಶೇಷವಾಗಿದೆ. ಗವಿಯ ಶಿಲಾಭಿತ್ತಿಯಲ್ಲಿ ತಳದಿಂದ ಸುಮಾರು ೩ ಅಡಿ ಅಂತರದಲ್ಲಿ ಕೋಂಬಿನಂತೆ ಮೂಡಿದೆ ಎಂದರೆ ಇದನ್ನು ಪ್ರಚಲಿತ ಅರ್ಥದಲ್ಲಿ ಲಿಂಗವೆಂದು ಹೇಳುವುದು ಕಷ್ಟವೆನಿಸುತ್ತದೆ (ಡಾ. ಎಂ.ಬಿ. ನೇಗಿನಹಾಳ: ೧೯೯೨ ೬-೨೪೩).

ಈ ಮೇಲಿನ ವಿರಣೆಯಲ್ಲಿ ಮೈಲಾರನ ಪ್ರಮುಖ ಕ್ಷೇತ್ರಗಳಲ್ಲಿ ಉದ್ಭವ ಲಿಂಗವು ಒಡಮೂಡಿದ ಬಗೆಯನ್ನು ವಿವರಿಸಲಾಗಿದೆ. ಅನೇಕ ವಿದ್ವಾಂಸರು ಮೈಲಾರ ಕ್ಷೇತ್ರವೇ ಎಲ್ಲಾ ಮೈಲಾರ ಕ್ಷೇತ್ರಗಳಿಗೂ ಮೂಲ ಎಂದು ಹೇಳಿದ್ದಾರೆ. ಪ್ರಸ್ತುತ ನನ್ನ ಈ ಅಧ್ಯಾಯಕ್ಕೆ ಹಿರೇ ಮೈಲಾರದ ಗುಡಿಯನ್ನು ಮತ್ತು ಭೌಗೋಳಿಕ ಪರಿಸರವನ್ನು ತೆಗೆದುಕೊಂಡಿದ್ದೇನೆ. ಮೇಲೆ ತಿಳಿಸಿದಂತೆ ಮೈಲಾರ ಲಿಂಗನ ಗುಡಿಗೆ ತನ್ನದೇ ಆದ ಪ್ರತ್ಯೇಕ ರಚನಾ ವಿನ್ಯಾಸವಿದ್ದು, ಹುತ್ತದೊಳಗಿಂದ ಉದ್ಭವಿಸಿದ ಸ್ವಯಂಭೂ ಲಿಂಗವಿದೆ. ದೇವಾಲಯದ ಪರಧಿಯು ಹೊರಗೆ ಊರು ಬೆಳೆದಿದ್ದು, ಅದು ಸಮತಟ್ಟಾದ ಪ್ರದೇಶದಲ್ಲಿಯೂ ನಿರ್ಮಾಣಗೊಂಡಿದೆ.

ಶ್ರೀ ಆದಿ ಮೀನಗೊಂದಿ ಗುಹಾಲಯವು ಗಿರಿ ಮೇಲೆ ಗಿರಿಯಲ್ಲಿ ಎರಡು ಗುಂಡುಗಳ ಮಧ್ಯದ ಪೊಳ್ಳಿನ ಭಾಗದಲ್ಲಿ ಕೂರ್ಮದ ರೂಪದಲ್ಲಿ ದೇವರು ಬಂಡೆಗೆ ಒಡಮೂಡಿದ್ದಾನೆ. ಈ ಕೂರ್ಮ ರೂಪದ ಸ್ವಯಂಭೂಲಿಂಗಕ್ಕೆ ಇಂದಿಗೂ ಪೂಜೆ ಸಲ್ಲುತ್ತಲಿದೆ. ಮೈಲಾರದಲ್ಲಿ ಉದ್ಭವ ಲಿಂಗಗಳು ನೆಲದ ಸಮತಟ್ಟಾದ ಭಾಗದಲ್ಲಿವೆ. ದೇವಾಲಯಗಳೆಲ್ಲ ತರುವಾಯ ಕಟ್ಟಿರುವಂತಹವುಗಳು. ಸ್ವಾಮಿ ಮಲ್ಲಯ್ಯನ ಪ್ರತಿ ಕ್ಷೇತ್ರಗಳನ್ನು ಗಮನಿಸಿದಾಗ ಎಲ್ಲಾ ಕಡೆ ದೇವಾಲಯಗಳಿರುವುದು ನಮಗೆ ಕಾಣಸಿಗುತ್ತವೆ. ಆದರೆ ಶ್ರೀ ಆದಿಮೀನಗೊಂದಿಯಲ್ಲಿ ದೇವಾಲಯವಿರದೆ ಗುಹಾಲಯವಿದೆ. ಈ ಗುಹಾಲಯದಲ್ಲಿ ಪ್ರತಿಷ್ಠಾಪಿಸಲಾಗಿರುವ ಶ್ರೀ ಮಾಳಾ ಸಹಿತ ಮಲ್ಲೇಶ್ವರರ ವಿಗ್ರಹಗಳು ಈ ಶತಮಾನದಲ್ಲಿ ಪ್ರತಿಷ್ಠಾಪನೆ ಮಾಡಿದವುಗಳಾಗಿವೆ. ಆದರೆ ಒಡಮೂಡಿದ ಮೂಲ ರೂಪ ಒಂದು ಡುಬ್ಬದ ಆಕೃತಿಯಲ್ಲಿರುವ ಕೂರ್ಮವೇ ಆಗಿದೆ. ಈ ಕುರಿತಾದ ಒಂದು ಕಥೆ ಹೀಗಿದೆ.

ಹಿರಣ್ಯ ಕಶ್ಯಪ ಎಂಬುವ ರಾಕ್ಷಸರ ವಂಶದಲ್ಲಿ ಜನಿಸಿದ ಮಣಿ-ಮಲ್ಲಾಸುರ ಎಂಬ ರಾಕ್ಷಸರು ಬ್ರಹ್ಮನನ್ನು ಕುರಿತು ಅಘೋರ ತಪಶ್ಚರ್ಯವನ್ನು ಮಾಡಿದರು. ಹಿರಣ್ಯ ಕಶ್ಯಪನು ಹೇಗೆ ಬ್ರಹ್ಮನಿಂದ ವರ ಪಡೆದಿದ್ದನೋ ಅದೇ ರೀತಿಯಲ್ಲಿ ಮಣಿ-ಮಲ್ಲಾಸುರರು ಸಹ ವರ ಪಡೆದಿದ್ದರು. ಅದೇನೆಂದರೆ; ವಿಷ್ಣುವಿನಿಂದಾಗಲೀ, ಶಿವನಿಂದಾಗಲೀ, ನಮಗೆ ಸಾವುಬರಬಾರದು. ಕಾರಣ ಈ ಮಲ್ಲೇಶ್ವರ ಮಾರ್ತಾಂಡ ಭೈರವನ ವೇಷ. ಅದು ಈಗ ನೋಡುವ ಗೊರವಯ್ಯನು ಹುಲಿ ಚರ್ಮದ ಮೇಲೆ ಕಂಬಳಿಯನ್ನಿಟ್ಟು ಬಂಢಾರ ಲೇಪನ ಮಾಡಿಕೊಂಡು ತ್ರಿಶೂಲ, ಡಮರುಗ, ಖಡ್ಗ, ಪಾನ ಪಾತ್ರ ಇವುಗಳನ್ನು ಧರಿಸಿ ಜಟೆಯನ್ನು ಬಿಡಿಸಿ, ಡಮರುಗ ಬಾರಿಸುತ್ತಾ ತ್ರಿಶೂಲ ಹಿಡಿದು ಸುಂದರವಾಗಿ ಕಾಣುವ ಒಂದು ದೇವರಾಗಿ ಈ ಮಣಿ-ಮಲ್ಲಾಸುರರನ್ನು ಕೊಲ್ಲುವರು. ರಾಕ್ಷಸರ ಮತ್ತು ಮಾರ್ತಾಂಡ ಭೈರವರ ಯುದ್ಧದಲ್ಲಿ ಶ್ರೀ ಮಹಾವಿಷ್ಣು ಸಾಕ್ಷಿಯಾಗಿದ್ದನು. ಮಣಿ ಅಸುರರು ತನ್ನ ಅಂತ್ಯಕಾಲದಲ್ಲಿ ದೇವರಿಗೆ ಹೀಗೆಂದು ಬೇಡಿಕೊಂಡನು. ''ಹೇ...ದೇವರೇ (ಶಿವನೇ) ನೀನು ನನ್ನ ಮೇಲೆ ಕುಳಿತು ನನ್ನನ್ನು ವಾಹನವನ್ನಾಗಿ ಮಾಡಿಕೊಂಡು ವಿರಾಜಿಸು'' ಎಂದು ಹೇಳಿ ತಾನು ಅಶ್ವ

ರೂಪನಾದನು. ಅವತ್ತಿನಿಂದ ದೇವರು ತುರಗಾರೂಢನಾಗಿ ವಿರಾಜಿಸಿದನು. ಮಲ್ಲಾಸುರನು ಸಹ ತನ್ನ ಅಂತ್ಯ ಕಾಲದಲ್ಲಿ ಈ ರೀತಿಯಾಗಿ ಬೇಡಿಕೊಂಡನು. ''ಹೇ...ಪರಮಾತ್ಮನೇ ನಿನ್ನ ಕೈಯಲ್ಲಿ ಸಾಯುವುದರಿಂದ ನನಗೆ ಕೈವಲ್ಯ ಪ್ರಾಪ್ತಿಯಾಗುವುದು. ಆದರೆ ನನ್ನ ಒಂದು ಬೇಡಿಕೆಯುಂಟು. ಅದೇನೆಂದರೆ; ನಿನ್ನ ಹೆಸರಿನ ಮುನ್ನ ನನ್ನ ಹೆಸರನ್ನು ಉಚ್ಛರಿಸಿ, ಜನರು ಹೇಳಿದರೆ ಅವರಿಗೆ ಸರ್ವ ಕಾರ್ಯವೂ ನೆರವೇರುವವು. ಆ ಹೆಸರೇ ನಿಮ್ಮ ಪ್ರಸಿದ್ಧ ನಾಮಧೇಯವಾಗಬೇಕು''. ಅದೇ ಮಲ್ಲ + ಈಶ್ವರ = ಮಲ್ಲೇಶ್ವರ. ಆ ದೇವರು ಮತ್ಸ್ಯಾದ್ರಿಯಲ್ಲಿ ಗಹ್ವರ ಗುಹೆಯಲ್ಲಿ ಒಂದು ಗುಂಡಿಗೆ ಕೂರ್ಮಾವತಾರದಲ್ಲಿ ನೆಲೆಸುತ್ತೇನೆ ಎಂದು ಹೇಳಿ ಆ ರೂಪದಲ್ಲಿ ತಪಶ್ಚರ್ಯ ಮಾಡುವ ಋಷಿಗಳಿಗೆ, ಭಕ್ತರಿಗೆ ವರ ನೀಡಿದ್ದಾನೆ. ಅವತ್ತಿನಿಂದ ಇವತ್ತಿನವರೆವಿಗೂ ಆ ಗುಹೆಯಲ್ಲಿರುವ ಕೂರ್ಮ ರೂಪಕ್ಕೆ ವಿಶೇಷ ಪೂಜೆ ಸಲ್ಲಿಸಲಾಗುವುದು ಎಂದು ಭಕ್ತರು ಹೇಳುತ್ತಾರೆ.

ಹಾಗಾಗಿ ಇದು ಬಹಳ ಪುರಾತನವಾದದ್ದು. ಈ ಗುಹಾಲಯಕ್ಕೆ ಗುಡಿ ಎಂದು ಹೇಳಿಕೊಳ್ಳುವ ಅಂತಹ ಕಟ್ಟಡಗಳೇನು ಇಲ್ಲ. ಅನಾದಿಯಲ್ಲಿ ಯಾವ ರೀತಿ ಇತ್ತೋ ಇವತ್ತಿಗೂ ಸಹ ಹಾಗೆಯೇ ಉಳಿಯುವುದು ವಿಶೇಷವೇ ಸರಿ. ಮುಖಮಂಟಪ ಎಲ್ಲವೂ ತರುವಾಯ ಆಗಿರುವಂತಹುದು. ಮೂಲತಃ ಮಾನವರು ಗಿರಿ ಗಹ್ವರಗಳಲ್ಲಿ ವಾಸವಾಗಿರುತ್ತಿದ್ದ. ಈ ಮೀನಗೊಂದಿಯ ಬೆಟ್ಟದ ಗುಹೆಯಲ್ಲಿಯೂ ಸಹ ಅನೇಕ ಋಷಿ ಮುನಿಗಳು ಇರುತ್ತಿದ್ದರೆಂಬುದರ ಬಗ್ಗೆ ಅನೇಕ ಐತಿಹ್ಯಗಳಿವೆ.

೧. ಗುಹೆಗಳಲ್ಲಿ ಇವತ್ತಿಗೂ ಋಷಿಗಳು ತಪಸ್ಸು ಮಾಡುತ್ತಲಿದ್ದು, ಪ್ರತಿದಿನ ಈ ಮಲ್ಲೇಶ್ವರನ ಪೂಜೆ ಮಾಡಿ ಹೋಗುವರೆಂದು ಪ್ರತೀತಿ ಇದೆ. ಇದಕ್ಕೆ ನಿದರ್ಶನ.

ಅ) ಸುಮಾರು ೭೦ ವರ್ಷಗಳ ಕೆಳಗೆ ದನಗಳು ಕಾಯುವ ಜನರಿಗೆ (ಪಶುಪಾಲಕರಿಗೆ) ಗುಡ್ಡದಲ್ಲಿ ಪಶುಗಳನ್ನು ಮೇಯಿಸುವಾಗ ಒಬ್ಬ ಮುನಿ ಕಂಡಿದ್ದಾನೆ. ಅವನು ಒಂದು ಬಂಡೆಯ ಮೇಲೆ ಎಲೆ ಹಸಿರು (ತಪ್ಪಲು) ಅರೆಯುತ್ತಿದ್ದನು. ಆ ಋಷಿಗೆ ಈ ಮನುಷ್ಯ ಕಂಡ ಕೂಡಲೇ ಹಸಿರನ್ನು ಬೇಗ ತೆಗೆದುಕೊಂಡು ಗುಹೆಯಲ್ಲಿ ಹೋಗಿಬಿಟ್ಟನು. ಆ ದನ ಕಾಯುವವನು ಈ ಹಸಿರನ್ನು ರುಚಿ ನೋಡುವುದಕ್ಕಾಗಿ ಒಂದು ಬೆರಳಿಗೆ ಅಂಟಿಸಿಕೊಂಡು ಸೇವಿಸಿದನು. ಅಂದಿನಿಂದ ಅವನು ಆರು ತಿಂಗಳ ಕಾಲ ಹಸಿವೆ , ಬಾಯಾರಿಕೆಗೆ, ನಿದ್ರೆಗೆ ಇತ್ಯಾದಿಗಳಿಗೆ ಒಳಗಾಗಲಿಲ್ಲ.

ಆ) ಸುಮಾರು ೧೨೦ ವರ್ಷಗಳ ಕೆಳಗೆ ಪೂಜಾರಿ ಮಲ್ಲಯ್ಯ (ಅರ್ಚಕರು) ಗುಹೆಯಲ್ಲಿ ಹೋಗಿ ಒಂದು ವರ್ಷವಾದನಂತರ ಹಿಂದಿರುಗಿದ್ದರು. ಅವರನ್ನು ಪ್ರಶ್ನಿಸಿದರೆ, ನೀವು ಇಷ್ಟು ದಿನ ಎಲ್ಲಿ ಹೋಗಿದ್ದೀರಿ ಎಂದು ಹೇಳಲು, ನಾನು ನಿನ್ನೆ ಹೋಗಿ ಇವತ್ತು ಬಂದಿದ್ದೇನೆ ಎಂದು ಹೇಳಿದರು. ಮನುಷ್ಯನ ಕಾಲಮಾನ ಒಂದು ವರ್ಷವಾದರೆ, ಋಷಿಗಳಿಗೆ ಒಂದು ದಿನವಾಗುತ್ತದೆ. ಅವರನ್ನು ಕೇಳಿದಾಗ ಇಲ್ಲಿ ನೀನು ಋಷಿಗಳನ್ನು

ಕಂಡ ವಿಷಯವನ್ನು ನೀನು ಯಾರಿಗೂ ಹೇಳಬೇಡವೆಂದು ನಿಷೇಧಿಸಿದ್ದರು. ಒಂದೇ ವೇಳೆ ನೀನು ಹೇಳಿದ್ದೇ ಆದರೆ ನಿನ್ನ ತಲೆ ಒಡೆದು ನೀನು ಸಾಯುವೆ ಎಂದು ಶಾಪ ಹಾಕಿದರು. ಇಲ್ಲಿ ಬಂದ ಕೆಲ ದಿನಗಳ ನಂತರ ಈ ವಿಷಯ ಅವರು ಹೇಳಲೇಬೇಕಾಯಿತು. ಹಾಗೆ ತಲೆ ಒಡೆದು ಸತ್ತೇ ಹೋದರು ಎಂದು ನೆರಣಿಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಹೇಳುತ್ತಾರೆ.

ಈ ಎರಡು ಐತಿಹ್ಯಗಳಿಂದ ಈ ಬೆಟ್ಟದಲ್ಲಿ ಋಷಿಗಳು ವಾಸ ಮಾಡುತ್ತಿರಬೇಕು. ಅವರು ಹಸಿವು, ಬಾಯಾರಿಕೆ, ನಿದ್ರೆ ಇತ್ಯಾದಿಯನ್ನು ನಿಗ್ರಹಿಸಿದ್ದರು ಎಂದು ತಿಳಿಯುತ್ತದೆ. ಇಂದಿಗೂ ಸಹ ಋಷಿಗಳು ಎಂದು ಹೇಳಿಕೊಳ್ಳುವ ಮಲ್ಲಯ್ಯ-ಮಾಳಮ್ಮನವರು ಬೆಟ್ಟದ ಚಿಕ್ಕ ಗುಹೆಯಲ್ಲಿ ವಾಸವಾಗಿದ್ದಾರೆ. ಇವರ ಹೆಸರು ಬಹುಶಃ ಬೇರೆಯಾದೇ ಇರಬೇಕು ಕ್ಷೇತ್ರಕ್ಕೆ ಬಂದ ಮೇಲೆ ಇವರು ತಮ್ಮ ಸ್ವಂತ ಹೆಸರನ್ನು ಬದಲಾಯಿಸಿಕೊಂಡಿದ್ದಾರೆ. ಇವರು ಕರ್ನೂಲು ಜಿಲ್ಲೆಯ ಪತ್ತಿಕೊಂಡದಿಂದ ಬಂದಿರುವವರಾಗಿದ್ದಾರೆ.

೨. ಅವತ್ತಿಗೆ ನೆರಣಿಕೆಯ ಹಿಂಡು ದನಗಳನ್ನು, ಆಕಳುಗಳನ್ನು ಬೆಟ್ಟದ ಬಳಿ ಮೇಯಿಸಲು ಬರುತ್ತಿದ್ದರಂತೆ. ಬೆಟ್ಟದ ಬಳಿ ಬಂದಾಗ ಒಂದು ಆಕಳು ಇಲ್ಲಿಗೆ ಬರೋದೆ ತಡ ಸೀದಾ ಪಡೆಯಾ (ಗುಹೆ)ಗ ಹೋಗುತ್ತಿತ್ತಂತೆ. ಪಡಿಗೆ ಹೋದಾಗ ಆ ಮಲ್ಲೇಶ್ವರ ಕರ ಹ್ಯಾಗ ಕುಡಿತೈತೋ ಅದೇ ತರನೇ ಆಕಳ ಹಾಲನ್ನು ಕುಡಿತಿದ್ನಂತೆ. ಇದು ಹೀಗೆ ಸಾಗಿರಲು ದನ ಕಾಯುವ ಹುಡಗನಿಗೆ ಒಮ್ಮೆ ಪರೀಕ್ಷಿಸಿದಾಗ ಮಲ್ಲೇಶ್ವರ ಆಕಳ ಕೆಚ್ಚಿಲಿಗೆ ಬಾಯಿ ಹಾಕಿ ಹಾಲು ಕುಡಿತಿದ್ನಂತೆ. ಇದನ್ನು ಕಣ್ತುಂಬ ನೋಡಿದ ಹುಡುಗ ಅಂದು ಸಂಜೆ ಊರಿನವರೆಲ್ಲರಿಗೂ ತಿಳಿಸಿದ. ಊರಿನವರು ಈ ಹುಡುಗನ ಮಾತನ್ನು ನಂಬದೆ ಕೆಲವರು ಆ ಹುಡುಗನು ತೋರಿಸಿದ ಮಾರ್ಗದಲ್ಲಿ ಮರೆಯಾಗಿ ನೋಡಿದಾಗ ಮಲ್ಲೇಶ್ವರನು ಬಂದು ಹಾಲನ್ನು ಕುಡಿಯುತ್ತಿರುವುದು ಕಾಣಿಸಿತಂತೆ. ಆಗ ಈ ಮಲ್ಲೇಶ್ವರ ಇವರಿಗೆ ಗೊತ್ತಾಗಿರುವುದು. ರಾಕ್ಷಸರನ್ನು ಸಂಹಾರ ಮಾಡುವುದಕ್ಕಾಗಿಯೇ ದೇವರು ಈ ಗುಡ್ಡಕ್ಕೆ ಬಂದು ಸೇರಿರುವುದು.

೩. ಬಸವಲಿಂಗಪ್ಪ ತಾತ ಅಂದರೆ ಬಹಳ ದೊಡ್ಡ ಪವಾಡ ಪುರುಷ. ಅವರ ಶಿಷ್ಯ ಮಗ ನಮಗೆ ಈ ರೀತಿ ಹೇಳ್ತಿದ್ರು. ಈ ಬಸವಲಿಂಗಪ್ಪ ತಾತ ಸಣ್ಣ ಕಲ್ಲಪ್ಪ ಬಾರೀ ದೊಡ್ಡಾತ. ನಮ್ಮೂರಾಗನ ಬಂದು ಬಾವಿಗೆ ಛಳಿ ಆಗ್ತೈತೆ ಅಂತ ಖೌದಿ ಹೊದಿಸಿದ್ದನಂತೆ. ಅದಕ್ಕೆ ಆತಗ ಖೌದಿತಾತ ಎಂದು ಕರೀತಾರೆ. ಯಾರೋ ರೆಡ್ಡ್ಯೋರು ಈತನನ್ನು ಹುಚ್ಚ ಎಂದು ಬಡಿದದ್ದಕ್ಕೆ ಊರು ಬಿಟ್ನಂತೆ. ಆ ರೆಡ್ಡೇರ ಮನೆತನ ಆತ ಊರು ಬಿಟ್ಟ ಮ್ಯಾಲೆ ಹಾಳಾಗಿ ಹೋಯಿತಂತೆ. ಊರು ಬಿಟ್ಟ ಈ ತಾತ ಗುಡ್ಡದ ಕೆಳಗ ಇರುವ ಅಸ್ಪರ ಸ್ವಾಮಿ ಮಠದಾಗೆ ಸೇರಿಕೊಂಡ. ಈ ತಾತ ಬದುಕಿರಲಿಕ್ಕೆ ಆ ಪಡೆಯ ಒಳಗೆ ಹೋಗಿ ಬಿಟ್ನಂತೆ. ನಾನು ಬಿಳೇ 'ಝುಂಡ' ಇಡ್ಕಂಡು ಬರ್ತೀನಿ ಆವಾಗ ನೀವು ನನ್ನ ಗುರುತು ಹಿಡಿಯಬಹುದು. ಅದು ಯಾವಾಗ ಬರ್ತಾನೋ, ಇಲ್ಲ ಆಗಲೇ ಬಂದು ಹೋಗ್ಯಾನೋ ಗೊತ್ತಾಗದಂಥ ಶರಣರು ಅವರು.

ಬೆಟ್ಟದ ಮೇಲೆ ಈ ತೆರನಾದ ಗುಹೆಗಳು ನಮಗೆ ಕಾಣಸಿಗುತ್ತವೆ. ಒಂದು ದ್ವಾರದಲ್ಲಿ 'ಮಲ್ಲಂಗ್ ಬಾಬಾ' ಎಂದು ಬರೆದಿರುವರು. ಸ್ವತಃ ನಾನು ನನ್ನ ಗೆಳೆಯರೊಂದಿಗೆ ಪಡೆಯ ಒಳಗೆ ಹೋದಾಗ ಅಲ್ಲಿ ಸಮಾದಿ ಅಥವಾ ಗದ್ದಿಗೆಯ ತರಹದ ಕಟ್ಟೆಯಿದೆ. ಜೊತೆಗೆ ಒಂದು ಗೂಡಿನಲ್ಲಿ ದೀಪವನ್ನು ಇಟ್ಟಿದ್ದಾರೆ. ಅಲ್ಲಲ್ಲಿ ಉರಿದು ಹೋದ ಊದಿನಕಡ್ಡಿಗಳ ತುಣುಕುಗಳು ಇವೆ. ಮುಸಲ್ಮಾನರು ಇದನ್ನ ಸ್ವಾದೀನಪಡಿಸಿ ಕೊಳ್ಳುವ ಸಲುವಾಗಿ ಈ ರೀತಿ ಬರೆದಿರಬೇಕು. ಇದರ ಹೆಚ್ಚಿನ ವಿವರ ಭೌಗೋಳಿಕ ವಿವರ ಎನ್ನುವ ಅಧ್ಯಾಯದಲ್ಲಿ ತಿಳಿಸಿರುವೆನು.

ಮೇಲಿನ ಐತಿಹ್ಯಗಳನ್ನು ಬೆಟ್ಟದಲ್ಲಿರುವ ಗುಹೆಗಳು ಹಾಗೂ ಗುಹಾಲಯವನ್ನು ಗಮನಿಸಿದಾಗ ಶ್ರೀ ಆದಿ ಮೀನಗೊಂದಿ ಮಲ್ಲಯ್ಯ ಕೂರ್ಮ ರೂಪದಿಂದ ಬಂಡಗೆ ಉದ್ಭವಿಸಿರುವುದು, ಋಷಿಗಳು ಗುಹೆಗಳಲ್ಲಿ ತಪಸ್ಸು ಮಾಡುತ್ತಿರುವುದು ಕ್ಷೇತ್ರದ ಮೂಲಕ್ಕೆ ಒಳ್ಳೆಯ ನಿದರ್ಶನಗಳಾಗಿವೆ. ರಾಕ್ಷಸಪಡೆ ಎನ್ನುವಂತಹದು ಸಹ ಒಂದು ಗುಹೆ. ದೊಡ್ಡದಾದ ಎರಡು ಸೀಳುಬಂಡೆಗಳ ಒಳಗೆ ಗುಹೆ ಇದೆ. ಮೂಲತಃ ರಾಕ್ಷಸರು ಗುಹೆಗಳಲ್ಲಿ ಇದ್ದು, ಜನರಿಗೆ ಕಾಟ ಕೊಡುತ್ತಿದ್ದರು. ಅದರ ಪ್ರತೀಕಗಳು ಹಾಗೆಯೇ ಇವೆ. ಜೊತೆಗೆ ಸ್ವಾಮಿ ಮಲ್ಲಯ್ಯ ಅವರನ್ನು ಸಂಹರಿಸಿ ಈ ಬೆಟ್ಟದಲ್ಲಿ ನೆಲೆಯೂರಿದ. ಇವೆಲ್ಲವನ್ನು ಪರಿಶೀಲಿಸಿದಾಗ ಮೈಲಾರದಲ್ಲಿ ಈ ರೀತಿಯ ಗುಹಾಲಯವಿಲ್ಲ. ಕಾರಣಿಕದ ಬಯಲಿನ ಪೂರ್ವದ ದಿಬ್ಬವೇ ಗುಹಾಲಯ ಡೆಂಕಣ ಮರಡಿ. ಇದರ ದಾರಿ ವಿಸ್ತಾರವಾಗಿದ್ದು, ಇಕ್ಕೆಲಗಳಲ್ಲಿ ಬೇವಿನಮರಗಳ ಸಾಲು ಇವೆ. ಮರಡಿಯ ಮಧ್ಯದಲ್ಲಿ ಸುಂದರವಾದ ಶಿಬಾರವೊಂದಿದೆ. ಮಲ್ಲಾಸುರ ವಧೆಯ ಕಾರ್ಯಕ್ರಮ ನಡೆಯುವುದು ಇಲ್ಲಿಯೇ. ಅಂದರೆ ರಾಕ್ಷಸರು ವಾಸಿಸಲು ಸೂಕ್ತ ಸ್ಥಳ ಆದಾಗಿಲ್ಲ. ಆದ್ದರಿಂದ ಶ್ರೀ ಆದಿ ಮೀನಗೊಂದಿ ಕ್ಷೇತ್ರವೇ ಮೂಲ ಎನ್ನುವ ಬಗ್ಗೆ ಈ ಭೌಗೋಳಿಕ ವಿವರಗಳು ಸಹಾಯಕವಾಗುತ್ತವೆ.

## ೨.೫. ಆದಿ ಮೀನಗೊಂದಿ ಪುರವಾಧೀಶ್ವರರು :

ಸ್ವಾಮಿ ಮಲ್ಲಯ್ಯನ ಕ್ಷೇತ್ರದ ಸ್ಥಾನಿಕರಲ್ಲಿ ಪ್ರಮುಖರಾದವರು ಒಡೆಯರು. ಇವರು ಕ್ಷೇತ್ರದ ಮುಖ್ಯ ಧರ್ಮಾಧಿಕಾರಿಯಾಗಿದ್ದು, ದೇವರ ಪ್ರತಿ ಕಾರ್ಯಕ್ರಮವು ಇವರ ಸಮಕ್ಷಮದಲ್ಲಿಯೇ ನಡೆಯುತ್ತದೆ. ಇವರು ಗಣಾಚಾರಿಗಳಿಗೆ, ಒಗ್ಗರಿಗೆ, ಕುದುರೆಕಾರರಿಗೆ, ಬಸವಿಯರಿಗೆ, ಮತ್ತಿತರೆ ದೀಕ್ಷೆ ವಹಿಸುವವರಿಗೆ ದೀಕ್ಷೆಯನ್ನು ನೀಡಿ ಒಂದು ಶ್ರೀಮುಖವನ್ನು ಅಥವಾ ಬಿರುದಾವಳಿಯನ್ನು ಕೊಡುತ್ತಾರೆ. (ಇವರ ಹೆಚ್ಚಿನ ವಿವರ ಸ್ಥಾನಿಕರು ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ). ಶ್ರೀ ಮೀನಗೊಂದಿ ಸಿಂಹಾಸನದ ಒಡೆಯರ ಮೂಲ ನೆಲೆ ಆಂಧ್ರದ ಆಲೂರು ತಾಲೂಕಿನ 'ಬಲ್ಲೂರು' ಗ್ರಾಮವಾಗಿದೆ. ಇಂದಿಗೂ ಬಲ್ಲೂರಿ ನಲ್ಲಿ ಮಲ್ಲಪ್ಪಯ್ಯಸ್ವಾಮಿ ಒಡೆಯುರು ವಾಸಿಸುತ್ತಿದ್ದಾರೆ. ಪ್ರತಿ ಭಾನುವಾರ ಮತ್ತು ಅಮವಾಸೆಗೆ ಬೆಟ್ಟಕ್ಕೆ ಹೋಗಿ ಬರುವ ವಾಡಿಕೆಯಿದೆ. ಇವರು ತಮ್ಮ ಪೂರ್ವ ವೃತ್ತಾಂತದ ಐತಿಹ್ಯವನ್ನು ಈ ರೀತಿಯಾಗಿ ಹೇಳಿ ಕೊಂಡಿರುವರು.

''ಹಿಂಗೆ ಮಲ್ಲೇಶ್ವರಗ ಅಂದೊಂದು ರೀತಿ ಬ್ಯಾನೆ ಕಾಣಿಸಿಕೊಂಡಿತ್ತು. ಈ ಬ್ಯಾನೆ ಹೋಗಾಕ ಎಷ್ಟೋ ಬಳಸಿ ನೋಡಿದನಂತೆ. ಬ್ಯಾನೆ ಹೋಗಲಿಲ್ಲ. ಆಗ ಇಲ್ಲಪ್ಪ ಇದು ಗುರು ಸಂಪ್ರದಾಯದಿಂದ ಬಂದಿರುವಂತಹದು, ಗುರು ಸೇವೆಯನ್ನು ಮಾಡಿಕೊಂಡರೆ ಮಾತ್ರ ನಿನಗೆ (ಶಿವನಿಗೆ) ಆದ ಕಾಯಿಲೆ ಪರಿಹಾರ ಆಗೈತೆ ಎಂದು ದೇವಾನು ದೇವತೆಗಳೆಲ್ಲಾ ಹೇಳಿದರಂತೆ. ನಾನೇ ಎಲ್ಲರಿಗೆ ಗುರುವಿದ್ದಂಗೆ ನನಗೆ ಗುರುಗಳು ಯಾರು ಸಿಗ್ತಾರೆ ಅಂತ ಕೇಳಿದಾಗ ಅವರುಗಳೆಲ್ಲಾ ಇಲ್ಲಿ ಆಕಳ ಕಿವಿಯಾಗಿನಿಂದ ಹುಟ್ಟಿರುವಂತಹ ಕಪಿಲಮುನಿ (ಗೋಮುನಿ) ಐದಾರಪ್ಪ ನೀನು ಅವರನ್ನು ಸೇವೆ ಮಾಡಿಕ್ಯಾಂತ ಇದ್ರೆ ಮಾತ್ರ ಇದು ಪರಿಹಾರ ಆಗೈತೆ ಅಂತ ಹೇಳಿದರು''. ಕಪಿಲ ಮುನಿಗಳು ಬಂದು ಆಕಳ ಕಿವಿಯಾಗಿನಿಂದ ಹುಟ್ಟಿದಂತಹವರು (ನಾವು ಈ ಕಪಿಲ ಮುನಿ ವಂಶಸ್ಥ ಸಂಪ್ರದಾಯಕ್ಕೆ ಸೇರುವಂತವರು). ಹೀಂಗೆ ಮುನಿಗಳು ಮೀನಗೊಂದಿಯ ಈ ಬೆಟ್ಟದಲ್ಲಿ ತಪಸ್ಸಿಗೆ ಕುಳಿತ್ತಿದ್ದಾಗ ಅವರ ಮೈ ಮೇಲೆ ಹುತ್ತ ಬೆಳೆಯಿತಂತೆ. ಮಲ್ಲೇಶ್ವರ ದಿನಾ ಹೋಗಿ ಅವರ ತಪಸ್ಸಿಗೆ ಭಂಗ ಮಾಡದಂತೆ ಗುರು ಸೇವೆ ಮಾಡಿಕ್ಯಾಂತ ಮಾಡಿಕ್ಯಾಂತ ಬಂದು, ದಿನದಿನಕ್ಕೆ ಹುತ್ತ ಕರಗಿ ಹೋಗ್ತಾ ಬಂತಂತೆ. ಆಗ ಹೊರಗಡೆ ಕಾಣಿಸಿಕೊಂಡ ಕಪಿಲಮುನಿ ' ಏನಪ್ಪ ನಿಮ್ಮನ್ನೆ ಧ್ಯಾನ ಮಾಡಿಕ್ಯಾಂತ ನಾವು ಕುಂತಿದ್ರೆ, ಅಂತದ್ರಾಗ ನೀವೆ ನಮ್ಗೆ ಸೇವೆ ಮಾಡ್ತಿರಲ್ಲಾ ಎಂದು ಹೇಳಿದಾಗ ಇಲ್ಲಾ ನಿಮ್ಮನ್ನು ನಾವು ಸೇವೆ ಮಾಡ್ತಾ ಇದ್ದಂತೆ ಬಂದಿರುವ ಬ್ಯಾನೆ ದಿನದಿನಕ್ಕೆ ಕಡಿಮೆ ಆಗೈತೆ. ಇವತ್ತಿಗೆ ಅದು ಪೂರಾ ಕಡಿಮೆಯಾಯಿತು. ನಿಮ್ಮ ದರ್ಶನ ಭಾಗ್ಯ ದೊರೆಯಿತು. ಆ ಕಾರಣ ನೀವೇ ನಮಗೆ ಗುರುಗಳಾಗಬೇಕು ಎಂದು ಶಿವ ಕೇಳಿದನಂತೆ. ನಾವು ಋಷಿಗಳು ನಿಮ್ಮ ಧ್ಯಾನ ಮಾಡಿಕ್ಯಾಂತ ಕುಂದ್ರೋರು ಅಂತದರಾಗ ನಿಮಗೆ ನಾವು ಗುರು ಆಗಬೇಕಂದ್ರೆ ಇದು ಆಗೋ ಕೆಲಸ ಅಲ್ಲ ಅಂದ್ರಂತೆ. ಅದಕ್ಕೆ ಮಲ್ಲಯ್ಯ, ನಿಮಗೆ ವಂಶ ಪಾರಂಪರಿಕ ಆಗೈತಿ, ನಿಮ್ಮ ಮಾತಾಗಲಿ, ನಿಮ್ಮ ಜೀವನಕ್ಕೆ ಎಂತಹ ಆತಂಕ ಇಲ್ಲದಂತೆ ನಡೆಸಿಕೊಂಡು ಹೋಗುವ ಬಾಧ್ಯತೆ ನಮ್ದು ಅಂತಃ ಹೇಳಿ ಅವತ್ತಿಗೆ ಮಲ್ಲಯ್ಯ ಬಂಢಾರ ಕೈಯಲ್ಲಿ ಇಟ್ಟು, ನಮ್ಮನ್ನು ಗುರುವನ್ನಾಗಿ ಮಾಡಿಕೊಂಡಾರ ಎಂದು ಕಪಿಲಮುನಿಗಳು ಹೇಳುತ್ತಾರೆ.

ಈ ರೀತಿಯಾಗಿ ಇವರ ಗುರು ಸಂಪ್ರದಾಯ ಪ್ರಾರಂಭವಾದಂತಿದೆ. ಈ ಮುನಿಗಳು ಅಥವಾ ಒಡೆಯರು ಮಲ್ಲಯ್ಯನನ್ನು ಪೂಜಿಸುವುದಿಲ್ಲ. ಕಾರಣ ಮಲ್ಲಯ್ಯನಿಗೆ ಇವರು ಗುರುಗಳಾದ್ದರಿಂದ ಬಂದ ಭಕ್ತರು ಮೊದಲು ಗುರುಗಳ ಪಾದಕ್ಕೆ ನಮಸ್ಕರಿಸಿ, ನಂತರ ಮಲ್ಲಯ್ಯನ ದರ್ಶನವನ್ನು ಪಡೆದುಕೊಂಡು ಹೋಗುತ್ತಾರೆ. ಹೀಗೆ ಬೆಳೆದ ಇವರ ಗುರು ಸಂಪ್ರದಾಯದ ವಂಶ ಹರಳಲು ಮತ್ತೊಂದು ಐತಿಹ್ಯವನ್ನು ಹೇಳುತ್ತಾರೆ.

ಪರಶಿವನೇ ನಮ್ಮ ಕಪಿಲಮುನಿ ಸಂಪ್ರದಾಯದ ಪರಂಪರೆಯ ಮುಂದುವರಿಕೆಗೆ ಲಗ್ನ ಮಾಡಿಸುವ ಜವಾಬ್ದಾರಿ ಹೊತ್ತುಕೊಂಡಾರ. ಅವತ್ತಿಗೆ ಬ್ರಾಹ್ಮಣತಾಗ ಮೊದಲು ಹೋದರಂತೆ ಹೆಣ್ಣು ತೆಗಿಯಾಕ, ಏನಪ್ಪಾ ಈ ಋಷಿ ಮುನಿಗಳು ನಮ್ಮ ಗುರುಗಳು ಮತ್ತೆ ನೀವು ಹೆಣ್ಣು ಕೊಡಬೇಕು ಅಂತ ಕೇಳಿದರಂತೆ. ಅಲ್ಲಾ ನೀವು ಪರಮಾತ್ಮ, ನೀವು ಬಂದು ಕೇಳಿದಾಗ ನಾವು ಕೊಡಾಕ ಇಲ್ಲಾ ಅನ್ನಾಕ ಆಗ್ತೈತಾ?, ಕೊಡ್ತೀವಿ ಅಂದ್ರಂತೆ. ನೋಡಪ್ಪ ನಿನಿಗೆ ಈ ಬ್ರಾಹ್ಮಣರ ಹುಡುಗಿ ಒಪ್ಪಿಗೆಯೇನು ಅಂದಾಗ ಇವರು ಕಷ್ಟ ಬಂದಾಗ ಮಾತ್ರ ವ್ಯವಹಾರ ಮಾಡ್ತಾರೆ ಅಂತ್ಹೇಳಿ ಒಪ್ಪಿಗೆ ಇಲ್ಲವೆಂದನಂತೆ. ಆ ಮೇಲೆ ವೈಶ್ಯರ ಮನೆಗೆ ಹೋದರಂತೆ, ಅಲ್ಲಿಗೆ ಹೋಗಿ ಮಲ್ಲಯ್ಯ ಇದೇ ರೀತಿ ಕೇಳಿದ್ದಕ್ಕೆ ಆಗ್ಲಪ್ಪ ಅಂತ ಹೇಳಿದರಂತೆ. ಮತ್ತೆ ಇಲ್ಲಿಯಾದರೂ ಒಪ್ಪಿಗೆಯೇನಪ್ಪಾ ಅಂತ ಗುರು ಮುನಿಯನ್ನು ಕೇಳಿದ್ರೆ; ಇಲ್ಲ - ಇವರು ಮುಗ್ಧರನ್ನು ಬಾಯಿ ಬಡಿದು ಮೋಸ ಮಾಡ್ತಾರೆ, ಇನ್ನೊಬ್ಬರನ್ನು ಅನ್ಯಾಯ ಮಾಡುವಂತಹವರು ಇವರು ಬ್ಯಾಡ, ಇವರಿಗೆ ಕಷ್ಟ ಪಡೋದು ಆಗಕಿಲ್ಲ, ಇನ್ನೊಬ್ಬರನ್ನು ಸುಖ ಪಡೋಕು ಬಿಡೋದಿಲ್ಲ. ಆದಕ್ಕೆ ಇವರ ಮನ್ಯಾಗ ಕನ್ಯೆ ಬ್ಯಾಡ ಅಂದನಂತೆ. ಆ ಮೇಲೆ ಇನ್ನೇನು ಮಾಡಾನ ಅಂತ್ಹೇಳಿ ಸೂರ್ಯವಂಶದ ರಾಜರ ಮನೆಗೆ ಹೋಗಿ ಮದುವೆ ಬಗ್ಗೆ ಹೇಳಿದರಂತೆ ನಮ್ಮ ಗುರುವಿಗೆ ನೀವು ಹೆಣ್ಣು ಕೊಡಬೇಕಂತ ಆಗ ಆಯಿತು ಪರಮಾತ್ಮ ಕೊಡಾನ ಅಂದ್ರಂತೆ. ಪರಮಾತ್ಮ ಗುರುವಿಗೆ ಇಲ್ಲಿಯಾದರೂ ಒಪ್ಪಿಗೇನಾ ಅಂತ ಕೇಳಿದ್ರಂತ. ಆದಕ್ಕೆ ಮುನಿಗಳು ರಾಜರು ಆಳಿದಷ್ಟು ದಿನ ಆಳ್ತಾರೆ, ಕಷ್ಟ ಬಂದ್ರೆ ಕಷ್ಟನೂ ಪಡ್ತಾರೆ. ನಂಬಿದವರನ್ನು ಕೈಬಿಡೋದಿಲ್ಲ ಇವರಿಗೆ ಕುಲ, ಮತ ಬೇಧ ಅನ್ನುವಂತದ್ದೇ ಇಲ್ಲ, ದೊಡ್ಡವರು-ಸಣ್ಣವರು ಅನ್ನದೇ, ಬಡವ-ಬಲ್ಲಿದ ಅಂತ ಬೇಧ ಮಾಡಾಕ ಹೋಗೋದಿಲ್ಲ. ಅಂಗ ಅವತ್ತಿಗೆ ಸೂರ್ಯವಂಶದಲ್ಲಿ ನಮಗೆ ಲಗ್ನ ಮಾಡಿ, ಅಲ್ಲೇಲಿಂದ ನಮ್ಮ ವಂಶ ಉದ್ಧಾರ ಮಾಡ್ತಾರ ಎಂದು ಕಪಿಲಮುನಿಗಳು ಹೇಳುತ್ತಾರೆ. ಇವರು ರಾಜರ (ಕ್ಷತ್ರಿಯರ) ಕನ್ಯೆಯನ್ನು ಮದುವೆಯಾಗಿ ಒಡೆಯರು ಎನ್ನುವ ಒಂದು ಪಂಗಡವೇ ನಿರ್ಮಾಣವಾಗಿರುವ ಸಾಧ್ಯತೆಗಳು ಹೆಚ್ಚಿವೆ. ಇಂದಿಗೂ ಬಲ್ಲೂರಿನವರ ನೆಂಟರ ಬಳಗ ಇರುವುದು ಆಂಧ್ರದ ಕಡಪ ಮತ್ತಿತರೆ ಕಡೆಗಳಲ್ಲಿ. ಕಾರಣ ಇವರು ಹೆಚ್ಚಾಗಿ ಆಂಧ್ರದ ಕಡಪ ಪ್ರದೇಶದಿಂದಲೇ ತಮ್ಮ ಮನೆಗೆ ಕನ್ಯೆಗಳನ್ನು ತಂದುಕೊಂಡಿದ್ದಾರೆ. ಮೇಲೆ ತಿಳಿಸಿದ ವಕ್ತೃವಾದ ಕಪಿಲಮುನಿ ಒಡೆಯರ ತಾಯಿಯ ತವರೂರು 'ಕಡಪ' ಆಗಿದೆ. ಜೊತೆಗೆ ಅವರ ಹೆಂಡತಿಯ ತವರೂರು ಸಹ ಕಡಪವೇ ಆಗಿದೆ. ಆಂಧ್ರದಲ್ಲಿ ಈ ತೆರನಾದ ರಾಜರ ವಂಶಸ್ಥರ ಸಂಖ್ಯೆ ಹೆಚ್ಚಾಗಿವೆ. ಧರ್ಮ ಸಂಸ್ಥಾಪಕರಾದ ಒಡೆಯರ ಮೂಲ ನೆಲೆ ಶ್ರೀ ಆದಿಮೀನಗೊಂದಿ ಸಿಂಹಾಸನವೇ ಆಗಿದೆ. ಹಿರೇ ಮೈಲಾರ, ದೇವರಗುಡ್ಡ ಕ್ಷೇತ್ರಗಳಲ್ಲಿ ಒಡೆಯರು ಎಂದು ಕರೆಯಿಸಿಕೊಳ್ಳುವ ಸ್ಥಾನಿಕರಿದ್ದಾರೆ. ಹಿಂದೂ ಸಮುದಾಯ ದಲ್ಲಿ ತಾವೇ ಒಂದು ಪ್ರತ್ಯೇಕ ಪಂಗಡವೆಂಬಂತೆ ಇವರು ನಡೆದುಕೊಳ್ಳುತ್ತಿದ್ದಾರೆ. ಆದಿ ಮೀನಗೊಂದಿ ಸಿಂಹಾಸನ ಸೇರಿ ಈ ಮೂರು ಸಂಸ್ಥಾನದ ಒಡೆಯರು ಅಣ್ಣ ತಮ್ಮಂದಿರರಂತೆ. ಮೀನಗೊಂದಿ ಸಿಂಹಾಸನ ದಿಂದಲೇ ನಮ್ಮ ವಂಶಸ್ಥರು ಹಿರೇಮೈಲಾರ ಮತ್ತು ರಾಣಿಬೆನ್ನೂರಿನ ದೇವರಗುಡ್ಡ ಸಂಸ್ಥಾನಗಳಿಗೆ ಹೋಗಿರುವರೆಂದು ತಿಳಿಸುತ್ತಾರೆ. ಈ ಕುರಿತ ಒಂದು ಕಥೆ ಈ ರೀತಿ ಇದೆ.

ಮೀನಗೊಂದಿಯ ಗುಡಿಯಲ್ಲಿ ತಪ್ಪಸ್ಸು ಮಾಡುತ್ತಿದ್ದ ಕಪಿಲಮುನಿಗೆ ಶಿವನು ಕನಸ್ಸಿನಲ್ಲಿ ಬಂದು ತುಂಗಭದ್ರಾ ತೀರದ ಹಿರೇ ಮೈಲಾರದಲ್ಲಿರುವ ಕರಿಯಾಲದ ಬುಡದಲ್ಲಿ ತಾನು ಲಿಂಗ ರೂಪದಲ್ಲಿ ಉದ್ಭವಿಸಿರುವಂತೆಯೂ ಮುನಿ ಅಲ್ಲಿಗೆ ಹೋಗಿ ಪೂಜಿಸಿಕೊಂಡಿರಬೇಕೆಂತಲೂ ಆಜ್ಞೆ ಮಾಡಿದನಂತೆ. ಅದೇರೀತಿ ಕಪಿಲಮುನಿ ಹಿರೇಮೈಲಾರಕ್ಕೆ ಬಂದು, ಆಲದ ಮರದಡಿಯ ಹುತ್ತದಲ್ಲಿ ಅಡಗಿದ್ದ ಶಿವಲಿಂಗವನ್ನು ಹೊರತೆಗೆದು ಪೂಜೆ ಮಾಡತೊಡಗಿದನಂತೆ.

ಕಪಿಲಮುನಿ ಮೀನಗೊಂದಿ ಕ್ಷೇತ್ರದಿಂದ ಹಿರೇಮೈಲಾರಕ್ಕೆ ಬಂದಿರುವನೆಂಬ ಈ ಐತಿಹ್ಯವನ್ನು ಒಡೆಯರ ವಂಶಜರ ಕುರಿತ ಕಥೆಗಳನ್ನು, ಅವರು ಆಂಧ್ರದ ಕಡೆ ಮಾಡಿಕೊಂಡಿರುವ ಸಂಬಂಧವನ್ನು ಗಮನಿಸಿದಾಗ ಆಗಲೇ ಮೀನಗೊಂದಿಯಲ್ಲಿ ಒಡೆಯರು ಪ್ರಾಭಲ್ಯಕ್ಕೆ ಬಂದು, ನಂತರ ಹಿರೇಮೈಲಾರಕ್ಕೆ ಹೋಗಿರುವ ಸಾಧ್ಯತೆಗಳು ಹೆಚ್ಚಿವೆ. ಒಡೆಯರು ತಮ್ಮನ್ನು ತಾವು ಕಪಿಲಮುನಿ ಮತ್ತು ಗೋಮುನಿ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ. ಈ ಮೂರು ಸುನೇತನಗಳಲ್ಲಿ ದೇವಸ್ಥಾನದ ಸಂಬಂಧಿಯಾದ ಶ್ರೀಮುಖ ಅಥವಾ ಬಿರುದಾವಳಿಯ ವಕ್ಕಣಿಕೆ ಇದೆ. ಆದರಲ್ಲಿ ಈ ಮೂರು ಮನೆತನದವರು ' ಆದಿ ಮೀನಗೊಂದಿ ಪುರವಾದೀಶ್ವರರು' ಎಂಬ ಹೇಳಿಕೆಯಿದೆ. ಆ ವಕ್ಕಣಿಕೆಯ ಪ್ರತಿ ಹೀಗಿದೆ;

ಶ್ರೀ ಮಾಲತೇಶ ಪ್ರಸನ್ನ

ಖಡ್ಗಂ ಕಪಾಲಂ, ಡಮರುಗಂ, ತ್ರಿಶೂಲಂ। ಭುಜೈಶ್ಚತುರ್ಭಿ ಚತುರಂ ವಹಂತಂ।
ಅಶೇಷು ಸಂಪತ್ಸು ಖಾದಾಯಕಾಕ್ಷಂ। ಮಲ್ಲಾರಿನಾಥಂ ನಮುಸಾಸ್ಮರಾಮಿ॥

ಶ್ರೀಮಾನ್ ಮಹಾ ಕಪಿಲಮುನಿವರ ಆದಿ ಮೀನಗೊಂದಿ ಕ್ಷೇತ್ರ ಸಿಂಹಾಸನಕ್ಕೆ ಅಧ್ಯಕ್ಷರಾದ ಶ್ರೀ ಮಾರ್ತಾಂಡ ಭೈರವಧಿಕ ಕರಿಯಾಳಿ ಬಂಢಾರಕ್ಕೆ ಆಚಾರ ವಿಚಾರಕ್ಕೆ ಅಗ್ರಗಣ್ಯರಾದ ಆದಿಮೀನಗೊಂದಿ ಪುರವರಾದೀಶ್ವರರಾದ, ಗುರು ಗೋಮುನಿ ಸಂಪ್ರದಾಯಕರಾದ, ವುಂಗ್ಲಾರ ಕ್ಷೇತ್ರ ತುಂಗಭದ್ರಾ ತೀರ ನಿವಾಸರಾದ ನಿತ್ಯಕರ್ಮ ಅನುಷ್ಠಾನ ಹರಿಹರ ಧ್ಯಾನ ಪಾರಾಯಣರಾದ ವ್ರತ ನೇಮ ನಿತ್ಯ ಆಚಾರರಾದ ಗೊಬ್ರಾಹ್ಮಣ ಪ್ರತಿಪಾಲಕರಾದ ನಯ, ವಿನಯ, ದಯೆ, ದಾಕ್ಷಣ್ಯ ಪರೋಪಕಾರಿಗಳಾದ ವಿಭೂತಿ ರುದ್ರಾಕ್ಷಿಗಳಾದ, ತ್ರಿಕಾಲ ಶಿವ ಪೂಜಾ ದುರಂಧರಾದ ನೀತಿ ಕಾರ್ಯ ಪ್ರವೀಣರಾದ, ನಿತ್ಯಾನ್ನ ದಾನ ವಿನೋದರಾದ ಏಕವಾಕ್ಯ ಪ್ರತಿಪಾಲಕರಾದ, ಸತ್ಯ ಸದಾಚಾರ ನಿತ್ಯ ಪರಿಪೂರ್ಣರಾದ, ಅಖಂಡಿತ ಲಕ್ಷ್ಮೀ ಸದಾ ಪ್ರಸನ್ನರಾದ, ಮಹಾರಾಜಾಧಿರಾಜ ರಾಜ ಪೂಜಿತ ರಾಜಮಾನ್ಯ ರಾಜಶ್ರೀ, ಶ್ರೀ ಗುರು ಕಪಿಲಮುನಿ ಸ್ವಾಮಿ ಒಡೆಯರ್ ಇವರ ಮಗ ಶ್ರೀ ಗುರುಮಲ್ಲಪ್ಪಯ್ಯ ಸ್ವಾಮಿ ಒಡೆಯರ ನಾನು ಬರೆದು ಕೊಟ್ಟ ಶ್ರೀ ಮುಖ

ಏನೆಂದರೆ; ಯಾರಿಗೇ ಆಗಲಿ ಈ ಶ್ರೀಮುಖ ಕೊಟ್ಟ ನಂತರ ಇನ್ನೊಬ್ಬರು ಇದಕ್ಕೆ ಆತಂಕ ಮಾಡಕೂಡದು. ಮಾಡಿದ ಪಕ್ಷದಲ್ಲಿ ಅದಕ್ಕೆ ತಗಲುವ ಖರ್ಚುಗಳು ಯಾವತ್ತು ಅವರೇ ಭರಿಸಿಕೊಂಡು ಹೋಗಬೇಕು ಮತ್ತು ಗುರುಗಳು ಎಷ್ಟು ಕಪ್ಪ ಕೇಳುತ್ತಿರೋ ಅಷ್ಟು ಕೊಡಬೇಕಾಗುತ್ತದೆ. ಇಷ್ಟೇ ಮಂಗಳ ಆಶೀರ್ವಾದಗಳು.

ಮೇಲಿನ ವಕ್ಕಣೆಕೆಯನ್ನು ಈಗಲೂ ಇವರು ತಮ್ಮ ಪತ್ರ ವ್ಯವಹಾರದಲ್ಲಿ ಬಳಸಿಕೊಳ್ಳುತ್ತಾರೆ. ಇದರಿಂದ ಇವರ ಮೂಲ ನೆಲೆ ಆಂಧ್ರ ಪ್ರದೇಶ-ಕರ್ನಾಟಕಗಳ ಗಡಿಯಲ್ಲಿರುವ ಆದಿಮೀನಗೊಂದಿ ಎಂದು ನೇಗಿನಹಾಳರ ಅಭಿಪ್ರಾಯ ಸರಿಯಾದುದಾಗಿದೆ. ಅಂದರೆ ಆದಿಮೀನಗೊಂದಿ ಸಿಂಹಾಸನವೇ ಮೂಲವಾದದ್ದು ಎಂದು ಇದರಿಂದ ತಿಳಿಯುತ್ತೇವೆ.

## ೨.೬. ಓಕುಳಿಯಾಟ :

ವಸಂತೋತ್ಸವ ಎಂದು ಕರೆಯಿಸಿಕೊಳ್ಳುವ ಈ ಓಕುಳಿಯಾಟ ಆದಿಮೀನಗೊಂದಿಯಲ್ಲಿ ದಸರಾ ಬನ್ನಿಯಾದ ೩ನೇ ದಿನ ಅಂದರೆ ಸರಪಳಿ ಪವಾಡದ ದಿನ ಮಧ್ಯಾಹ್ನ ಮೂರರ ಸುಮಾರಿಗೆ ನಡೆಯುವ ಒಂದು ಸಂತೋಷ ಕೂಟದ ಕಾರ್ಯಕ್ರಮವಾಗಿದೆ. ಈ ಓಕುಳಿಯಾಟದ ನಂತರವೇ ದೇವರು ಶಿವಸಾನ ಗದ್ದಿಗೆಯಿಂದ ಹೊರಟು ಗಿರಿಯ ಮೇಲೆ ಸೇರಿಕೊಳ್ಳುತ್ತಾನೆ. ಈ ಓಕುಳಿಯೂಟಕ್ಕೆ ಕ್ಷೇತ್ರಕ್ಕೆ ಆಗಮಿಸಿದ ಬಸವಿಯರೆಲ್ಲರೂ ಆಗಲೇ ಶಿವಸಾನ ಗದ್ದಿಗೆಯ ಬಳಿ ಸೇರಿರುತ್ತಾರೆ. ಭಕ್ತರು ಬಂಢಾರದ ಪೊಟ್ಟಣವನ್ನು ಕೈಯಲ್ಲಿ ಹಿಡಿದು ಆಟದ ಸಡಗರವನ್ನು ವೀಕ್ಷಿಸಲು ಮತ್ತೊಮ್ಮೆ ಶಿವಸಾನ ಗದ್ದಿಗೆಯ ಬಳಿ ನೆರೆದಿರುತ್ತಾರೆ. ಶಿವಸಾನ ಗದ್ದಿಗೆಯ ಬಳಿ ನೆರೆದಿರುತ್ತಾರೆ. ಶಿವಸಾನ ಗದ್ದಿಗೆಯ ಎದುರಿನ ಅಂಗಳದಲ್ಲಿ ಬಸವಿಯರು ಪುರಷರುಗಳ ಮಧ್ಯದಲ್ಲಿ ಯಾವುದೇ ತೆರನಾದ ಲಜ್ಜೆಗೆ ಒಳಪಡದೇ ತಾವೂ ಒಂದು ರೀತಿ ಗಂಡು ಎಂಬ ಅರ್ಥದಲ್ಲಿ ಅವರ ಜೊತೆ ಬೆರೆತಿರುತ್ತಾರೆ. ವಾದ್ಯಗಳ ಸದ್ದು ಜೋರಾದಂತೆ ಸ್ವಾಮಿ ಮಲ್ಲಯ್ಯನ ಪರವಶಕ್ಕೆ ಒಳಗಾದ ಅನೇಕ ಬಸವಿಯರು ತೂರಾಡ ತೊಡಗುತ್ತಾರೆ. ನೆರೆದ ಭಕ್ತರು ದೇವರು ಮೈ ತುಂಬಿರುವನು ಎಂದು ಭಾವಿಸಿ ಅವರ ಮೇಲೆ ಬಂಢಾರವನ್ನು ಎರಚುತ್ತಾರೆ. ಕಾರಣ ಶಾಂತಿಯಾಗಲಿ ಎಂಬ ಉದ್ದೇಶವಿರಬಹುದೇನೋ. ಹೀಗೆ ಬಸವಿಯರು ಮಲ್ಲಯ್ಯನ ಬಗ್ಗೆ ಸ್ತೋತ್ರಗಳನ್ನು ಮಾಡುತ್ತಿರುವಾಗ ಆಗಸರು ಇವರನ್ನು ಹೊತ್ತುಕೊಂಡು ಕುಣಿಯುತ್ತಾರೆ. ಈ ರೀತಿ ಹೊತ್ತುಕೊಂಡು ನಾಲ್ಕು ಹೆಜ್ಜೆ ನೃತ್ಯ ಮಾಡುವಾಗ ಆಚರಣೆಯು ಪರಾಕಾಷ್ಟತೆಯನ್ನು ಮುಟ್ಟಿತು ಎಂಬಂತೆ ಭಕ್ತರು ಬಹುಫರಾಕ್ ಎಂದು ಜೋರಾಗಿ ಕೂಗುತ್ತ, ಬಂಢಾರ ವನ್ನು ಅವರ ಮೇಲೆ ಎರಚುತ್ತ ಹರ್ಷೋದ್ಗಾರವನ್ನು ವ್ಯಕ್ತಪಡಿಸುತ್ತಾರೆ. ಈ ಸಂದರ್ಭದಲ್ಲಿ ಆಗಸರು ಬಸವಿಯರ ಮೇಲೆ ಓಕುಳಿಯನ್ನು ಎರಚುತ್ತಾರೆ. ಜೊತೆಗೆ ಭಕ್ತರ ಮೇಲೆಯೂ ಸಹ ಓಕುಳಿ ಹಾಕಿ ನೆರೆದ ಭಕ್ತರನ್ನು ಚದುರಿಸುವ ಒಂದು ವಿನೋದದ ಆಚರಣೆಯನ್ನು ಆಚರಿಸುತ್ತಾರೆ.

ಡಾ. ಅರವಿಂದ ಮಾಲಗತ್ತಿಯವರ 'ಗೌವರ್ನಮೆಂಟು ಬ್ರಾಹ್ಮಣ' ಎನ್ನುವ ಅವರ ಆತ್ಮ ಕಥನದ ಪುಸ್ತಕದಲ್ಲಿ 'ಈಸ್ಟಮನ್ ಕಲರ್ಸ್' ಎಂಬ ಟಿಪ್ಪಣಿಯಲ್ಲಿ ಇದೇ ತೆರನಾದ ಬಸವಿ ಪದ್ಧತಿಯಿದ್ದು, ಅಲ್ಲಿ ಉನ್ನತ ವರ್ಗದವರು ದಲಿತ ಹೆಣ್ಣು ಮಕ್ಕಳನ್ನು ಬಸವಿ ಬಿಡುವ ಪದ್ಧತಿಯಡಿಯಲ್ಲಿ ಅವರ ಅರೆನಗ್ನ ದೇಹವನ್ನು ನೋಡುತ್ತಿರುವುದರ ಬಗ್ಗೆ ಚಿತ್ರಿಸಿದ್ದಾರೆ. ಇತ್ತೀಚಿನ ದಿನಗಳಲ್ಲೂ ಈ ರೀತಿಯ ಪದ್ಧತಿ ಇರುವುದು ನಾಚಿಕೆಗೇಡಿನ ಸಂಗತಿಯೇ ಸರಿ.

ಬಸವಿ ಬಿಡುವ ಪದ್ಧತಿ ತಲ ತಲಾಂತರದಿಂದ ಬಂದಿರುವ ಧಾರ್ಮಿಕ ಸಮಾಜದ ಒಂದು ವಿಶಿಷ್ಟ ಆಚರಣೆಯೇ ಆಗಿದೆ. ಹೆಚ್ಚಾಗಿ ಬಸವಿಯರನ್ನು ಬಿಡುವುದು ಹೆಣ್ಣು ದೇವರುಗಳಿಗೆ ಮಾತ್ರ. ಗಂಡು ದೇವರಿಗೆ ಈ ರೀತಿ ವಿಶಿಷ್ಟ ಆಚರಣೆಯ ಪದ್ಧತಿ ನಮಗೆ ಕಾಣಸಿಗದು. ಆದರೆ ಮಲ್ಲಯ್ಯನ ಪ್ರತಿ ಕ್ಷೇತ್ರದಲ್ಲೂ ಬಸವಿ ಪದ್ಧತಿಯಿರುವುದು ನಮಗೆ ಕಾಣಸಿಗುತ್ತದೆ. ಹಿರೇಮೈಲಾರದಲ್ಲಿ ಮೊದಲು ದೇವದಾಸಿಯರು ಇದ್ದರಂತೆ. ಈಗ ಯಾರೂ ಇಲ್ಲ (ಡಾ. ಎಂ.ಬಿ. ನೇಗಿನಹಾಳ : ೧೯೯೨: ೧೭). ~~ಈ ಊಹೆ ಸತ್ಯವೆನಿಸಿತು~~. ಹಿರೇಮೈಲಾರದ ಕ್ಷೇತ್ರಕಾರ್ಯ ಕೈಗೊಂಡಾಗ ಈ ಊಹೆ ಸತ್ಯವೆನಿಸಿತು. ಹಿರೇಮೈಲಾರದ ಕುಂಚಾವೀರ ಶಿವಪುತ್ರಪ್ಪ ತಿಳಿಸಿರುವಂತೆ ''ಅಜ್ಜನ ಸೇವೆಗೆಂದು ಬಸವಿಯರ್ನ ಬಿಟಕಂಡಿದ್ದೀವರೀ, ಮೊನ್ನೆ ಮೊನ್ನೆಗೆ ಒಂದು ತಿಂಗಳು ಆತು ನೋಡ್ರಿ ಎರಡು ಖಾಲಿ ಆಗ್ಯಾವ (ಇಬ್ಬರು ಬಸವಿಯರು ತೀರಿಕೊಂಡಾರ) ಈಗೀಗೆಲ್ಲ ಆದೆಲ್ಲ ಹೋಗೋ ಬಿಡ್ತುರೀ. ಶಿವಪುತ್ರಪ್ಪನವರ ಹೇಳಿಕೆಯ ಆಧಾರದಿಂದ ಇತ್ತೀಚಿನ ಕೆಲ ವರ್ಷಗಳವರೆಗೆ ಈ ಪದ್ಧತಿ ಹಿರೇ ಮೈಲಾರದಲ್ಲಿ ಇದ್ದು ಈಗ ಕಣ್ಮರೆಯಾಗಿದೆ. ಕರ್ನಾಟಕ, ಮಹಾರಾಷ್ಟ್ರಗಳಲ್ಲೆಲ್ಲಾ ಕಾಯ್ದೆಗಳಾಗಿ ದೇವದಾಸಿ ಪದ್ಧತಿಯ ಮೇಲೆ ನಿರ್ಬಂಧ ಹೇರಲ್ಪಟ್ಟಿರುವುದರಿಂದ ಈ ದೇವಾಲಯಗಳಲ್ಲಿ ಶಿಬಾರದಾಳಿ ಧರಿಸುವುದು, ಅಥವಾ ಮುರಳಿಯ (ಬಸವಿ)ರಾಗುವುದು ನಿಂತು ಹೋಗಿದೆ. ಆದರೂ ಕೆಲವೊಮ್ಮೆ ತೀರ ಕ್ವಚಿತ್ತಾಗಿ ಕಳ್ಳತನದಲ್ಲಿ ಆಗುವುದು ಉಂಟಂತೆ (ಡಾ. ಎಂ.ಬಿ. ನೇಗಿನಹಾಳ; ೧೯೯೨: ೧೨೧).

ಮೇಲೆ ತಿಳಿದ ಪ್ರಕಾರ ಮಲ್ಲಯ್ಯನ ಕ್ಷೇತ್ರಗಳಲ್ಲಿ ಆದಿಮೀನಗೊಂದಿ ಕ್ಷೇತ್ರದಲ್ಲಿ ನಡೆವ ಓಕುಳಿ ಆಟದಂಥ ವಿಶೇಷ ಆಚರಣೆಯ ಕಾರ್ಯಕ್ರಮ ಬೇರೆಡೆ ಇರುವುದು ಕಾಣುವುದಿಲ್ಲ. (ಹಿರೇ ಮೈಲಾರದಲ್ಲಿ ಓಕುಳಿ ಆಡುವ ಪದ್ಧತಿ ಇದೆ). ಆದರೆ ಅದರಲ್ಲಿ ಬಸವಿಯರು ಪಾಲ್ಗೊಳ್ಳುವುದಿಲ್ಲ. ಹಿರೇ ಮೈಲಾರದಲ್ಲಿ ಕಂಚಾವೀರರಾಗಿ ಹರಿಜನರನ್ನು ದೇವಸ್ಥಾನದ ಸ್ಥಾನಿಕ ವರ್ಗದಲ್ಲಿ ಸೇರ್ಪಡಿಸಿರುವುದರಿಂದ ಬಸವಿಯರಿಗೆ ಯಾವ ಸ್ಥಾನವನ್ನು ಕಲ್ಪಿಸಿಲ್ಲವೇನೋ ಎಂದೆನಿಸುತ್ತದೆ. ಇದ್ದಿದ್ದರೆ ಈ ಆಚರಣೆಯ ಕೆಲ ಅಂಶಗಳಾದರೂ ನಮಗೆ ಸಿಕ್ಕಿರಬಹುದಾಗಿತ್ತು. ಬಹುತೇಕ ಎಲ್ಲಾ ಮಲ್ಲಯ್ಯನ ಕ್ಷೇತ್ರಗಳಲ್ಲಿ ಕಡಿಮೆಯಾಗಿ ಕಣ್ಮರೆಯಾಗುತ್ತಿರುವ ಈ ಬಸವಿ ಪದ್ಧತಿ ಆದಿಮೀನಗೊಂದಿ ಕ್ಷೇತ್ರದಲ್ಲಿ ಇನ್ನೂ ತನ್ನ ಜೀವಂತಿಕೆಯನ್ನು ಉಳಿಸಿಕೊಂಡಿದೆ. ಇನ್ನು ಕ್ಷೇತ್ರಕ್ಕೆ ಹೊಸ ಹೊಸ ಬಸವಿಯರು ಸೇರ್ಪಡೆಯಾಗುತ್ತಲೇ ಇದ್ದಾರೆ. ಕೆಲವರು

ನಮಗೆ ಈ ಪದ್ಧತಿ ಸಾಕು, ನಮ್ಮ ಮಕ್ಕಳಿಗೆ ಅದು ಬೇಡ ಎನ್ನುವ ನಿರ್ಧಾರ ತಳೆದಿದ್ದಾರೆ. ಜೊತೆಗೆ ಸರಕಾರದ ನಿರ್ಬಂಧವೂ ಇದಕ್ಕೆ ಕಾರಣವಿರಬಹುದು. ಒಟ್ಟಾರೆ ಈ ಟಿಪ್ಪಣಿಯಲ್ಲಿ ನಾನು ಗಮನಿಸುವ ಮುಖ್ಯ ಅಂಶವೆಂದರೆ; ಬಸವಿ ಪದ್ಧತಿ ಎನ್ನುವುದು ಮೊದಲು ಮೀನಗೊಂದಿಯಲ್ಲಿಯೇ ವಿಶೇಷ ಆಚರಣಾ ಪದ್ಧತಿಯಾಗಿ ಇದ್ದು, ತದನಂತರ ಅದು ಇತರೆ ಮೈಲಾರ ಕ್ಷೇತ್ರಗಳಿಗೆ ಹೋದಂತಿದೆ. ಅಲ್ಲಿ (ಬೇರಡೆ) ಈ ಪದ್ಧತಿ ಇರುವಷ್ಟು ದಿನ ತಮ್ಮ ಪರಿಸರಕ್ಕೆ ತಕ್ಕಂತ ಪದ್ಧತಿಯನ್ನು ಆಚರಿಸಿ ಬದಲಾದ ನಾಗರೀಕತೆಯ ಹಿನ್ನೆಲೆಯಲ್ಲಿ ಕಣ್ಮರೆಯಾಗಿದೆ. ತನ್ನ ಆಚರಣೆಯ ಬೇರುಗಳನ್ನು ಇನ್ನೂ ಗಟ್ಟಿಯಾಗಿ ಉಳಿಸಿಕೊಂಡಿರುವ ಶ್ರೀ ಆದಿಮೀನಗೊಂದಿ ಸಿಂಹಾಸನದಲ್ಲಿ ನಡೆವ ಈ ಬಸವಿ ಪದ್ಧತಿ ಎಲ್ಲಾ ಮೈಲಾರ ಕ್ಷೇತ್ರಗಳಿಗಿಂತ ಪುರಾತನವಾದದ್ದು ಎಂದು ಹೇಳಲು ಅಡ್ಡಿಯಿಲ್ಲ.

## ೨.೭. ಗೊರವಮ್ಮ :

ಓರೇಮೈಲಾರದಲ್ಲಿ ಚಂಚಿಗೋರಮ್ಮ, ಚವುರದ ಗೋರಮ್ಮ ಇತ್ಯಾದಿಯಾಗಿ ಹಲವಾರು ಗೊರವಮ್ಮನವರು ಇದ್ದು, ಸ್ವಾಮಿ ಮೈಲಾರಲಿಂಗನಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಈ ಪದ್ಧತಿ ನಿನ್ನೆ ಮೊನ್ನೆಯದಲ್ಲ. ತಲತಲಾಂತರದಿಂದ ಬಂದಿರುವ ಪದ್ಧತಿಯಾಗಿದೆ. ಆದರೆ ಶ್ರೀ ಮೀನಗೊಂದಿ ಸಿಂಹಾಸನದಲ್ಲಿ ಗೊರವಮ್ಮನವರು ಇರುವುದು ಕಾಣಸಿಗದು. ಇಡೀ ಸಂಸ್ಥಾನಕ್ಕೆ ಒಬ್ಬಳೇ ಗೊರವಮ್ಮ ಇದ್ದಾಳೆ. ಆಕೆ ಗೊರವಿಕೆಯನ್ನು ಯಾವ ಕಾರಣಕ್ಕಾಗಿ ಪಡೆದಿದ್ದಾಳೆ ಎಂಬ ಅಂಶವನ್ನು ವಿಸ್ತಾರವಾಗಿ ಸ್ಥಾನಿಕರು ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಗೊರವಮ್ಮ ಗೊರವಿಕೆಯ ದೀಕ್ಷೆ ಪಡೆದಿರುವುದು ಸುಮಾರು ೨೦ ವರ್ಷಗಳ ಕೆಳಗೆ ಮಾತ್ರ. ಇವರು ಭಿಕ್ಷಾಟನೆಗೆ ಹೋಗದೆ ತಮ್ಮ ಊರಾದ ಸಿಂಧವಾಳ (ಬಳ್ಳಾರಿ ತಾಲೂಕು)ದಲ್ಲಿ ಭಕ್ತರ ನೆರವಿನಿಂದ ಪುಟ್ಟದಾಗಿ ಮಲ್ಲಯ್ಯನ ಗುಡಿಯನ್ನು ನಿರ್ಮಿಸಿ ಸ್ವಾಮಿಗೆ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಓರೇ ಮೈಲಾರವೇ ಮೂಲ ಕ್ಷೇತ್ರ ಎಂದಾದರೆ, ಗೊರವಮ್ಮನವರ ಪದ್ಧತಿ ಅಲ್ಪ ಸ್ವಲ್ಪವಾದರೂ ಮೀನಗೊಂದಿ ಕ್ಷೇತ್ರಕ್ಕೆ ಪಸರಿಸಬೇಕಾಗಿತ್ತು. (ಬಡಿಗೆ ಆಟ ಮೀನಗೊಂದಿಯಿಂದ ಮೈಲಾರ ಕ್ಷೇತ್ರಕ್ಕೆ ಯಾವ ರೀತಿ ಪ್ರಭಾವ ಬೀರಿತ್ತೋ ಹಾಗೆ) ಆದರೆ ಇಲ್ಲಿ ಈ ಪದ್ಧತಿಯ ಪರಿಚಯವೇ ಇಲ್ಲ. ಕ್ಷೇತ್ರಕ್ಕೆ ಒಬ್ಬ ಗೊರವಮ್ಮನನ್ನು ಬಿಟ್ಟಿರುವುದು ಅಲ್ಲಿನ ಸ್ಥಾನಿಕರಲ್ಲಿ ಅಸಮಧಾನ ತಂದಿದೆ. ಮೂಲದಲ್ಲಿ ಈ ಪದ್ಧತಿ ಇದ್ದಂತಿಲ್ಲ. ನಂತರದ ದಿನಗಳಲ್ಲಿ ಈ ಪದ್ಧತಿ ಚಾಲ್ತಿಯಲ್ಲಿ ಬಂದಿರುವಂತೆ ಕಾಣುತ್ತದೆ. ಕಾರಣ ಮೀನಗೊಂದಿಯಲ್ಲಿ ವಗ್ಗರು, ಗೊರವರು, ದೀಕ್ಷೆ ವಹಿಸಿದ ಮತ್ತಿತರರು ತಮ್ಮ ಉಪಜೀವನಕ್ಕೆ ಭಿಕ್ಷಾಟನೆಯನ್ನು ಅವಲಂಬಿಸಿಲ್ಲ. ಬದಲಿಗೆ ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ಕೇವಲ ಬೆರಳೆಣಿಕೆಯಷ್ಟು ಜನ

ಮಾತ್ರ ಭಿಕ್ಷಾಟನೆಯನ್ನು ಮಾಡುತ್ತಾರೆ. ಅದು ಬಿಟ್ಟರೆ ಉಳಿದಂತೆ ಹಲವರು ಪದ್ಧತಿ ಬಿಡಬಾರದು ಎಂದು ಮಲ್ಲಯ್ಯ ಜಾತ್ರಾ ಸಮಯದಲ್ಲಿ ನಾಲ್ಕೈದು ಮನೆಗಳಿಗೆ ಭಿಕ್ಷೆ ಬೇಡಿ ತೃಪ್ತಿಯಾಗುತ್ತಾರೆ. ದೇವಸ್ಥಾನದ ಪ್ರತಿ ಕಾರ್ಯಕ್ರಮಗಳಿದ್ದಾಗ ತಮ್ಮ ತಮ್ಮ ಕಾಯಕವನ್ನು ಕೈಗೊಳ್ಳುತ್ತಾರೆ. ಆದರೆ ಭಿಕ್ಷಾಟನೆ ಎನ್ನುವುದು ಕ್ವಚಿತ್ತಾಗಿದೆ. ಹಿರೇಮೈಲಾರದಲ್ಲಿ ಹಾಗಿಲ್ಲ. ದೀಕ್ಷೆವಹಿಸಿದ ಹೆಚ್ಚಿನ ಭಕ್ತರು ಭಿಕ್ಷಾಟನೆಯನ್ನೇ ತಮ್ಮ ಜೀವನವನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ತಂಡೋಪ ತಂಡಗಳಾಗಿ ಗೊರವರು ಭಿಕ್ಷಾಟನೆಗೆ ರಾಜ್ಯದ ಸುತ್ತ ಅಲೆದಾಡುತ್ತಾರೆ. ಇತ್ತೀಚಿಗೆ ರಾಣಿಬೆನ್ನೂರಿನ ದೇವರಗುಡ್ಡ ಸಂಸ್ಥಾನಕ್ಕೆ ಸೇರಿದ ನಾಲ್ಕೈದು ಜನ ನಮ್ಮ ಪ್ರದೇಶವಾದ ಇಂದಿರಾನಗರಕ್ಕೆ ಬಂದಿದ್ದರು. ಅವರಿಂದ ನನಗೆ ಹಾಡುಗಳಾಗಲಿ, ಪರಿಪೂರ್ಣ ಮಾಹಿತಿಗಳಾಗಲಿ ದೊರೆಯಲಿಲ್ಲ. ಬದಲಿಗೆ ದೇವರಗುಡ್ಡಕ್ಕೆ ಬನ್ನಿ, ಅಲ್ಲಿ ನಮ್ಮ ಸ್ಥಾನಿಕರು ತಿಳಿದವರು ಇದ್ದಾರೆ, ನಿಮಗೆ ಬೇಕಾದ ಎಲ್ಲಾ ಮಾಹಿತಿ ಸಿಗುತ್ತವೆ ಎಂದು ಹೇಳಿದರು. ಇವರ ಹೆಸರುಗಳನ್ನು ವಕ್ತೃವಿವರದಲ್ಲಿ ದಾಖಲಿಸಿದ್ದೇನೆ. ಗೊರವಮ್ಮನವರು ಪ್ರತಿನಿತ್ಯ ಸುತ್ತಮುತ್ತ ಹಳ್ಳಿಗಳಿಗೆ ಭಿಕ್ಷಾಟನೆಗೆ ಹೋಗಿ ಭಾನುವಾರ ಮತ್ತು ಹುಣ್ಣಿಮೆಯ ದಿನದಂದು ಮೈಲಾರಲಿಂಗನ ದೇವಾಲಯದಲ್ಲಿ ಹಾಜರಿರುತ್ತಾರೆ. ಕಾರಣ ಆ ದಿನಗಳಲ್ಲಿ ಭಕ್ತರು ಗುಡಿಗೆ ಬಹಳಷ್ಟು ಸಂಖ್ಯೆಯಲ್ಲಿ ಬರುತ್ತಾರೆ. ಚಿಕ್ಕ ಚಿಕ್ಕ ಹುಡುಗರು ಸಹ ಗೊರವಿಕೆಯನ್ನು ಪಡೆದುಕೊಂಡಿರುತ್ತಾರೆ. ಸರಪಳಿ ಪವಾಡದ ಮಾಲತೇಶ ದಳವಾಯಿ (ಹಿರೇ ಮೈಲಾರ) ಇವರು ಹೇಳುವಂತೆ ''ನಮ್ಮ ಮನ್ಯಾಗ ಏಸು ಮಂದಿ ಗಂಡು ಮಕ್ಕಳು ಹುಟ್ಲಿ, ಅದು ಹನ್ನೆರಡು ಮಕ್ಳು ಗಂಡೇ ಆಗಿರಲಿ, ಎಲ್ಲರನ್ನು ಒಂದು ವರ್ಷ ತುಂಬಿದ ಮ್ಯಾಲೆ ಅಜ್ಜನ ಗುಡಿಗೆ ಕರ್ಕಂಡು ಬಂದು ಬಂಢಾರ ಹಚ್ಚಿ ಅವತ್ತಿನಿಂದ ಹುಡುಗರ್ನ ಅಜ್ಜನ ಸೇವೆಗೆಂದೇ ಬಿಡ್ತೀವಿರೀ...''. ಹೀಗೆ ಚಿಕ್ಕ ಹುಡುಗರು ಸಹ ಹೆಚ್ಚಿನ ಸಂಖ್ಯೆಯಲ್ಲಿ ಭಿಕ್ಷಾಟನೆಯನ್ನು ಮಾಡುತ್ತಾರೆ. ದೇವಸ್ಥಾನಕ್ಕೆ ಹೊಸಬರು ಪ್ರವೇಶಿಸಿದರೆ ಸಾಕು ಗೊರವಮ್ಮನವರು, ಚಿಕ್ಕ ಹುಡುಗರು ಅವರ ಹಣೆಗೆ ಬಂಢಾರವನ್ನು ಹಚ್ಚಲು ಹವಣಿಸುತ್ತಾರೆ. ಕೆಲವೊಮ್ಮೆ ಹಚ್ಚಿಯೇ ಬಿಡುತ್ತಾರೆ. ಬಂಢಾರವನ್ನು ಹಚ್ಚಿಸಿಕೊಂಡರೆ ದಕ್ಷಿಣೆಯನ್ನು ಕೊಡದೇ ಹಾಗೆ ಮುಂದೆ ಹೋಗುವ ಹಾಗಿಲ್ಲ; ಕೊಡಲೇ ಬೇಕಾಗುತ್ತದೆ. ಕೆಲ ಗೊರವಪ್ಪನವರು ಭಕ್ತರನ್ನು ಭಿಕ್ಷೆ ಹಾಕುವವರೆಗೆ ಮುಂದೆ ಭಕ್ತರನ್ನು ಬಿಡುವುದೇ ಇಲ್ಲ.

ಮೈಲಾರದಲ್ಲಿ ಈ ರೀತಿಯ ಭಿಕ್ಷಾಟನೆಯ ಪದ್ಧತಿಯನ್ನು ಗಮನಿಸಿದರೆ; ಇಲ್ಲಿ ಈ ಪೂರ್ವದಲ್ಲಿ ಗೊರವಮ್ಮನವರನ್ನು ಬಿಡುವ ಪದ್ಧತಿ ಇದ್ದಂತಿಲ್ಲ. ದೇವಾಲಯ ಬೆಳೆದಂತೆ, ದೇವಾಲಯಕ್ಕೆ ಬರುವ ಭಕ್ತರ ಸಂಖ್ಯೆ ಅಧಿಕವಾದಂತೆ (ಕ್ಷೇತ್ರದ ಹೆಸರು ಬೆಳೆದಂತೆ) ತಮ್ಮ ಜೀವನಕ್ಕೆ ಯಾವ ತೊಂದರೆಯಿಲ್ಲದ ಮಾರ್ಗ ಇದಾಗಿರುವುದರಿಂದ ದೇವಸ್ಥಾನ ಪ್ರಖ್ಯಾತಿ ಪಡೆದ ನಂತರದ ದಿನಗಳಲ್ಲಿ ಈ ಗೊರವಮ್ಮನವರನ್ನು ಬಿಡುವ ಪದ್ಧತಿ ಬಂದಿರಬಹುದೇನೋ ಎಂದೆನಿಸುತ್ತದೆ. ಆದರೆ ಶ್ರೀ ಆದಿಮೀನಗೊಂದಿಯಲ್ಲಿ ಈ ಪದ್ಧತಿ ಇಲ್ಲದೇ ಇರುವುದನ್ನು ಗಮನಿಸಿದರೆ ಮೂಲದ ಸ್ಪಷ್ಟ ಕಲ್ಪನೆ ಮೂಡದೇ ಇರದು.

## ೨.೮. ಗಿರಿಮೇಲ್‌ಗಿರಿ ಮೇಲ್ಗಿರಿ :

ಶ್ರೀ ಆದಿಮೀನಗೊಂದಿ ಸಿಂಹಾಸನ ಕ್ಷೇತ್ರ ಇರುವುದು ಗುಡ್ಡಗಾಡುಗಳ ಪ್ರದೇಶದಲ್ಲಿ. ಈ ಪ್ರದೇಶದಲ್ಲಿ ಬಹುತೇಕ ಸುಮಾರು ಬೆಟ್ಟಗಳು ಸಾಲುಗಟ್ಟಿವೆ. ಈ ಬೆಟ್ಟಗಳಲ್ಲಿ ಯಾವುದೇ ರೀತಿ ಜನ ವಸತಿಗೆ ಯೋಗ್ಯವಾಗಿರದೆ ಸುಮಾರು ೨ ರಿಂದ ೫ ಕಿ.ಮೀ. ಅಂತರದಲ್ಲಿ ಊರುಗಳಿವೆ. ಭೌಗೋಳಿಕ ಹಿನ್ನೆಲೆಯಲ್ಲಿ ನೋಡಿದಾಗ ಮೀನಗೊಂದಿ ಮಲ್ಲಯ್ಯ ಬೆಟ್ಟದ ಮೇಲೆ ಬೆಟ್ಟದಲ್ಲಿ (ಗಿರಿಮ್ಯಾಲ್ ಗಿರಿ) ನೆಲೆಗೊಂಡಿದ್ದಾನೆ. ಈ ಕ್ಷೇತ್ರದ ಬಹುತೇಕ ಜನರ ಅಭಿಪ್ರಾಯದಂತೆ "೭೭ಗಿರಿಗೆ ಮೇಲ್ಗಿರಿ ಈ ಆದಿಮೀನಗೊಂದಿಗಿರಿ" ಅಂತ ಹೇಳ್ತಾರೆ. ಅಂದರೆ ಮಲ್ಲಯ್ಯನ ಕ್ಷೇತ್ರದ ಬಹುತೇಕ ಸಂಸ್ಥಾನಗಳು ಹೆಚ್ಚಾಗಿ ಬೆಟ್ಟದಲ್ಲಿಯೇ ನೆಲೆಸಿವೆ. ಉದಾಹರಣೆಗೆ ರಾಣಿಬೆನ್ನೂರಿನ ದೇವರಗುಡ್ಡ, ಕಾರೀಮನಿ ಕ್ಷೇತ್ರ, ಹಿರೇಮೈಲಾರ ( ಇಲ್ಲಿ ದಿಬ್ಬದ ಮೇಲೆ ದೇವಾಲಯ ನಿರ್ಮಾಣವಾಗಿದೆ). ಗುಡೂರು ಹುಲೆಪ್ಪ, ಯಾತಗಿರಿ ಮಲ್ಲಯ್ಯ, ಮಂಗಸೂಳಿ ಮಲ್ಲಯ್ಯನೆ. ಹೀಗೆ ಸರಿ ಸುಮಾರು ಹಲವಾರು ಕ್ಷೇತ್ರಗಳು. ಆ ಕಾರಣ ಇಂತಹ ೭೭ ಗಿರಿಗೆ ಇದು ಮೇಲ್ಗಿರಿ. ಅಂದರೆ ಆದಿಮೀನಗೊಂದಿ ಗಿರಿಯ ಮಲ್ಲಯ್ಯನೇ ಮೂಲ ಅಥವಾ ಪ್ರಥಮವಾದುದು ಎಂದು ಒಪ್ಪಲು ಅಡ್ಡಿಯಿಲ್ಲ. ಈ ಗಿರಿಯ ಮತ್ತಷ್ಟು ವಿವರ ಭೌಗೋಳಿಕ ವಿವರ ಎನ್ನುವ ಅಧ್ಯಾಯದಲ್ಲಿ ವಿವರವಾಗಿ ತಿಳಿಸಿದೆ.

## ೨.೯. ಶಾಸನಾಧಾರ :

ಯಾವುದೇ ವಿಷಯದ ನಿಖರತೆಯನ್ನು ಹುಡುಕಲು ನಾವು ಶಾಸನಗಳ ಮೊರೆ ಹೋಗಬೇಕಾಗುತ್ತೆ. ಶಾಸನಗಳಿಂದ ನಮಗೆ ಒಂದು ಕ್ಷೇತ್ರದ ಚರಿತ್ರೆ, ಜನ ಜೀವನ ಕ್ರಮ, ದೇವಾಲಯಗಳಿಗೆ ನೀಡಿದ ದಾನ-ದತ್ತಿ ಮೊದಲಾದ ವಿವರಗಳು, ಮಾಹಿತಿಗಳು ನಮಗೆ ನಿಖರವಾಗಿ ಲಭ್ಯವಾಗುತ್ತವೆ. ಪ್ರಸ್ತುತ ಮಲ್ಲಯ್ಯನ ಮೂಲದ ಕುರಿತಾಗಿ ಚರ್ಚಿಸುವಾಗ ಮೊದಲು ಹಿರೇಮೈಲಾರದ ಕ್ಷೇತ್ರಕ್ಕೆ ಸಂಬಂಧಿಸಿದ ಶಾಸನಗಳನ್ನು ಅವಲೋಕಿಸಿ, ನಂತರ ಶ್ರೀ ಆದಿ ಮೀನಗೊಂದಿ ಪರಿಸರಕ್ಕೆ ಸಂಬಂಧಿಸಿದ ಶಾಸನ ಆಧಾರಗಳನ್ನು ಪರಿಶೀಲಿಸೋಣ.

ಹಿರೇ ಮೈಲಾರದಲ್ಲಿ ಒಟ್ಟು ನಾಲ್ಕು ಶಾಸನಗಳು ಈವರೆಗೆ ಸಂಶೋಧಿಸಲ್ಪಟ್ಟಿದ್ದು, ' ಎನ್‌ಸ್ಕ್ರಿಪ್ಸನ್ಸ್ ಆಫ್ ಮದ್ರಾಸ್ ಪ್ರಸಿಡೆನ್ಸಿ, ಸಂ: ೧ರಲ್ಲಿ ನಮೂದಾಗಿವೆ (ಡಾ. ಎಂ.ಬಿ.ನೇಗಿನಹಾಳ; ೧೯೯೯:೪೬೪).

೧. ಮೈಲಾರದ ಅತಿ ಪ್ರಾಚೀನ ಶಾಸನದ ಕಾಲ ಕ್ರಿ.ಶ. ೧೦೪೭. ಇದು ಪ್ರಸ್ತುತ ಬೇಚಿರಾಕ್ ಪ್ರದೇಶದಲ್ಲಿಯೇ ದೊರೆಯುತ್ತದೆ. ಈ ಪಾಳು ಪ್ರದೇಶವನ್ನು ಅಲ್ಲಿನ ಜನ ಮೂಲ ಮೈಲಾರವೆಂದು ಹೇಳುತ್ತಾರೆ. ಆದರೆ ಈ ಶಾಸನದಲ್ಲಿ ಮೈಲಾರ ಊರಿನ ಹೆಸರಿಲ್ಲ. ಬದಲು ಕುರುವತ್ತಿಯ ಉಲ್ಲೇಖ ಬಂದಿದೆ.

೨. ಮತ್ತೊಂದು ಶಾಸನ ಮೈಲಾರಲಿಂಗ ದೇವಾಲಯದ ರಂಗಮಂಟಪದಲ್ಲಿನ ಕಂಬದ ಮೇಲೆ ಕೆತ್ತಲಾಗಿದೆ. ಇದರ ಕಾಲ ಕ್ರಿ.ಶ. ೧೪೩೬. ಈ ಕನ್ನಡ ಶಾಸನದಲ್ಲಿ ' ಉಂಗುಲಾಲದ ಶ್ರೀ ಮನ್ಮಹಾಮಯಿಲಾರ ದೇವರು' ಎಂಬ ಉಲ್ಲೇಖವಿದೆ. ಉಂಗುಲಾಲ > ಉಂಗ್ಲಾರ ಎಂಬುದಕ್ಕೆ ೫೦೦ ವರ್ಷಗಳ ಪರಂಪರೆಯಿರುವುದರಿಂದ ಪ್ರಸ್ತುತ ಕ್ಷೇತ್ರದ ಹೆಸರು ಮೂಲತಃ ಉಂಗುಲಾಲ ಆಗಿತ್ತೆಂದು ನೇಗಿನಹಾಳ ಅಭಿಪ್ರಾಯ ಪಟ್ಟಿರುವರು.

೩. ತರುವಾಯ ನಮಗೆ ಇಲ್ಲಿನ ಪರಿಸರದಲ್ಲಿ ದೊರೆಯುವ ಮತ್ತು ಸ್ಪಷ್ಟ ಕಾಲ ನಿದರ್ಶನವುಳ್ಳ ಶಾಸನವೆಂದರೆ; ಶಕ ವರ್ಷ ೧೩೩೪ ದುಂದುಬಿ ಸಂವತ್ಸರ ಮಾರ್ಗಶೀರ್ಷ ಶುದ್ಧ ೬ ರವಿವಾರದಂದು ಹುಟ್ಟಿದ ಶಾಸನ; ಎಂದರೆ ಕ್ರಿ.ಶ. ೧೪೧೨ರ ಈ ಶಾಸನದಲ್ಲಿ ಛಟ್ಟಿ ಬಂಢಾರ ಪೂಜೆಯ ಮಿತಿಯನ್ನು ಇದು ಸೂಚಿಸುತ್ತದೆ.

೪. ಉತ್ತರ ಕಂಬದ ಮೇಲಿರುವ ಶಾಸನ ತಕ್ಕಷ್ಟು ದೀರ್ಘವಾಗಿದ್ದು, ಕನ್ನಡ ಭಾಷೆಯಲ್ಲಿದೆ. ಇದರಲ್ಲಿ ಶಕ ವರುಷ ೧೩೫೮ನೆಯ ನಳ ಸಂವತ್ಸರದ ವೈಶಾಖ ಬ.೧೧ ಎಂದು ಮಿತಿ ನಿರ್ದೇಶನವಿದೆ. ದೇವರ ಲಗ್ನ ಸಂದರ್ಭದಲ್ಲಿ ಉಪಯೋಗಿಸಲ್ಪಡುವ ಮೈಲಾರ ದೇವರು ಮತ್ತು ಗಂಗಿ ಮಾಳಮ್ಮನ ಸಂಯುಕ್ತ ಮೂರ್ತಿಯೊಂದು ದೇವಸ್ಥಾನದ ಕಾರ್ಯಾಲಯದಲ್ಲಿದೆ. ಇದರ ಪೀಠದ ಮೇಲೆ ಕ್ರಿ.ಶ. ೧೫೧೮ನೆಯ ವರ್ಷದ ಚಿಕ್ಕ ಶಾಸನವೊಂದಿದೆ. ಇದರಲ್ಲಿ ಹಿರಿಯ ಮೈಲಾರ ದೇವರು ಎಂದು ಉಲ್ಲೇಖವಾಗಿದೆ. ಅಂದರೆ ಆ ಕಾಲಕ್ಕಾಗಲೇ ಮೈಲಾರದೇವರ ಹಲವಾರು ದೇವಾಲಯಗಳು ಪ್ರಸಿದ್ಧವಾಗಿದ್ದವೆಂದು ಇದರಿಂದ ಊಹಿಸಲವಕಾಶವಿದೆ.

ಈ ಎಲ್ಲಾ ಹಿರೇಮೈಲಾರದ ಶಾಸನಗಳನ್ನು ಗಮನಿಸಿದಾಗ (ಡಾ. ಎಂ.ಬಿ.ನೇಗಿನಹಾಳ; ೧೯೯೯: ೪೬೫-೪೬೭-೪೬೮) ಕ್ರಿ.ಶ. ೧೦೪೭ ಬೇಚಿರಾಕ್ ಶಾಸನದಲ್ಲಿ ಮೈಲಾರ ಕ್ಷೇತ್ರದ ಹೆಸರಾಗಲಿ, ದೇವರ ಉಲ್ಲೇಖವಾಗಲಿ ಸೂಚಿಸದೇ ಹೋಗಿದೆ. ನಂತರ ಕ್ರಿ.ಶ. ೧೪೧೨ರ ಶಾಸನದಲ್ಲಿ ಛಟ್ಟಿ ಹಬ್ಬದ ಬಂಢಾರ ಪೂಜೆಯ ಮಿತಿಯನ್ನು ಸೂಚಿಸಿದೆ. ಶಕವರುಷ ೧೩೫೮ರ ಶಾಸನದಲ್ಲಿ ದೇವರ ಉಲ್ಲೇಖವಿರದೆ, ಪ್ರೌಢ ದೇವರಾಯನ ಬಿರುದು ಇದೆ. ಕ್ರಿ.ಶ. ೧೪೩೬ರ ಶಾಸನದಲ್ಲಿ ಉಂಗಲಾಲದ ಶ್ರೀಮನ್ಮಹಾಮಯಿಲಾರ ಎಂದಿದೆ. ಕ್ರಿ.ಶ. ೧೫೧೮ರ ಶಾಸನದಲ್ಲಿ ಮಯಿಲಾರ ದೇವರು ಎಂಬ ಸ್ಪಷ್ಟ ಉಲ್ಲೇಖವಿದೆ. ಅಂತೂ ಕ್ರಿ.ಶ. ೧೪೩೬ರ ಶಾಸನದಲ್ಲಿ ಈ ದೇವರ ಉಲ್ಲೇಖವಿರುವುದು ಸ್ಪಷ್ಟ.

ಇದಕ್ಕಿಂತ ಪೂರ್ವದ ಶಾಸನಗಳನ್ನು ನಾವು ತಿರುವಿ ಹಾಕಿದಾಗ ಕ್ರಿ.ಶ. ೧೦೧೨ರ ವಿಕ್ರಮಾದಿತ್ಯನ ಆಳ್ವಿಕೆಯ ಶಾಸನದಲ್ಲಿ ' ಎಳ್ಕೊಟಿ ತಪೋಧನರ ಸತ್ರಕ್ಕೆ ೧೨ ಮತ್ತರು ಎಂದಿದೆ, ಕ್ರಿ.ಶ. ೧೨೦೭ರ ಬಳ್ಳಾರಿ ಜಿಲ್ಲೆಯ ಕುಡಿತಿನಿ ಶಾಸನದಲ್ಲಿ, ''..... ಶ್ರೀ ಏಳ್ಕೋಟಿ ಮಹಾದೇವರುಂ.....'' ಎಂದಿದೆ. ಸುಮಾರು ಕ್ರಿ.ಶ. ೯ನೇ ಶತಮಾನದ ಕರಮಡಿಯ ಶಾಸನದಲ್ಲಿ ''ಇದನರಿದಾತ ಎಳ್ಕೋಟ್ಟಿಯೊಳು(ಂ) ವಾರಣಾಸಿಯೊಳಂ...'' ಎಂದು, ಕ್ರಿ.ಶ. ೯೭೧ರ ಶಾಸನದಲ್ಲಿ ಎಳ್ಕೋಟಿಯುವಂ, ವಾರಣಾಸಿಯುವಂ....''. ಹೀಗೆ ಈ ಎಲ್ಲಾ ಆಧಾರಗಳನ್ನು ಗಮನಿಸಿ, ಪ್ರಸ್ತುತ ಕ್ಷೇತ್ರವು 'ಏಳುಕೋಟಿ' ಎಂದು ಪ್ರಸಿದ್ಧವಾಗಿದ್ದುದರಿಂದ ಆ ಕ್ಷೇತ್ರಕ್ಕೆ ಸಂಬಂಧಿಸಿದ್ದ ತಪಸ್ವಿಗಳು ಅಥವಾ ನೈಷ್ಟಿಕ ಭಕ್ತರನ್ನು ಏಳ್ಕೋಟಿ ತಪೋಧನರೆಂದು ಕರೆಯುವುದು ಸ್ವಾಭಾವಿಕವಾಗಿದೆ. ಮೇಲಿನ ಉದಾಹರಣೆಗಳು ಈ ಮಾತಿನ ಸತ್ಯತೆಗೆ ಪೋಷಕವಾಗಿವೆ. ಇದರಿಂದಾಗಿ ಮೈಲಾರಲಿಂಗ ಅಥವಾ ಏಳುಕೋಟಿಯ ಸಂಪ್ರದಾಯವು ಕೇವಲ ೧೧ನೇ ಶತಮಾನದಿಂದ ಅಸ್ತಿತ್ವಕ್ಕೆ ಬಂದದ್ದಲ್ಲವೆಂಬುದು ಸಿದ್ಧಿಸುತ್ತದೆಯಲ್ಲದೆ, ಕ್ರಿ.ಶ. ೭ನೇ ಶತಮಾನಕ್ಕಾಗಲೇ ಕರ್ನಾಟಕದಲ್ಲಿ ಈ ದೇವತಾ ಕ್ಷೇತ್ರವೂ ಅದರ ತಪಸ್ವಿಗಳೂ ಬಹು ಪ್ರಭಾವಶಾಲಿಗಳಾಗಿದ್ದರೆಂದು ಶ್ರೀ ಪರ್ವತ ಮತ್ತು ವಾರಣಾಸಿಗಳಂತೆ ಪೂಜನೀಯರಾಗಿದ್ದರೆಂದು ನೇಗಿನಹಾಳರು ಅಭಿಪ್ರಾಯಪಟ್ಟಿರುವರು.

ಇವರ ಈ ಅಭಿಪ್ರಾಯವನ್ನು ಚರ್ಚೆಗೆ ತೆಗೆದುಕೊಂಡಾಗ ಕ್ರಿ.ಶ. ೧೧-೧೨ನೇ ಶತಮಾನಗಳಲ್ಲಿ ಮೈಲಾರಲಿಂಗ ಮತ್ತು ಮಾಳಚಿ ದೇವತೆಗಳನ್ನು ತಮ್ಮ ಕುಲದೇವತೆಯನ್ನಾಗಿ ಮಾಡಿಕೊಂಡಿದ್ದ ರಾಜಮನೆತನಗಳು ಇದ್ದ ಸಂಗತಿ ವಿದ್ವಾಂಸರಿಗೆ ತಿಳಿದಿದೆ. ಅಂಥ ರಾಜಮನೆತನಗಳಲ್ಲಿ ಕದಂಬರೂ ಒಂದು. ಈ ಕದಂಬರು ತಮ್ಮನ್ನು 'ಶ್ರೀ ಸಪ್ತಕೋಟೇಶ್ವರ ಲಬ್ಧ ವರಪ್ರಸಾದ...' ಎಂದು ಕರೆದುಕೊಂಡ ಸಂಗತಿಯನ್ನು ಡಾ. ಖರೆ ಮತ್ತು ಶ್ರೀ ಥೇರೆ ಅವರು ಎತ್ತಿ ತೋರಿಸಿದ್ದಾರೆ. ಗೋವೆಯ ನಾರವೆಯ ಪ್ರದೇಶದಲ್ಲಿ ಈಗಲೂ ಕೋಟೇಶ್ವರ ಅಥವಾ ಕೋಟೇಶ್ವರ ಎಂಬ ದೇವಾಲಯವಿದೆ. ಕದಂಬ ಶಾಸನಗಳ ಸಪ್ತಕೋಟೇಶ್ವರನೆಂದರೆ ಕನ್ನಡದ ಏಳುಕೋಟಿಯೇ ಎಂದು ಹೇಳುವ ಡಾ. ಖರೆಯವರ ಅಭಿಪ್ರಾಯವು ಸಾಧುವಾದುದೆಂದು ಹೇಳಬೇಕು. ಆದರೆ ಇದೇ ಹೆಸರಿನ ದೇವಾಲಯವು ಈಗ ಕರ್ನಾಟಕದ ಕೊಂಕಣಪಟ್ಟಿಯಲ್ಲಿದೆ. ಆದರ ಹೆಸರೂ ಕೋಟೇಶ್ವರವೇ. ಗೋವೆಯ ಕೋಟೇಶ್ವರ ದೇವಸ್ಥಾನದ ಹೆಸರು ಸಪ್ತಕೋಟಿ ಎಂಬುದು ಕೋಟಿ ಅಥವಾ ಕೋಟೇಶ್ವರ ಎಂದಾಗಿರುವ ಸಾಧ್ಯತೆಯನ್ನು ಸೂಚಿಸುತ್ತದೆ. ಬರೀ ಏಳುಕೋಟೇಶ್ವರ ಎಂಬ ಹೆಸರು ಮೈಲಾರ ದೇವರೊಂದಿಗೆ ಸಂಬಂಧ ಕಲ್ಪಿಸುವುದು ಸಹಜವಾಗಲಾರದೇನೋ. ಕಾರಣ ಇದಕ್ಕಿಂತ ಖಚಿತ ಆಧಾರಗಳು ನಮಗೆ ಲಭ್ಯವಾಗಿವೆ.

ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆ ಪೂರ್ವಕ್ಕೆ ೩ಕಿ.ಮೀ. ದೂರದಲ್ಲಿ ಮಲ್ಲಯ್ಯನ ಗುಡ್ಡವಿದೆ. ಇಲ್ಲಿಯ ವಿಶಾಲ ಸ್ಥಳದಲ್ಲಿ ಮಲ್ಲಯ್ಯನ ದೇಗುಲವಲ್ಲದೇ ಶಿವ ಪಾರ್ವತಿ ಮತ್ತು ಈಶ್ವರನ ದೇವಾಲಯವೂ ಸಹ ಇದೆ. ಇಲ್ಲಿ ದೊರೆತ ಕ್ರಿ.ಶ. ೧೦೧೭ರ ಶಾಸನವೊಂದು ಜಗದೇಕಮಲ್ಲನ ಕಾಲದ್ದು (ಕಲ್ಯಾಣಿ ಚಾಲುಕ್ಯರ ಅರಸ). ಇದರಲ್ಲಿ ಮೈಲಾರ ದೇವರಿಗೆ ಬಲ್ಲಕುಂದೆ - ೩೦೦ಕ್ಕೆ ಸಂಬಂಧಿಸಿದ ಭೂಮಿಯನ್ನು ದಾನ ಮಾಡಿದ ವಿವರವಿದೆ. ಈ ದೇವಾಲಯದಲ್ಲಿ ಒಟ್ಟು ನಾಲ್ಕು ಶಾಸನಗಳಿವೆ. ಅದರಲ್ಲಿ ಕ್ರಿ.ಶ. ೧೦೧೭ರ ಜಗದೇಕಮಲ್ಲನ ಶಾಸನವೇ ಪ್ರಾಚೀನವಾದುದಾಗಿದೆ. ಈ ಶಾಸನದಲ್ಲಿ ಮಲ್ಲಯ್ಯನನ್ನು 'ಮೈಲಾರ ದೇವರು' ಎಂದು ಕರೆದಿದೆ. ಈ ದೇವಾಲಯವನ್ನು ಹರಿಮಲ್ಲಯ್ಯ, ವರವಿನ ಮಲ್ಲಯ್ಯ, ಮಲ್ಲೇಶ್ವರ ಎಂದು ಮುಂತಾಗಿ ಕರೆಯುತ್ತಾರೆ. ಈ ದೇವಾಲಯಕ್ಕೆ ಸಂಬಂಧಿಸಿದ ಒಂದು ಐತಿಹ್ಯ ಹೀಗಿದೆ;

ಒಂದಕ ತೆಕ್ಕಲಕೋಟೆ ದೇಸಾಯಿಗಳು ಪ್ರತಿ ದಿನ ಶ್ರೀ ಆದಿಮೀನಗೊಂದಿ ಬೆಟ್ಟಕ್ಕೆ ಹೋಗಿ ಸ್ವಾಮಿ ಮಲ್ಲಯ್ಯನ ದರ್ಶನ ಮಾಡಿಕೊಂಡು ಬರ್‍ತಾಯಿದ್ರು. ಸ್ವಾಮಿ ದರ್ಶನ ಆಗಾವರಿಗೆ ಅವರು ನೀರು ಸಹ ಕುಡಿತಿರಲಿಲ್ಲವಂತೆ. ದರ್ಶನ ಆದ ಮ್ಯಾಲೆನೇ ಊಟ ಉಪಚಾರಮಾಡ್ತಿದ್ರು. ಹೀಗೆ ದಿನಗಳು ಕಳಿತಾಯಿರುವಾಗ ಒಂದು ದಿನ ದೇಸಾಯಿಗಳು ಮಲ್ಲಯ್ಯನ ದರ್ಶನಕ್ಕೆ ಹೋಗುವಾಗ ದಾರಿಯ ಮಧ್ಯದಲ್ಲಿ ಹಳ್ಳ ಅಡ್ಡವಾಗಿ ಬಂದು ಮುಂದಕ್ಕೆ ಹೋಗಲು ಆಗದಾಯಿತು. ದೇವರ ದರ್ಶನ ಪಡೆಯದೇ ದೇಸಾಯಿಗಳು ಊಟ ಮಾಡುವಂಗಿಲ್ಲ. ಹಾಗಾಗಿ ಅವರು ದೇವರಿಗೆ ಪಾರ್ಥಿಸಿದಾಗ, ಆಗ ದೇವರು ಭಕ್ತ ನೀನು ನಿಮ್ಮ ಊರಿಗೆ ಹೋಗು ನಾನು ನಿನ್ನ ಹಿಂದಿಂದೇ ಬರ್‍ತೀನಿ, ನೀನು ಎಲ್ಲಿ ತಿರುಗಿ ನೋಡ್ತೀಯೋ ನಾನು ಅಲ್ಲೇ ನಿಂತುಬಿಡ್ತೀನಿ ಅಂತ ಹೇಳಿದ್ನಂತೆ. ಅದೇ ಪ್ರಕಾರ ದೇಸಾಯಿಗಳು ತೆಕ್ಕಲಕೋಟೆಗೆ ವಾಪಾಸು ಬರ್‍ತಾಯಿರಲು ಊರು ಇನ್ನೇನು ಎರಡು ಕಿ.ಮೀ.ದೂರದಲ್ಲಿರಲಿಕ್ಕೆ ಸ್ವಾಮಿ ಮಲ್ಲಯ್ಯ ನನ್ನ ಹಿಂದೆ ಬರ್‍ತೀದಾನೋ ಇಲ್ಲವೋ ಎಂದು ಅನುಮಾನ ಹುಟ್ಟಿ ಪರೀಕ್ಷಿಸಲು ಹಿಂದಕ್ಕೆ ತಿರುಗಿ ನೋಡಿದ್ನಂತೆ ದೇವರು ಅಂಗೇನೇ ಬೆಟ್ಟದಲ್ಲಿ ಸ್ಥಾಪನೆಯಾಗಿ ಬಿಟ್ಟಾನೆ. ಅಲ್ಲೀ(ಮೀನುಗೊಂದಿ) ದೇವ್ರುರೇ ಇಲ್ಲಿ ಇರೋದು (ತೆಕ್ಕಲಕೋಟೆಯ ಬಹುತೇಕ ಜನರು ಇದೇ ರೀತಿಯ ಐತಿಹ್ಯವನ್ನು ಹೇಳುತ್ತಾರೆ.)

ಈ ಐತಿಹ್ಯದ ಪ್ರಕಾರ ಈ ಮೊದಲು ಮಲ್ಲಯ್ಯ ಶ್ರೀ ಆದಿಮೀನಗೊಂದಿ ಬೆಟ್ಟದಲ್ಲಿ ನೆಲೆಗೊಂಡಿದ್ದ ನಂತರದ ದಿನಗಳಲ್ಲಿ ಈ ವರವಿನ ಮಲ್ಲಯ್ಯನ ದೇವಾಲಯ ಉದ್ಭವಿಸಿದೆ ಎಂಬುದು ಸ್ಪಷ್ಟ. ಅಂದರೆ ಜಗದೇಕಮಲ್ಲನ ಶಾಸನದ ಪೂರ್ವದಲ್ಲಿಯೇ ಶ್ರೀ ಆದಿ ಮೀನಗೊಂದಿ ಕ್ಷೇತ್ರವು ತೆಕ್ಕಲಕೋಟೆ ಕ್ಷೇತ್ರದವರಿಗೆ ಪರಿಚಯವಿತ್ತು ಎಂದು ತಿಳಿಯುತ್ತದೆ. ಈ ಕುರಿತ ಮತ್ತೊಂದು ಆಧಾರ ಹೀಗಿದೆ-ವರವಿನ ಮಲ್ಲಪ್ಪನ ದೇವಸ್ಥಾನದ ಮುಖ್ಯ ಗೋಪುರವ ದಾಟಿ ಎಡಕ್ಕೆ ತಿರುಗಿದರೆ ಒಂದು ಪುಟ್ಟ ಗುಡಿ 1 1/2 (ಒಂದು ವರೆ) ಅಡಿ ತಗ್ಗಿನಲ್ಲಿದೆ. ಇದನ್ನು **ಪುರ್ವದ ಗುಡಿ** ಅಥವಾ **ಆದಿಲಿಂಗನ ಗುಡಿ** ಅಂತ ಕರಿತಾರೆ. ಇದೇ

ತೆರನಾದ ಗುಡಿ ಸಂಡೂರಿನ ಶ್ರೀ ಕುಮಾರಸ್ವಾಮಿ ಬೆಟ್ಟದಲ್ಲಿ ಕಾಣುತ್ತೇವೆ. (ಈ ದೇವಾಲಯವು ಸಹ ಕಲ್ಯಾಣ ಚಾಲುಕ್ಯರ ಅರಸರ ಕಾಲದಲ್ಲಿ ನಿರ್ಮಾಣವಾಗಿದೆ). ಮುಖದ್ವಾರದ ಬಲಬದಿಗೆ **ತಗ್ಗಿನಮಲ್ಲಪ್ಪ** ಅನ್ನುವ ಗುಡಿಯಿದೆ. ಇದು ಸುಮಾರು ೧೨ ಅಡಿಗಳ ಆಳದಲ್ಲಿದೆ. ಈ ಗುಡಿ ತೆಕ್ಕಲಕೋಟೆಯ ಆದಿಲಿಂಗನ ಗುಡಿಯ ಶೈಲಿಯಲ್ಲಿದೆ. ಆದರೆ ತಗ್ಗಿನಮಲ್ಲಯ್ಯನ ಗುಡಿಗಿಂತ ಆದಿಲಿಂಗನ ಗುಡಿ ಪೂರ್ವದ್ದಿರಬೇಕು. ಕಾರಣ ತೆಗ್ಗಿನ ಮಲ್ಲಯ್ಯನ ಗುಡಿಯು ಕಲಾ ನೈಪುಣ್ಯತೆಯಿಂದ ಒಳ್ಳೆಯ ರೂಪ ಹೊದಿದ್ದರೆ ಆದಿಲಿಂಗನ ಗುಡಿ ಅಷ್ಟೇನು ಕಲಾ ನೈಪುಣ್ಯತೆಯಿರದೆ ಒಂದು ಕಚ್ಚಾ ಮಾದರಿಯ ನಿರ್ಮಾಣ ವಾಗಿದೆ. ಇದರ ರೂಪವನ್ನೇ ಮುಂದುವರೆಸಿ ತೆಗ್ಗಿನ ಮಲ್ಲಯ್ಯನ ಗುಡಿಯನ್ನು ಕಲಾತ್ಮಕವಾಗಿ ನಿರ್ಮಿಸಿರ ಬಹುದೆನ್ನಿಸುತ್ತದೆ.

ತೆಕ್ಕಲಕೋಟೆಯ ಬೆಟ್ಟದಲ್ಲಿರುವ ದೇವಾಲಯಗಳಲ್ಲೆಲ್ಲಾ (ಗುಡಿಗಳೆಲ್ಲಾ) ಆದಿಲಿಂಗನ ಗುಡಿಯೇ ಪೂರ್ವದ್ದಾಗಿದೆ. ನಂತರ ಪರಮೇಶ್ವರ, ಪಾರ್ವತಿ, ಷಣ್ಮುಖ, ಎದುರಿಗೆ ನಂದಿ, ಮತ್ತೊಂದು ಬದಿಯಲ್ಲಿ ಮಲ್ಲೇಶ್ವರನ ಗುಡಿಯಿದೆ. ಒಟ್ಟಾರೆ ಆದಿಲಿಂಗನ ಗುಡಿಯೇ ಮೊದಲು ನಿರ್ಮಾಣಗೊಂಡು ಆಯಾ ಅರಸರ ಕಾಲದಲ್ಲಿ ದೇವಾಲಯದ ಜೀರ್ಣೋದ್ಧಾರದ ಜೊತೆಗೆ ದೇವರುಗಳ ಪ್ರತಿಷ್ಠಾಪನೆ ಆಗಿರುವುದು ಗೋಚರಿಸುತ್ತದೆ. ಶ್ರೀ ಆದಿಮೀನಗೊಂದಿ ಮಲ್ಲೇಶ್ವರನ ಪೂರ್ವಾರ್ದ ಪದವಾದ **'ಆದಿ'** ಯನ್ನೇ ಬಳಸಿ ನಾಮಕರಣ ಮಾಡಿರುವುದನ್ನು ನೋಡಿದರೆ ಈ ಗುಡಿಗಿಂತ ಆದಿಮೀನಗೊಂದಿ ಮಲ್ಲಯ್ಯನೇ ಪೂರ್ವ ಎಂಬುದು ಖಚಿತ. ಕಾರಣ ಹೆಸರಿನ ಪ್ರಭಾವ ಕ್ಷೇತ್ರಗಳಿಗೆ ಇದ್ದೇ ಇರುತ್ತದೆ. ಈ ಕ್ಷೇತ್ರದ (ತೆಕ್ಕಲಕೋಟೆ) ಬಹುತೇಕ ಜನರು ಶ್ರೀ ಆದಿ ಮೀನಗೊಂದಿ ಮಲ್ಲಯ್ಯನೇ ಮೂಲ ಎಂದು ಸಾರಿ ಹೇಳುತ್ತಾರೆ. ಹಿರೇ ಮೈಲಾರದ ಬಗ್ಗೆ ಯಾವುದೇ ಮೂಲದ ಮಾಹಿತಿ ಅವರಿಗೆ ತಿಳಿಯದು. ಆದುದರಿಂದ ಜಗದೇಕಮಲ್ಲನ ಶಾಸನಾಧಾರದಿಂದ ಖಚಿತವಾಗಿ ಮೀನಗೊಂದಿಯೇ ಎಲ್ಲಾ ಮೈಲಾರ ಕ್ಷೇತ್ರಗಳಿಗೆ ಮೂಲವಾಗಿದೆ. ಇಷ್ಟೇ ಅಲ್ಲದೇ ಸ್ವಾಮಿ ಮೀನಗೊಂದಿ ಮಲ್ಲಯ್ಯನಿಗೆ ಸಂಬಂಧಿಸಿದ ಮಂಗಳಾರತಿಯ ಪದವೂ ಸಹ ಶಾಸನಾಧಾರಕ್ಕೆ ಸಾಕ್ಷಿಯಾಗಿ ನಿಂತಿದೆ.

" ಜಯ ಮಂಗಲ ಶುಭಮಂಗಲ
ಜೈ ಜೈ ಜಗದೀಶ
ಜಯ ಮತ್ಸ್ಯಗಿರಿವಾಸ ಜಯತು ಮಲ್ಲೇಶ
ಜಯ ದೇವ ಜಯ ದೇವ

ಕೈಲಾಸದಿಂದಲೂ ಸುಗುಣಸ್ಯೆತ ಬಂದ ಮಣಿಮಲ್ಲಾಸುರವೆಂಬ
ದೈತ್ಯರನು ಕೊಂದು ತ್ರೈಲೋಕದೊಳಗೆ ಹೆಚ್ಚಾದ ಮೀನಗೊಂದಿ

ಮೈಲಾರ ಸ್ವಾಮಿಕ ನಿನ್ನ ಮೈಮವು ಏನೆಂದಿ
ಜಯ ದೇವ ಜಯ ದೇವ

..........................................

ಕರಿಚರ್ಮಾಂಬರದವನೆ ಕರ್ಪಿನ ಕೊರಳವನೆ
ಸುರಗಣ ಮನಸೆವಿತನೆ ಜಗವ ಪಾಲಿವನೇ - ಧರಿಯೊಳು ತೆಕ್ಕಲಕೋಟೆ ದೇಶ ಆಳುವವನೇ
ಹರ ಹರ ಶಿವ ಶಿವ ವಣಿಕೇರಿ ಮಲ್ಲೇಶ್ವರನೇ
ಜಯ ದೇವ ಜಯ ದೇವ.

ಈ ಹಾಡಿನಲ್ಲಿ ಧರೆಯೊಳು ತೆಕ್ಕಲಕೋಟೆ ದೇಶ ಆಳುವವನೇ ಎಂದಿದೆ ಅಂದರೆ. ಸ್ವಾಮಿ ಮಲ್ಲಯ್ಯನ ಮೂಲ ಶ್ರೀ ಆದಿ ಮೀನಗೊಂದಿಯೇ ಆಗಿದ್ದು ಅಲ್ಲಿಂದ ಆತನ ಪ್ರಚಾರ ಇತರ ಪ್ರದೇಶಗಳಿಗೆ ಸಾಗಿ ತನ್ನ ಮೈಮೆಯ ಛಾಪ ತೋರಿಸಿದ್ದಾನೆ. ಈ ಕಾರಣವಾಗಿ ತೆಕ್ಕಲಕೋಟೆ ದೇಶವೂ (ಪ್ರದೇಶ) ಈತನ ಪ್ರಭಾವಕ್ಕೆ ಒಳಗಾಗಿತ್ತು ಎಂಬುದು ಸ್ಪಷ್ಟ. ಇದಕ್ಕೆ ಮತ್ತೊಂದು ಪ್ರಮುಖ ಆಧಾರವಾಗಿ ನಾವು ಮೀನಗೊಂದಿ ಗುಡ್ಡದ ಕೆಳಗೆ ಕಾಡಸಿದ್ದಪ್ಪನ ಮಠವನ್ನು ಕಾಣುತ್ತೇವೆ. ಈ ಕಾಡಸಿದ್ದಪ್ಪನು ತೆಕ್ಕಲಕೋಟೆಯ ಒಬ್ಬನಿವಾಸಿ. ಮಲ್ಲಯ್ಯನ ಸೇವಾರ್ಥಕವಾಗಿ ಈ ಮಠವನ್ನು ನಿರ್ಮಿಸಿರುವರು. ಈ ಎಲ್ಲಾ ಐತಿಹ್ಯ, ಕಥೆ, ಮತ್ತು ಶಾಸನಗಳು ಮೀನಗೊಂದಿಯೇ ಎಲ್ಲಾ ಮೈಲಾರ ಕ್ಷೇತ್ರಗಳಿಗೆ ಮೂಲ ಎಂಬ ಅಂಶವನ್ನು ಬಿಂಬುಸುತ್ತವೆ.

ಶಾಸನಗಳಲ್ಲಿ ದೇವವಾಚಕವಾಗಿ **'ಮೈಲಾರ ದೇವರು'** ಎಂಬ ಶಬ್ದ ಪ್ರಪ್ರಥಮಬಾರಿಗೆ ಕಂಡು ಬಂದುದು ಆಂದ್ರದ ಸಂಗಾರೆಡ್ಡಿ ಜಿಲ್ಲೆಯ ಜೋಗಿ ಪೇಟೆ ತಾಲೂಕಿನ **ವೆಲುಡಗೊಂಡ ಶಿಲಾಲೇಖನದಲ್ಲಿ.** ಈ ಶಾಸನದ ಕಾಲ ಕ್ರಿ.ಶ.೧೦೯೯. ( ಡಾ. ಎಂ.ಬಿ.ನೇಗಿನಹಾಳ;೧೯೯೨ : ೩.೦೧ ) ಜಗದೇಕ ಮಲ್ಲನ ಕ್ರಿ.ಶ. ೧೦೧೭ ರ ಶಾಸನದಲ್ಲಿ **'ಮೈಲಾರ ದೇವರು'** ಎಂಬ ಉಲ್ಲೇಖ ಬಂದಿದ್ದರಿಂದ ವೆಲುಪಗೊಂಡ ಶಾಸನವನ್ನು ಇದು ದಾಟಿ ಬಂದಿದೆ. ಈ ಶಾಸನ ಆಂದ್ರದಲ್ಲಿರುವುದರಿಂದ ಈ ದೇವರ ಮೂಲಸ್ಥಾನ ಮೀನಗೊಂದಿ ಇರಬಹುದೇನೊ. ಹೋಲಿಕೆಯಲ್ಲಿ ಬ್ರಹ್ಮಶಿವನ ಪ್ರದೇಶಕ್ಕೆ ಸಮೀಪವಾದ ಊರು ವೆಲುಪನಗೊಂಡವಾಗಿದೆ. ಆ ಕಾರಣ ಈ ಶಾಸನವೇ ಮೈಲಾರ (ಹಿರೇ) ದೇವರಿಗೆ ಮೂಲ ಎಂಬ ಅಭಿಪ್ರಾಯವಿತ್ತು. ಆದರೆ ವಿದ್ವಾಂಸರು ಬ್ರಹ್ಮಶಿವನು ಹೇಳಿದ ಮನೆವೆಗ್ಗಡೆ ಚಟ್ಟಪ್ಪನಿಂದ ನಿನ್ನೆ ತಾನಾದ ಎಮಬ ಉಕ್ತಿಗೆ ಜೋತು ಬೀಳುವುದು ಮತ್ತು ೧೦-೧೧ ನೇ ಶತಮಾನಗಳ ಇತಿಹಾಸದಲ್ಲಿ ಮನೆವೆಗ್ಗಡೆ ಚಟ್ಟಪ್ಪನನ್ನು ಪತ್ತೆ ಹಚ್ಚಿ ಪ್ರಯತ್ನಿಸುವುದು ನಿರುಪಯುಕ್ತ ಎನಿಸುವುದು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. (ಡಾ. ಎಂ.ಬಿ.ನೇಗಿನಹಾಳ; ೧೯೯೯ : ೧೩೦) ಒಟ್ಟಾರೆ ಜಗದೇಕಮಲ್ಲನ ೧೦೧೭ರ ಶಾಸನದ ಆಧಾರದಿಂದ ವೆಲುಪಗೊಂಡ ಶಾಸನ ಸ್ವಲ್ಪ ಹಿಂದೆ ಸರಿದಿದೆ ಎಂದರೆ ಅಚ್ಚರಿಯೇನಿಲ್ಲ.

ಹಿರೇ ಮೈಲಾರದ ಸೋಮೇಶ್ವರ ದೇವಾಲಯದ ಶಾಸನ ೧೧ ನೇ ಶತಮಾನವಾಗಿದ್ದು ಆದರಲ್ಲಿ ಸ್ವಯಂಭೂ ದೇವರು ಮತ್ತು ಮೂಲಸ್ಥಾನದೇವರು ಎಂದು ಪ್ರತ್ಯೇಕವಾಗಿ ಉಲ್ಲೇಖ ಬಂದಿರುವುದು ಗಮನಾರ್ಹವಾಗಿದೆ (ಡಾ. ಎಂ.ಬಿ.ನೇಗಿನ ಹಾಳ್;೧೯೯೨ :೩೫೮). ಆದರೆ ಜಗದೇಕ ಮಲ್ಲನ ಶಾಸನ೧೦ ನೇ ಶತಮಾನಕ್ಕೆ ಸಂಬಂಧಿಸಿರುವುದು. ಆ ಕಾರಣ ಸೋಮೇಶ್ವರ ದೇವಾಲಯದ ಶಾಸನ ತಪ್ಪು ಉಲ್ಲೇಖಕ್ಕೆ ಗುರಿಯಾಗಿರಬಹುದೇನೋ ಎಂದೆನಿಸುತ್ತದೆ. ಕಾರಣ ಈ ಅಧ್ಯಾಯದಲ್ಲಿ ಈ ಹಿಂದೆ ಬಂದ ಬಡಿಗೆ ಆಟ, ರೋಜದ ಹೂವಿನ ಆಲಂಕಾರ, ಭೌಗೋಳಿಕ ವಿವರ, ಬಸವಿ ಪದ್ಧತಿ, ಗೊರವಮ್ಮನವರು ಮತ್ತಿತರೆ ಅಂಶಗಳು ಶ್ರೀ ಆದಿಮೀನಗೊಂದಿಯೇ ಮೂಲ ಎಂದು ಸಾಬೀತುಪಡಿಸುತ್ತದೆ.

ಮೀನಗೊಂದಿ ಬೆಟ್ಟದ ಸಮೀಪ ಸುಮಾರು ಎರಡು ಮೈಲುಗಳ ಅಂತರದಲ್ಲಿ ನೆರಣಿಕೆ ಎಂಬ ಗ್ರಾಮವಿದೆ. ಅಲ್ಲಿ ಕ್ರಿ.ಶ.೧೨೮೨ ನೆಯ ವರ್ಷದ **ಯಾದವರ ರಾಮಚಂದ್ರ**ನ ಕಾಲದ ಕನ್ನಡ ಶಿಲಾ ಶಾಸನ ವೊಂದಿದೆ. (ಡಾ. ಎಂ. ಬಿ.ನೇಗಿನ ಹಾಳ; ೧೯೯೨;೩೩೧). ಆದರಲ್ಲಿ ದತ್ತಿ ಬೆಟ್ಟ ದೇವರುಗಳ ಪೈಕಿ ಸ್ವಯಂಭೂ ಖಂಡೇರಾಯ ದೇವರೂ ಒಬ್ಬ. ಪ್ರಸ್ತುತ ಶಾಸನದ **ಸ್ವಯಂಭೂ ಖಂಡೇ ರಾಯನೆಂದರೆ** ಮೀನಗೊಂದಿ ಬೆಟ್ಟದಲ್ಲಿ ಸ್ವಯಂಭೂವಾಗಿ ಅವತರಿಸಿದ ಮೈಲಾರ ದೇವರೆಂಬುದು ನಿಸ್ಸಂಶಯ. ಇದರಿಂದ ಖಂಡೇರಾಯ ಎಂಬ ಹೆಸರು ಕೂಡಾ ಕ್ರಿ.ಶ.೧೩ ನೇ ಶತಮಾನದಷ್ಟು ಹಿಂದಿನಿಂದಲೇ ಈ ದೇವರಿಗೆ ಸಲ್ಲುತ್ತಿದ್ದ ಅಂಶ ದೃಢ ಪಟ್ಟಿದೆ(ಡಾ. ಎಂ.ಬಿ.ನೇಗಿನಹಾಳ; ೧೯೯೨ :೨೦೬). ಮೀನಗೊಂದಿ ಕ್ಷೇತ್ರಕ್ಕೆ ಸಂಬಧಪಟ್ಟ ಶಾಸನ ಇದಾಗಿದೆ. ಹಿರೇಮೈಲಾರದ ಪರಂಪರೆಗೆ ಇದೇ ಮೂಲವಾಗಿರಬೇಕೆಂಬ ನೇಗಿನಹಾಳರ ಅನುಮಾನ ಸ್ಪಷ್ಟವಾಗಿದೆ. ಕಾರಣ ಈ ಅಧ್ಯಾಯದಲ್ಲಿ ಬರುವ ಪ್ರತಿ ಟಿಪ್ಪಣಿಗಳು, ಮೀನಗೊಂದಿಯೇ ಮೂಲ ಎನ್ನುವುದಕ್ಕೆ ಪೂರಕವಾಗಿದೆ. ಹಿರೇಮೈಲಾರ ಕ್ಷೇತ್ರದಲ್ಲಿ ಮೈಲಾರ ದೇವರ ಉಲ್ಲೇಖ ಕ್ರಿ.ಶ. ೧೪೩೬ ರಲ್ಲಿದ್ದರೆ, ಮೀನಗೊಂದಿಯಲ್ಲಿ ಸ್ವಯಂಭೂ ಖಂಡೇರಾಯ (ಮಲ್ಲಯ್ಯ) ಉಲ್ಲೇಖವಾದ ಕ್ರಿ.ಶ.೧೨೮೨ ರ ಶಾಸನ ಬಲವಾದ ಆಧಾರವನ್ನೊಗಿಸುತ್ತದೆ. ಒಟ್ಟಾರೆ ವೆಲಪಗೊಂಡ ಶಾಸನ, ನೆರಣಿಕೆಯ ಶಾಸನ ಜೊತೆಗೆ ಅತಿ ಮುಖ್ಯವಾಗಿ ತೆಕ್ಕಲಕೋಟೆಯ ಶಾಸನ ಅತಿ ಪುರಾತನವಾಗಿದ್ದು ಮೀನಗೊಂದಿಯೇ ಮೂಲ ಎಂಬ ಮಾತು ಖಚಿತಪಡಿಸಿದೆ.

ನೆರಣಿಕೆಯ ಈ ಶಾಸನ ಬಿಟ್ಟರೆ ಬೇರೆ ಯಾವುದೇ ರೀತಿಯ ಶಾಸನ ನಮಗೆ ಕಾಣಸಿಗದು. ಕಾರಣ ಈ ಕ್ಷೇತ್ರ ಯಾವುದೇ ರಾಜಕೀಯ ಪಡೆಯದೇ ಅನಾಥವಾಗಿದೆ. ಯಾವುದೋ ಒಂದು ಜನ ಸಂಸ್ಕೃತಿ ಬೆಟ್ಟದ ಬಳಿ ಬದುಕಿದ್ದು ನಂತರ ವಿನಾಶಹೊಂದಿದೆ. ಆದರೆ ಮೈಲಾರದಲ್ಲಿ ಸರಿಸುಮಾರು ಶಾಸನಗಳು ೧೩ ರಿಂದ ೧೫ನೇ ಶತಮಾನದ ಹಂತದಲ್ಲಿ ಬಹಳಷ್ಟು ಸಿಗುತ್ತವೆ. ಕಾರಣ ಆ ಕಾಲಕ್ಕಾಗಲೇ ಮೈಲಾರ ಬಹಳಷ್ಟು ಪ್ರಖ್ಯಾತಿಯನ್ನು ಹೊಂದಿದ್ದು ರಾಜರ ಆಳ್ವಿಕೆಯಲ್ಲಿ ಈ ಕ್ಷೇತ್ರ ಇತ್ತು ಎನ್ನುವುದಕ್ಕೆ ಪ್ರೌಢದೇವರಾಯನ

ಆಳ್ವಿಕೆಯಲ್ಲಿ ಹುಟ್ಟಿದ ಶಾಸನ (ಶಕೆ ವರುಷ ೧೩೫೮ ನೆಯ ನಳಸಂವತ್ಸರ ವೈಶಾಖ ಬಿ.೧೧) ನಮಗೆ ನಿದರ್ಶನವಾಗಿದೆ(ಡಾ. ಎಂ.ಬಿ.ನೇಗಿನ ಹಾಳ; ೧೯೯೯ :೪೬೮). ಅಂದರೆ ಪ್ರಮುಖ ರಾಜರ ಆಶ್ರಯ ಈ ದೇವಾಲಯಕ್ಕೆ ಇದ್ದುದರಿಂದ ಅದು ಮತ್ತಷ್ಟು ಪ್ರಖ್ಯಾತಿಯನ್ನು ಪಡೆದಿತ್ತು. ಆದರೆ ಮೀನಗೊಂದಿ ಕ್ಷೇತ್ರ ಯಾವುದೇ ಪ್ರಮುಖ ರಾಜರ ಆಶ್ರಯ ಪಡೆಯದೆ ಇಷ್ಟು ದಿನ ಗೌಣವಾಗಿಯೇ ಉಳಿದಿದೆ.

ಮೀನಗೊಂದಿಯ ಪರಂಪರೆಯಲ್ಲಿ ವಗ್ಗರು ಬೇರೆ, ಗೊರವರು (ಗಣಾಚಾರಿ) ಬೇರೆ. ಗೊರವರು ವಗ್ಗರಿಗೆ ದೀಕ್ಷೆ ಕೊಡಬಲ್ಲರು. ಆದ್ದರಿಂದ ಗೊರವರು ಅವರಲ್ಲಿ ಶ್ರೇಷ್ಠರು. ಕರ್ನಾಟಕದಲ್ಲಿ ಗೊರವ-ವಗ್ಗ ಸಂಪ್ರಾದಾಯಗಳು ಮಿಶ್ರಿಸಿ ಹೋಗಿವೆ. ಆದರೆ ಆಂದ್ರದಲ್ಲಿ ಅವಿನ್ನು ಪ್ರತ್ಯೇಕವಾಗಿಯೇ ಉಳಿದಿವೆ. ಗಣಾಚಾರಿಗಳು ಒಡೆಯರಂತೆ ವಗ್ಗರಿಗೆ ದೀಕ್ಷೆಯನ್ನು ಕೊಡುವ ಮುಂತಾದ ಅಧಿಕಾರವನ್ನು ಪಡೆದಿರುತ್ತಾರೆ. ಇವರು ಒಡೆಯರನ್ನು ತುಂಬ ಗೌರವದಿಂದ ಕಾಣುತ್ತಾರೆ. ದೇವರಿಗೆ ಸಲ್ಲುವ ಮುಡಿಪು ಕಾಣಿಕೆಗಳನ್ನು ಸಂಗ್ರಹಿಸಿ ಒಡೆಯರಿಗೆ ಕೊಡುವುದು ಮೊದಲಾದ ವ್ಯವಸ್ಥೆಯನ್ನು ನೋಡಿ ಕೊಳ್ಳುವುದು ಇವರ ಹೊಣೆ. ಆಯಾ ಭಾಗಕ್ಕೆ ಒಡೆಯರು ಸಂಚಾರ ಹೋದಾಗ ಅವರನ್ನು ನೋಡಿಕೊಳ್ಳುವವರು ಈ ಗಣಾಚಾರಿಗಳೇ. ಇಂಥ ವ್ಯವಸ್ಥೆ ಉತ್ತರ ಕರ್ನಾಟದಲ್ಲಿ ಕಂಡುಬರುವುದಿಲ್ಲ. ಈ ರೀತಿ ಪಕ್ಕಾದ ವ್ಯವಸ್ಥೆ ಶ್ರೀ ಆದಿ ಮೀನಗೊಂದಿ ದೇವಾಲಯದಲ್ಲಿ ಇನ್ನೂ ಹೆಚ್ಚು ಕಟ್ಟು ನಿಟ್ಟಾಗಿದೆಯೆಂದರೆ ಶ್ರೇಣಿ ಬದ್ಧ ವ್ಯವಸ್ಥೆಯೊಂದು ಮುಂಚೆ ಇವರ ಅಧೀನವಾಗಿತ್ತೆಂದು ತೋರುತ್ತದೆ. ಇಂಥ ಗಣಾಚಾರಿಗಳಿಗೆ ಅಥವಾ ಗೊರವರಿಗೆ ಸಂಬಂಧಿಸಿದ ಗೊರವಲಿಂಗಪ್ಪನ ಗುಡಿ ಆದಿಮೀನಗೊಂದಿಯಲ್ಲಿದೆ. ಈ ಗೊರವಲಿಂಗನೇ ಕಾಲಾಂತರದಲ್ಲಿ ಹೆಗ್ಗಡೆಯಾದನೇನೋ ಎಂಬ ಅನುಮಾನವಿದೆ.

ಇನ್ನು ಚಿಕ್ಕಯ್ಯ - ಜುಂಜಯ್ಯನವರ ಬಗ್ಗೆ ಹೇಳುವುದಾದರೆ ಹಿರೇ ಮೈಲಾರ, ದೇವರಗುಡ್ಡ, ಮತ್ತು ಕಾರೀಮನಿ ದೇವಾಲಯಗಳಲ್ಲಿ ಪ್ರತ್ಯೇಕವಾದ ಸ್ಥಾನಗಳಿವೆ. ಆದರೆ ಮಹಾರಾಷ್ಟ್ರದ ಭಕ್ತರಲ್ಲಿ ಈ ದೇವರುಗಳ ಬಗ್ಗೆ ಯಾವ ಕಲ್ಪನೆಯೂ ಇಲ್ಲ. ಆದ್ದರಿಂದ ಅಲ್ಲಿ ಇವರಿಗೆ ಯಾವ ಸ್ಥಾನ ಅಥವಾ ಗುಡಿ ಲಭ್ಯವಾಗಿಲ್ಲ. ಸದ್ಯದ ಪ್ರೇಮಪುರದ ದೇವಾಲಯದಲ್ಲಿಯೂ ಇವರ ಸಂಕೇತಗಳಾಗಲೀ, ಗುಡಿಗಳಾಗಲೀ, ಕಂಡುಬರುವುದಿಲ್ಲ. ಮೀನಗೊಂದಿಯಲ್ಲಿಯೂ ಇದೇ ಸ್ಥಿತಿಯಿದೆ. ಯಾವುದೋ ಭಿನ್ನ ಬುಡಕಟ್ಟಿನ ದೇವರಾದ ಇವರು ಕಾಲಾಂತರದಲ್ಲಿ ಮೈಲಾರದೇವರ ಸಂಪ್ರದಾಯದಲ್ಲಿ ಸೇರ್ಪಡೆಯಾದರೆಂದು ತೋರುತ್ತದೆ. ಅಂದರೆ ಮೂಲದಲ್ಲಿ ಇವರ ಕಲ್ಪನೆ (ಮೀನಗೊಂದಿ) ಇಲ್ಲವೆಂಬುದು ಸ್ಪಷ್ಟ.

ಈ ಮೇಲಿನ ಎಲ್ಲಾ ಅಂಶಗಳನ್ನು ಮೆಲುಕುಹಾಕಿದಾಗ ಮೂರ್ತಿಪೂಜೆಗಿಂತಲೂ ಮೊದಲು ದೇವಿಯ ಆರಾಧನೆಯ ಪ್ರತೀಕವಾದ ರೋಜಾದ ಹೂವಿನ ಅಲಂಕಾರ ಪದ್ಧತಿ, ಆದಿಮಾನವನ ಬೇಟೆಯ ಸಂಸ್ಕೃತಿಯನ್ನು ನೆನಪಿಗೆ ತರುವ ವಿಶೇಷ ಆಚರಣೆಯಾದ ಬಡಿಗೆಯಾಟ, ಭೌಗೋಳಿಕ ವಿವರದ ಅಂಶಗಳಲ್ಲಿ ಸಹಾಯಕವಾದ ಗುಹಾಲಯದಲ್ಲಿ ದೇವರು ಒಡಮೂಡಿರುವ ರೀತಿ, ಗುಹೆಗಳು, ತಪಸ್ವಿಗಳು ಹಾಗೂ ಸುತ್ತ ಮುತ್ತಲಿನ ಪರಿಸರ, ಬಸವಿಪದ್ಧತಿ, ಒಡೆಯರ ಮೂಲ ಕ್ಷೇತ್ರ ಮೀನಗೊಂದಿ ಎಂದು ಸಾಬೀತುಪಡಿಸುವ ಅಂಶಗಳು, ಆಚರಣೆಯ ವಿಧಿ ವಿಧಾನಗಳು, ಅತಿ ಮುಖ್ಯವಾಗಿ ಶಾಸನಾಧಾರಗಳು ಶ್ರೀ ಆದಿಮೀನಗೊಂದಿ ಸಿಂಹಾಸನ ಕ್ಷೇತ್ರವೇ ಇಡೀ ಮೈಲಾರ ಕ್ಷೇತ್ರಗಳಿಗೆ ಮೂಲ ಎಂಬ ಮಾತಿಗೆ ಅನುಮಾನವಿಲ್ಲ. ಈ ಕ್ಷೇತ್ರದ ಆಚರಣೆಗಳ ಸಂಬಂಧಿಯಾದ ಕಥೆ, ಐತಿಹ್ಯ, ಒಡಪು, ನಾಟಕ, ಬಯಲಾಟ ಮತ್ತಿತರ ಸಾಹಿತ್ಯಿಕ ಅಂಶಗಳನ್ನು ಮಲ್ಲಯ್ಯನ ಸಾಹಿತ್ಯ ಅನ್ನುವ ಅಧ್ಯಾಯದಲ್ಲಿ ವಿವರಿಸಿದ್ದೇನೆ.

ಅಧ್ಯಾಯ - ೩

# ಮಲ್ಲಯ್ಯನ ಕ್ಷೇತ್ರ ಪರಿಚಯ

೩.೧. ಮುಖ್ಯ ದೇವಾಲಯ

೩.೨. ಲಕ್ಷ್ಮೀ ಗುಡಿ

೩.೩. ವೆಂಕಟೇಶ್ವರನ ಗುಡಿ

೩.೪. ಪಿಂಜಾರ ಕಟ್ಟೆ

೩.೫. ಸಾಕ್ಷಿ ಗಣಪತಿ

೩.೬. ಕಾಡಸಿದ್ಧಪ್ಪನ ಮಠ

೩.೭. ತೇರಿನ ಮಂಟಪ

೩.೮. ಶಿವಸಾನ ಕಟ್ಟೆ

೩.೯. ಕ್ವಾಸಿ ಬದ್ಧಯ್ಯನ ಕಟ್ಟೆ

೩.೧೦. ಮದ್ದಲಿ ಗೊರವಯ್ಯನ ಗುಡಿ

೩.೧೧. ನಾಗವೀರನ ಗುಡಿ

೩.೧೨. ಮಡಿವಾಳರ ಗುಡಿ

೩.೧೩. ಆಸ್ಪರಸ್ವಾಮಿ ಮಠ

೩.೧೪. ಎದುರು ಬಸವನ ಗುಡಿ

೩.೧೫. ಹೊನ್ನಿಕೆರೆ ಕಟ್ಟೆ

೩.೧೬. ಆನೆಬಾವಿ

೩.೧೭. ಮುಳ್ಳಿನ ಬಂಡೆ

೩.೧೮. ರಾಕ್ಷಸ ಪಡೆ

೩.೧೯. ಬನ್ನಿಯ ಮರ

೩.೨೦. ಮಾದರ ಗುಡಿ

೩.೨೧. ಗುಹೆಗಳು

# ಮಲ್ಲಯ್ಯನ ಕ್ಷೇತ್ರ ಪರಿಚಯ

ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆಯ ಆಲೂರು ತಾಲೂಕಿನ ಹೊಳಗುಂದ ಮಂಡಲಕ್ಕೆ ಸೇರಿರುವ ನೆರಣಿಕೆ ಗ್ರಾಮದ ಪರಧಿಯಿಂದ ಸುಮಾರು ನಾಲ್ಕು ಮೈಲುಗಳ ಅಂತರದಲ್ಲಿ ಶ್ರೀ ದೇವರಗುಡ್ಡ ಕ್ಷೇತ್ರ ಸಿಗುತ್ತದೆ. ಬೆಟ್ಟದ ಮೇಲೆ ಬೆಟ್ಟ ಇರುವುದರಿಂದ ಜನಪದರು ''ಗಿರಿಮೇಲ್ ಗಿರಿ, ಮೇಲ್ಗಿರಿ '' ಎಂತಲೇ ಕರೆಯುತ್ತಾರೆ. ಈ ಗಿರಿಯ ಸುತ್ತ ಮೂರು - ನಾಲ್ಕು ಮೈಲುಗಳ ಅಂತರದಲ್ಲಿ ಅರಿಕೇರೆ, ಸುಳುವಾಯಿ, ಹೊಸಪೇಟೆ, ತಾಂಡ, ನೆರಣಿಕೆ, ಎಳ್ಳಾರ್ಥಿ ಮುಂತಾದ ಊರುಗಳು ಸಿಗುತ್ತವೆ. ಯಾವ ಊರಿನಿಂದ ಗಿರಿಗೆ ಬರಬೇಕೆಂದರೂ ಭಕ್ತರು ಕಾಲ್ನಡಿಗೆಯಲ್ಲೇ ಬರಬೇಕು. ಕಾರಣ ಇದು ಚಿಕ್ಕ ಪುಟ್ಟ ಬೆಟ್ಟಗಳಿಂದ ಕೂಡಿದ ಕ್ಷೇತ್ರವಾದ್ದರಿಂದ ಯಾವುದೇ ಎತ್ತಿನ ಬಂಡಿಗಳಾಗಲಿ ಗಿರಿಯವರೆಗೆ ಬರಲು ಸಾಧ್ಯವಿಲ್ಲ. ಏಕೆಂದರೆ ಬಂಡಿ ಜಾಡಿನಿಂದ ಕೂಡಿದ ರಸ್ತೆ ಗಿರಿ ಸಮೀಪಿಸುತ್ತಿದ್ದಂತೆ ಕಾಲು ಜಾಡಿಗೆ ತಿರುಗಿದೆ. ಈ ಕಾಲು ಜಾಡಿನಿಂದ ಸುಮಾರು ಒಂದು ಮೈಲಿನಷ್ಟು ಪಯಣ ಬೆಟ್ಟದಲ್ಲಿಯೇ ಇರುವುದರಿಂದ ಭಕ್ತರು ಪ್ರಯಾಣಕ್ಕೆ ಇತರ ವ್ಯವಸ್ಥೆಯನ್ನು ಕಂಡುಕೊಳ್ಳದೆ ಕಾಲ್ನಡಿಗೆಯನ್ನೇ ರೂಢಿಸಿಕೊಂಡಿದ್ದಾರೆ. ಈ ಮಲ್ಲಯ್ಯನ ಬೆಟ್ಟವನ್ನು ದೂರದಿಂದ ದರ್ಶನ ಮಾಡಿಕೊಂಡಾಗ ಅದು ಮತ್ಸ್ಯ (ಮೀನಿನ) ಆಕಾರದಲ್ಲಿ ಗೋಚರಿಸುತ್ತದೆ. ಕಾರಣ ಇದಕ್ಕೆ ಮತ್ಸ್ಯಾಚಲ, ಮತ್ಸ್ಯಾದ್ರಿ ಎಂಬ ಹೆಸರುಗಳ ಕಾರಣದಿಂದ ಈ ಕ್ಷೇತ್ರಕ್ಕೆ '' ಆದಿಮೀನಗೊಂದಿ '' ಎಂದು ಹೆಸರಿರುವುದು ಸೂಕ್ತವೇ ಆಗಿದೆ.

## ೩.೧. ಮುಖ್ಯ ದೇವಾಲಯ : -

ಬಹುತೇಕ ಮೈಲಾರಲಿಂಗನ ಎಲ್ಲಾ ದೇವಾಲಯಗಳು ಪೂರ್ವ ದಿಕ್ಕಿಗೆ ಮುಖಮಾಡಿವೆ. ಆದರೆ ಆದಿಮೀನಗೊಂದಿ ಕ್ಷೇತ್ರದ ದೇವಾಲಯವನ್ನು ದೇವಾಲಯ ಅಂದರೆ ತಪ್ಪಾಗುತ್ತದೆ. ಗುಹೆಗೆ ನೈಸರ್ಗಿಕವಾಗಿ ರಚನೆಗೊಂಡ ದೊಡ್ಡ ಬಂಡೆಗಳ ಪೊಳ್ಳಿನಿಂದ ನಿರ್ಮಿತವಾಗಿರುವುದರಿಂದ ಇದನ್ನು ಗುಹಾಲಯ ಎನ್ನುವುದೇ ಸೂಕ್ತ. ಗಿರಿಯ ಮೇಲೆ ಬಂದಾಗ ಪ್ರಾರಂಭದಲ್ಲಿ ಒಂದು ಸಾಧಾರಣ ಮಟ್ಟದ ಮುಖದ್ವಾರವಿದೆ. ಈ ಮುಖದ್ವಾರದಿಂದ ಒಳ ಹೋಗುತ್ತಿದ್ದಂತೆ ಎಡಬದಿಗೆ ಗೋಡೆಗೆ ಅಂಟಿಕೊಂಡು ದೇವರ ಗದ್ದಿಗೆ ಇದೆ. ಅದು ಪೂರ್ವ ದಿಕ್ಕಿಗೆ ಮುಖಮಾಡಿದೆ. ಈ ದೇವರ ಗದ್ದಿಗೆಯಲ್ಲಿ ದಸರಾ ಹಬ್ಬದ ಬನ್ನಿಯ ದಿನ ಶ್ರೀ ಮಾಳಾ -ಮಲ್ಲೇಶ್ವರರ ಉತ್ಸವ ಮೂರ್ತಿಗಳನ್ನು ಕೂಡಿಸಿ ಲಗ್ನದ ಕಾರ್ಯಕ್ರಮವನ್ನು ಇಲ್ಲಿಯೇ ನೆರವೇರಿಸುತ್ತಾರೆ. ಈ ಗದ್ದಿಗೆಯ ಮೇಲೆ ಕಲ್ಲಿನಿಂದ ಕಟ್ಟಿದ ಎರಡು ಕಂಬಗಳು ಇವೆ ವಿನಃ ಬೇರೆ ಯಾವುದೇ ರೀತಿಯ ಕಂಬಗಳು ಈ

ಸುಕನಾಸಿಯಲ್ಲಿ ಇಲ್ಲ. ದಾರಿಯ ಎರಡೂ ಕಡೆ ಅರ್ಧ ಅಡಿ ಎತ್ತರದಲ್ಲಿ ಕಟ್ಟೆಗಳಿವೆ. ನಂತರ ಒಂದು ಚಿಕ್ಕ ಮುಖದ್ವಾರ ಸಿಗುತ್ತದೆ. ಈ ಮುಖದ್ವಾರವನ್ನು ದಾಟಿ ಒಳಗಡೆ ಹೋದಾಗ ದೊಡ್ಡ ಗುಂಡೊಂದು ಗೋಚರಿಸುತ್ತದೆ. ಈ ಗುಂಡಿನ ಪಕ್ಕದಲ್ಲಿ ಇಕ್ಕಟ್ಟಾದ ದಾರಿ. ಆ ದಾರಿಯಲ್ಲಿಯೇ ಹದಿನೈದು - ಇಪ್ಪತ್ತು ಹೆಜ್ಜೆಗಳನ್ನು ಕ್ರಮಿಸಿದರೆ ಗರ್ಭಗುಡಿಯಿರುವುದು ಕಾಣುತ್ತದೆ. ಭಕ್ತರು ಸ್ವಾಮಿಯ ದರ್ಶನಕ್ಕೆ ಗರ್ಭ ಗುಡಿಯ ಒಳಗಡೆಯೇ ಹೋಗುತ್ತಾರೆ. ಒಳಗಡೆ ಸ್ವಲ್ಪ ವಿಶಾಲವಾಗಿ ಏಳರಿಂದ ಹತ್ತು ಜನರು ನಿಲ್ಲಲು ಅವಕಾಶವಿದೆ. ಭಕ್ತರು ಒಳಗಡೆ ಬಂದು ದೇವರ ದರ್ಶನವನ್ನು ಪಡೆದುಕೊಂಡು ಹೋಗುತ್ತಾರೆ. ಗರ್ಭಗುಡಿಯ ದಕ್ಷಿಣ ಭಾಗಕ್ಕೆ ಕೂರ್ಮಾವತಾರದ ರೂಪದಿಂದ ದೇವರು ಗುಂಡಿಗೆ ಒಡಮೂಡಿದ್ದಾನೆ. ಕಮಠ ಎಂದರೆ ಆಮೆ. ಈ ಭೂಮಿಯ ಭಾರವನ್ನು ಹೊತ್ತಿರುವ ಪ್ರಾಣಿ. ಗುಂಡಿಗೆ ಒಡ ಮೂಡಿದ ದೇವರು ಲಿಂಗದ ಆಕಾರದಲ್ಲಿ ಇರದೆ ಆಮೆಯಂತೆ ಉಬ್ಬು ಶಿಲಾಕೃತಿಯಿಂದ ರಚನೆಯಾಗಿದೆ.

ಈ ಉಬ್ಬು ಶಲಾಕೃತಿಗೆ ಅಭಿಮುಖವಾಗಿ ಇತ್ತೀಚೆಗೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನೇ ಇಲ್ಲಿ ಮಲ್ಲಯ್ಯ ದೇವರ ಪ್ರತೀಕವೆಂದು ಪೂಜಿಸಲಾಗುತ್ತಿದೆ. ಇದರ ಮಗ್ಗುಲಲ್ಲಿ ಮಲ್ಲಯ್ಯ ಮತ್ತು ಗಂಗಿ ಮಾಳಮ್ಮರ ಮಧ್ಯಮ ಗಾತ್ರದ ಶಿಲಾ ಮೂರ್ತಿಗಳನ್ನು ಚಿಕ್ಕ ಶಿಲಾ ಪೀಠದ ಮೇಲೆ ಸ್ಥಾಪಿಸಲಾಗಿದೆ. ಪ್ರಸ್ತುತ ಒಡಮೂಡಿದ ಲಿಂಗದ ಜೊತೆಗೆ ಈ ಮೂರ್ತಿಗಳಿಗೂ ಪೂಜಾದಿಗಳು ಯಾವತ್ತೂ ಸಲ್ಲುತ್ತದೆ. ಮೇಲೆ ವರ್ಣಿಸಿದ ಗುಹಾದೇವಾಲಯದ ಪೂರ್ವ ಬದಿಯಲ್ಲಿ ಚಿಕ್ಕ ಬಯಲು ಪ್ರದೇಶವಿದೆ. ಆದರ ದಕ್ಷಿಣ ಭಾಗದಲ್ಲಿ ಮಲ್ಲಯ್ಯ ಮತ್ತು ಗಂಗಿಮಾಳಮ್ಮರ ಸ್ಥಾನಕ್ಕೆ ಸಮಾನಾಂತರವಾಗಿ ತುಪ್ಪದ ಮಾಳವ್ವನ ಗುಡಿಯಿದೆ. ಇಲ್ಲಿ ತುಪ್ಪದ ಮಾಳವ್ವ ಮತ್ತು ಕುರುಬರ ಮಾಳವ್ವರು ಬೇರೆ ಬೇರೆಯಾಗಿಲ್ಲ. ಜಾತ್ರೆಗೆ ಬಂದ ಭಕ್ತರು ಈಕೆಗೆ ತುಪ್ಪ ಹಾಗೂ ಎಣ್ಣೆಗಳಿಂದ ಮಜ್ಜನ ಮಾಡಿಸುತ್ತಾರೆ. ಇತರ ದೇವಾಲಯಗಳಂತೆ ಅಲಂಕಾರಿಕ ಶಿಲ್ಪ ಚಿತ್ರಗಳಾಗಲಿ ತೈಲ ಚಿತ್ರಗಳಾಗಲಿ ಇಲ್ಲಿ ಕಾಣಲು ಸಾಧ್ಯವಿಲ್ಲ.

## ೩.೨. ಲಕ್ಷ್ಮೀಗುಡಿ :-

ಬೆಟ್ಟದಿಂದ ಸ್ವಲ್ಪ ಕೆಳಗಡೆ ಇಳಿದು ಬರುತ್ತಿದ್ದಂತೆ ಎಡಭಾಗದಲ್ಲಿ ಈ ಪುಟ್ಟ ಗುಡಿಯಿದೆ. ಅದು ಪೂರ್ವಕ್ಕೆ ಅಭಿಮುಖವಾಗಿದ್ದು ಒಳಗಡೆ ಲಕ್ಷ್ಮಿಯ ಶಿಲಾ ಮೂರ್ತಿಯಿದೆ. ಶಿಲಾ ವಿಗ್ರಹಕ್ಕೆ ಹೊಂದಿಕೆಯಾಗುವಂತೆ ವಿಸ್ತಾರವಾದ ಪಾಣಿಯಿದ್ದು ಆದರ ಮೇಲೆ ವಿಗ್ರಹ ಸ್ಥಾಪನೆಗೊಂಡಿದೆ. ಚಿಕ್ಕದಾದ ಒಳಪೀಠದ ಮೇಲೆ ಶ್ರೀ ಲಕ್ಷ್ಮಿಯ ವಿಗ್ರಹವಿದೆ. ಬಲಗಾಲನ್ನು ಓರೆಯಾಗಿ ಇಳಿಬಿಟ್ಟು ಕುಳಿತಿರುವ ಭಂಗಿ ಯಿದೆ. ಎಡಕೈ ತೊಡೆಯ ಮೇಲಿದ್ದು ಬಲಗೈ ಅಭಯ ಹಸ್ತ ನೀಡುವ ಭಂಗಿಯಲ್ಲಿದೆ. ಮೇಲಿನ ಎರಡೂ ಕೈಗಳಲ್ಲೂ ಶಂಖ ಚಕ್ರಗಳಿದ್ದು ಅಸ್ಪಷ್ಟವಾಗಿ ಪ್ರಭಾವಳಿಯನ್ನು ಹಿನ್ನೆಲೆಯಾಗಿ ಕೆತ್ತಲಾಗಿದೆ. ಈ ವಿಗ್ರಹದ

ಬಲಭಾಗದಲ್ಲಿ ದೀಪಸ್ತಂಭವಿದೆ. ಭಕ್ತರಿಗೆ ಸದಾ ಅಭಯ ಹಸ್ತ ನೀಡುತ್ತಿರುವ ಲಕ್ಷ್ಮಿ ಮಲ್ಲಯ್ಯನಿಗೆ ನಡೆದು ಕೊಳ್ಳುವ ಪ್ರತಿಯೊಬ್ಬ ಭಕ್ತರಿಗೆ ಹಣವನ್ನು ಕೊಡುತ್ತಾಳೆ ಅನ್ನುವ ನಂಬಿಕೆ ಕ್ಷೇತ್ರದ ಜನತೆಗಿದೆ. ಈ ಕ್ಷೇತ್ರದ ಯಾವ ದೇವಾಲಯಲ್ಲಿಯೂ ಕಾಣಸಿಗದ ಹುತ್ತ ಇಲ್ಲಿಮಾತ್ರ ವಿಶೇಷವಾಗಿ ಕಂಡುಬರುತ್ತದೆ. '' ನಾವು ನಾಲ್ಕೈದು ಲಾರಿ ಸಿಮೆಂಟನ್ನು ಸಂದು ಸಂದಿಗೆ ಮಾಡಿಸಿದೇವೆ ಆದರೂ ಅದು (ಹುತ್ತ) ಪುನಃ ಬರ್‍ತಿದೆ'' ಎಂದು ನೆರಣಿಕೆ ಸುಬ್ರಹ್ಮಣ್ಯಶಾಸ್ತ್ರಿಗಳು ಹೇಳುತ್ತಾರೆ. ಹುತ್ತ ಒಂದು ಸಂಪತ್ತಿನ ಸಂಕೇತ ಅಂತ ಜನಪದರು ನಂಬುತ್ತಾರೆ. ಅದು ಬೆಳೆದಂತೆ ನಮ್ಮ ಶ್ರೀ ಯು ವೃದ್ಧಿಯಾಗುತ್ತೆ ಅನ್ನುವ ಭಾವನೆ. ಒಟ್ಟಾರೆ ಹುತ್ತ ಸಮೃದ್ಧಿಯ ಸಂಕೇತ. ಭಕ್ತರಿಗೆ ವಿಶೇಷವಾಗಿ ಅದೊಂದು ಕೊಡುಗೆಯಾಗಿದೆ.

## ೩.೩. ವೆಂಕಟೇಶ್ವರನ ಗುಡಿ :-

ಲಕ್ಷ್ಮೀಗುಡಿಯಿಂದ ಹಾಗೆ ಬೆಟ್ಟವನ್ನು ಇಳಿದರೆ ದಾರಿಯ ಬಲಭಾಗಕ್ಕೆ ಪಶ್ಚಿಮಾಭಿಮುಖವಾಗಿ ವೆಂಕಟೇಶ್ವರನ ಗುಡಿ ಸಿಗುತ್ತದೆ. ಇದನ್ನು ವಿಷ್ಣುವಿನ ಗುಡಿ ಅಂತಾನೂ ಕರೀತಾರೆ. ಅಪೂರ್ಣಗೊಂಡ ಜಗುಲಿಯ ಮೇಲೆ ವಿಷ್ಣುವಿನ ಉಬ್ಬು ಶಿಲಾ ವಿಗ್ರಹವಿದೆ. ಪೀಠದ ಮೇಲೆ ಶ್ರೀ ವಿಷ್ಣುವು ಬಲಗಾಲನ್ನು ಕೆಳಗೆ ಇಳಿಬಿಟ್ಟು ಎಡಗಾಲನ್ನು ಮಡಿಚಿ ಕುಳಿತಿರುವ ಭಂಗಿಯಿದೆ. ವಿಷ್ಣುವಿಗೆ ಮೇಲಿನ ಎರಡು ಹಸ್ತಗಳಲ್ಲಿ ಶಂಖ ಚಕ್ರಗಳಿದ್ದು, ಉಳಿದೆರಡು ಹಸ್ತಗಳಲ್ಲಿ ಎಡಗೈಯನ್ನು ತೊಡೆಯ ಮೇಲಿರಿಸಿ, ಬಲಗೈಯಲ್ಲಿ ಆಯುಧ ಹಿಡಿದಿದ್ದಾನೆ. ತಲೆಯ ಮೇಲೆ ಕಿರೀಟ, ಕೊರಳಲ್ಲಿ ಹಾರಗಳಿವೆ. ಇಲ್ಲಿ ವಿಷ್ಣುವಿನ ಎಡಭಾಗಕ್ಕೆ ದೀಪಸ್ತಂಭವಿದೆ. ಈ ಕ್ಷೇತ್ರದ ಜೋಯಿಸರು ಅಭಿಪ್ರಾಯ ಪಟ್ಟಿರುವಂತೆ ಅದು ಕಪಿಲಮುನಿ ಗುಡಿ. ವಿಷ್ಣುವಿನ ಒಂದು ಅವತಾರವೇ ಅದು ಆಗಿದೆಯೆಂದು ಹೇಳುತ್ತಾರೆ. ಈ ವಿಷ್ಣು ಯಾಕೆ ಇಲ್ಲಿ ನೆಲೆಸಿರುವನೆಂದರೆ ಶಿವನಿಗೂ ಮಣಿ - ಮಲ್ಲಾಸುರರಿಗೂ ಯುದ್ಧ ನಡೆಯುವಾಗ ಇಬ್ಬರ ಮಧ್ಯ ಸಾಕ್ಷಿಯಾಗಿ ನಿಂತು ಯಾರದು ಗೆಲುವು ಯಾರದು ಸೋಲು ಅಂತ ತಿಳಿಸಲಿಕ್ಕೆ ವಿಷ್ಣು ಮಧ್ಯದಲ್ಲಿ ಸಾಕ್ಷಿಯಾಗಿ ನಿಂತಿದ್ದಾನೆ ಎಂದು ಹೇಳಿರುವರು. ಬಹುತೇಕ ಜನಪದರು ಈ ಗುಡಿಯನ್ನು ವಿಷ್ಣುವಿನ ಗುಡಿ ಯೆಂದು ಕರೆಯದೆ ವೆಂಕಟೇಶ್ವರನ ಗುಡಿ ಎಂತಲೇ ಕರೆಯುತ್ತಾರೆ.

## ೩.೪. ಪಿಂಜಾರ ಕಟ್ಟೆ : -

ಶ್ರೀ ವೆಂಟೇಶ್ವರನ ಗುಡಿಯಿಂದ ಹಾಗೆ ಕೆಳಗೆ ಇಳಿಯುತ್ತಿದ್ದಂತೆ ಒಂದು ಚಿಕ್ಕ ಕಟ್ಟೆಯ ಮೇಲೆ ಪೂರ್ವಕ್ಕೆ ಅಭಿಮುಖವಾಗಿ ಮಂಟಪ ಇರುವುದು ಕಾಣಸಿಗುತ್ತದೆ. ಈ ಪುಟ್ಟ ಗುಡಿ ರಸ್ತೆಯ ಪಕ್ಕದಲ್ಲಿರದೆ ರಸ್ತೆಯ ಮಧ್ಯದಲ್ಲಿದೆ. ಈ ಕ್ಷೇತ್ರದ ಬಹುಪಾಲು ಜನರು ಇದನ್ನು ಪಿಂಜಾರ ಕಟ್ಟೆ ಅಂತನೇ ಕರೆಯುತ್ತಾರೆ. ಆದರೆ ಈ ವಿಗ್ರಹ ಚಿಕ್ಕದಾಗಿದ್ದು ಕೃತಿ ಅಸ್ಪಷ್ಟವಾಗಿ ಕಾಣುತ್ತಿದೆ. ಕಾರಣ ಭಕ್ತರು ಗಿರಿಯನ್ನು ಹತ್ತುವಾಗ ಇಳಿ

ಯುವಾಗ ಸ್ವಾಮಿಯ ಭಂಡಾರವನ್ನು ಆದರ ಮೇಲೆ ಎರಚುವುದರಿಂದ ಅದು ಹಾಗಾಗಿದೆ. ಪ್ರತಿಯೊಂದು ದೇವಾಲಯದ ಪರಧಿಯೊಳಗೆ ಕ್ಷೇತ್ರ ರಕ್ಷಣೆಗಾಗಿ ಕಾಳಭೈರವ ಮೂರ್ತಿ ಇರುವಂತೆ ಇಲ್ಲಿಯೂ ಸಹ ಕಾಳ ಭೈರವನ ಮೂರ್ತಿ ಇದೆ. ಈ ಕ್ಷೇತ್ರದ ಪಿಂಜಾರರು ಮಲ್ಲಯ್ಯನಿಗೆ ಬಹುತೇಕವಾಗಿ ನಡೆದುಕೊಳ್ಳುತ್ತಾರೆ. ಅವರಿಗೆ ಗಿರಿಯ ಮೇಲೆ ಹೋಗಿ ದೇವರ ದರ್ಶನ ಪಡೆಯುವಷ್ಟು ಅವಕಾಶವಿಲ್ಲವಾದ್ದರಿಂದ ದೇವರ ಉತ್ಸವ ಮೂರ್ತಿಗಳು ಬೆಟ್ಟದಿಂದ ಕೆಳಗಿಳಿದು ಬರುವಾಗ ಈ ಸ್ಥಳದಲ್ಲಿ (ಮೊದಲು ಇಲ್ಲಿ ಒಂದು ಕಮಾನು ಇತ್ತಂತೆ ಹಿಂದೂಗಳು ಅದನ್ನು ಕಿತ್ತಿ ಹಾಕಿ ಕಟ್ಟೆಯನ್ನು ನಿರ್ಮಿಸಿದ್ದಾರೆ) ದೇವರನ್ನು ಇಳಿಸಿ ಕಾಯಿ ಒಡೆದು ಮಂಗಳಾರತಿ ಮಾಡುವ ಹಕ್ಕನ್ನು ವ್ಯಕ್ತಪಡಿಸಿದರು. ಆಗ ಹಿಂದೂಗಳು ಅದಕ್ಕೆ ಒಪ್ಪದೆ ಅಷ್ಟರೊಳಗೆ ಬಡಿಗೆ ಆಟದಲ್ಲಿ ಬಹಳ ಅನಾಹುತಗಳಾಗುತ್ತವೆ ಅಂತ ಹೇಳಿರುವರು. ಕಾರಣವಾಗಿ ಪಿಂಜಾರರು ಬರುವ ದೇವ ರಿಗೇನೇ ಈ ಕಟ್ಟೆಯಲ್ಲಿ ಕಾಯಿ ಒಡೆಯುವ ಹಕ್ಕನ್ನು ಹೊಂದಿದ್ದಾರೆ. ಆದ್ದರಿಂದ ಇದನ್ನು ಪಿಂಜಾರಕಟ್ಟೆ ಅಂತಲೇ ಕರೆಯುತ್ತಾರೆ. ಕ್ಷೇತ್ರಪಾಲಕನ ಹಂತದ ವರೆಗೆ ಪಿಂಜಾರರಿಗೆ ಹೋಗಲು ಅವಕಾಶ ಅನ್ನುವುದು ಇದರಿಂದ ತಿಳಿದು ಬರುತ್ತದೆ.

## ೩.೫. ಸಾಕ್ಷಿ ಗಣಪತಿ : -

ಪಿಂಜಾರಕಟ್ಟೆಯ ನಂತರ ಹಾಗೆ ಕೆಳಗಡೆ ಇಳಿದರೆ ಬೆಟ್ಟದ ಇಳಿಭಾಗದ ಕೊನೆಯ ಅಂಚಿನ ಎಡಬದಿಯಲ್ಲಿ ಒಂದು ಇತ್ತೀಚಿನ ದಿನಗಳಲ್ಲಿ ನಿರ್ಮಿಸಲಾದ ಗಣೇಶನ ಗುಡಿಯಿದೆ. ಈ ಗುಡಿ ಪೂರ್ವಕ್ಕೆ ಅಭಿಮುಖವಾಗಿದ್ದು ಇದನ್ನು 'ಸಾಕ್ಷಿ ಗಣಪತಿ' ಅಂತ ಕರೀತಾರೆ. ಸ್ವಾಮಿ ಮಲ್ಲಯ್ಯನ ದರ್ಶನಕ್ಕೆ ಎಷ್ಟು ಜನ ಹೋಗ್ತಾರೆ, ಎಷ್ಟು ಜನ ಬರ್ತಾರೆ, ಭಕ್ತರಿಗೆ ಮಲ್ಲಯ್ಯನು ವರಗಳನ್ನು ಕೊಡಬಹುದು. ಅದಕ್ಕೆ ವಿಘ್ನೇಶ್ವರು ವಿಘ್ನವನ್ನುಂಟು ಮಾಡುತ್ತಾನೆ. ಕಾರಣ ಗಿರಿಯನ್ನು ಹತ್ತುವಾಗ ವಿಘ್ನೇಶ್ವರನನ್ನು ಮೊದಲು ಪೂಜೆ ಮಾಡಿದರೆ ಅವನು ಸರ್ವ ವಿಘ್ನವಿನಾಶಕ, ವರಸಿದ್ಧಿ ವಿನಾಯಕ, ಅಮೃತಕಳಸವಿನಾಯಕ ಅಂತ ಕರೀತಾರೆ. ಈತನ ಸೊಂಡಿಲು ಬಲಭಾಗಲ್ಲಿ ಬಲಮುರಿಯಾಗಿ ಇದೆ. ಆ ಸೊಂಡಿಲಲ್ಲಿ ಅಮೃತ ಕಳಸ ಇರುವುದರಿಂದ ಈತನಿಗೆ ಈ ಹೆಸರು. ಸಾಕ್ಷಿಗಣಪತಿಯನ್ನು ಪೂಜಿಸಿದರೆ ವಿಶೇಷವಾಗಿ ಫಲ ಸಿಗುತ್ತವೆ. ಕಾರಣವಾಗಿ ಭಕ್ತರು ಗಿರಿಯ ಪ್ರಾರಂಭದಲ್ಲಿರುವ ಈತನ ದರ್ಶನ ಮಾಡಿಕೊಂಡೇ ಹತ್ತುತ್ತಾರೆ.

## ೩.೬. ಕಾಡ ಸಿದ್ದಪ್ಪನ ಮಠ : -

ಮುಖ್ಯ ಬಜಾರಕ್ಕೆ ನೇರವಾಗಿ ಪೂರ್ವಕ್ಕೆ ಅಭಿಮುಖವಾಗಿ ಕಾಡ ಸಿದ್ದಪ್ಪನ ಮಠ ಅಂತ ಇದೆ. ಕಾಡ ಸಿದ್ದಪ್ಪ ಅನ್ನುವಾತ ತೆಕ್ಕಲಕೋಟೆಯ ಒಬ್ಬ ಭಕ್ತ. ತೆಕ್ಕಲಕೋಟೆಯ ಜನರೇ ಈ ಮಠವನ್ನು ಕಟ್ಟಿಸಿದ್ದಾರೆಂದು ಇಲ್ಲಿಯ ಜನರು ಹೇಳುತ್ತಾರೆ. ಈ ಮಠ ಮತ್ತು ಸಿಂಹಾಸನ ಕಟ್ಟೆಗಳು ಒಂದು ಕಾಲದಲ್ಲಿ ತುಂಬಾ

ಅಲಂಕೃತವಾಗಿದ್ದವೆಂದು ಹೇಳಬಹುದಾಗಿದೆ. ದಸರಾ ಹಬ್ಬದಲ್ಲಿ ವೀರರು, ಕಂಚಾವೀರರು ಈ ಮಠದಲ್ಲಿಯೇ ಉಳಿದುಕೊಂಡಿರುತ್ತಾರೆ. ದಸರಾ ಅಮಾವಾಸೆಯಾದ ಜಿನೇ ದಿನ ಗಿರಿಯಲ್ಲಿ ಮಲ್ಲಯ್ಯನ ಕಂಕಣವಿರುತ್ತದೆ. ಆದಾದ ನಂತರ ದೇವರು ಈ ಮಠದಲ್ಲಿ ಬಂದು ಸೇರುತ್ತಾನೆ. ಅಂದಿನಿಂದ ಬನ್ನಿ ಯವರೆಗೆ ದೇವರುಗಳು ಈ ಮಠದಲ್ಲಿಯೇ ಇರುವ ಪರಿಪಾಠವಿದೆ.

## ೩.೭. ತೇರಿನ ಮಂಟಪ : -

ಕಾಡು ಸಿದ್ದಪ್ಪನ ಮಠದ ಬಲಭಾಗದಲ್ಲಿ ತೇರಿನ ಮಂಟಪವನ್ನು ನಿರ್ಮಿಸಿದ್ದಾರೆ. ಮಂಟಪ ದಲ್ಲಿಹಳೆಯ ಕಾಲದ ಕೊಡ್ಡದಾದ ಕಲಾತ್ಮಕ ಕೆತ್ತನೆಯ ತೇರೊಂದಿದೆ. ಈ ತೇರನ್ನು ಎರಡು ವರ್ಷಗಳ ಕೆಳಗೆ ಮತ್ತೆ ಹೊಸದಾಗಿ ಕಲಾ ನೈಪುಣ್ಯತೆಯಿಂದ ಕೆತ್ತಿದ್ದಾರೆ. ಜೊತೆಗೆ ವಿಶಾಲವಾದ ಎತ್ತರವಾದ ತೇರಿನ ಮಂಟಪ ವನ್ನು ಇತ್ತೀಚಿಗೆ ನಿರ್ಮಿಸಿದ್ದಾರೆ.

## ೩.೮. ಶಿವಸಾನ ಕಟ್ಟೆ : -

ಗಿರಿಯನ್ನು ಹತ್ತುವ ಎಡಭಾಗದಲ್ಲಿ ಸಿಂಹಾಸನ ಮಂಟಪವನ್ನು ಕಾಣುತ್ತೇವೆ. ಈ ಮಂಟಪದಲ್ಲಿ ಒಂದು ಸಮಾದಿಯ ರೂಪದ ಕಟ್ಟೆಯಿದೆ. ಇದನ್ನು ಶಿವಸಾನಕಟ್ಟೆ ಅಥವಾ ಸಿಂಹಾಸನ ಕಟ್ಟೆ ಎಂದು ಕರೆಯುತ್ತಾರೆ. ವರ್ಷಕ್ಕೊಮ್ಮೆ ನಡೆಯುವ ದಸರಾ ಉತ್ಸವದಲ್ಲಿ ಗಿರಿಯ ಮೇಲಿಂದ ಸ್ವಾಮಿಯ ಉತ್ಸವ ಮೂರ್ತಿಯನ್ನು ತಂದು ಸಿಂಹಾಸನಕಟ್ಟೆಯ ಮೇಲೆ ಕೂಡಿಸುತ್ತಾರೆ. ಆ ದಿನ ಸಾಕ್ಷಾತ್ ಗಿರಿಮಲ್ಲಯ್ಯ ಬಂದು ವಿಶ್ರಾಂತಿ ಪಡೆಯುತ್ತಾನೆ ಅನ್ನುವ ನಂಬಿಕೆ ಜನಪದರಿಗಿದೆ. ಈ ಮಂಟಪದ ಒಳಗೆ ಇರುವ ಕಟ್ಟೆಯ ಬಲಭಾಗದಲ್ಲಿ ಒಡೆಯರ ಗದ್ದಿಗೆಯಿದೆ. ಈ ಗದ್ದಿಗೆಯ ಮೇಲೆ ಒಡೆಯರು ಪ್ರತಿ ಭಾನುವಾರ, ಅಮಾವಾಸೆ ಮತ್ತು ದಸರಾ ಸಮಯದಲ್ಲಿ ನಡೆಯುವ ಉತ್ಸವದ ಪ್ರತಿ ದಿನಗಳಲ್ಲಿ ಕುಳಿತು ಬಂದ ಭಕ್ತರಿಗೆ ಭಂಡಾರ ನೀಡಿ ಆಶೀರ್ವದಿಸುತ್ತಾರೆ. ಅಂದರೆ ಒಡೆಯರಿಗೆ ಇದು ಗುರುಪೀಠವಿದ್ದಂತೆ. ಮಂಟಪದ ಎಡಭಾಗದಲ್ಲಿ ಗದ್ದಿಗೆಗೆ ಹೋಗಲು ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳ ನೇರಕ್ಕೆ ಗೋಡೆಗೆ ಒಂದು ಚಿಕ್ಕ ಗೂಡು ಇದೆ. ಈ ಗೂಡಿನಲ್ಲಿ ವಿಘ್ನೇಶ್ವರನ ಕಲ್ಲಿನ ಮೂರ್ತಿಯಿದೆ. ಒಡೆಯರು ಗದ್ದಿಗೆಗೆ ವಿಘ್ನೇಶ್ವರನಿಗೆ ನಮಸ್ಕರಿಸಿ ಕೂಡುತ್ತಾರೆ. ಬನ್ನಿಯ ದಿನ ಬ್ರಾಹ್ಮಣರು ಮಾಳಾ - ಮಲ್ಲೇಶ್ವರರಿಗೆ ಲಗ್ನದ ಕಾರ್ಯ ನೆರವೇರಿಸುವ ಮುನ್ನ, ಕಂಚಾವೀರ ಶಸ್ತ್ರಪವಾಡ ಮಾಡುವ ಮುನ್ನ, ಕಾರಣಿಕ ಸ್ವಾಮಿ ಕಾರಣಿಕ ಹೇಳುವ ಮುನ್ನ ಈ ವಿನಾಯಕನನ್ನು ಪೂಜಿಸಿಯೇ ಹೋಗುವ ಪರಿಪಾಠವಿದೆ. ಈ ಸಿಂಹಾಸನ ಕಟ್ಟೆಯ ಅಂಗಳದಲ್ಲಿ ಸರಪಳಿ ಪವಾಡ, ವಗ್ಗರಾಟ, ಬಸಿವೇರ ಆಟ, ಗಣಾಚಾರಿಗಳಿಂದ ಒಡಪು ಮುಂತಾದ ಕಾರ್ಯಕ್ರಮಗಳು ಜರು ಗುತ್ತವೆ. ಈ ಬಯಲಿನ ಪಶ್ಚಿಮದಲ್ಲಿ ದೊಡ್ಡದೊಂದು ಬಸುರಿ ಮರವಿತ್ತಂತೆ. ಕರಿಯಾಲವೆಂಬ

ಹೆಸರಿದ್ದರೂ ಈಗ ಯಾವ ಆಲದ ಮರವೂ ಸಮೀಪದಲ್ಲಿ ಕಾಣುವುದಿಲ್ಲ. ಈಗ್ಗೆ ಮೂರು ವರ್ಷಗಳ ಕೆಳಗೆ ಈ ಆಲದ ಮರ ಬನ್ನಿಯ ದಿನ ಮುರಿದು ಬಿದ್ದಿದೆಯಂತೆ. ಬಹಳಷ್ಟು ಜನ ಈ ಮರವನ್ನು ಹತ್ತಿದ್ದರಿಂದ ಈ ಅನಾಹುತ ಸಂಭವಿಸಿರಬಹುದಾಗಿದೆ. ಈ ಘಟನೆಯಲ್ಲಿ ಒಂದಿಬ್ಬರು ಪ್ರಾಣವನ್ನು ಕಳೆದುಕೊಂಡಿರುವರು. ಉಳಿದಂತೆ ಕೆಲವರಿಗೆ ಗಾಯಗಳಾಗಿರುವುದು ಬಿಟ್ಟರೆ ಯಾವುದೇ ರೀತಿಯ ಅನಾಹುತ ಸಂಭವಿಸಿಲ್ಲ.

## ೩.೯. ಕ್ವಾಸಿ ಬದ್ದಯ್ಯನ ಕಟ್ಟೆ : -

ಶಿವಸಾನ ಗದ್ದುಗೆಯ ಎದುರಿಗೆ ಇರುವ ಮೂರು ಅಂತಸ್ತಿನ ನೋಡು ಮಹಡಿಯ ಕೆಳಗೆ ಸುಮಾರು ಮೂರು ಅಡಿ ಎತ್ತರದ, ಆರು ಅಡಿ ಉದ್ದದ ಒಂದು ಆಯತಾಕಾರದ ಕಟ್ಟೆಯಿದೆ. ಅದಕ್ಕೆ ಕ್ವಾಸಿ ಬದ್ದಯ್ಯನ ಕಟ್ಟೆ ಅಂತಾರೆ. ಈ ಕಟ್ಟೆಗೆ ದೀಪರಾದನೆ ಮಾಡಲು ಒಂದು ಚಿಕ್ಕ ಗೂಡು ಇದೆ. ಅದು ಶಿವಸಾನ ಗದ್ದಿಗೆಗೆ ಅಭಿಮುಖವಾಗಿದೆ. ದಸರಾ ಸಮಯದಲ್ಲಿ ಮತ್ತು ಪ್ರತಿ ಅಮಾವಾಸೆಗೆ ಈ ಕಟ್ಟೆಗೆ ದೀಪರಾದನೆ ಮಾಡಿ ಪೂಜೆಯನ್ನು ಸಲ್ಲಿಸುತ್ತಾರೆ. ಈ ಪೂರ್ಣ ಕಾರ್ಯಕ್ರಮದ ಹಕ್ಕು ಆದೋನಿಯ ಹರಿಜನರಿಗಿದೆ.

## ೩.೧೦. ಮದ್ದಲಿ ಗೊರವಯ್ಯನ ಗುಡಿ : -

ಸಿಂಹಾಸನ ಕಟ್ಟೆಯ ಸಾಲಿನಲ್ಲಿ ಪೂರ್ವದಲ್ಲಿಯೇ ಕಾಣಸಿಗುವ ಪುಟ್ಟ ಗುಡಿಮದ್ದಲಿ ಗೊರವರ ಗುಡಿ. ಈ ಗುಡಿಯ ಒಳಗೆ ಮದ್ದಲಿ ಬಾರಿಸುತ್ತಿರುವ ಪುರುಷ ವಿಗ್ರಹವಿದೆ. ಇಡೀ ಶಿಲ್ಪದಲ್ಲಿ ಮದ್ದಲಿ ಗೊರವಯ್ಯನ ಬಲಬದಿಗೆ ಹಾವು ಹೆಡೆ ಎತ್ತಿ ನಿಂತಿರುವ ಚಿತ್ರವನ್ನು ಕೆತ್ತಲಾಗಿದೆ. ಈ ವಿಗ್ರಹದ ಎರಡೂ ಬದಿಯಲ್ಲಿ ಮತ್ತೆ ಶಿಲಾ ಮೂರ್ತಿಗಳಿದ್ದು ಅವು ಸಹ ಮದ್ದಲಿ ಗೊರವಯ್ಯನ ವಿಗ್ರಹಗಳಾಗಿವೆ. ಈ ಮೂರು ವಿಗ್ರಹಗಳನ್ನು ಸಾಧಾರಣ ಮಟ್ಟದ ಪಾಣಿಪೀಠದ ಮೇಲೆ ಸ್ಥಾಪಿಸಲಾಗಿದೆ. ಪೀಠದ ಎಡಭಾಗದಲ್ಲಿ ಪ್ರತ್ಯೇಕವಾಗಿ ಶಿಲಾ ಬಂಡೆಗೆ ಹೆಡೆ ಎತ್ತಿ ನಿಂತಿರುವ ಹಾವಿನ ವಿಗ್ರಹ ಕೆತ್ತಲಾಗಿದೆ. ಗಣಾಚಾರಿಗಳಾದ ಮದ್ದಲಿ ಗೊರವಯ್ಯನವರಿಗೆ ಒಂದು ಪ್ರತ್ಯೇಕವಾದ ಗುಡಿ ಇರಬೇಕೆಂದು ಅವರು ಕಟ್ಟಿಸಿದ್ದಾರೆ. ಗಿರಿಯ ಕೆಳಭಾಗದ ಬಜಾರದಲ್ಲಿ ಕಾಣಸಿಗುವ ಮಂಟಪಗಳು, ಚಿಕ್ಕ ಪುಟ್ಟ ಗುಡಿಗಳನ್ನು ಕಟ್ಟಿಸುವ ಸಮಯದಲ್ಲಿ ಈ ಗುಡಿಯನ್ನು ಕಟ್ಟಿಸಿರಬಹುದು. ಈ ಕ್ಷೇತ್ರದ ಗಣಾಚಾರಿಗಳು ಇಲ್ಲಿಗೆ ಬಂದು ಮದ್ದಲಿ ಗೊರವಯ್ಯನ ಮೂರ್ತಿಗೆ ಪೂಜಿಸಿ ಗಿರಿ ಹತ್ತುತ್ತಾರೆ. ಪ್ರಸ್ತುತ ಈ ಗುಡಿಯಲ್ಲಿ ಭಾನುವಾರ, ಅಮಾವಾಸೆ, ಮತ್ತು ಬನ್ನಿ ಉತ್ಸವದಲ್ಲಿ ನಡೆಸುವ ಪೂಜೆಯ ಜವಾಬ್ದಾರಿ ನೆರಣಿಕೆ ಗಣಾಚಾರಿಗಳಿಗಿದೆ.

## ೩.೧೧. ನಾಗ ವೀರನ ಗುಡಿ : -

ಮದ್ದಲಿ ಗೊರವರ ಗುಡಿಯ ಎದುರಿಗೆ (ರಸ್ತೆಯನ್ನು ದಾಟಿ) ಕಾಣಸಿಗುವ ಗುಡಿ ನಾಗವೀರನ ಅಥವಾ ನಾಗಲಿಂಗನ ಗುಡಿ. ಇಲ್ಲಿ ಒರಟು ಬಂಡೆಗೆ ಹೆಡೆ ಎತ್ತಿ ನಿಂತಿರುವ ನಾಗರಹಾವನ್ನು ಕೆತ್ತಲಾಗಿದೆ. ಬಲಭಾಗದಲ್ಲಿ ಸುಮಾರು ಒಂದುವರೆ ಅಡಿ ಎತ್ತರದ ಕಲ್ಲೊಂದರಲ್ಲಿ ಜೋಡಿನಾಗರ, ಮತ್ತೊಂದರಲ್ಲಿ ಪ್ರತ್ಯೇಕವಾದ ಹೆಡೆ ಎತ್ತಿರುವ ನಾಗರವನ್ನು ಕೆತ್ತಲಾಗಿದೆ. ಈ ಎರಡು ಪುಟ್ಟ ಶಿಲೆಗಳು ಕಲಾತ್ಮಕವಾಗಿರದೆ, ಸಾಧಾರಣಮಟ್ಟದಲ್ಲಿವೆ. ಈ ಮೂರು ಶಿಲಾ ಬಂಡೆಗಳ ವಿನ್ಯಾಸ ಚೊಕ್ಕವಾಗಿರದೆ, ಯಾವುದೇ ಪೀಠದ ವ್ಯವಸ್ಥೆ ಇಲ್ಲವಾಗಿದೆ. ಈ ನಾಗದೇವರನ್ನು ಪೂಜಿಸುವ ಹಾಗೂ ಬನ್ನಿಯ ಉತ್ಸವದಲ್ಲಿ ಈ ಗುಡಿಯಲ್ಲಿಯೇ ಉಳಿದುಕೊಳ್ಳುವ ಅಧಿಕಾರ ನೆರಣಿಕೆ ಬಾರೀಕರಿಗಿದೆ. ಜಾತ್ರೆಯಲ್ಲಿ ಪಂಜುಗಳಿಗೆ ಎಣ್ಣೆ ಹಾಕುವ ಕಾಯಕ ಇವರದಾಗಿದೆ.

## ೩.೧೨. ಮಡಿವಾಳರ ಗುಡಿ :-

ನಾಗವೀರನ ಗುಡಿಯ ಬಲಭಾಗದಲ್ಲಿ ಮಡಿವಾಳರ ಗುಡಿ ಇದೆ. ಇಲ್ಲಿ ಮಡಿವಾಳ ಮಾಚಿದೇವ ತನ್ನ ಪತ್ನಿ ಸಮೇತನಾಗಿರುವ ಚಿತ್ರದ ಶಿಲಾ ಬಂಡೆ ಇದೆ. ಮೂರ್ತಿಗಳನ್ನು ಕಲಾ ನೈಪುಣ್ಯತೆಯಲ್ಲಿ ಕೆತ್ತಲಾಗಿದೆ. ಶಿಲಾ ಬಂಡೆ ವಿಗ್ರಹಗಳಿಗೆ ತಕ್ಕಂತೆ ಹೊಂದಿಕೆಯಾಗಿದ್ದು, ಬಂಡೆಗೆ ಯಾವುದೇ ರೀತಿಯ ಕುಸುರಿ ಕೆಲಸ ಕಾಣಸಿಗದು. ಈ ಪುಟ್ಟ ಗುಡಿಗೆ ಹೊಂದಿಕೆಯಾಗುವಷ್ಟು ಎರಡು ಅಡಿ ಕಟ್ಟೆಯ ಮೇಲೆ ಈ ಶಿಲಾ ಬಂಡೆಯನ್ನು ಸ್ಥಾಪಿಸಲಾಗಿದೆ. ಸುಮಾರು ಅರ್ಧ ಅಡಿ ಎತ್ತರದಲ್ಲಿ ಕಟ್ಟೆಗೆ ಹೊಂದಿಕೆಯಾಗುವಂತೆ ಮೆಟ್ಟಿಲು ಮಾಡಿದ್ದಾರೆ. ಈ ಗುಡಿಯನ್ನು ೧೯೭೩ರಲ್ಲಿ ಕಟ್ಟಿಸಲು ಪ್ರಾರಂಭಿಸಿ, ೧೯೮೬ರಲ್ಲಿ ದೇವರನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ದಸರಾ ಸಮಯದಲ್ಲಿ ಪಂಜು ಹಿಡಿಯುವ ಕಾಯಕ ಇವರದಾಗಿರುವುದರಿಂದ ತಮ್ಮದೇ ಆದ ಒಂದು ನೆಲೆ ಇರಬೇಕೆಂದು ಈ ಗುಡಿಯನ್ನು ಕಟ್ಟಿಸಿಕೊಂಡಿದ್ದಾರೆ. ಗುಡಿಯ ಮುಂಭಾಗದಲ್ಲಿ ಇನ್ನೂ ಕಟ್ಟಡದ ಕೆಲಸ ಅರ್ಧಕ್ಕೆ ನಿಂತಿದೆ. ಪ್ರಸ್ತುತ ನೆರಣಿಕೆ ಗ್ರಾಮದ ಮಡಿವಾಳರು ಮಾಚಿದೇವನನ್ನು ಪೂಜಿಸುವ ಹಕ್ಕನ್ನು ಪಡೆದುಕೊಂಡಿರುವರು. ಜಾತ್ರೆಯಲ್ಲಿ ಬಹುಪಾಲು ಮಡಿವಾಳರು ಈ ಗುಡಿಯ ವ್ಯಾಪ್ತಿಯಲ್ಲಿಯೇ ಉಳಿದುಕೊಳ್ಳುವ ಪರಿಪಾಠವಿದೆ.

## ೩.೧೩. ಆಸ್ಪರಸ್ವಾಮಿ ಮಠ :-

ಗಿರಿಗೆ ಹೋಗುವಾಗ ಎಡಗಡೆಗೆ ಮಧ್ಯ ಬಜಾರದಲ್ಲಿ ಒಂದು ಭದ್ರವಾದ ಕಟ್ಟಡವಿದೆ. ಅದನ್ನು 'ಆಸ್ಪರಸ್ವಾಮಿ ಮಠ' ಎಂದು ಕರೆಯುವರು. ಈ ಮಠದ್ದೇ ಒಂದು ಪ್ರತ್ಯೇಕ ಐತಿಹ್ಯವಿದೆ. ಸದ್ಯ ಇದರಲ್ಲಿ ಯಾವ ಸ್ವಾಮಿಯೂ ಇಲ್ಲ. ಆದರೆ ಇದರ ಒಳಗಡೆ ಆಸ್ಪರ ಸ್ವಾಮಿಯ ಮೂರ್ತಿ ಇದೆ. ಒಂದು ಕಾಲದಲ್ಲಿ ಈ ಮಠದಲ್ಲಿ ವಾಸವಾಗಿದ್ದ ಆಸ್ಪರಸ್ವಾಮಿ ದೇಶಾಂತರಕ್ಕೆ ಹೋಗಿದ್ದನಂತೆ. ಆತ ಒಂದಿಲ್ಲೊಂದು ದಿನ ಇಲ್ಲಿಗೆ ತಿರುಗಿ ಬರುತ್ತಾನೆ ಎಂಬುದು ಇಲ್ಲಿನ ಜನರ ಭಾವನೆ. ಪ್ರತಿ ಅಮವಾಸೆಗೆ ಭಕ್ತರಿಗೆ ದಾಸೋಹವು ಈ ಮಠದಲ್ಲಿಯೇ ನಡೆಯುತ್ತದೆ.

ಈ ಬಜಾರದ ಎಡಬದಿಗಳಲ್ಲಿ ಹಳೆಯ ಮನೆ, ಗುಡಿ ಗುಂಡಾಂತರಗಳ ಅವಶೇಷಗಳು ತುಂಬಾ ಇವೆ. ಒಂದೆರಡು ಮನೆಗಳಲ್ಲಿ ಈಗಲೂ ಜನ ವಾಸಿಸುತ್ತಾರೆ. ದೇವಾಲಯದ ಪೂಜಾರಿಗಳಾದ ಜೀರ್‍ರರು ಇಲ್ಲಿಯೇ ವಾಸಿಸುತ್ತಾರೆ. ಒಡೆಯರು ಬೆಟ್ಟಕ್ಕೆ ಬಂದಾಗ ಅವರು ಉಳಿದುಕೊಳ್ಳುವುದಕ್ಕೆಂದೇ ಸಿಂಹಾಸನ ಕಟ್ಟೆಯ ಎಡ ಭಾಗದಲ್ಲಿ ಅವರಿಗಾಗಿ ಪ್ರತ್ಯೇಕ ಮನೆಯೊಂದಿದೆ. ಟ್ರಸ್ಟ್ ಮುಖಂಡರಿಗೆ, ಬ್ರಾಹ್ಮಣರಿಗೆ ಹೀಗೆ ಪ್ರತ್ಯೇಕವಾಗಿ ಅವರವರಿಗೆ ಸಂಬಂಧಪಟ್ಟಂತಹ ಮನೆಗಳು ಇರುವುದು ಕಾಣುತ್ತೇವೆ.

## ೩.೧೪. ಎದುರು ಬಸವನ ಗುಡಿ :-

ಬಜಾರಕ್ಕೆ ನೇರವಾಗಿ ಪೂರ್ವಬದಿಗೆ ಸಾಧಾರಣ ಮಟ್ಟದ ದೇವಾಲಯವೊಂದಿದೆ. ಇದನ್ನು ಎದುರು ಬಸವನ ಗುಡಿ ಎಂದು ಕರೆಯುತ್ತಾರೆ. ಈ ಗುಡಿ ಪಶ್ಚಿಮಾಭಿಮುಖವಾಗಿದೆ. ದಸರಾ ಉತ್ಸವದಲ್ಲಿ ಜೀರ್‍ರರು ಕಾರಣಿಕ ಹೇಳುವುದು ಈ ಗುಡಿಯ ಮೇಲೆಯೇ. ಆದ್ದರಿಂದ ಈ ಕ್ಷೇತ್ರದ ಜನತೆಗೆ ಕಾರಣಿಕ ಅಂದರೆ ಸಾಕು ಈ ಎದುರು ಬಸವನ ಗುಡಿ ನೆನಪಾಗದೆ ಇರದು.

## ೩.೧೫. ಹೊನ್ನಿಕೆರೆ ಕಟ್ಟೆ :-

ಮೀನಗೊಂದಿ ಕ್ಷೇತ್ರದ ಪೂರ್ವಕ್ಕೆ ಒಂದು ಸುಂದರವಾದ ಕೆರೆಯಿದೆ. ಇದಕ್ಕೆ ಹೊನ್ನಿಕೆರೆ, ವಣಿಕೇರಿ, ಒಣಿಕೇರ ಕಟ್ಟೆ ಎಂಬ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ವಾಸ್ತವವಾಗಿ ಇದು ಹೊನ್ನಿಯ ಕೆರೆ. ಹೊನ್ನಿ ಎಂಬಾಕೆ ಒಂದು ಕೆರೆಯನ್ನು ಕಟ್ಟಿಸಿ ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಂಡಳು ಎಂದು ಸುತ್ತಮುತ್ತಲಿನ ಹಳ್ಳಿಗಳ ಜನರ ಅಭಿಪ್ರಾಯವಾಗಿದೆ. ಇದಕ್ಕೆ ಸಂಬಂಧಿಸಿದ ಯಾವುದೇ ಚಾರಿತ್ರಿಕ ದಾಖಲೆಗಳಿಲ್ಲ. ದಸರಾ ಅಮಾವಾಸೆಯಾದ ೫ನೇ ದಿನಕ್ಕೆ ಮಲ್ಲಯ್ಯನಿಗೆ ಗಿರಿಯಲ್ಲಿ ಕಂಕಣವಿರುತ್ತದೆ. ಕಂಕಣ ಆದ ನಂತರ ಸ್ವಾಮಿ

ಮಲ್ಲಯ್ಯ ಈ ಕಟ್ಟೆಯಲ್ಲಿ ಕುಳಿತು ವಿಶ್ರಮಿಸುತ್ತಾನೆ. ಬನ್ನಿಯ ದಿನ ನಡೆಯುವ ವಿಶೇಷವಾದ ಬಡಿಗೆ ಆಟ ಈ ಕಟ್ಟೆಯ ಮೇಲೆ (ಕೆರೆಯ ದಂಡೆಯ ದಿಬ್ಬದ ಮೇಲೆ) ನಡೆಯುತ್ತದೆ. ಈ ಕೆರೆಯ ದಂಡೆಗೆ ಪಂಚಲಿಂಗೇಶ್ವರ ಎನ್ನುವ ಗುಡಿ ಇದ್ದು, ಅದು ಪೂರ್ವಕ್ಕೆ ಅಭಿಮುಖವಾಗಿದೆ.

## ೩.೧೬. ಆನೆಬಾವಿ :-

ಮೀನಗೊಂದಿಯ ಪೂರ್ವಕ್ಕಿರುವ ಒಂದು ಸುಂದರವಾದ ಬಾವಿಯಿದು. ಬಾವಿಯ ಆರಂಭಕ್ಕೆ ಎರಡು ಬೃಹತ್ ಕಲ್ಲಿನ ಆನೆಗಳನ್ನು ಇಕ್ಕೆಲಗಳಲ್ಲಿ ನಿರ್ಮಿಸಲಾಗಿದೆ. ವಾಸ್ತುಶಾಸ್ತ್ರದ ದೃಷ್ಟಿಯಿಂದ ಬಹು ಆಕರ್ಷಕವಾದ ಕಟ್ಟಡವನ್ನು ಈ ಬಾವಿ ಹೊಂದಿದೆ. ಬಾವಿಯ ಒಳಗಡೆ ಅಲ್ಲಲ್ಲಿ ಬಂಡೆಗಳಿವೆ. ಉಬ್ಬು ಶಿಲ್ಪಗಳಿವೆ. ಜೊತೆಗೆ ಒಂದು ಶಾಸನವೂ ಇದೆ ಎಂದು ಹೇಳಲಾಗುತ್ತದೆ. ಈಗ ಅದು ನೀರಿನಿಂದ ಆವೃತ್ತವಾಗಿದೆ ಎಂದು ಸಹ ಹೇಳಲಾಗುತ್ತದೆ. ಈ ಬಾವಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ; ನವಾಬರ ಕಾಲದಲ್ಲಿ ಆದವಾನಿಯ ನವಾಬರು ಆನೆಯ ಮೇಲೆ ವಿಹಾರಕ್ಕೆಂದು ಬರುತ್ತಿದ್ದರಂತೆ. ಒಮ್ಮೆ ಆನೆಗಳು ಬಾವಿಯಲ್ಲಿ ನೀರು ಕುಡಿಯುವಾಗ ನವಾಬನು ಮಲ್ಲಯ್ಯನನ್ನು ನಿಂದಿಸಿದನಂತೆ. ತಿರುಗಿ ನೋಡುವುದರಲ್ಲಿ ಆ ಆನೆಗಳೆರಡು ಶಿಲೆಗಳಾಗಿ ನಿಂತಿದ್ದವಂತೆ. ಈ ಕಾರಣದಿಂದ ಈ ಬಾವಿಯನ್ನು ಆನೆಬಾವಿ ಎಂದು ಕರೆಯುತ್ತಾರೆ ಎಂಬ ಪ್ರತೀತಿ ಇದೆ. ಆಲೂರಿನ ತಾಲೂಕಿನಾದ್ಯಂತ ಜನರ ಬಾಯಲ್ಲಿ ಈ ಐತಿಹ್ಯವಿದೆ.

## ೩.೧೭. ಮುಳ್ಳಿನ ಬಂಡೆ :-

ಗಿರಿಯಿಂದ ಸುಮಾರು ಒಂದು ಕಿಲೋಮೀಟರ್ ಅಂತರದಲ್ಲಿ ಆಲೂರಿನ ಮಾರ್ಗವಾಗಿ ಅಡವಿಯೊಳಗೆ ಹೋದರೆ ಮುಳ್ಳಿನ ಬಂಡೆ ಎನ್ನುವ ಒಂದು ಪ್ರತ್ಯೇಕ ಸ್ಥಳ ಸಿಗುತ್ತದೆ. ಜಾತ್ರೆಯ ಸಮಯದಲ್ಲಿ ಭಕ್ತರು ಈ ಸ್ಥಳಕ್ಕೆ ಹೋಗಲು ಅನುಕೂಲವಾಗುವಂತೆ ದಾರಿಯುದ್ದಕ್ಕೂ ಇರುವ ಚಿಕ್ಕಪುಟ್ಟ ಬಂಡೆ,ಗುಂಡುಗಳಿಗೆ ದಾರಿಯ ಗುರುತಾಗಿ ಸುಣ್ಣವನ್ನು ಬಳಿದಿದ್ದಾರೆ. ಇದು ಬಂಡೆಗಲ್ಲಿನ ಪ್ರದೇಶ. ಇಲ್ಲಿ ಬನ್ನಿಯ ದಿನ ರಾತ್ರಿ ಸ್ವಾಮಿ ಸುಮಾರು ೩ಗಂಟೆಗೆ ದಾರಿಯಲ್ಲಿ ಬರುವಾಗ ಮುಳ್ಳನ್ನು ತುಳಿದಿರುತ್ತನಂತೆ. ಮಲ್ಲಯ್ಯ ಈ ಸ್ಥಳದಲ್ಲಿಯೇ ಕುಳಿತುಕೊಂಡು ಮುಳ್ಳನ್ನು ಕಿತ್ತುಕೊಂಡು ಸ್ವಲ್ಪಹೊತ್ತು ವಿಶ್ರಮಿಸಿ ಮುಂದೆ ಸಾಗುತ್ತಾನೆ. ಆದಕ್ಕಾಗಿ ಇದನ್ನು ಮುಳ್ಳಿನ ಬಂಡೆ ಎಂದು ಕರೆಯುವ ವಾಡಿಕೆ ಇದೆ.

## ೩.೧೮. ರಾಕ್ಷಸ ಪಡೆ :-

ಪಾದಾಲಗಟ್ಟೆಯಿಂದ ಹಾಗೆ ಅಡವಿಯ ಮಾರ್ಗವಾಗಿ ಒಂದು ಕಿಲೋಮೀಟರ್ ಕ್ರಮಿಸಿದರೆ, ದೊಡ್ಡ ಬಂಡೆಗಳಿಂದ ಕೂಡಿದ ( ಎತ್ತರವಾದ ಬಂಡೆಗಳು) ಚಿಕ್ಕ ಬೆಟ್ಟ ಬರುತ್ತದೆ. ಇಲ್ಲಿ ದೊಡ್ಡ ಎರಡು ಬಂಡೆಗಳ ಸಂದಿಯಲ್ಲಿ ಗುಹೆ ಇರುವ ಚಹರೆ ಗೋಚರಿಸುತ್ತದೆ. ಬಂಡೆಯ ಮೇಲೆ ರಾಕ್ಷಸನ ಕೆಂಪು ವರ್ಣದ ಚಿತ್ರವಿದ್ದು, ಅದನ್ನು ಇತ್ತೀಚಿನ ದಿನಗಳಲ್ಲಿ ಗುರುತಿಗೆಂದು ಬಿಡಿಸಿದಂತೆ ತೋರುತ್ತದೆ. ಈ ಗವಿಯಲ್ಲಿ ಮಣಿ - ಮಲ್ಲಾಸುರರು ವಾಸಿಸುತ್ತಿದ್ದರೆಂದು ಇಲ್ಲಿನ ಜನಪದರ ನಂಬಿಕೆ. ಇದನ್ನೇ ಜನರು ರಾಕ್ಷಸರು ವಾಸಿಸುವ ಪಡೆ ಎಂದೂ ಸಹ ಕರೆಯುತ್ತಾರೆ. ರಾಕ್ಷಸರು ವಾಸಿಸುವ ಪಡೆಯಾದ್ದರಿಂದ ರಾಕ್ಷಸ ಪಡೆ, ರಕ್ಷ ಪಡೆ, ರಕ್ತಪಡೆ ಎಂದು ಮುಂತಾಗಿ ಕರೆಯುತ್ತಾರೆ. ಕಾರಣ ಮಲ್ಲಯ್ಯ - ಮಾಳಮ್ಮನ ಉತ್ಸವ ಮೂರ್ತಿಗಳ ಸಮ್ಮುಖದಲ್ಲಿ ಬನ್ನಿಯ ದಿನ ಕೆಂಚಾವೀರನು ರಾಕ್ಷಸರನ್ನು ತಣಿಸುವ ಸಲುವಾಗಿ ಶಸ್ತ್ರ ಪವಾಡ ಮಾಡಿ ಐದು ಹನಿ ರಕ್ತವನ್ನು ನೀಡುತ್ತಾನೆ. ಆದ್ದರಿಂದ ಇದಕ್ಕೆ ಈ ಹೆಸರು ಬಂದಿದೆ.

## ೩.೧೯. ಬನ್ನಿಯ ಮರ :-

ರಾಕ್ಷಸ ಪಡೆಯಿಂದ ಹಿಂತಿರುಗಿ ಬರುವಾಗ ದಾರಿಯಲ್ಲಿ ಬನ್ನಿಯ ಮರ ಸಿಗುತ್ತದೆ. ಈ ಮರಕ್ಕೆ ತಕ್ಕುದಾದ ಒಂದು ಕಟ್ಟೆಯನ್ನು ನಿರ್ಮಿಸಲಾಗಿದೆ. ರಾಕ್ಷಸಪಡೆಯಲ್ಲಿ ಕಂಚಾವೀರನ ಶಸ್ತ್ರ ಪವಾಡ ಮುಗಿದ ನಂತರ ಶಮೀ ವೃಕ್ಷದ ಪತ್ರಿಯಿಂದ ಬನ್ನಿ ಮುಡಿಯುವ ಕಾರ್ಯಕ್ರಮ ನೆರವೇರುತ್ತದೆ. ನೆರಣಿಕೆಯ ಮುಖಂಡರು, ಪುರೋಹಿತರು, ಭಕ್ತರು ಬನ್ನಿಯನ್ನು ಮುಡಿಯುತ್ತಾರೆ. ಇದೇ ಸಮಯದಲ್ಲಿ ಕಂಚಾವೀರನಿಗೆ ಶಸ್ತ್ರ ಪವಾಡ ಮಾಡಿದುದರ ಹಿನ್ನೆಲೆಯಾಗಿ ಸನ್ಮಾನವಿರುತ್ತದೆ. ಯಾರೂ ಶಮೀ ಪತ್ರವನ್ನು ಸ್ವತಂತ್ರವಾಗಿ ಪಡೆದುಕೊಳ್ಳುವ ಹಾಗಿಲ್ಲ. ಜ್ಯೋತಿಷ್ಯರಿಂದ, ಪುರೋಹಿತರಿಂದ, ಸಂಭಾವನಾ ರಕ್ಷೆಗಳನ್ನೆಲ್ಲಾ ಕೊಟ್ಟು ಶಮಿ ಪತ್ರವನ್ನು ಸ್ವೀಕಾರ ಮಾಡುತ್ತಾರೆ.

## ೩.೨೦. ಮಾದರ ಗುಡಿ :-

ಬಜಾರು ಪ್ರದೇಶದಿಂದ ಉತ್ತರಕ್ಕೆ ಸಾಗಿದರೆ ಮತ್ತೆರಡು ಪ್ರತ್ಯೇಕ ಗುಡಿಗಳು ಕಾಣಸಿಗುತ್ತವೆ. ದಾರಿಯ ಪಕ್ಕದಲ್ಲಿರುವುದು ಬ್ಯಾಗಾರರ ಗುಡಿ. ಮತ್ತೊಂದು ದಾರಿಯಿಂದ ಸ್ವಲ್ಪ ಒಳಭಾಗದಲ್ಲಿದೆ. ಅದು ಮಾದರ ಮಲ್ಲಯ್ಯನ ಗುಡಿ. ಈ ಎರಡೂ ಗುಡಿಗಳು ನೆರಣಿಕೆ ಗ್ರಾಮಕ್ಕೆ ಹೋಗುವ ದಾರಿಯಲ್ಲಿವೆ. ಮಾದರ ಮಲ್ಲಯ್ಯನ ಗುಡಿಯನ್ನು ಮಲ್ಲಯ್ಯ ದೇವರಿಗೆ ಈ ಭಾಗದ ಮಾದಿಗರು ಮಾತ್ರ ನಡೆದುಕೊಳ್ಳುತ್ತಾರೆ. ವಿಶೇಷವಾಗಿ ಜಾತ್ರೆಗೆ ಬರುವ ಬಸಿವೆಯರು ಇಲ್ಲಿಯೇ ಉಳಿದುಕೊಳ್ಳುತ್ತಾರೆ. ಇದು ಮುಖ್ಯ ದೇವಾಲಯದ ಪ್ರತಿರೂಪ. ಮುಖ್ಯ ದೇವಾಲಯಕ್ಕೆ ಈ ಹರಿಜನರಿಗೆ ಪ್ರವೇಶವಿಲ್ಲ. ಎಂತಲೇ ಇಲ್ಲೊಂದು ಪ್ರತ್ಯೇಕ ದೇವಾಲಯ ಅವರಿಗಾಗಿದೆ.

## ೩.೨೧. ಗುಹೆಗಳು :-

ಈ ಬೆಟ್ಟದ ಪೂರ್ವಭಾಗದ ಕೊನೆಯಂಚಿನಲ್ಲಿ ಹೊನ್ನಿ ಕೆರೆಗೆ ತಾಕಿದಂತೆ ಊರ ಅವಶೇಷಗಳು ಹರಡಿವೆ. ಅದರ ಪಶ್ಚಿಮ ಬದಿಯಲ್ಲಿ ಸ್ಮಶಾನವಿದ್ದು, ಹಲವಾರು ಮುಸಲ್ಮಾನ ಗೋರಿಗಳು ಈಗಲೂ ಸುಸ್ಥಿತಿಯಲ್ಲಿವೆ. ಈ ಹಾಳೂರಿಗೆ ಹೊಂದಿಕೊಂಡು ಬೆಟ್ಟದ ಹಿಂದೆ ಅಂದರೆ ಗಿರಿಯ ಮೇಲೆ ಸ್ವಾಮಿ ಮಲ್ಲೇಶ್ವರ ಇರುವ ಹಿಂಭಾಗದಲ್ಲಿ ಸುಲ್ತಾನರ ಅಥವಾ ನವಾಬರ ಕಾಲದ ಕೋಟೆಯ ಮಾದರಿಯ ಕಟ್ಟಡಗಳಿವೆ. ಆ ಕಟ್ಟಡಗಳ ಮುಂಭಾಗ ಕಮಾನಿನ ಆಕೃತಿಯಲ್ಲಿ ನೋಡಲು ಮನೋಹರವಾಗಿದ್ದು, ಕಟ್ಟಡದ ಹಿಂಭಾಗ ಬಹುತೇಕ ಕಡೆ ಬಿದ್ದು ಹೋಗಿದೆ. ಅಲ್ಲಲ್ಲಿ ಮದ್ದಿನ ಮನೆಗಳ (ಮದ್ದು ಗುಂಡುಗಳನ್ನು ಸಂಗ್ರಹಿಸಿಡುವ ಕೊಠಡಿ) ಅವಶೇಷಗಳು ಸಿಗುತ್ತವೆ. ಹಿಂಬದಿಯಿಂದ ಗಿರಿಯ ಮೇಲೆ ಹೋದಂತೆ ಅಲ್ಲಲ್ಲಿ ಕೆಲ ಗುಹೆಗಳು ಕಾಣಸಿಗುತ್ತವೆ. ಒಂದು ಮುಖ್ಯ ಗುಹೆಯನ್ನು ಸ್ವತಃ ವೀಕ್ಷಿಸಲು ನಾನು ನನ್ನ ಗೆಳೆಯರ ಜೊತೆಗೂಡಿ ಒಳಗಡೆ ಹೋದಾಗ ಸುಮಾರು ಧೂರ ಕ್ರಮಿಸಿದಾಗ ಸ್ವಲ್ಪ ಬಯಲು ಜಾಗದಲ್ಲಿ ಸಮಾದಿ ಮಾದರಿಯ ಕಟ್ಟೆ ಇರುವುದು ಕಾಣಸಿಗುತ್ತದೆ. ದೀಪ ಹಚ್ಚಿಡಲು ಬೇಕಾದ ಒಂದು ಸೂಕ್ತವಾದ ಗೂಡನ್ನು ಸಹ ಕಟ್ಟಿದ್ದಾರೆ. ಈ ಮೊದಲು ಕಪಿಲ ಮುನಿಗಳು ಈ ಗುಹೆಯಲ್ಲಿ ತಪಸ್ಸು ಮಾಡುತ್ತಿದ್ದರೆಂದು ಕ್ಷೇತ್ರದ ಹಲವಾರು ಜನರು ಹೇಳುತ್ತಾರೆ. (ಏಕಾಂತ ಬಯಸಿ ಬಂದವರಿಗೆ, ತಪಸ್ಸಿಗಳಿಗೆ ಯಾವುದೇ ಅಡಚಣೆಯಾಗದಂತೆ ಇರುವ ಸೂಕ್ತ ಪ್ರದೇಶ ಎನ್ನುವುದಂತು ಖಚಿತ). ಈ ರೀತಿಯ ಹಲವಾರು ಅಭಿಪ್ರಾಯಗಳು ಇವೆ. ಆದರೆ ಈ ಮೊದಲು ಇದು ಒಂದು ಚಿಕ್ಕ ಬಂಡೆಯ ಹಾಗೆ ಇದ್ದಿರಬೇಕು. ಆ ಬಂಡೆಗೆ ಇತ್ತೀಚಿಗೆ ಸುಮಾರು ಒಂದು ತಲೆಮಾರಿನ ಹಿಂದೆ ಸಮಾಧಿ ಮಾದರಿಯ ಈ ಕಟ್ಟೆಯನ್ನು ನಿರ್ಮಿಸಿದಂತಿದೆ. ಇಲ್ಲಿಗೆ ಸೂರ್ಯನ ಯಾವುದೇ ಕಿರಣಗಳಾಗಲಿ, ಬೆಳಕಾಗಲಿ ಸಹ ಬೀಳುವ ಸಾಧ್ಯತೆಗಳಿಲ್ಲ. ಬದಲಿಗೆ ಪೂರ್ತಿ ಕತ್ತಲಾವರಿಸಿದೆ. ಈ ಗುಹೆಗೆ ನಾನಾ ಕಡೆಗಳಿಂದ ದಾರಿಗಳಿವೆ. ಜೊತೆಗೆ ಅಲ್ಲಲ್ಲಿ ಜಲದ ನಿಕ್ಷೇಪಗಳು ಇವೆ. ಈ ಗುಹೆಯ ಪ್ರಾರಂಭದಲ್ಲಿ ಗುಂಡಿನ ಮಾಲೆ ಈ ರೀತಿಯ ಬರಹವಿದೆ. ಅದು 'ಮಲ್ಲಂಗ ಬಾಬಾ' ಎಂದಿದೆ. ಈ ಬರಹವನ್ನು ನೋಡಿದರೆ ಮುಸಲ್ಮಾನರು ಇತ್ತೀಚಿನ ದಿನಗಳಲ್ಲಿ ಈ ರೀತಿ ಬರೆದಂತೆ ಕಾಣುತ್ತದೆ.

ಒಟ್ಟಾರೆ ಈ ಗುಹೆಯನ್ನು ಅವಲೋಕನ ಮಾಡಿದಾಗ ಮುಸಲ್ಮಾನರು ಕ್ಷೇತ್ರದಲ್ಲಿ ತಮ್ಮ ಪ್ರಭಾವ ವನ್ನು ಏರುವ ಸಲುವಾಗಿ ಗುಂಡಿಗೆ ಈ ರೀತಿಯ ಬರಹ ಬರೆದಿರಬೇಕು. ಗುಹೆಯ ಒಳಗಡೆ ಕಟ್ಟೆಯನ್ನು ನಿರ್ಮಿಸಿ (ಅದು ಗದ್ದಿಗೆಯ ರೂಪದಲ್ಲಿದೆ). ದೀಪವನ್ನು ಇಡಲು ಮಾಡಿರುವ ವ್ಯವಸ್ಥೆ ಬಹುತೇಕ ಹಿಂದೂಗಳದೇ ಆ ಕೆಲಸ ಆಗಿದೆ. ಮುಸಲ್ಮಾನರು ತಪಸ್ಸು ಮಾಡುತ್ತಾರೆಯೇ?, ದೀಪವನ್ನು ಇಡುತ್ತಾರೆಯೇ? ಈ ಪ್ರಶ್ನೆಗಳನ್ನು ಗಮನಿಸಿದರೆ ಕೆಲ ಐತಿಹ್ಯಗಳ ಪ್ರಕಾರ ಈ ಗುಹೆಯಲ್ಲಿ ತಪಸ್ವಿಗಳು ತಪಸ್ಸು ಮಾಡುತ್ತಿದ್ದರೆಂಬುದು ಸ್ಪಷ್ಟ.

ಅಧ್ಯಾಯ - ೪

# ಮಲ್ಲಯ್ಯನ ಕ್ಷೇತ್ರದ ಸ್ಥಾನಿಕರು

೪.೧. ಒಡೆಯರು

೪.೨. ಜೀರ್‍ರರು

೪.೩. ಕಂಚಾವೀರರು

೪.೪. ಬಾರಿಕರು

೪.೫. ಮಡಿವಾಳರು

೪.೬. ಮದ್ದಲಿ ಗೊರವರು

೪.೭. ಕುದುರೆದಾರರು

೪.೮. ವಗ್ಗರು (ನಾಯಿ ಗೊರವರು)

ಅಧ್ಯಾಯ - ೪

# ಮಲ್ಲಯ್ಯನ ಕ್ಷೇತ್ರದ ಸ್ಥಾನಿಕರು

ಜನಪದರ ದೈವಗಳ ಕಲ್ಪನೆ, ಆರಾಧನಾ ಆಚರಣೆ ಮುಂತಾದವುಗಳಿಗೆಲ್ಲಾ ನಿರ್ಧಿಷ್ಟವಾದ ಕ್ರಮವಿರುತ್ತದೆ. ದೈವಗಳ ಆಚರಣೆ, ಉತ್ಸವ, ಜಾತ್ರೆ ಮುಂತಾದವುಗಳನ್ನು ನಿರ್ಧಿಷ್ಟವಾದ ಸಮಯ ಸಂದರ್ಭಗಳಲ್ಲಿ ನೆರವೇರಿಸುವ ಮೂಲಕ ತಮ್ಮ ಭಕ್ತಿಯನ್ನು ತೋರಿಸುತ್ತಾರೆ. ಹಾಗೆಯೇ ಜಾತ್ರೆ ಮತ್ತು ಉತ್ಸವಗಳಂತಹ ಸಂದರ್ಭದಲ್ಲಿ ನಿರ್ಧಿಷ್ಟವಾದ ವ್ಯಕ್ತಿ, ಮನೆತನದವರು ಮಾತ್ರ ಕೆಲವೊಂದು ಕಾರ್ಯಗಳನ್ನು ನೆರವೇರಿಸಬೇಕಾಗುತ್ತದೆ. ಅವರು ಇಲ್ಲದಿದ್ದರೆ ಕೆಲಸ ಕಾರ್ಯಗಳೇ ನಡೆಯುವುದಿಲ್ಲ. ಹಾಗೆಯೇ ದೈವಗಳ ಆಚರಣೆ, ಜಾತ್ರೆಯ ಸಂದರ್ಭ ಹಾಗೂ ದಿನನಿತ್ಯದ ಸಂದರ್ಭಗಳಲ್ಲಿ ಅವುಗಳ ಉಸ್ತುವಾರಿಕೆಗೆ ಪಾರಂಪರಿಕವಾಗಿ ಅಥವಾ ನಿಗದಿತ ಅವಧಿಗೆ ಮೀಸಲಾಗಿ ಕೆಲವು ವ್ಯಕ್ತಿ ಅಥವಾ ಮನೆತನದವರು ಜವಾಬ್ದಾರಿಯನ್ನು ಹೊತ್ತಿರುತ್ತಾರೆ. ಅವರುಗಳು ದೈವಗಳಿರುವಲ್ಲಿ ಇದ್ದು, ಆ ದೈವದ ಕ್ಷೇತ್ರದ ಜವಾಬ್ದಾರಿಯನ್ನು ಸಹ ಹೊತ್ತಿರುತ್ತಾರೆ. ಆ ದೈವಸ್ಥಾನಕ್ಕೆ ಸಂಬಂಧಿಸಿದ ಎಲ್ಲಾ ಮಾಹಿತಿಗಳು ಅವರುಗಳಿಗೆ ಸಾಮಾನ್ಯವಾಗಿ ಗೊತ್ತಿರುತ್ತವೆ. ಅವರುಗಳು ದೈವ ಇರುವ ಕ್ಷೇತ್ರದಲ್ಲೇ ಸಾಮಾನ್ಯವಾಗಿ ವಾಸವಾಗಿರುತ್ತಾರೆ. ಜೊತೆಗೆ ದೈವದ ಸ್ಥಾನದಲ್ಲಿ ಅವರದೇ ಆದ ಜಾಗಗಳು ಇರುತ್ತವೆ. ಹಾಗಾಗಿ ಅವರುಗಳನ್ನು ದೈವದ ಕ್ಷೇತ್ರದ ಸ್ಥಾನಿಕರು ಎಂದು ಕರೆಯಬಹುದು. ಒಟ್ಟಾರೆಯಾಗಿ ದೈವದ ಸ್ಥಾನದಲ್ಲಿ ಸ್ಥಾನಿಕರಾಗಿರುತ್ತಾರೆ. ಈ ಸ್ಥಾನಿಕರು ಇಡೀ ಕ್ಷೇತ್ರದ ಬಗೆಗೆ ಜವಾಬ್ದಾರಿಯುಳ್ಳವರಾಗಿದ್ದು, ದೈವದ ಆಚರಣೆ, ಜಾತ್ರೆ, ಉತ್ಸವಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುವರು. ಮೀನಗುಂದಿ ಮಲ್ಲಯ್ಯನ ಕ್ಷೇತ್ರದಲ್ಲಿ ಒಡೆಯರು, ಜೀರ್ರರು, ಕಂಚಾವೀರರು, ಬಾರಿಕರು, ಮಡಿವಾಳರು, ಮದ್ದಲಿ ಗೊರವರು, ಕುದುರೆಕಾರರು ಮತ್ತು ವಗ್ಗರು ಸ್ಥಾನಿಕರಾಗಿ ಕೆಲಸ ಕಾರ್ಯಗಳನ್ನು ನೆರವೇರಿಸುತ್ತಿದ್ದಾರೆ.

## ೪.೧. ಒಡೆಯರು :



ಹಿರೇಮೈಲಾರ ದೇವರ ಗುಡ್ಡಗಳಲ್ಲಿರುವಂತೆ ಈ ದೇವಸ್ಥಾನದಲ್ಲಿ ಕೂಡಾ ಮುಖ್ಯಧರ್ಮದರ್ಶಿಗಳಾಗಿ ಒಡೆಯರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಮೂರು ಪ್ರದೇಶಗಳಲ್ಲಿ ವಾಸವಾಗಿರುವವರು ಮೂಲತಃ ಒಂದೇ ಮನೆತನಕ್ಕೆ ಸೇರಿದವರು. ಮೀನಗೊಂದಿಯಲ್ಲಿ ಇರುವ ಒಡೆಯರು ಸೂರ್ಯವಂಶದ ಕ್ಷತ್ರಿಯರು. ಜೊತೆಗೆ ಗೋಮುನಿ ಸಂತತಿಯವರು. ಮೂಲತಃ ಮೀನಗೊಂದಿ ಸಿಂಹಾಸನಕ್ಕೆ ಸೇರಿದ ದೇವರ

ಗುಡ್ಡ (ಮೀನಗೊಂದಿ ಕ್ಷೇತ್ರ) ವೇ ಮೂಲಸ್ಥಾನ. ಕಾಲಾಂತರದಿಂದ ದೇವರ ಗುಡ್ಡದಲ್ಲಿ ಜನವಸತಿಗೆ ಅನಾನುಕೂಲಗಳು ಹೆಚ್ಚಾಗಿ ಬಲ್ಲೂರು ಎಂಬ ಗ್ರಾಮಕ್ಕೆ ಸೇರಿದೆವೆಂದು ಒಡೆಯರು ತಿಳಿಸುತ್ತಾರೆ. ಯಾವುದೇ ಕಾರಣದಿಂದ ನಾವು ಬೇರೆ ಕ್ಷೇತ್ರದಿಂದ ವಲಸೆ ಬಂದಿಲ್ಲವೆಂಬುದನ್ನು ಕಡಾ ಖಂಡಿತವಾಗಿ ಹೇಳುತ್ತಾರೆ. ಇವರ ವಂಶ ಅಭಿವೃದ್ಧಿಯಾಗಬೇಕು, ರಾಜಯೋಗ ಅನ್ನುವುದು ಸಿಗಬೇಕು ಅನ್ನುವ ಉದ್ದೇಶದಿಂದ ಸೂರ್ಯವಂಶದವರಾದ ಇವರು ಚಂದ್ರವಂಶದಿಂದ ಒಂದು ಕನ್ಯೆಯನ್ನು ತೆಗೆದುಕೊಂಡಿರುವರು. ಅದು ರಾಜನ್‌ಪೇಟ ತಾಲೂಕಿನಿಂದ. ಅಂತೂ ಮೀನಗೊಂದಿ ಸಿಂಹಾಸನದ ಒಡೆಯರ ಬಳಗ ಬಂದು ಕಡಪ, ಚಿತ್ತೂರು, ತಿರುಪತಿ, ರಾಜನಪೇಟ, ಮುಂತಾದ ಕಡೆಗೆಲ್ಲಾ ಇದ್ದಾರೆ. ಹಾಗಾದರೆ ಅವರ ವಂಶವೃಕ್ಷದ ಕಡೆ ಗಮನ ಹರಿಸೋಣ.

**ವಂಶಾವಳಿ**




ಮಲ್ಲಪ್ಪಯ್ಯ ಒಡೆಯರು ತಿಳಿಸಿರುವಂತೆ ಇವರದು ಗಂಡು ಸಂತಾನ. ಅದರಲ್ಲಿ ಒಬ್ಬರಿಗೆ ಒಂದು ಗಂಡುಮಗು ಇರುವುದು ವಿಶೇಷ. ಆದರೆ ಕಪಿಲಮುನಿಗಳಿಗೆ ಮಾತ್ರ ನಾಲ್ಕು ಜನ ಗಂಡುಮಕ್ಕಳು. ಅದರಲ್ಲಿ ಆನಂದಗಿರಿ, ಹಿರಿಯವರು, ಹಿರಿಯವರಾದ ಆನಂದಗಿರಿ ಒಡೆಯರಿಗೂ ಮೂರು ಜನ ಗಂಡುಮಕ್ಕಳು. ಆನಂದಗಿರಿ ಒಡೆಯರು ಈಗ್ಗೆ ಸುಮಾರು ಇಪ್ಪತ್ತು ವರ್ಷಗಳ ಕೆಳಗೆ ತೀರಿಕೊಂಡಿರುವರು. ಆ ಕಾರಣವಾಗಿ ಗಿರಿಯ ಹೆಚ್ಚಿನ ಜವಾಬ್ದಾರಿಯನ್ನು ಮಲ್ಲಪ್ಪಯ್ಯನವರೇ ವಹಿಸಿರುವರು. ಮಲ್ಲಿಕಾರ್ಜುನ ಮತ್ತು

ಯಂಕಪ್ಪಯ್ಯ ಒಡೆಯರು ಬಲ್ಲೂರಿನಲ್ಲಿ ಇಲ್ಲ. ನೌಕರಿಯನ್ನು ಹುಡುಕಿಕೊಂಡು ಬೇರೆಡೆಯಲ್ಲಿ ಇದ್ದಾರೆ. ಆದರೂ ಪ್ರತಿ ವರ್ಷ ದಸರಾ ಬನ್ನಿಗೆ ತಪ್ಪದೇ ಇವರುಗಳು ಇರಲೇಬೇಕು. ಇನ್ನು ಆನಂದಗಿರಿಯ ಮಗ ಕಪಿಲಮುನಿ ಒಡೆಯರು ಬಲ್ಲೂರಿನ ಸಮೀಪದಲ್ಲಿರುವ ಗುಳ್ಯಂ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ಕಾರಣ ಬಲ್ಲೂರಿಗೆ ಸರಿಯಾದ ಮೂಲಭೂತ ಸೌಕರ್ಯಗಳ ಕೊರತೆಯಿದೆ. ಜೊತೆಗೆ ಮಕ್ಕಳ ವಿದ್ಯಾಭ್ಯಾಸದ ಸಲುವಾಗಿ ಬೇಸಾಯದ ಸಲುವಾಗಿ ಗುಳ್ಯಂ ಗ್ರಾಮದಲ್ಲಿ ಬಂದು ಸೇರಿಕೊಂಡಿರುವರು. ಈ ನಾಲ್ಕು ಕುಟುಂಬಗಳು ಪ್ರತಿ ವರ್ಷ ಬನ್ನಿಗೆ ಬಂದು ತಮ್ಮ ಧರ್ಮದರ್ಶಿಯ ಕಾಯಕದಲ್ಲಿ ತೊಡಗುತ್ತಾರೆ. ಅಧಿಕಾರವನ್ನು ಇವರುಗಳು ಸಮನಾಗಿ ಹಂಚಿಕೊಂಡಿದ್ದು ಪ್ರತಿ ವರ್ಷ ಒಂದು ಕುಟುಂಬ ಸರದಿಯಂತೆ ದಸರಾ ಬನ್ನಿಯ ಅಧಿಕಾರವನ್ನು ಸ್ವೀಕರಿಸಿ ಗದ್ದುಗೆಯನ್ನು ಏರುತ್ತಾರೆ. ಕಳೆದ ವರ್ಷ ಒಂದು ಕುಟುಂಬ ಸರದಿಯಂತೆ ದಸರಾ ಬನ್ನಿಯ ಅಧಿಕಾರವನ್ನು ಸ್ವೀಕರಿಸಿ ಗದ್ದುಗೆಯನ್ನು ಏರುತ್ತಾರೆ. ಕಳೆದ ವರ್ಷ ೨೦೦೧ರಲ್ಲಿ ಆನಂದಗಿರಿ ಸ್ವಾಮಿಯ ಮಗ ಕಪಿಲಮುನಿ ಸ್ವಾಮಿಗಳಿಗೆ ಇತ್ತು. ೨೦೦೨ರಲ್ಲಿ ಮಲ್ಲಿಕಾರ್ಜುನ ಒಡೆಯರ ಮಗ ಕಪಿಲ ಮುನಿಗಳಿಗೆ ಇತ್ತು. ಮುಂದಿನ ವರ್ಷ ಮಲ್ಲಪ್ಪಯ್ಯ ಸ್ವಾಮಿಗಳದು. ಇವರ ಮಗ ಶಿವಪ್ಪಯ್ಯ ಇನ್ನು ಚಿಕ್ಕವನಾದ್ದರಿಂದ ಮಲ್ಲಪ್ಪಯ್ಯ ಒಡೆಯರೇ ಗದ್ದಿಗೆಯನ್ನು ಏರುತ್ತಾರೆ. ನಂತರ ವರ್ಷ ಗೋಮುನಿ ಸ್ವಾಮಿಯವರದು. ಹೀಗೆ ಇವರುಗಳು ಸರದಿಯಂತೆ ಪ್ರತಿ ವರ್ಷ ಸಿಂಹಾಸನ ಅಧಿಕಾರವನ್ನು ಸ್ವೀಕರಿಸಿ ಗದ್ದುಗೆಯನ್ನು ಏರುತ್ತಾರೆ. ಆಯಾ ವರ್ಷ ಭಕ್ತರಿಂದ ಬಂದ ಕಾಣಿಕೆ, ಆಭರಣ, ಮೀಸಲು ಧಾನ್ಯ ಮುಂತಾದವೆಲ್ಲ ಅಧಿಕಾರ ಸ್ವೀಕರಿಸಿದ ಕುಟುಂಬದವರಿಗೆ ಸಲ್ಲುತ್ತದೆ. ಆದರೆ ಮಲ್ಲಪ್ಪಯ್ಯ ಒಡೆಯರು ಈ ಸಿಂಹಾಸನದ ಬಗ್ಗೆ ಅತೀವ ಕಾಳಜಿ ವಹಿಸಿ ಬಲ್ಲೂರಿನಲ್ಲೇ ನೆಲೆಗೊಂಡಿದ್ದಾರೆ. ಜೊತೆಗೆ ಹಿರಿಯವರು ಆಗಿರುವುದರಿಂದ ಪ್ರತಿವಾರ, ಅಮಾವಾಸೆಗೆ ಬರುತ್ತಿರುವುದರಿಂದ ಅವರೇ ಈ ಸಿಂಹಾಸನದ ಪೂರ್ತಿ ಜವಾಬ್ದಾರಿಯನ್ನು ಹೊತ್ತಿದ್ದಾರೆ.

**ಅಧಿಕಾರ :**

ಒಡೆಯರು ಈ ಕ್ಷೇತ್ರದ ಧರ್ಮಕರ್ತರು. ಇದು ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದಿರುವಂತಹುದು. ದೇವಸ್ಥಾನದ ಪೂರ್ತಿ ಒಡೆತನ ಇವರದಾಗಿದ್ದು ದೇವರ ಪ್ರತಿಯೊಂದು ಕಾರ್ಯವೂ ಇವರ ಅಪ್ಪಣೆ, ಅನುಮತಿಯ ಮೇರೆಗೇನೆ ನಡೆಯುತ್ತವೆ. ಒಟ್ಟು ಸರ್ವಾಧಿಕಾರ ಇವರದಾಗಿದೆ. ಗುರುವೇ ನಿಜವಾದ ದೇವರು ಅನ್ನುವಷ್ಟರ ಮಟ್ಟಿಗೆ ಭಕ್ತರ ಮನದಲ್ಲಿ ಇವರು ಬೇರೂರಿದ್ದಾರೆ. ಭಕ್ತರು ನೀಡುವ ಬೆಳ್ಳಿಯ ಆಭರಣಗಳು, ಮೀಸಲು ಧಾನ್ಯ, ದಕ್ಷಿಣೆ ಮುಂತಾದ ಪ್ರತಿಯೊಂದು ಇವರ ಸೊತ್ತು. ಅದನ್ನು ಕೇಳುವ ಪ್ರಶ್ನಿಸುವ ಹಕ್ಕು ಬೇರೆಯವರಿಗೆ ಇಲ್ಲ. ಹಾಗೆ ಬೇರೆಯವರು ಪ್ರಶ್ನಿಸಬಾರದೆಂದೇ ಇವರ ಹಿರಿಯರು ಬ್ರಿಟಿಷ್ ಸರಕಾರದ ಕಡೆಯಿಂದ ನಮ್ಮದೇ ಸರ್ವಾಧಿಕಾರ, ಅನ್ನುವ ಹಾಗೆ ರಾಗಿ ಪತ್ರವನ್ನು ಪಡೆದುಕೊಂಡಿದ್ದಾರೆ. ಆದವಾನಿ ಡೆಪ್ಯೂಟಿ ಕಲೆಕ್ಟರ್ ಕ್ರಿ.ಶ. ೧೮೮೧ ರಲ್ಲಿ ಇವರಿಗೆ ಮಾನ್ಯತೆಯ ದ್ಯೋತಕವಾಗಿ ನೀಡಿರುವ ಶ್ರೀ ಮುಖ ಇವರಲ್ಲಿದ್ದು ಇದು ಹಿರೇ ಮೈಲಾರ, ದೇವರಗುಡ್ಡಗಳ ಒಡೆಯರು

ತಮ್ಮ ಪತ್ರ ವ್ಯವಹಾರಗಳಲ್ಲಿ ಬಳಸುವ ಒಕ್ಕಣೆಯ ಪಾಠದಂತೆಯೇ ಇದೆ. ಇವರು ಆದಿ ಮೀನಗೊಂದಿ ಪುರೂದೀಶ್ವರರೆಂದೂ, ಉಂಗ್ಲಾರ ಕ್ಷೇತ್ರವಾಸಿಗಳೆಂದೂ, ಕರಿಹಳಿ ಭಂಡಾರಕ್ಕೆ ಕಾರಣೀಕರ್ತರೆಂದು ಇದರಲ್ಲಿ ಹೇಳಿದೆ. ಒಡೆಯರು ಗೊರವರಿಗೆ, ವಗ್ಗರಿಗೆ, ಕಂಚಾವೀರರಿಗೆ ಮತ್ತು ಬಸವಿಯರಿಗೆ ದೀಕ್ಷೆಯನ್ನು ನೀಡುತ್ತಾರೆ. ಇವರೆ ಕೈಕೆಳಗೆ ಸಹಾಯಕರಾಗಿ ಗಣಾಚಾರಿಗಳು ಇರುತ್ತಾರೆ. ಗಣಾಚಾರಿಗಳು ಒಡೆಯರ ಕೆಲಸಗಳನ್ನು ಹಗುರ ಮಾಡಲು ಅವರ ಪರವಾಗಿ ದೀಕ್ಷೆಯನ್ನು ಭಕ್ತರಿಗೆ ನೀಡಿ, ನಂತರ ಒಡೆಯರ ಸಮ್ಮುಖದಲ್ಲಿ ಅವರನ್ನು ಕರೆದು ಕೊಂಡು ಬಂದು ವಿಷಯ ತಿಳಿಸಿದಾಗ ಒಡೆಯರು ಅವರ ಹೆಸರು, ವಿಳಾಸ, ಯಾವ ಗೊರವ ಎನ್ನುವುದನ್ನು ದಾಖಲಿಸುತ್ತಾರೆ. ''ಮೊದಲೆಲ್ಲ ನಮ್ಮ ಯಜಮಾನರ ಕಾಲದಲ್ಲಿ ದೀಕ್ಷೆ ಪಡೆದವರ ಹೆಸರು ಮತ್ತು ಊರು ಮಾತ್ರ ಬರೆದುಕೊಳ್ಳುತ್ತಿದ್ದರು. ಆದರೆ ಈಗ ನಾವು ಒಂದು ದೊಡ್ಡ ಪುಸ್ತಕದಾಗ ದೀಕ್ಷೆ ಪಡೆದವರ ಫೋಟೋ, ಡ್ರಸ್ ಹಾಕ್ಯೊಂಡಾಗಿನ (ಗೊರವರ ವೇಷ ಧರಿಸಿದಾಗ) ಫೋಟೋ ಅಂಟಿಸಿ ಅವರ ಪೂರ್ಣ ವಿವರಗಳನ್ನು ಬರೆದುಕೊಳ್ತೀವಿ . ದೀಕ್ಷೆ ಪಡೆದಂತಹವರು ಇದ್ದಂತವರೂ ಇರ್ತಾರೆ, ಇಲ್ಲದಂತವರೂ ಇರ್ತಾರೆ. ಇಲ್ಲದಂತವರಿಗೆ ನಾವು ಈ ರೆಕಾರ್ಡನ್ನು ತೋರಿಸಿ ಸರಕಾರದ?ಕಡೆಯಿಂದ ಸಹಾಯ ಕೊಡುಸ್ತೀವಿ'' ಎಂದು ಒಡೆಯರು ಹೇಳುತ್ತಾರೆ. ಈ ರೀತಿಯಾಗಿ ಸರ್ವಾಧಿಕಾರಿಗಳಾದ ಒಡೆಯರು ಭಕ್ತರಿಂದಲೇ ಜೀವನ ನಡೆಸುತ್ತಿದ್ದು ಅವರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸುತ್ತಿದ್ದಾರೆ.

ಒಡೆಯರು ಪ್ರತಿ ಭಾನುವಾರ ಗಿರಿಗೆ ಬಂದು ಶಿವಸಾನ ಗದ್ದಿಗೆಯಲ್ಲಿರುವ ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ ಗದ್ದಿಗೆಯಲ್ಲಿ ಕುಳಿತಿರುತ್ತಾರೆ. ಬಂದ ಭಕ್ತರಿಗೆಲ್ಲಾ ಆಶೀರ್ವಾದ ಮಾಡುತ್ತಾ ಭಂಡಾರವನ್ನು ನೀಡುತ್ತಾರೆ. ಆ ದಿನ ಗಿರಿಯಲ್ಲಿ ದಾಸೋಹ ಇವರಿಂದಲೇ ನಡೆಯುತ್ತದೆ. ಹಾಗೆ ಅಮಾವಾಸೆಗೂ ಇಲ್ಲಿಗೆ ಬಂದು ಗದ್ದಿಗೆಯಲ್ಲಿ ಕುಳಿತು ಭಕ್ತರಿಗೆ ಹಾರೈಸುತ್ತಿರುತ್ತಾರೆ. ಒಡೆಯರ ಪಾದ ಸ್ಪರ್ಷದಿಂದ ನಮ್ಮ ಜೀವನ ಸಾರ್ಥಕವಾಯಿತು ಎಂದೇ ಕೆಲಭಕ್ತರ ನಂಬಿಕೆ. ಗುಳ್ಯಂನಲ್ಲಿರುವ ಕಪಿಲಮುನಿ ಒಡೆಯರು ಬೆಟ್ಟದಲ್ಲಿ ಕಪಿಲಮುನಿ ಆಶ್ರಮವೊಂದನ್ನು ಸ್ಥಾಪಿಸಬೇಕೆಂಬ ತಮ್ಮ ಬಯಕೆಯನ್ನು ತೋಡಿಕೊಂಡಿದ್ದಾರೆ. ಜೊತೆಗೆ ಮಲ್ಲಪ್ಪಯ್ಯ ಒಡೆಯರು ಸಿಂಧವಾಳದ ದುರುಗಮ್ಮನವರಿಗೆ ಗೊರವಮ್ಮಳಾಗಿ ದೀಕ್ಷೆ ನೀಡಿರುವುದರ ಬಗ್ಗೆ ಅಸಮಾಧಾನವಿದೆ. ಕಾರಣ ಇತರ ಗೊರವರಂತೆ ದೋಣಿಸೇವೆ, ವಗ್ಗರಾಟ, ಮುಂತಾದುವಲ್ಲಿ ಆ ತಾಯಿ ಭಾಗವಹಿಸುವುದು ಸರಿಕಾಣದು. ಅದಕ್ಕಾಗಿ ಹೆಣ್ಣು ಮಕ್ಕಳಿಗೆ ದೀಕ್ಷೆ ಕೊಡುವುದು ಬೇಡ. ಅದು ತಪ್ಪು ಎನ್ನುವ ಭಾವನೆ ಅವರದು. ಒಡೆಯರ ಬಳಿ ಪವಾಡದ ಮೂರು ಸರಪಳಿಗಳು ಮತ್ತು ಕೆಲವು ರಾಗಿ ಪತ್ರಗಳಿವೆ.

## ೪.೨. ಜೀರ್‍ರು :

ಇವರು ದೇವರಗುಡ್ಡ, ಮೈಲಾರಗಳಲ್ಲಿ ಪಂಚಮ ಪೂಜಾರಿಗಳು ಸಲ್ಲಿಸುವಂತೆ ದೇವರಿಗೆ ಹಣ್ಣು, ಕಾಯಿ, ನೈವೇದ್ಯ ಮುಂತಾದ ಕೈಂಕರ್ಯಗಳನ್ನು ಸಲ್ಲಿಸುವವರಾಗಿದ್ದಾರೆ. ಸದ್ಯಕ್ಕೆ ಇವರು ನೆರಣಿಕೆ ಗ್ರಾಮದಲ್ಲಿ ವಾಸಿಸುತ್ತಿದ್ದು ನಾಲ್ಕು ಕುಂಟುಂಬಗಳು ಈ ಮನೆತನಕ್ಕೆ ಸೇರಿವೆ. ಈ ನಾಲ್ಕು ಕುಟುಂಬಗಳೂ ಸಹ ಮೂಲ ದೇವರನ್ನು ಪೂಜಿಸುವ ಅಧಿಕಾರವನ್ನು ಹೊಂದಿವೆ. ಆ ಕಾರಣವಾಗಿ ಪ್ರತಿನಿತ್ಯ ದೇವಸ್ಥಾನದಲ್ಲಿ ಪೂಜೆಯನ್ನು ಸಲ್ಲಿಸಲು ಬೆಟ್ಟಕ್ಕೆ ಬರಬೇಕು. ಮತ್ತೆ ರಾತ್ರಿ ಕತ್ತಲಾಗುವ ವೇಳೆಗೆಲ್ಲ ತಮ್ಮ ಊರುಗಳಿಗೆ ಸೇರಿಕೊಳ್ಳಬೇಕಾಗಿತ್ತು. ಪ್ರತಿನಿತ್ಯ ಸುಮಾರು ೧೦-೧೨ಕಿ.ಮೀ. ಪಾದಯಾತ್ರೆಯಿರುವುದರಿಂದ ಅವರಿಗೆ ತುಂಬಾ ತ್ರಾಸದಾಯಕವಾಗಿ ಒಂದು ಒಪ್ಪಂದವನ್ನು ಅವರೊಳಗೆ ಅನಿವಾರ್ಯವಾಗಿ ಮಾಡಿಕೊಂಡಿರುವರು. ಅದೇನೆಂದರೆ ಪ್ರತಿ ಕುಟುಂಬಗಳು ಸಮನಾದ ಅಧಿಕಾರವನ್ನು ಹೊಂದಿರುವುದರಿಂದ ಒಂದು ಕುಟುಂಬ ಮೂರು ತಿಂಗಳು ದೇವರಿಗೆ ಪೂಜೆಯನ್ನು ಸಲ್ಲಿಸುವ ಅಧಿಕಾರವನ್ನು ಪಡೆದುಕೊಂಡವು. ಯಾವ ಕುಟುಂಬ ದವರಿಗೆ ದೇವಸ್ಥಾನದಲ್ಲಿ ಪೂಜಿಸುವ ಅಧಿಕಾರ ಇದೆಯೋ ಆ ಕುಟುಂಬ ತಮ್ಮ ಅವಧಿ ಇರುವವರೆಗೆ ಬೆಟ್ಟದಲ್ಲಿಯೇ ಉಳಿದು ( ಗಿರಿಯಲ್ಲಿ ಇವರದೇ ಆದ ಒಂದು ಪ್ರತ್ಯೇಕ ಮನೆಯಿದೆ) ದೇವರ ಸೇವೆಯನ್ನು ಕೈಗೊಳ್ಳುತ್ತಾರೆ. ಅವರ ಅವಧಿ ಮುಗಿದ ನಂತರ ಇನ್ನೊಂದು ಕುಟುಂಬದವರು ಬಂದು ಸೇವೆಗಾಗಿ ಬೆಟ್ಟದಲ್ಲಿಯೇ ಉಳಿದುಕೊಳ್ಳುತ್ತಾರೆ.

ದೇವಸ್ಥಾನದಲ್ಲಿ ಪೂಜೆಯನ್ನು ಮಾಡುವ ಪ್ರಮುಖ ಕಾಯಕ ಜೀರ್‍ರದಾಗಿದೆ. ಹಿರೇ ಮೈಲಾರದಲ್ಲಿ ಮೈಲಾರನಿಗೆ ಪೂಜೆ ಸಲ್ಲಿಸುವ ಹಕ್ಕು ಲಿಂಗಾಯಿತರಿಗೆ ಇದ್ದು ವಿಶೇಷ ಸಂದರ್ಭಗಳಾದ ಕುಂಕುಮಾರ್ಚನೆ, ರುದ್ರಾಭಿಷೇಕ ಮುಂತಾದ ಸಂದರ್ಭಗಳಲ್ಲಿ ಬ್ರಾಹ್ಮಣರು ತಪ್ಪದಲೇ ಬಂದು ಕಾರ್ಯವನ್ನು ನೆರವೇರಿಸುತ್ತಾರೆ. ಉಳಿದಂತೆ ಗಂಗಿ ಮಾಳಮ್ಮನನ್ನು ಪೂಜೆ ಮಾಡುವವರು ಕುರುಬರಾಗಿದ್ದಾರೆ. ಖಂಡೋಬ ದೇವಾಲಯದಲ್ಲಿ ಗುರುವ ಜನಾಂಗದವರು ಪೂಜಾರಿಗಳಾಗಿದ್ದರೆ, ಬ್ರಾಹ್ಮಣ ಪುರೋಹಿತರು ಅಭಿಷೇಕ ಮತ್ತು ಸಹಸ್ರನಾಮ ಪೂಜೆ ಮಾತ್ರ ಮಾಡಿ ಹೋಗುತ್ತಾರೆ. ಮೀನಗೊಂದಿಯಲ್ಲಿ ದೇವರ ಲಗ್ನದ ಕಾರ್ಯದಲ್ಲಿ, ರಥೋತ್ಸವದ ಸಂದರ್ಭದಲ್ಲಿ, ಜೊತೆಗೆ ಕಾರ್ತಿಕ ಮಾಸದ ಒಂದು ತಿಂಗಳ ಸ್ವಾಮಿಯನ್ನು ಪೂಜೆ ಮಾಡುವ ಅಧಿಕಾರ ಇವರದಾಗಿರುತ್ತದೆ. ಇಷ್ಟು ಬಿಟ್ಟು ದೇವಸ್ಥಾನದ ಪೂಜೆಮಾಡುವ ಪೂರ್ತಿ ಹಕ್ಕಿರುವುದು ಜೀರ್‍ರರಿಗೆ. ಜೀರ್‍ರರಿಗೆ ದೇವಸ್ಥಾನದ ವತಿಯಿಂದ ೧೮ ಎಕರೆ ಬಯಲು ಭೂಮಿ ಇದೆ. ಅದನ್ನು ನಾಲ್ಕು ಕುಟುಂಬಗಳು ಹಂಚಿಕೊಂಡಿದ್ದಾರೆ. ಆಯಾ ಕುಟುಂಬಗಳು ದೇವಸ್ಥಾನದ ಪೂಜಾ ಕಾರ್ಯಕ್ರಮ ಮುಗಿದ ನಂತರ ಊರಿಗೆ ಮರಳಿ ತಮ್ಮ ಉಪಜೀವನಕ್ಕಾಗಿ ಅವರು ಬೇಸಾಯವನ್ನೇ ಅವಲಂಬಿಸಿದ್ದಾರೆ.

ಜೀರ್‍ರ ಅತಿ ಮುಖ್ಯವಾದ ಜವಾಬ್ದಾರಿಯೆಂದರೆ ಕಾರಣಿಕವನ್ನು ನುಡಿಯುವುದು. ಜೀರ್‍ರ ಕುಟುಂಬಗಳಲ್ಲಿ ಸರದಿಯಂತೆ ಕಾರಣಿಕವನ್ನು ನುಡಿಯುವ ಹಕ್ಕು ಇರದು. ಅದೇನಿದ್ದರೂ ವಂಶಪಾರಂಪರ್ಯವಾಗಿ ಸಾಗಿ ಬಂದುದಾಗಿದೆ. ಪ್ರಸ್ತುತ ನೆರಣಿಕೆಯ ಕಾರಣಿಕದ ಮಲ್ಲಯ್ಯ ಸ್ವಾಮಿಯೇ ಕಾರಣಿಕ ನುಡಿಯುವಾತ. ಆತನ ನಂತರ ಆತನ ಮಗನಿಗೆ ಅದರ ಜವಾಬ್ದಾರಿ ಹೋಗುತ್ತದೆ. ದಸರಾ ಬನ್ನಿಯ ಕಂಕಣಧಾರರಲ್ಲಿ ಇವರೂ ಒಬ್ಬರು. ಕಾರಣಿದ ಸ್ವಾಮಿ ಕಾರಣಿಕ ಹೇಳುವ ಮೊದಲ ೧೦ ದಿನಗಳಲ್ಲಿ ಒಂದೊತ್ತು ಇರುತ್ತಾರೆ. ಆ ದಿನಗಳಲ್ಲಿ ಪ್ರತಿ ದಿನ ರಾತ್ರಿ ಪೂಜೆ ಕಾರ್ಯಕ್ರಮ ನೆರವೇರಿಸಿ ಊಟ ಆದ ಮೇಲೆಯೇ ಒಂದೊತ್ತು ಬಿಡುವುದು. ಅವರು ಆ ದಿನಗಳಲ್ಲಿ ನೀರನ್ನು ಸಹ ಮುಟ್ಟುವ ಹಾಗೆ ಇಲ್ಲ. ಇನ್ನು ಬನ್ನಿಯಲ್ಲಿ ಹೇಳಿಕೆ ಹೇಳುವ ದಿನ ಪೂರ್ತಿ ಉಪವಾಸವಿದ್ದು ಕಾರಣಿಕವನ್ನು ಎದುರು ಬಸವನ ಗುಡಿಯ ಮ್ಯಾಲೆ ನುಡಿಯುತ್ತಾರೆ. ಕಾರಣಿಕದ ಹೇಳಿಕೆಗಳನ್ನು ಟ್ರಸ್ಟ ವತಿಯಿಂದ ಹ್ಯಾಂಡ್ ಬಿಲ್‌ಗಳನ್ನು ಹಾಕಿಸಿ ರಥೋತ್ಸವದ ವೇಳೆಗೆಲ್ಲ ಸಿದ್ಧಪಡಿಸಿ ಬಂದ ಭಕ್ತರಿಗೆಲ್ಲಾ ಹಂಚುತ್ತಾರೆ. ಆದರೆ ಮೈಲಾರದಲ್ಲಿ ಈ ತರಹ ಗುಡಿಯ ಮೇಲೇರದೆ, ಕಾರಣಿಕ ನುಡಿಯುವಾತ ಪಂಚಮ ಲಿಂಗಾಯತರಾಗಿರದೇ, ಕಾರಣಿಕ ನುಡಿಯುವಾತ ಗೊರವನಾಗಿದ್ದು ಆತನು ಕಾರಣಿಕದ ಬಿಲ್ಲನ್ನೇರಿ ಕಾರಣಿಕವನ್ನು ನುಡಿಯುತ್ತಾನೆ.

ಕಾರಣಿಕ ನುಡಿಯುವ ಬಗ್ಗೆ ಇಲ್ಲಿಯ ಜನಪದರಲ್ಲಿ ಇರುವ ನಂಬಿಕೆಯೆಂದರೆ ಕಾರಣಿಕದ ಒಂದು ದಿನದ ಮುಂಚೆ ರಾತ್ರಿ ಮಲ್ಲಯ್ಯ ದೇವರು ಕಾರಣಿಕ ಸ್ವಾಮಿಯ ಹೆಂಡತಿಯ ಕನಸಿನಲ್ಲಿ ಬಂದು ಕಾಣಿಕದ ನುಡಿಗಳನ್ನು ಹೇಳುತ್ತಾನಂತೆ. ಬೆಳಿಗ್ಗೆ ಆ ತಾಯಿ ತನ್ನ ಪತಿಗೆ ತಿಳಿಸಿದಾಗ ಆತ ಅದೇ ವಾಕ್ಯಗಳನ್ನು ಕಾರಣಿಕದಲ್ಲಿ ನುಡಿಯುತ್ತಾನಂತೆ. ಈ ಬಗ್ಗೆ ನಾನು ಸ್ವತಃ ಕಾರಣಿಕದ ಸ್ವಾಮಿಯನ್ನು ಭೇಟಿಯಾಗಿ ಇದರ ಬಗ್ಗೆ ಕೇಳಿ ದೇವರು ನಿಮ್ಮ ಹೆಂಡತಿಯ ಕನಸಿನಲ್ಲಿ ಬಂದು ಹೇಳಿಕೆಯನ್ನು ಹೇಳುತ್ತಾನಂತಲ್ಲ. ಇದು ಸತ್ಯವೇ ಎಂದು ಕೇಳಿದಾಗ, ಅವರು '' ಲೇದು ದೇವುಡು ನಾ ಕಲಲೋಕೇ ವಸ್ತಾಡು. ಎಪ್ಪುಡು ಅಂಟೆ ರೇಪು ಕಾರಣಿಕಮು ಅಂಟೆ ರೋಜು ರಾತ್ರಿ ಮಲ್ಲಯ್ಯ ನಾ ಕಲಲೋಕೆ ವಚ್ಚಿ ವಾಕ್ಯಾಲನ್ನಿ ಚೆಪ್ಪಿಂಟಾಡು ವಾಟಿನೇ ನೇನು ಅಕ್ಕಡ ಚೆಪ್ಪೇದಿ. ಕಾನಿ ದೇವುಡು ನಾ ಕಲವೋ ವಚ್ಚಿ ಏಮಿ ಚೆಪ್ಪಿನಾಡು ಅನೇದಿ ನಾಕು ಗುರ್ತು ಉಂಡದು '' ( ಇಲ್ಲ ದೇವರು ನನ್ನ ಕನಸಿನಲಿಯೇ ಬರುವುದು. ಯಾವಾಗ ಅಂದರೆ ನಾಳೆ ಕಾರಣಿಕ ಐತೆ ಅಂದರೆ ಇವತ್ತು ರಾತ್ರಿ ಕನಸಿನಲ್ಲಿ ಸ್ವಾಮಿ ಬಂದು ವಾಕ್ಯಗಳನ್ನು ಹೇಳಿಬಿಟ್ಟಿರ್ತಾನೆ. ಆ ಮಾತುಗಳನ್ನೇ ನಾನು ಅಲ್ಲಿ ಹೇಳೋದು. ಆದರೆ ಸ್ವಾಮಿ ನನಗೆ ಏನು ಹೇಳಿದ ಅನ್ನುವುದ ನೆನಪಲ್ಲಿ ಇರಲ್ಲ). ಇವರಿಗೆ ಗೊತ್ತಾಗದ ಹಾಗೆ ನಾನು ಕಾರಣಿಕ ಸ್ವಾಮಿಯ ಹೆಂಡತಿಯಾದ ಶರಣಮ್ಮ ಅವರನ್ನು ಈ ಕನಸಿನ ಬಗ್ಗೆ ವಿಚಾರಿಸಿದಾಗ ಅವರು ಸ್ವತಃ ಕನ್ನಡದಲ್ಲಿ ಸ್ಪಷ್ಟವಾಗಿ ಈ ರೀಯಾಗಿ ತಿಳಿಸಿದರು. '' ಹೌದು ಕಾರಣಿಕದ ಒಂದು ದಿನದ ಮುಂಚೆ ಅಂತೇನು ಇಲ್ಲ ದೇವರು ಯಾವಾಗ ನೆನಸಿಕೊಂಡ್ರೇ ಆವಾಗ ಬರ್ತಾನೆ. ನನ್ನ ಕನಸಿನಾಗೆ ಬಂದು ಹೇಳಿಕೆ ಮಾತುಗಳನ್ನು ಹೇಳ್ತಾನೆ. ಹೇಳಿಕೆ ಹೇಳುವಾಗ ನಾನು ನಮ್ಮ ಯಜಮಾನರ ಜೊತೆಯಾ

ಇರ್‍ತೀನಿ ಹಿಂಗಿಂಗೆ ಹೇಳ್ಬೇಕು ಅಂತನೂ ಹೇಳ್ತೀನಿ. ಅದೇನು ನಮ್ಮ ತಾತ ಮುತ್ತಾತನವರ ತಲೆಯಿಂದ ಅಂಗೇ ನಡೆದು ಹೋಗ್ತೈತೆ. ಇವಾಗ ಸುತ ಅಂಗೇ ನಡಿತ್ತೈತೆ ''. ಒಟ್ಟಾರೆ ಕಾರಣಿಕದ ಸ್ವಾಮಿಗೆ ಕನ್ನಡ ಮಾತನಾಡಲು ಬರುವುದಿಲ್ಲ. ಅವರಿಗೆ ಬರುವುದು ತೆಲಗು ಮಾತ್ರ. ಕಾರಣಿಕವನ್ನು ಕನ್ನಡದಲ್ಲಿಯೇ ಹೇಳುವುದು. ಇದು ಎಲ್ಲಾ ಭಕ್ತರಿಗೆ ಆಶ್ಚರ್ಯ ಹುಟ್ಟಿಸಿದೆ. ಈ ಕನಸಿನಲ್ಲಿ ಮಲ್ಲಯ್ಯ ಬಂದು ನುಡಿಗಳನ್ನ ಹೇಳೋದು ನಂತರ ವಿಷಯ. ಈ ಕನಸಿನ ವಿಚಾರದಲ್ಲಿ ಇವರಿಬ್ಬರ ಮಾತುಗಳನ್ನು ಗಮನಿಸಿದಾಗ ಈ ಮೊದಲೇ ಅವರುಗಳ ಮಧ್ಯದಲ್ಲಿ ಬಹುಷಹ ಒಂದು ತೀರ್ಮಾನ ಆಗಿರುವಂತೆ ಕಾಣುತ್ತದೆ.

## ೪.೩. ಕಂಚಾವೀರ :

ಆದಿ ಮೀನಗೊಂದಿ ಸಿಂಹಾಸನಕ್ಕೆ ಸಂಬಂಧಿಸಿದ ಕಂಚಾವೀರರು ತಮ್ಮ ಸ್ವಂತ ಊರಾದ ನೆರಣಿಕೆ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ಈ ಗ್ರಾಮದಲ್ಲಿ ಇವರದು ಇರುವುದೂ ಒಂದೇ ಕುಟುಂಬ. ಇವರು ಜಾತಿಯಿಂದ ಉಣ್ಣೆ ಕಂಕಣದ ಕುರುಬರು. ಮೈಲಾರದಲ್ಲಿ ಕಂಚಾವೀರರು ಹರಿಜನರಾಗಿದ್ದಾರೆ. ಇಲ್ಲಿ ಕುರುಬರಾಗಿರುವುದು ವಿಶೇಷ. ವಂಶ ಪಾರಂಪರ್ಯವಾಗಿ ಈ ಶಸ್ತ್ರ ಪವಾಡ ಮಾಡುವ ಹಕ್ಕು ಕಂಚಾವೀರರಿಗಿದೆ. ಕಂಚಾವೀರರ ಮನೆಯಲ್ಲಿ ಬಾಣತಿ ಶಸ್ತ್ರ, ಕೈ ಪವಾಡ, ಕಾಲು ಪವಾಡ ಮಾಡುವ ಶಸ್ತ್ರಗಳು, ಮುಂತಾದವುಗಳು ಇವೆ. ಕಂಚಾವೀರ ಮಲ್ಲಣ್ಣನವರು ವಯಸ್ಸಾದ ಕಾರಣ, ಜೊತೆಗೆ ಪವಾಡ ಮಾಡಲು ಅಶಕ್ತರಾಗಿರುವುದರಿಂದ ಅವರ ಸಂಪೂರ್ಣ ಜವಾಬ್ದಾರಿಯನ್ನು ಬಾವಮೈದುನನಾದ ಮಲ್ಲಪ್ಪನವರಿಗೆ ವಹಿಸಿರುವರು. ಕಾರಣ ಕಂಚಾವೀರ ಮಲ್ಲಣ್ಣನ ಮಗನಾದ ಕೆ. ಬಸವರಾಜ ಇನ್ನು ಚಿಕ್ಕ ಹುಡುಗನಾದ್ದರಿಂದ ಮಲ್ಲಪ್ಪನವರೇ ಈ ಜವಾಬ್ದಾರಿಯನ್ನು ವಹಿಸಿಕೊಂಡರು. ಇವರು ಹೊಸಪೇಟೆಯ (ಬಳ್ಳಾರಿ ಜಿಲ್ಲೆ) ಬಾಲಕಿಯರ ಪ್ರೌಢಶಾಲೆಯಲ್ಲಿ ಗುಮಾಸ್ತರಾಗಿದ್ದಾರೆ. ಈ ಜವಾಬ್ದಾರಿಯನ್ನು ಹೊತ್ತುಕೊಳ್ಳಲು ಬಹುಮುಖ್ಯ ಕಾರಣವೆಂದರೆ ಕಂಚಾವೀರ ಮಲ್ಲಣ್ಣನವರು ಶಸ್ತ್ರ ಪವಾಡ ಮಾಡುವಾಗ ಪವಾಡದ ಶಸ್ತ್ರವನ್ನು ತಿಕ್ಕುವ ಪೂರ್ತಿಕೆಲಸ ಮಲ್ಲಪ್ಪನವರದಾಗಿತ್ತು. ಮಲ್ಲಪ್ಪನವರಿಗೆ ಶಸ್ತ್ರವನ್ನು ತಿಕ್ಕುವ, ಪವಾಡದ ಪ್ರತಿಯೊಂದು ಅಂಶಗಳು ಕರಗತವಾಗಿದ್ದವು. ಈ ಕಾರಣವಾಗಿ ಅವರಿಗೆ ದೀಕ್ಷೆ ವಹಿಸಿಕೊಟ್ಟರು. ಕಂಚಾವೀರರಿಗೆ ದೀಕ್ಷೆಯನ್ನು ಕೊಡುವವರು ಒಡೆಯರು.

ಕಂಕಣದ ದಿನ ಕಂಚಾವೀರರಿಗೆ ಗಿರಿಯಲ್ಲಿ ಕಂಕಣವಿರುತ್ತದೆ. ಅಂದಿನಿಂದ ಒಂಭತ್ತು ದಿನಗಳವರೆಗೆ ಒಂದೊತ್ತು ಇರುತ್ತಾರೆ. ದಸರಾ ಬನ್ನಿಯ ದಿನ ಕಂಚಾವೀರ ಬೆಟ್ಟದಲ್ಲಿ ಮಾಳಮ್ಮನಿಗೆ ಉಡುಗೆಗಳನ್ನು ತೊಡಿಸುವ ಕಾರ್ಯದಲ್ಲಿ ಸಕ್ರಿಯವಾಗೆ ಪಾಲ್ಗೊಂಡು ಊರಿಗೆ ಮರಳಿ ಶಸ್ತ್ರವನ್ನು ತಿಕ್ಕುವ ಮತ್ತು ನಾರಿನ ಹಗ್ಗದ ತಯಾರಿಕೆಯಲ್ಲಿ ತೊಡಗುತ್ತಾರೆ. ''ಬನ್ನಿಯಿಂದ ಬನ್ನಿಯವರೆಗೆ ಶಸ್ತ್ರನ ಅಂಗೆ ಮನ್ಯಾಗ ಇಟ್ಟಿರ್‍ತೀವಿ. ಅದಕ್ಕೆ ಅವು ಕರ್‍ಗ ಆಗಿರ್‍ತಾವ. ಮೊದಲ ಶಸಹ ಜೀಸಾ ಕಲ್ಲಿಗೆ ತಿಕ್ಕತೀವಿ, ಆ ಮ್ಯಾಲೆ ಕರುಕು ಹಾಕ್ತೇವಿ, ಕರುಕು

(ಇದ್ದಲಿ) ಆದಮ್ಯಾಲೆ ವಿಭೂತಿ ಹಿಂಗೆ ತಿಕ್ಕಿದಾಗ ಆ ಕುಲುಬೆಲ್ಲಾ ಹೋಗ್ತೈತಿ'' ಎಂದು ಕಂಚಾವೀರ ಮಲ್ಲಣ್ಣ ಹೇಳುತ್ತಾರೆ. ಈ ಶಸ್ತ್ರಕ್ಕೆ ಬಳಸುವ ದಾರ ೧೨ಮಾರು ಉದ್ದ ಇರಲೇಬೇಕು. ದಾರವನ್ನು ತಯಾರಿಸುವಾಗ ಹನ್ನೆರಡು ಮಾರಿಗಿಂತ ಹೆಚ್ಚಿಗೆ ಬರುವ ಹಾಗೆ ಮಾಡುತ್ತಾರೆ. ಒಂದು ವೇಳೆ ತಯಾರಿಕೆಯಲ್ಲಿ ಎರಡು-ಮೂರು ಮಾರು ಹೆಚ್ಚಾದಾಗ ಯಾವುದೇ ಕಾರಣಕ್ಕೂ ಅದನ್ನ ಹನ್ನೆರಡು ಮಾರಿಗೆ ಅಂತ ಕತ್ತರಿಸದೆ ಹಾಗೇ ರೀಲಿಗೆ ಸುತ್ತುತ್ತಾರೆ. ಅಷ್ಟು ದಾರವನ್ನು (ಹೆಚ್ಚಾದ) ಪವಾಡ ಮಾಡುವಾಗ ಕಾಲಿಗೆ ಶಸ್ತ್ರ ಹಾಕಿ ಎಳೆಯಬೇಕು. ಈ ರೀತಿ ಶಸ್ತ್ರ ಮತ್ತು ದಾರವನ್ನು ಸುತ್ತಿ ಒಂದು ಬಟ್ಟೆಯಲ್ಲಿ ಕಟ್ಟಿ ಗುಪ್ತವಾಗಿ ಯಾರಿಗೂ ಕಾಣದ ಹಾಗೆ ತಂದು ಕಾಡಸಿದ್ದಪ್ಪನ ಮಠದಲ್ಲಿ ಇಡುತ್ತಾರೆ.

ಈ ಕಂಚಾವೀರರಿಗೆ ಒಂದು ಪಂಜು ಅದಕ್ಕೆ ಬೇಕಾಗುವ ಎಣ್ಣೆಯನ್ನು ಬಾರಿಕರಿಂದ ತೆಗೆದುಕೊಳ್ಳುತ್ತಾರೆ. ಇವರ ಕುಟುಂಬದವರೇ ಪಂಜನ್ನು ಹಿಡಿಯಬೇಕು. ಬನ್ನಿಯ ದಿನ ದೇವರಿಗೆ ಲಗ್ನ ಆದ ನಂತರ ದೇವರನ್ನು ಹೊತ್ತು (ಉತ್ಸವ ಮೂರ್ತಿ) ಶಿವಸಾನ ಕಟ್ಟೆಯವರೆಗೆ ತರುವ ಜವಾಬ್ದಾರಿ ಇವರದಾಗಿದೆ. ನಂತರ ರಕ್ಷಪಡೆಗೆ ಹೋಗಿ ಶಸ್ತ್ರ ಪವಾಡವನ್ನು ಮಾಡುತ್ತಾರೆ. ಜಾತ್ರೆಯ ಕಾರ್ಯಕ್ರಮವೆಲ್ಲ ಮುಗಿದನಂತರ ದೇವರ ಉತ್ಸವ ಮೂರ್ತಿಗಳ ಹಿಂದೆಯೇ ಸಾಗಿ ಊರು ತಲುಪುತ್ತಾರೆ. ಹುಣ್ಣಿಮೆಯ ದಿನ ದಾರವನ್ನು ರೀಲಿಗೆ ಸುತ್ತಿ ಇಡುತ್ತಾರೆ. ಒಂದು ಹೊಸ ಬಟ್ಟೆಯಲ್ಲಿ ಇವನ್ನೆಲ್ಲಾ ಸುತ್ತಿ ಇಡುತ್ತಾರೆ. ಮತ್ತೆ ಶಸ್ತ್ರವನ್ನು ಬರುವ ದಸರಾ ಹಬ್ಬದ ಕಂಕಣದ ದಿನ ತೆಗೆದು ಕಂಕಣ ಕಟ್ಟಿದ ಮೇಲಿನಿಂದ ಒಂದು ಐದು ನಿಮಿಷ ಶಸ್ತ್ರವನ್ನು ತಿಕ್ಕೋದು ಮತ್ತು ಹಾಗೆ ಇಡೋದು ಈ ತೆರನಾಗಿ ಮಾಡುತ್ತಾರೆ. ಕಂಚಾವೀರರು ಶಸ್ತ್ರ ಪವಾಡವೊಂದನ್ನು ಬಿಟ್ಟರೆ ಬೇರೆ ಯಾವ ಪವಾಡವನ್ನೂ ಮಾಡುವುದಿಲ್ಲ. ಇವರಿಗೆ ದೇವಸ್ಥಾನದ ವತಿಯಿಂದ ನಾಲ್ಕುವರೆ ಎಕರೆ ಇನಾಮ ಜಮೀನಿದೆ.

## ೪.೪. ಬಾರಿಕರು :

ಪಂಜುಗಳಿಗೆ ಎಣ್ಣೆಯನ್ನು ಹಾಕುವ ಕಾಯಕವನ್ನು ಮಾಡಿಕೊಂಡಿರುವ ಬಾರಿಕವು ನೆರಣಿಕೆ ಗ್ರಾಮದಲ್ಲಿ ಎರಡು ಕುಟುಂಬಗಳಿವೆ. ಸ್ವಾಮಿ ಮಲ್ಲಯ್ಯನ ವಿಶೇಷ ಪೂಜಾ ಕಾರ್ಯಕ್ರಮಗಳಾದ ಕಂಕಣ, ಬನ್ನಿಯಲ್ಲಿ, ಜಾತ್ರೆ, ಬಸಿವೇಯರ ಆಟ, ನೆರಣಿಕೆಯಲ್ಲಿ ನಡೆದ ಮಲ್ಲಯ್ಯನ ಉತ್ಸವದ ಮೆರವಣಿಗೆಗಳು ಮುಂತಾದ ಸಂದರ್ಭಗಳಲ್ಲಿ ಡೊಳ್ಳಿನ ಹಿಂದೆಯೇ ಸಾಗಿ ಬರುವ ಪಂಜುಗಳಿಗೆ ಎಣ್ಣೆಯನ್ನು ಹಾಕುವ ಕಾಯಕ ಇವರುಗಳದಾಗಿದೆ. ಇವರು ಪಂಜುಗಳಿಗೆ ಹಾಕುವ ಎಣ್ಣೆಯನ್ನು ಊರಿನ ಹಿರಿಯರಾದ ಮಲ್ಲನಗೌಡರಿಂದ ಪಡೆದುಕೊಳ್ಳುತ್ತಾರೆ. ಒಂದು ವರ್ಷದ ಅವಧಿಯಲ್ಲಿ ದೇವಸ್ಥಾನಕ್ಕೆ ಮೀಸಲು ರೂಪದಲ್ಲಿ ಬಂದ ಎಣ್ಣೆ ಅದಾಗಿರುತ್ತದೆ. ಸುಮಾರು ಐದು- ಆರು ಡಬ್ಬಿಗಳ ಎಣ್ಣೆ ದಸರಾ ಬನ್ನಿಗೆ ಬೇಕಾಗುತ್ತದೆ. ವರ್ಷದಲ್ಲಿ ದೇವಸ್ಥಾನಕ್ಕೆ ಮೀಸಲು ರೂಪದಲ್ಲಿ ಬಂದ ಔಡಲ, ಒಳ್ಳೆಣ್ಣೆ ಇತ್ಯಾದಿ ಎಣ್ಣೆಯನ್ನು ಡಬ್ಬಿಗಳಲ್ಲಿ ಶೇಖರಣೆ

ಮಾಡಿ ಇಡುತ್ತಾರೆ. ದಸರಾ ಉತ್ಸವಕ್ಕೆ ಕಡಿಮೆ ಬರದಂತೆ ಮೀಸಲು ಎಣ್ಣೆಯ ಜೊತೆಗೆ ಇನ್ನಷ್ಟು ಹೆಚ್ಚಿಗೆ ಎಣ್ಣೆಯನ್ನು ಕೊಂಡು ತಂದು ಬಾರಿಕರಿಗೆ ಒಪ್ಪಿಸುತ್ತಾರೆ. ಬಾರಿಕರು ಸ್ವಾಮಿಯ ಕಂಕಣದ ದಿನ ನೆರಣಿಕೆಯ ಗ್ರಾಮದಿಂದ ಹೊರಡುವ ಉತ್ಸವ ಮೂರ್ತಿಗಳ ಮೆರವಣಿಗೆಯಲ್ಲಿ ಡೊಳ್ಳಿನ ಹಿಂದೆ ಸಾಗಿ ಪಂಜುಗಳಿಗೆ ಎಣ್ಣೆಯನ್ನು ಹಾಕುತ್ತಾರೆ. ಬನ್ನಿಯ ದಿನ ವಿಶೇಷವಾಗಿ ಸುಮಾರು ಎಂಟು-ಹತ್ತು ಪಂಜುಗಳು ಇರುತ್ತವೆ. ಈ ಎಲ್ಲಾ ಪಂಜುಗಳಿಗೆ ಎಣ್ಣೆಯನ್ನು ಹಾಕಲು 'ಬಾರಿಕರ ಮಲ್ಲಯ್ಯನ' ಕುಟುಂಬದ ಐದು ಮಂದಿ ಅಣ್ಣ-ತಮ್ಮಂದಿರಲ್ಲಿ ಈ ಕಾಯಕದಲ್ಲಿ ತೊಡಗಿರುತ್ತಾರೆ. ಬನ್ನಿಯ ದಿನ ಇವರುಗಳೂ ಬಡಿಗೆಗಳಿಗಿಂತ ಮುಂಚೆ ಕಾಡಸಿದ್ದಪ್ಪನ ಮಠಕ್ಕೆ ತೆರಳಿ ಅಲ್ಲಿ ಇರುವ ಕಂಚಾವೀರರಿಗೆ ಒಂದು ಮಗಿ (ಪ್ಲಾಸ್ಟಿಕ್‌ನ ಚಿಕ್ಕದಾದ ಜಗ್) ತುಂಬ ಎಣ್ಣೆಯನ್ನು ಹಾಕುತ್ತಾರೆ. ಜೊತೆಗೆ ರಕ್ತಪಡೆಯಲ್ಲಿ ಶಸ್ತ್ರ ಪವಾಡ ಮುಗಿದ ನಂತರ ಬನ್ನಿ ಗಿಡದ ಬಳಿ ಮತ್ತೊಂದು ಅರ್ಧ ಮಗಿ ಎಣ್ಣೆಯನ್ನು ಅವರಿಗೆ ತೆಗೆದುಕೊಂಡು ಅವರೇ ತಮ್ಮಲ್ಲಿಯ ಪಂಜುಗಳಿಗೆ ಎಣ್ಣೆಯನ್ನು ಹಾಕಿಕೊಳ್ಳಬೇಕು. ಯಾವುದೇ ಕಾರಣಕ್ಕೆ ಬಾರಿಕರು ಬಂದು ಕಂಚಾವೀರರ ಪಂಜುಗಳಿಗೆ ನೇರವಾಗಿ ಎಣ್ಣೆಯನ್ನು ಹಾಕುವಂತಿಲ್ಲ. ಉಳಿದಂತೆ ಬನ್ನಿಯಲ್ಲಿ ಪಂಜುಗಳು ಆರದಂತೆ ಇವರುಗಳು ಎಣ್ಣೆಯನ್ನು ಸುರಿಯುತ್ತಲೇ ಇರಬೇಕು. ಬಡಿಗೆ ಆಟದಲ್ಲಿ ಪಂಜುಗಳು ಆರುವ ಪರಿಸ್ಥಿತಿ ಇದ್ದರೂ ಪ್ರಾಣದ ಹಂಗನ್ನು ತೊರೆದು ಪಂಜುಗಳ ಬಳಿ ಓಡಿ ಹೋಗಿ ಎಣ್ಣೆಯನ್ನು ಹಾಕಬೇಕಾಗುತ್ತದೆ. ನಿಮಗೆ ಭಯ ಆನಿಸುವುದಿಲ್ಲವೇ ಆ ಬಡಿಗೆಗಳ ಮಧ್ಯದಲ್ಲಿ ಹಾಗೆ ಹೋಗುವುದಕ್ಕೆ ಎಂದು ಪ್ರಶ್ನಿಸಿದರೆ ಅವರು ಈ ತೆರನಾಗಿ ಅಭಿಪ್ರಾಯ ಪಟ್ಟರು. '' ಭಯ ಅಂಬೋದು ಏನೈತಿ. ಸತ್ತರೆ ಇಲ್ಲೇ ಮಾಪಿ ಬದುಕಿದ್ರೆ ಮನಿಗೆ ಹೋಗ್ತೀವಿ ಅಷ್ಟೇ. ಅವತ್ತಿನ್ನೋಟು ಭಯನೇ ಇರಂಗಿಲ್ಲ ನಮಗೆ''.

ಪಂಜುಗಳಿಗೆ ಎಣ್ಣೆ ಹಾಕುವ ಕಾಯಕ ಮಾಡುವ ಇವರುಗಳಿಗೆ ಈ ಮೊದಲು ಇನಾಮು ಭೂತ್ರಿ ಇತ್ತಂತೆ ಈಗ ಅದೆಲ್ಲ ಇಲ್ಲ. ಇವರ ಹಿರಿಯರು ಎಲ್ಲವನ್ನು ಮಾರಿದ್ದಾರಂತೆ. ಸದ್ಯಕ್ಕೆ ಇವರು ಕೂಲಿ ಕೆಲಸವನ್ನು ಮಾಡಿಕೊಂಡು ಜೀವಿಸಬೇಕಾಗಿದೆ. ನೆರಣಿಕೆಯ ಸುಂಕಲಮ್ಮನ ಗುಡಿ ಪೂಜೆಮಾಡುವ ಹಕ್ಕು ಇವರದಾಗಿದ್ದು ಇದರಿಂದ ಕೆಲಚಿಲ್ಲರೆ ಹಣ ಸಿಗುತ್ತದೆ. ಊರಿನಲ್ಲಿ ನಡೆವ ಬ್ರಾಹ್ಮಣರ ಮದುವೆಗಳಲ್ಲಾಗಲ್ಲಿ, ಇಲ್ಲ ಯಾವುದೇ ಶವಸಂಸ್ಕಾರದ ಕಾರ್ಯಕ್ರಮಗಳಲ್ಲಿ ಪಂಜುಗಳು ಇದ್ದಾಗ ಎಣ್ಣೆ ಹಾಕುವ ಕಾಯಕ ಇವರದೇ ಆಗಿರುವುದರಿಂದ ಆ ಕುಟುಂಬದ ಯಜಮಾನರಿಂದ ಹಣವನ್ನು ಪಡೆಯುತ್ತಾರೆ. ಜೊತೆಗೆ ಕೆಲವು ವಿಶೇಷ ದಿನಗಳಲ್ಲಿ ಗೌಡರು, ಬ್ರಾಹ್ಮಣರು, ಶ್ಯಾನಭೋಗರು ಮುಂತಾದವರ ಮನೆಗಳಲ್ಲಿ ಆಳಿನ ಕೆಲಸಮಾಡಿ ಕೂಲಿರೂಪದಲ್ಲಿ ಹಣವನ್ನು ಪಡೆಯುತ್ತಾರೆ. ಉಳಿದಂತೆ ಬಿಡಿ ದಿನಗಳಲ್ಲಿ ಕೂಲಿ ಕೆಲಸವೇ ಇವರಿಗೆ ಆಧಾರ. ಗಿರಿಯಲ್ಲಿರುವ ನಾಗವೀರನಗುಡಿಯ ಉಸ್ತುವಾರಿ ಇವರದ್ದೇ. ಗೌಡರು ದಸರಾ ಬನ್ನಿಯಲ್ಲಿ ಇವರುಗಳಿಗೆ ನೀಡಿದ ಎಣ್ಣೆಯನ್ನು ಬಳಸಿ ಉಳಿದ ಎಣ್ಣೆಯನ್ನು ಮತ್ತೆ ದೇವಸ್ಥಾನದ ಸ್ಥಾನಿಕರಿಗೆ ಒಪ್ಪಿಸುತ್ತಾರೆ. ಆ ಎಣ್ಣೆಯನ್ನು ಮತ್ತೆ ಬರುವ ವರ್ಷಕ್ಕೆ ಉಪಯೋಗಿಸಲು ತೆಗೆದಿಡುತ್ತಾರೆ.

## ೪.೫. ಮಡಿವಾಳರು :

ಸ್ವಾಮಿ ಮಲ್ಲಯ್ಯನ ಗಿರಿಯ ಕೆಳಭಾಗದಲ್ಲಿ ಮಡಿವಾಳರದೇ ಒಂದು ಪ್ರತ್ಯೇಕ ಚಿಕ್ಕ ಗುಡಿಯಿದೆ. ಈ ಗುಡಿಯ ಸುಕನಾಸಿಯ ಭಾಗದ ಕೆಲಸ ಇನ್ನೂ ಪೂರ್ಣಗೊಂಡಿಲ್ಲ. ಗರ್ಭಗುಡಿಯಲ್ಲಿ ಮಡಿವಾಳ ಮಾಚಿದೇವನ ಶಿಲಾ ವಿಗ್ರಹವಿದೆ. ಈ ಗುಡಿಯನ್ನು ಮಡಿವಾಳರ ಲಿಂಗದಹಳ್ಳಿ ಚಿಕ್ಕ ಹನುಮಂತಪ್ಪನವರ ತಂದೆಯವರು ೧೯೭೩ ರಲ್ಲಿ ಗುಡಿಯನ್ನು ಕಟ್ಟಲು ಶಂಕು ಸ್ಥಾಪನೆಯ ರೀತಿಯಲ್ಲಿ ಪ್ರಾರಂಭಿಸಿ ೧೯೭೮ರಲ್ಲಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಬನ್ನಿಯಲ್ಲಿ ಪಂಜುಗಳನ್ನು ಹಿಡಿಯುವ ಕಾಯಕ ಇವರದಾಗಿದ್ದು ಇವರು ಗಿರಿಗೆ ಬಂದಾಗ ಉಳಿದುಕೊಳ್ಳಲು ಪ್ರತ್ಯೇಕ ಒಂದು ಮಂಟಪ ಅಥವಾ ಚಿಕ್ಕ ಗುಡಿಯಾಗಲೀ ಇಲ್ಲದುದರಿಂದ ಇವರ ತಂದೆಯವರು ಚಿಕ್ಕ ಜಾಗವನ್ನು ಹಿಡಿದು ಈ ಗುಡಿಯನ್ನು ಕಟ್ಟಿಸಿದ್ದಾರೆ. ಮಾಚಿದೇವರ ಗುಡಿಯನ್ನು ಬನ್ನಿಯಲ್ಲಿ ಈ ಕ್ಷೇತ್ರದ ಮಡಿವಾಳರು ಇದೇ ಗುಡಿಯಲ್ಲಿ ಬಂದು ತಂಗುತ್ತಾರೆ.

ದಸರಾ ಬನ್ನಿಯಲ್ಲಿ ಪಂಜುಗಳನ್ನು ಹಿಡಿಯುವವರು ನೆರಣಿಕೆಯ ಮಡಿವಾಳರ ಕುಟುಂಬದವರೇ. ಇವರು ಬಿಟ್ಟು ಬೇರೆ ಯಾರೂ ಪಂಜುಗಳನ್ನು ಹಿಡಿಯುವ ಹಾಗೆ ಇಲ್ಲ. ದೇವರ ಉತ್ಸವ ಕಾರ್ಯಗಳಾದ ಕಂಕಣದಲ್ಲಿ, ಬನ್ನಿಯಲ್ಲಿ, ರಥೋತ್ಸವದ ಸಮಯದಲ್ಲಿ, ಬಸಿವೇರ ಆಟ, ಮತ್ತು ನೆರಣಿಕೆ ಗ್ರಾಮದಲ್ಲಿ ನಡೆವ ಮೆರವಣಿಗೆಯಲ್ಲಿ ಪಂಜುಗಳನ್ನು ಇವರು ಹಿಡಿಯುತ್ತಾರೆ. ಬನ್ನಿಯಲ್ಲಿ ಕನಿಷ್ಠ ಎಂಟು ಪಂಜುಗಳು ಇರುತ್ತವೆ. ಜೊತೆಗೆ ಬನ್ನಿಯ ಮೆರವಣಿಗೆಯಲ್ಲಿ ತ್ರಿಶೂಲದ ಕೊನೆಗೆ ಬಾಗಿದ ಕೊಬ್ಬರಿ, ಬಟ್ಟೆ ಮುಂತಾದವುಗಳನ್ನು ಹಾಕಿ ಉರಿಸುವ ಇಲಾಲುಗಳು ಸಾಕಷ್ಟು ಇರುತ್ತದೆ. ಆದರೆ ಅವುಗಳನ್ನು ಭಕ್ತರು ಬಡಿಗೆ ಆಡುವವರು ಯಾರು ಬೇಕಾದರೂ ಹಿಡಿಯಬಹುದು, ಎಲ್ಲಿ ಬೇಕಾದರೂ ಅಲ್ಲಿ ಹಿಡಿಯಬಹುದು. ಅದಕ್ಕೆ ಯಾವುದೇ ಕಟ್ಟಳೆ ನಿಯಮಗಳಲ್ಲಿ ಆದರೆ ಪಂಜುಗಳನ್ನು ಹಿಡಿಯುವವರು ಮಾತ್ರ ಮಡಿವಾಳರು. ಇವರಿಗಾಗಿಯೇ ಈ ಕಾಯಕವನ್ನು ಮೀಸಲಾಗಿರಿಸಿದ್ದಾರೆ. ಪ್ರತಿ ಊರುಗಳಲ್ಲಿ ಮದುವೆ,ದೇವರ ಮೆರವಣಿಗೆ, ಮುಂತಾದ ಇತರೆ ಕಾರ್ಯಕ್ರಮಗಳಲ್ಲಿ ಮಾಡಿವಾಳರೇ ಪಂಜುಗಳನ್ನು, ಗ್ಯಾಸ್ ಲೈಟುಗಳನ್ನು ಹಿಡಿಯೋರು. ಆದರೆ ಆ ಪಂಜುಗಳಿಗೆ ಸೀಮೆ ಎಣ್ಣೆಯನ್ನು ಬಳಸುತ್ತಾರೆ. ಮಲ್ಲಯ್ಯನ ಬನ್ನಿಯಲ್ಲಿ ಪಂಜುಗಳನ್ನು ಹೊತ್ತವರು ಬಿಡಿ ದಿನಗಳಲ್ಲಿ ಸೀಮೆ ಎಣ್ಣೆಯ ಪಂಜುಗಳನ್ನು ಹೊರುವುದಿಲ್ಲ.

ಇನ್ನು ಬನ್ನಿಯ ದಿನ ಬಡಿಗೆ ಆಟದ ಗದ್ದಲೊಳಗೆ ದೇವರ ಉತ್ಸವ ಮೂರ್ತಿಗಳ ಆಭರಣಗಳು ಬೀಳುವ ಸಂಭವವಿರುತ್ತದೆ. ''ಆದಕ್ಕೆ ನಾವು ಎಲ್ಲಿ ಬೇಕಾದರೆ ಅಲ್ಲಿಗೆಲ್ಲ ಅಡ್ಯಾಡಂಗಿಲ್ಲ ದೇವರು ಪಕ್ಕದಾಗೇ ಇರಬೇಕು. ದೇವರ ಕೊಳ್ಳಾಗಿನ ಸಾಮಾನು ಏನೇ ಬೀಳಲಿ, ಕಳೆದು ಹೋಗಲಿ ಅದು ನಮಗೆ ಸಂಬಂಧ. ಆ ಸಿಕ್ಕ ಸಾಮಾನುಗಳನ್ನು ತಗಂಡ್ಹೋಗಿ ಕುಲಕರ್ಣಿ ಸ್ವಾಮ್ಯಾರು ಅಂತ ಐದಾರ ಅವರಿಗೆ ಕೊಡ್ತೀವಿ. ಅದು ದೇವರೆಲ್ಲ ಊರಾಗ ಕುಂದರಿಸಿದ ಮ್ಯಾಲೆ. ಒಟ್ಟು ನಾವೇನಪ್ಪ ಅಂದ್ರೆ ದೇವ್ರ ಸಾಮಾನು ಏನಾರಾ ಕೆಳಗೆ ಬಿದ್ರೆ

ಅವನ್ನ ಹುಡುಕೋದು ಜೊತೆಗೆ ಬೆಳಕು ಮಾಡೋದು ನಮ್ಮ ಕಾಯಕ . ದಸರಾ ಬನ್ನಿಯ ಬಡಿಗೆ ಆಟದಾಗ ದೇವರುಗಳ ಹಿಂದೆ ನಾವು ಹೋಗುವಾಗ ಕಟ್ಟಿಗೆ ಏಟುಗಳು ತಗಲುತಾವ. ಶಾಟ್ ಬಡಿಗೆ ಬೀರ್ತಾವ. ನಮ್ಮ ಪಂಜುಗಳೇ ಹಿಂಗೆ ತಿರುಗಿಸಿದಾಗ (ಪಕ್ಕಕ್ಕೆ) ಸುಡುತಿರ್ತಾವೆ. ಒಂದೊಂದು ಸಲಿ ಆದ್ರೆ ನಾವು ಎಂಥ ಕಷ್ಟ ಬಂದ್ರೂನೂ ದೇವರು ತಾಗೆನೇ ಇದ್ದೇ ತೀರಬೇಕು'' ಎಂದು ಮಡಿವಾಲರ ಹನುಮಂತಪ್ಪ ಹೇಳುತ್ತಾರೆ.

ನಂತರ ಮಡಿವಾಳರ ಅತ್ಯಂತ ಪ್ರಮುಖ ಕಾಯಕ ಎಂದರೆ ಕ್ಷೇತ್ರಕ್ಕೆ ಹೊಸ ಬಸವಿಯರನ್ನ ಯಾರನ್ನೇ ಬಿಡಲಿ ಅವರು ದೀಕ್ಷೆಯ ನಂತರ ದಸರಾ ಉತ್ಸವದಲ್ಲಿ ಬಸಿವೇರ ಆಟದ ಮುಂಚೆ ಬಂದು ಈ ಮಡಿವಾಳರನ್ನು ಕಾಣುತ್ತಾರೆ. ಕಂಡು ಮಡಿವಾಳರಿಗೆ ಅವರು ೨೫ ರೂಪಾಯಿ ಕಾಣಿಕೆಯನ್ನು ಕೊಟ್ಟು ದಾಖಲಿಸಿಕೊಳ್ಳುತ್ತಾರೆ. ಇಷ್ಟಕ್ಕೆ ಅವರು ಪೂರ್ಣ ಪ್ರಮಾಣದ ಬಸಿವೇರು ಅಂತ ಅನಿಸಿಕೊಳ್ಳುವುದಿಲ್ಲ. ವಸಂತೋತ್ಸವ ಕಾರ್ಯಕ್ರಮದಲ್ಲಿ ಮಡಿವಾಳರು ಹೊಸದಾಗಿ ಸೇರ್ಪಡೆಯಾದ ಬಸವಿಯರ ಮೇಲೆ ಭಂಡಾರ ಹಾಕಿ ಅವರನ್ನು ಒಂದು ಐದು ಹೆಜ್ಜೆ ಹೊತ್ತು ಕೊಂಡು ಕುಣಿಯುತ್ತಾರೆ. ತರುವಾಯ ಅವರ ಮೇಲೆ ಓಕುಳಿ ನೀರನ್ನು ಚೆಲ್ಲಿದ ಮೇಲೆಯೇ ಅವರು ಮಡಿವಾಳರ ಲಿಸ್ಟನಾಗೆ ಸೇರಿದಂತೆಯೇ ಜೊತೆಗೆ ಪೂರ್ತಿ ಪ್ರಮಾಣದಲ್ಲಿ ಬಸವೇರು ಆದಂಗೇನೇ. ಬಸವೇರು ಯಾರೇ ಹೊಸಬರು ಬಂದಾಗ ಈ ರೀತಿಯಾಗಿ ಕಾರ್ಯಕ್ರಮವನ್ನು ಜರುಗಿಸುತ್ತಾರೆ. ಓಕುಳಿಯನ್ನು ನೆರೆದ ಭಕ್ತರ ಮೇಲೆಯೂ ಸಹ ಸಿಂಪಡಿಸುತ್ತಾರೆ. ಓಕುಳಿಗೆ ಮುಖ್ಯವಾಗಿ ಭಂಡಾರ, ಸುಣ್ಣ, ಸ್ವಲ್ಪ ಎಣ್ಣೆಯನ್ನು ಕಲಿಸಿ ತಯಾರಿಸುತ್ತಾರೆ.

## ೪.೬. ಮದ್ದಲಿ ಗೊರವರು :

ಗಣಚಾರಿಗಳೆಂದು ಕರೆಯಿಸಿಕೊಳ್ಳುವ ಮದ್ದಲಿ ಗೊರವರು ಕುರುಬ ಜನಾಂಗದ ಹಾಲು ಮತದ ಉಣ್ಣೆ ಕಂಕಣದ ಪಂಗಡಕ್ಕೆ ಸೇರಿದವರಾಗಿದ್ದಾರೆ. ಇವರು ತಲೆಗೆ ರುಮಾಲು ಸುತ್ತಿಕೊಂಡು ಭಂಡಾರ ಚೀಲವನ್ನು ಧರಿಸಿ ಮದ್ದಲಿಯನ್ನು ಕೊರಳಿಗೆ ತಗಲು ಹಾಕಿಕೊಂಡಿರುವುದರಿಂದ ಇವರಿಗೆ ಈ ಹೆಸರು ಬಂದಿದೆ. ಸಾಧ್ಯವಾದರೆ ಇವರು ಭಿಕ್ಷಾಟನೆಗೆ ಹೋಗ್ತಾರೆ. ಕ್ಷೇತ್ರದಲ್ಲಿ ಮದ್ದಲಿ ಗೊರವರದೇ ಪ್ರತ್ಯೇಕಗುಡಿಯಿದೆ. ಅದು ಗೊರವಲಿಂಗಪ್ಪನ ಗುಡಿ. ಈ ಪುಟ್ಟ ಗುಡಿಯ ಒಳಭಾಗದಲ್ಲಿ ಮದ್ದಲಿ ಹಿಡಿದು ಬಾರಿಸುತ್ತಿರುವ ಗೊರವಯ್ಯನನ್ನು ಶಿಲೆಯ ಮೇಲೆ ಕೆತ್ತಲಾಗಿದೆ. ಗಣಾಚಾರಿಗಳ ಹಿರಿಯರು ನಮ್ಮದೇ ಆದ ಪ್ರತ್ಯೇಕ ಗುಡಿ ಇರಲಿ ಎಂದು ಈ ಗುಡಿಯನ್ನು ನಿರ್ಮಿಸಿಕೊಂಡಿದ್ದಾರೆ. ಪ್ರತಿ ಭಾನುವಾರ, ಅಮಾವಾಸೆ ಮತ್ತು ವಿಶೇಷವಾಗಿ ದಸರಾ ಜಾತ್ರೆಯ ದಿನಗಳಲ್ಲಿ ಈ ಕ್ಷೇತ್ರದ ಮದ್ದಲಿ ಗೊರವರು ದೀಪಾರಾದನೆ ಮಾಡಿ, ಪೂಜೆ ಮಾಡಿ ಒಡೆಯರಿಗೆ ನಮಸ್ಕರಿಸಿ ಬೆಟ್ಟವನ್ನು ಹತ್ತುತ್ತಾರೆ.

ಮದ್ದಲಿ ಗೊರವರು ತಮ್ಮ ಕೆಳಗೆ ಬರುವಂತಹ ಕಂಚಾವೀರರಿಗೆ, ನಾಯಿಗೊರವರಿಗೆ, ಕುದುರೆ ಕಾರರಿಗೆ, ಮತ್ತು ಬಸವಿಯರಿಗೆ ದೀಕ್ಷೆಯನ್ನು ನೀಡುವ ಅಧಿಕಾರವನ್ನು ಒಡೆಯರಿಂದ ಪಡೆದುಕೊಂಡಿದ್ದಾರೆ. ಆದರೆ ದೀಕ್ಷೆನೀಡುವ ಪೂರ್ಣ ಅಧಿಕಾರ ಇರುವುದು ಒಡೆಯರಿಗೇನೇ. ಗಣಾಚಾರಿಗಳು ಭಕ್ತರಿಗೆ ದೀಕ್ಷೆಯನ್ನು ನೀಡಿ ಅವರನ್ನು ಒಡೆಯರ ಒಳಗೆ ಕರೆದುಕೊಂಡು ಗಿರಿಗೆ ಬಂದಾಗ ಒಡೆಯರು ದೀಕ್ಷೆ ಪಡೆದವರಿಗೆ ಆಶೀರ್ವದಿಸಿ ಅವರ ಹೆಸರು, ಊರು, ಯಾವ ಗೊರವ ಎಂದು ತಮ್ಮ ರಿಜಿಸ್ಟರ್‌ನಲ್ಲಿ ದಾಖಲಿಸಿ, ಅವರಿಗೆ ಒಂದು ಶ್ರೀಮುಖವನ್ನು ನೀಡುತ್ತಾರೆ. ಒಂದು ವೇಳೆ ಗಿರಿಗೆ ಬರಲು ಆಗದಿದ್ದರೆ ಒಡೆಯರ ಮನೆಗೆ ಹೋಗಿ ಆಶೀರ್ವಾದವನ್ನು ಪಡೆಯುವ ಪರಿಪಾಠವಿದೆ. ದೀಕ್ಷೆಪಡೆದ ಗೊರವ ಒಡೆಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆದು ಒಡೆಯರಿಗೆ ಸಲ್ಲಬೇಕಾದ ದಕ್ಷಿಣೆಯನ್ನು ಕೊಟ್ಟು ಅವರಿಂದ ಶ್ರೀಮುಖವನ್ನು ಪಡೆಯುತ್ತಾನೆ.

ಗಣಾಚಾರಿಗಳು ದೀಕ್ಷೆಯನ್ನು ನೀಡಬೇಕಾದಾಗ ಅನುಸರಿಸುವ ಪೂಜಾ ವಿಧಿ ವಿಧಾನ ಹಾಗೂ ನಿಯಮಗಳು ಈ ಕೆಳಗಿನಂತಿವೆ. '' ನಾವಾಗಿ ನಾವು ದೀಕ್ಷೇನ ನೀಡಂಗಿಲ್ಲ. ಅವರಾಗಿ ಬಂದು ಕೇಳಿದಾಗ ಮಾತ್ರ ದೀಕ್ಷೇನ ನೀಡ್ತೀವಿ. ಗೊತ್ತಾದ ದಿನ ಒಗ್ಗಪ್ಪನೋರಿಗೆ ಬರಾಕ ಹೇಳ್ತೀವಿ. ಅವರು ಬಂದು ಮ್ಯಾಕ ಅವರಿಂದ ಕಂಬಳಿ ಹಾಸಿ ಗದ್ದಿಗೆಯನ್ನು ಬರೆಸ್ತೀವಿ. ಪೂಜೆಗೆ ಬೇಕಾದ ಎಲ್ಲಾ ಐಟಂಗಳನ್ನು ಅವರು ರೆಡಿ ಮಾಡಿ ಇಡ್ತಾರೆ. ಪೂಜೆ ನಡಿವ್ಯಾಗ ಅವರಿಗೆ ಉಪದೇಶ ಮಾಡ್ತೀವಿ. ಉಪದೇಶ ಅಂದರೆ ಹೊಲದಾಗ ಹಸು ಮೇಯ್ತಿದ್ದರೆ ಮೇಯ್ತಿದೆ ಅಂತ ಹೇಳಬಾರದು, ಕರು ಹಾಲು ಕುಡಿತಿದ್ರೆ ಕುಡಿತೈತಿ ಅಂತ ಹೇಳಬಾರದು, ಕಾಲಿಗೆ ಮೆಟ್ಟು ಹಾಕಬಾರದು. ಹಾವನ್ನು ಸಾಯಿಸಬಾರದು ಹೀಗೆ ಒಂದೈದು ನುಡಿಗಳನ್ನು ಕಿವಿಯಲ್ಲಿ ಹೇಳ್ತೀವಿ. ಅವರಿಗೆ ಅಷ್ಟು ಆದಮ್ಯಾಲೆ ಒಂದು ಹೂ ತಗಂಡು ಅದನ್ನು ಹುಂಚ ರೀತಿ (ಮುದ್ರೆ ಹಾಕುವ ರೀತಿ) ಮಾಡಿಕೊಂಡು ಅದನ್ನು ಭಂಡಾರದಾಗ ಅದ್ದಿ ಅವರಿಗೆ ಮುದ್ರೆ ಹಾಕ್ತೀವಿ. ಮುದ್ರೆ ಹಾಕಿದ ಮ್ಯಾಲೆ ಕವಡೆ ಸರಕಟ್ಟಿ ಅವರಿಗೆ ಪಂಚಾಮೃತ ನೀಡ್ತೀವಿ. ಇಷ್ಟಾದರೆ ಅವರಿಗೆ ದೀಕ್ಷೆ ಆದಂತೆನೇ ಲೆಕ್ಕ. ದೋಣಿಗೆ ಪಂಚಾಮೃತನ ನೀಡಿ ವಗ್ಗಪ್ಪನೋರೆಲ್ಲ ಅದರ ಸುತ್ತು ತಿರುಗಿ ಅದನ್ನು ಬಾಯಿಯಿಂದಲೇ ಊಟ ಮಾಡ್ತಾರೆ. ಅದನ್ನೆಲ್ಲಾ ಸ್ವೀಕರಿಸಿದ ಮೇಲೆ ಅವ್ರು ಏನದ್ರು ಕಾಣಿಕೆ ಕೊಟ್ಟಿದ್ದನ್ನು ಸ್ವೀಕರಿಸ್ತೀವಿ'' ಎಂದು ಗಣಾಚಾರಿ ಮಲ್ಲಯ್ಯ ಹೇಳುತ್ತಾನೆ. ಹೀಗೆ ಗಣಾಚಾರಿಯು ದೀಪ-ಧೂಪ ಹಾಕಿ ಕೊರಳಿಗೆ ಕವಡೆ ಸರ ಕಟ್ಟಿ ಹಣೆಗೆ ವಿಭೂತಿ ಭಂಡಾರ ಹಚ್ಚುತ್ತಾನೆ. ಇವೆಲ್ಲವೂ ಗೊರವನಾದುದರ ಸಂಕೇತ. ಆಗ ದೀಕ್ಷೆ ಪಡೆದ ಸಂಕೇತವಾಗಿ ನಾಲ್ಕು ಮನೆಗಳಿಗೆ ಭಿಕ್ಷೆ ಬೇಡುತ್ತಾನೆ. ಹೀಗೆ ಒಮ್ಮೆ ಗೊರವರಾದವರು ಇದನ್ನೇ ಮುಂದುವರೆಸಿಕೊಂಡು ಹೋಗುತ್ತಾರೆ. ದೀಕ್ಷೆ ಪಡೆದವರು ಗಣಾಚಾರಿಗೆ ೫೧ ರೂಪಾಯಿ ದಕ್ಷಿಣೆಯನ್ನು ನೀಡಬೇಕಾಗುತ್ತದೆ. ಒಡೆಯರಿಗೆ ೧೦೧ ದಕ್ಷಿಣೆಯನ್ನು ನೀಡುತ್ತಾರೆ. ಇದ್ದಂತವರಾದರೆ ಗಣಾಚಾರಿಗಳಿಗೆ ಮತ್ತು ಒಡೆಯರಿಗೆ ಬಟ್ಟೆಯನ್ನು ತರುತ್ತಾರೆ.

ದಸರಾ ಅಮವಾಸೆಯಾಗಿ ೫ನೇ ದಿನಕ್ಕೆ ಗಿರಿಯಲ್ಲಿ ನಡೆಯುವ ಕಂಕಣದಲ್ಲಿ ಗಣಾಚಾರಿಗಳು ಕಂಕಣ ಕಟ್ಟಿಸಿ ಕೊಳ್ಳುವ ಅಧಿಕಾರವಿದೆ. ಬನ್ನಿಯ ದಿನ ಬೆಳಿಗ್ಗೆ ೯.೩೦ ರ ಸುಮಾರಿಗೆ ದೇವರ ಉತ್ಸವ ಮೂರ್ತಿಗಳನ್ನು ಅಲಂಕರಿಸುವ ಕಾಯಕ ಇವರದಾಗಿದೆ. ಇವರಿಗೆ ಸಹಾಯಕರಾಗಿ ಕಂಚಾವೀರರು ಮತ್ತು ಜೀರರು ಇರುತ್ತಾರೆ. ಮಾಳಮ್ಮನ ಉತ್ಸವ ಮೂರ್ತಿಗೆ ರೋಜದ ಹೂವಿನ ಅಲಂಕಾರವಿರುತ್ತದೆ. ಮೆರವಣಿಗೆಯಲ್ಲಿ ಉತ್ಸವಮೂರ್ತಿಗಳು ಸಾಗುವಾಗ ನೂಕು ನುಗ್ಗಲಿನೊಳಗೆ ಕೆಲವೊಮ್ಮೆ ದೇವರ ಆಭರಣಗಳು ಸಡಿಲಗೊಳ್ಳುತ್ತವೆ. ''ದಡಗ್ಗನ ದೇವ್ರು ಏನರಾ ಸಡ್ಲ (ಸಡಿಲ) ಆದ್ರೆ, ಇಲ್ಲ ಬಿದ್ಹೋದ್ರೆ ಭಕ್ತರು ಇಲ್ಲ ಪಂಜು ಹಿಡಿಯುವ ಅಗಸರು ಏನಪ್ಪ ದೇವರು ಸಡ್ಲ ಆಗ್ಯಾವ ಬಿಗಿ ಬರ್ರೀ ಅಂತ ಕರಿತಾರೆ. ನಾವು ಆಗ ಜನದಾಗ ತೂರಿಕೊಂಡ್ಹೋಗಿ ಬಿಗಿತೀವಿ. ನಾವು ದೇವರು ತಾಗೆನೇ ಹಿಂದು ಮುಂದು ಇರ್ತೀವಿ. ನಾವು ದೂರ ಏನಾರ ಇದ್ರೆ ಮಾತ್ರ ನಮ್ಮನ್ನು ಕರಿತಾರೆ. ನಮಗೆ ಆಗಲೇ ನಿಗ ಯಾವ ದೇವರಿಗೆ ಏನಾಗೈತೆ ಯಾವ ದೇವರಿಗೆ ಏನಿಲ್ಲ ಅಂತ'' ಎಂದು ಎಳ್ಳಾರ್ಥಿಯ ಮದ್ದಲಿಗೊರವ ತಿಪ್ಪಣ್ಣಕ ಹೇಳುತ್ತಾನೆ.

ಅಂತೂ ದೇವರ ಅಲಂಕಾರ ಹಾಗೂ ಆಭರಣಗಳು ಸಡಿಲಗೊಂಡು ಬೀಳದ ಹಾಗೆ ಅವುಗಳನ್ನು ಬಿಗಿದು ಕಟ್ಟುವ ಅಧಿಕಾರ ಇವರದಾಗಿದೆ. ಇನ್ನು ಬನ್ನಿಯಲ್ಲಿ ವಿಶೇಷವಾಗಿ ಶಿವಸಾನ ಗದ್ದಿಗೆಯಲ್ಲಿ ಒಡೆಯರು ಕುಳಿತಾಗ ಒಡೆಯರ ಪಾದ ಪೂಜೆಯನ್ನು ಮಾಡಿಕೊಂಡು ಭಕ್ತರು ತಂದ ಮೀಸಲುಗಳನ್ನು ಸ್ವೀಕರಿಸಿ ಒಡೆಯರಿಗೆ ನೀಡುತ್ತಾರೆ. ಜೊತೆಗೆ ಕಾಯಿ ಒಡೆದು ಮಂಗಳಾರತಿ ಮಾಡುವ ಪ್ರಮುಖ ಕಾರ್ಯ ಇವರದಾಗಿದೆ. ಪೂಜಾ ಕಾರ್ಯಕ್ರಮ ನೆರವೇರುವಾಗ ಇವರು ಮಲ್ಲಯ್ಯನ ಕುರಿತು ಕೆಲ ಶ್ಲೋಕವನ್ನು ಹಾಡ್ತಾರೆ.

''ಶಿವ ಶಿವ ಶಿವನ ಗುಂಡಿಗೆ
ಶಿವನಾಗಮಲ್ಲ ಹೊನ್ನ ಕಿರೀಟ ಎತ್ತಿದನಲ್ಲ
ಬಂಗಾರದೂಟು ಬಲದು ಕೊಂಡು
ತೂಗು ತೊಟ್ಟಿಲವಾಗಲಿ ಮಲ್ಲೇಶ್ವರನಂಥ
ಗಂಡು ಮಕ್ಕಳಾಗಲಿ, ಮಾಳಮ್ಮನಂಥ
ಹೆಣ್ಣುಮಕ್ಕಳಾಗಲಿ
ನಮ್ಮಂಥ ಗೊರವಪ್ಪನೋರಿಗೆ ಮಾಡಿ ನೀಡುವಂತಾಗಲಿ
ಜಗಂಬಲೆ ಏಳುಕೋಟಿ ಏಳುಕೋಟಿ''.

ಈ ರೀತಿಯ ಶ್ಲೋಕಗಳನ್ನು ವಿಶೇಷವಾಗಿ ಮಂಗಳಾರರಿಯ ಸಮಯದಲ್ಲಿ ಹಾಡುತ್ತಾರೆ. ಜೊತೆಗೆ ಮದ್ದಲಿಯನ್ನು ಸಹ ಬಾರಿಸುತ್ತಾರೆ. ಒಡೆಯರ ಅಧೀನದಿಂದ ತಂದ ಸರಪಳಿಯನ್ನು ಪವಾಡದ ದಿನ ಬೆಳಿಗ್ಗೆ ಶಿವಸಾನ ಗದ್ದಿಗೆಯಲ್ಲಿ ಇಟ್ಟಿರುತ್ತಾರೆ. ವಗ್ಗಪನವರು ಹರಿಯುವ ಸರಪಳಿಗೆ ಪೂಜೆ ಮಾಡಿ, ಕಾಯಿ ಒಡೆದು ಮಂಗಳಾರತಿ ಮಾಡಿ ಒಡಪನ್ನು ಹೇಳ್ತಾರೆ.

'' ಹಹಾ... ದೇವಾ
ಉದಯದ ಆಯಿತವಾರ ಉತ್ತು ಮಲ್ಲಿಗೆ ಮೈಲಾರ
ದಕ್ಷಿಣನೇ ಸಂಹಾರ - ಮುಕ್ಕಣ್ಣನೇ ಹರನು
ಸ್ವಾಮಿಗೆ ಏರುತ ತೇಜಿ, ಚೆನ್ನಮಲ್ಲಿಗೆ ಪೂಜಿ,
ಮಲ್ಲಯ್ಯನ ಪೂಜಿಗೆ ಮಲ್ಲಿಗೆ ಹೂ-ತಂದಿಟ್ಟು
ದುರ್ಗಂಧಕಾರ ಶರನ್ನೋ ಶಸ್ತ್ರನ್ನೋ
ದೇಶ ಒಂಬತ್ತು ಕೋಟಿ
ಅಧಿಪತಿ ಹಾಲಗಿರಿ ಪದ್ಮ ಚಂದ್ರಗಿರಿ,
ಹರಿವ ಗಂಗೆಗೆ ಹೋಗಿ ಮುಖವು ಮುತ್ತಣಮಾಡಿ
ಐದು ಮಂತ್ರವನು ಜಪಿಸಿ ಮಹಾ ಮಲ್ಲೇಶ್ವರನೇ.''

ಈ ರೀತಿಯ ಒಡಪುಗಳು ಸುಮಾರು ಹತ್ತು ಆಗಬಹುದು. ಅದು ವಿಶೇಷವಾಗಿ ಈ ಸರಪಳಿ ಹರಿಯುವ ಸಂದರ್ಭದಲ್ಲಿ ಖಡ್ಗವನ್ನು ಹೇಳುತ್ತಾರೆ. ಆ ರೀತಿ ಖಡ್ಗವನ್ನು ಹೇಳುವ ಅಧಿಕಾರ ಇವರದೇ. ಪತ್ತಿಕೊಂಡದಿಂದ ಅನೇಕ ಜನ ವಗ್ಗಪ್ಪನವರು ಬರುತ್ತಾರೆ. ಅವರ ಹಿಂದೆ ಭತ್ತನಯ್ಯ (ಗಣಾಚಾರಿ) ನವರೂ ಬರುತ್ತಾರೆ. ಇವರಿಗೆ ಗಿರಿಯಲ್ಲಿ ಯಾವುದೇ ವಿಶೇಷ ಅಧಿಕಾರ ಇರದೆ ದೇವರ ಸೇವೆಯನ್ನು ಕೈಗೊಂಡು ಭಕ್ತರು ನೀಡಿದ ತಿಂಡಿಯನ್ನು ದಕ್ಷಿಣೆಯನ್ನು ಸ್ವೀಕರಿಸಿ ಅವರಿಗೆ ಆಶೀರ್ವದಿಸುತ್ತಾರೆ. ಭತ್ತನಯ್ಯನವರು ಸ್ವಾಮಿಯ ಸೇವೆಯ ಬಗ್ಗೆ ಭಕ್ತಿ ಪುರ್ವಕವಾಗಿ '' ನಾಕಿ ಗೋರಂತ ಪನಿ ಚೇಸಿ ಪೆಟ್ಟು ನೇನು ಕೊಂಡಂಥ ಫಲಿತ ಇಸ್ತಾನು'' (ನನಗೆ ಉಗುರಿನಷ್ಟು ಸೇವೆ ಮಾಡು ನಾನು ನಿನಗೆ ಬೆಟ್ಟದಷ್ಟು ಫಲ ಕೊಡುತ್ತೇನೆ) ಹೀಗೆ ನಾವು ದೇವರಿಗೆ ಸೇವೆ ಮಾಡಬೇಕು ಎಂದು ಹೇಳುವರು. ಅಂತೂ ಪತ್ತಿಕೊಂಡದವರಿಗೆ ಗಿರಿಯಲ್ಲಿ ಯಾವುದೇ ಅಧಿಕಾರ ಇಲ್ಲದಿದ್ದರೂ ಸ್ವಾಮಿಯ ಸೇವೆಯೇ ಅವರಿಗೆ ಮುಖ್ಯ. ಈ ಕ್ಷೇತ್ರದಲ್ಲಿ ಗಣಾಚಾರಿಗಳು ಭಿಕ್ಷಾಟನೆಗೆ ಹೋಗುವುದು ತುಂಬಾ ವಿರಳ. ಉಳಿದಂತೆ ಭಕ್ತರು ಪೂಜೆಗೆ ಮನೆಗೆ ಕರೆದರೆ ಹೋಗುತ್ತಾರೆ. ಅವರುಗಳು ನೀಡುವ ದಕ್ಷಿಣೆ ಕಾಣಿಕೆಗಳನ್ನು ಸ್ವೀಕರಿಸುತ್ತಾರೆ. ಆಚಾರವು ತಪ್ಪಬಾರದೆಂಬಂತೆ ವರ್ಷ ದಸರಾ ಬನ್ನಿಯ ದಿನ ಒಂದೈದು ಮನೆಗಳಿಗೆ ಭಿಕ್ಷೆಗೆ ಹೋಗಿ ಬರುವ ಪರಿಪಾಠವಿದೆ. ಈ ಕ್ಷೇತ್ರದ ಹೆಚ್ಚಿನ ಅಧಿಕಾರ ನೆರಣಿಗೆ ಗ್ರಾಮದವರಿಗೆ ಇರುವುದರಿಂದ ಆ ಗ್ರಾಮ ಗಣಾಚಾರಿಗಳಿಗೆ ಭೂಮಿ ಇನಾಮಿನ ರೂಪದಲ್ಲಿ ದೊರೆತಿವೆ. ಅದು ಬಿಟ್ಟ ಬೇರೆ ಊರಿನ ಗಣಾಚಾರಿಗಳಿಗೆ ಯಾವುದೇ ರೀತಿಯ ಇನಾಮು ದೊರೆತಿಲ್ಲ.

## ೪.೭. ಕುದುರೆ ಕಾರರು :

ಇವರು ಕೂಡಾ ಕುರುಬ ಜಾತಿಯವರೆ. ಇವರು ಜಾತ್ರೆ ಮುಂತಾದ ಸಂದರ್ಭದಲ್ಲಿ ದೇವರ ಮುಂದೆ ಕುದುರೆಯಂತೆ ಕುಣಿಯುವರು. ಕಂಬಳಿಯೊಂದನ್ನು ಎರಡೂ ಭುಜಗಳಿಂದ ಇಳಿಬಿಟ್ಟು ಕೊಂಡಿದ್ದು ಅದರ ಮೇಲೆ ೧೦-೧೨ಗಂಟೆಗಳುಳ್ಳ ಒಂದು ಗಂಟೆ ಸರದ ಪಟ್ಟಿಯನ್ನು ನಡುವಿಗೆ ಕಟ್ಟಿಕೊಂಡಿರುತ್ತಾರೆ. ಜೊತೆಗೆ ಎರಡೂ ಕೈಗಳಲ್ಲಿ ಚಾಟಿಗಳನ್ನು ಹಿಡಿದಿರುತ್ತಾರೆ. ಇವರು ಕುಣಿಯುತ್ತ ತಮ್ಮ ಕಾಲಿಗೆ ತಾವೇ ಬಡಿದುಕೊಳ್ಳುತ್ತಾರೆ. ದೇವರ ಮುಂದೆ ಕುಣಿತದ ಸೇವೆಯನ್ನು ಸಲ್ಲಿಸುವಾಗ ಇವರು ಕೈಯಲ್ಲಿ ಹಿಡಿದ ಛಡಿಯಿಂದ ಕಾಲುಗಳಿಗೆ ಫಟಿಕ ಫಟಿಕ ಎಂದು ಹೊಡೆದುಕೊಳ್ಳುತ್ತಿರುತ್ತಾರೆ. ಅನೇಕ ವೇಳೆ ಕಾಲಿನ ಚರ್ಮ ಕಿತ್ತು ರಕ್ತ ಒಸರುತ್ತಿದ್ದರೂ ಸಹ ಬಿಡದೆ ಹೊಡೆದು ಕೊಳ್ಳುತ್ತಿರುತ್ತಾರೆ. ಛಡಿ ಹಿಡಿಕೆಗಳು ಹಾವಿನ ಹೆಡೆಯನ್ನು ಹೋಲುತ್ತವೆ. ಇವರಿಗೆ ಒಡೆಯರೇ ನೇರವಾಗಿ ದೀಕ್ಷೆ ಕೊಡುತ್ತಾರೆ. ಆದರೆ ಆ ದೀಕ್ಷೆಯನ್ನು ಸಿಕ್ಕ ಸಿಕ್ಕವರಿಗೆ ಕೊಡುವ ಪರಿಪಾಠವಿಲ್ಲ. ಜಾತ್ರೆಯಲ್ಲಿ ಕುಣಿಯುವ ಕಾರ್ಯಕ್ರಮವಿದ್ದಾಗ ಕೆಲವರು ಮೈದುಂಬಿ ಕುಣಿಯ ತೊಡಗುತ್ತಾರೆ. ಹಾಗೆ ಕುಣಿಯುವವರನ್ನು ಒಡೆಯರು ಎಷ್ಟು ಹೊಡೆದರೂ ಅದನ್ನು ತಾಳಿಕೊಳ್ಳಬೇಕು. ಹಾಗೆ ತಾಳಿಕೊಂಡವನಿಗೆ ಮಾತ್ರ ಈ ಕುದುರೆಕಾರರ ಹೊರೆಯನ್ನು ಹೋರಿಸಲಾಗುತ್ತದೆ. ಹೀಗೆ ಹೊರೆ ಹೊತ್ತಮೇಲೆ ಪ್ರತಿವರ್ಷ ಜಾತ್ರೆಯಲ್ಲಿ ಆತ ತನ್ನ ಸೇವೆ ಸಲ್ಲಿಸಬೇಕು.

'' ಗಂಗಿ ಪೂಜೆ ಮಾಡ್ಸಿ ಡೊಳ್ಳಿನವರನ್ನು ಎಲ್ಲಾರನ್ನು ಕಲಿಸಿ ಪೂಜೆ ಗೀಜೆ ಮಾಡ್ಸಿ ಅವಾಗ ಗಂಗ್ಯಾಗ ಮೈ ತೊಕಂಡು ನಿಂತಕಂಡ್ರಗೀನ ನಮ್ಮ ಅಣ್ಣ-ತಮ್ಮದುರಾಗ ನಮ್ಮ ವಂಶದಾಗ ಯಾರೇ ನಿಂತಿರ್‍ತಾರೆ. ಮಲ್ಲಯ್ಯ ಮಯ್ಯಾಗ ಅವರಿಗೆ ಬರ್‍ತಾನ. ಬಂದರೆ ನೇಮ ಮಾಡಿ ಕುದುರೆಕಾರ ಅಂತೇಳಿ [illegible] ಬಿಡ್ತಾರ'' ಎಂದು ಗುಳ್ಯಂನ ಪೂಜಾರಿ ಸ್ವಾಮಪ್ಪ ಹೇಳುತ್ತಾರೆ.

ಕುದುರೆಕಾರರಲ್ಲಿ ವಂಶಕ್ಕೆ ಒಬ್ಬರನ್ನಾದರೂ ಕುದುರೆಕಾರನಾಗಿ ಬಿಡುವ ಪರಿಪಾಠವಿದೆ. ಕೆಲವು ವಿಶೇಷ ದಿನಗಳಲ್ಲಿ ಭಕ್ತರು ಇವರ ಮನೆಗಳಿಗೆ ತೆರಳಿ ಭಂಡಾರ, ಎಲೆ ಅಡಿಕೆ, ಕೊಬ್ಬರಿ ಬಟ್ಲ ನೀಡಿ ಪೂಜೆಗೆ ಕರೆದುಕೊಂಡು ಹೋಗ್ತಾರೆ. ಟ್ರಸ್ಟ್ ವತಿಯಿಂದ ಯಾವುದೇ ರೀತಿಯ ಭೂಮಿ ಇನಾಮಾಗಿ ದೊರೆತಿಲ್ಲ. ತಮ್ಮ ಜೀವನಕ್ಕೆ ಬಿಕ್ಷಾಟನೆಯನ್ನು ಕಿಂಚಿತ್ತು ಅವಲಂಬಿಸದೆ ಬೇಸಾಯವನ್ನೇ ನಂಬಿ ಬದುಕುತ್ತಿದ್ದಾರೆ.

## ೪.೮. ವಗ್ಗರು (ನಾಯಿ ಗೊರವರು) :

ಮಲ್ಲಯ್ಯನ ಧಾರ್ಮಿಕ ಆಚರಣೆಯಲ್ಲಿ ಒಂದಾದ ಗೊರವಟಿಕೆಯಾಡುವುದನ್ನು ಹೆಚ್ಚಾಗಿ ಅನುಸರಿಸುವುದು ನಾಯಿ ಗೊರವರು. ಇವರೂ ಕೂಡ ಉಣ್ಣೆ ಕಂಕಣದ ಕುರುಬರು. ಡಮರುಗ, ತ್ರಿಶೂಲ, ಕರಡಿ ಕೂದಲಿನ ಟೋಪಿ, ಕೊಳಲು, ಕವಡೆ ಸರ, ಕಂಬಳಿಯ ಅಂಗಿ, ಭಂಡಾರದ ಚೀಲ ಮತ್ತು ದೋಣಿ ಇವು

ಇವರ ಸಲಕರಣೆಗಳು. ಇವರು ನಾಯಿ ಜಗಳದ ಸೇವೆಯನ್ನು ದೇವರಿಗೆ ಸಲ್ಲಿಸುತ್ತಾರೆ. ಮಲ್ಲಯ್ಯನ ಲಾಂಛನ ನಾಯಿ. ತಾವು ಸಹ ಅವನ ಅನುಯಾಯಿಗಳೆಂದು ಭಾವಿಸುವ ಈ ಗೊರವರು ಇಬ್ಬರು ಎದುರು ಬದುರಾಗಿ ಒಬ್ಬರನ್ನೊಬ್ಬರು ಹೊಡೆಯಲು ಏರಿ ಹೋಗುವುದು, ಪ್ರತಿಭಟಿಸುವುದು, ಬಗಳುವುದು, ಗುರುಗುಟ್ಟುವುದು, ಚಕ್ರಾಕಾರವಾಗಿ ಸುತ್ತುತ್ತ ವಿರುದ್ಧ ದಿಕ್ಕಿನಲ್ಲಿ ತಿರುಗುವುದು. ಹೊ....ಹಾ...ಹ ಚ ಎಂದು ಕೂಗುತ್ತಾ ಒಂದೇ ಸಮನೆ ಜಗಳ ಆಡುವುದನ್ನು ನಟಿಸುತ್ತಾರೆ. ಭೈರವನ ಜೊತೆ ೭ನಾಯಿಗಳು ಇರುತ್ತವೆಂದು ಹೇಳುವುದುಂಟು. ಭೈರವನ ಭಕ್ತರಾದ ವಗ್ಗಯ್ಯಗಳು ಹೀಗಾಗಿ ನಾಯಿಗಳನ್ನು ಅನುಕರಿಸುತ್ತಾರೆ. ಮೈಲಾರನ ಪೂಜಿಸಿ ನಾಯಾಗಿ ಬಗಳುವುದು ಕಂಡೆ ಎಂದು ಬಸವಣ್ಣನೂ, ಮೈಲಾರನ ಆರಾಧಿಸಿ ನಾಯಾಗಿ ಬಗಳುತಿಪ್ಪರಯ್ಯ ಎಂದು ಚೆನ್ನಬಸವಣ್ಣನವರು ಹೇಳಿರುವುದು ಸೂಕ್ತವೇ ಆಗಿದೆ.

ದೋಣಿ ಸೇವೆ ಇಲ್ಲಿ ವಿಶಿಷ್ಟವಾಗಿದೆ. ಕರ್ನಾಟಕ, ಮಹಾರಾಷ್ಟ್ರಗಳಂತೆ ಎಲ್ಲಾ ಬಗೆಯ ಆಹಾರ ಪದಾರ್ಥಗಳನ್ನು ದೋಣಿಗೆ ನೀಡುವ ಪದ್ದತಿ ಇಲ್ಲಿಲ್ಲ. ಹಣ್ಣು, ಹಾಲು, ಮೊಸರನ್ನು ಮಾತ್ರ ದೋಣಿಗೆ ನೀಡಬೇಕು. ಕ್ವಚಿತ್ತಾಗಿ ಜಿಲಾಬಿಯಂಥ ಸಿಹಿ ತಿಂಡಿಗಳನ್ನು ಹಾಕುವುದು ಉಂಟು. ಜಾತ್ರೆಯ ಸಂದರ್ಭದಲ್ಲಿ ಸಿಂಹಾಸನ ಕಟ್ಟೆ ಅಥವಾ ಕರಿಯಾಲದ ಕಟ್ಟೆಯ ಎದುರಿಗಿರುವ ಬಯಲಲ್ಲಿ ದೋಣಿ ಹಾಕಿ ಈ ದೋಣಿ ಸೇವೆ ನಡೆಸಲಾಗುತ್ತದೆ. ಅದು ಪ್ರತಿವರ್ಷ ಆಶ್ವಿನಿ ಶುದ್ಧ ತ್ರಯೋದಶಿಯಂದು ಬೆಳಿಗ್ಗೆ ಒಂದು ಸಲ ಮಾತ್ರ ನಡೆಯುವ ಕಾರ್ಯಕ್ರಮ. ಗಿರಿಯಲ್ಲಿ ಇತರ ಸಮಯದಲ್ಲಿ ನಡೆಯುವುದಿಲ್ಲ. ಆಗ ಒಂದೇ ಸಲಕ್ಕೆ ಬಹು ಸಂಖ್ಯೆಯ ದೋಣಿ ಹೂಡಿ ಈ ಕ್ರಮ ನಡೆಸುತ್ತಾರೆ. ಅಪವಾದವೆಂಬಂತೆ ಕೆಲವು ಭಕ್ತರು ವಗ್ಗಯ್ಯನನ್ನು ಬಿಡಬೇಕೆಂದಾಗ ಗಣಾಚಾರಿಗಳನ್ನು ಕೆಲ ವಗ್ಗಯ್ಯನವರನ್ನು ಮನೆಗೆ ಕರೆಯಿಸಿ ಮಗನಿಗೆ ದೀಕ್ಷೆಯ ಕಾರ್ಯಕ್ರಮದ ಸಂದರ್ಭದಲ್ಲಿಯೇ ದೋಣಿಗೆ ಹಾಲು ಅನ್ನ ನೀಡಿ ದೋಣಿ ಸೇವೆ ಮಾಡಿಸುತ್ತಾರೆ. ಇದಕ್ಕೆ ಮಣಿ ಸೇವೆ ವಗ್ಗಸೇವೆ ಅಂತೆಲ್ಲ ಕರೆಯುತ್ತಾರೆ. ಇದು ಒಂದು ಕುಣಿತದ ಸನ್ನಿವೇಶವಿದ್ದು ಒಂದು ಧಾರ್ಮಿಕ ಜನಪದ ಕಲೆಯೂ ಆಗಿದೆ. ವಗ್ಗರು ಭಕ್ತರ ಮನೆಯ ನಡುವಂಕಣದಲ್ಲಿ ಕರಿಯ ಕಂಬಳಿಯನ್ನೇ ಹಾಸಿ ಮಧ್ಯ ದೋಣಿಯನ್ನು ಇಟ್ಟು ಹಾಲು, ಹಣ್ಣನ್ನು ನೀಡಿ ದೋಣಿ ತುಂಬಿಸಿ ಪೂಜಿಸುತ್ತಾರೆ. ನಂತರ ಐದಾರು ಜನ ಗೊರವರು ಡಮರುಗ, ಶಿವನ ಖಡ್ಗ ಹಿಡಿದು ಸ್ತೋತ್ರ ಮಹಿಮೆ ಒಡಪುಗಳನ್ನು ಹೇಳುತ್ತಾ ಕಂಬಳಿಯ ಸುತ್ತ ಲಯಬದ್ಧವಾಗಿ ಕುಣಿಯುತ್ತಾರೆ. ಇದು ಮುಗಿದನಂತರ ಗೊರವರು ದೋಣಿಯಲ್ಲಿದ್ದುದನ್ನು ತಿನ್ನುತ್ತಾರೆ. ಆದರೆ ತಿನ್ನುವಾಗ ಕೈಯಿಂದ ತಿನ್ನುವ ಹಾಗಿಲ್ಲ. ಮಂಡಿ ಊರಿ ಕುಳಿತು ನಾಯಿಯಂತೆ ಬೊಗಳುತ್ತಾ ತಿನ್ನುತ್ತಾರೆ. ನಂತರ ಭಕ್ತರು ನೀಡಿದ ಕಾಣಿಕೆಯನ್ನು ಸ್ವೀಕರಿಸುತ್ತಾರೆ. ಈ ವಗ್ಗಯ್ಯನವರಿಗೆ ದೀಕ್ಷೆಯನ್ನು ನೀಡುವವರು ಗಣಾಚಾರಿಗಳು. ಗೊರವರಾಗುವವರು ಸಂಪ್ರದಾಯದಂತೆ ದೀಕ್ಷೆ ಹೊಂದಬೇಕು. ಕುಲಸ್ಥರ ಹಾಗೂ ತಂದೆ-ತಾಯಿಗಳ ಸಮ್ಮುಖದಲ್ಲಿ ಈ ಧರ್ಮದ ವಿಧಿ ಜರುಗುವುದು. ಮನೆಯಲ್ಲಿಯ ಹಿರಿಯ ಮಗನು ೧೨ವರ್ಷದವನಾದ ಮೇಲೆ ೨೦ ವರ್ಷದೊಳಗೆ ಮತ್ತು ಅವನ ಮದುವೆಯ ಮುಂಚೆ ಅವನಿಗೆ ಗೊರವದೀಕ್ಷೆ ನೀಡಲಾಗುವುದು.

ದೀಕ್ಷೆಗೆ ಹಣ್ಣು, ಕಾಯಿ, ಎಲೆ, ಅಡಿಕೆ, ಹೂ, ಗಂಧ, ಮುಂತಾದ ಮಂಗಲ ಸಾಮಾಗ್ರಿಗಳನ್ನು ಅಣಿ ಮಾಡುತ್ತಾರೆ. ದೀಕ್ಷೆ ಪಡೆಯುವ ವ್ಯಕ್ತಿಗೆ ಮೈತೊಳೆದು, ವಿಭೂತಿ, ಭಂಡಾರ ಹಚ್ಚುತ್ತಾರೆ. ನಾಲ್ಕು ಕಳಸಗಳನ್ನು ಹೂಡಿ ಅವನನ್ನು ಮಧ್ಯದಲ್ಲಿ ಕೂಡಿಸುತ್ತಾರೆ. ಕಳಸಕ್ಕೂ ವ್ಯಕ್ತಿಯ ಕೊರಳಿಗೂ ಸೂತ್ರ ಹಿಡಿದು ಒಂದು ಪದ್ಧತಿಯಂತೆ ಶಾಸ್ತ್ರ ಮಾಡಬೇಕಾಗುವುದು. ಮುಂದೆ ಶುದ್ಧ ಜೀವನ ನಡೆಸುವ ಬಗೆಗೆ ಆ ವ್ಯಕ್ತಿಗೆ ತಿಳುವಳಿಕೆ ನೀಡುತ್ತಾರೆ. ಈ ಬಗೆಗೆ ಅವನಿಂದ ವಚನವನ್ನು ತೆಗೆದುಕೊಳ್ಳುತ್ತಾರೆ. ಅಲ್ಲದೆ ಕೊರಳಿಗೆ ಕವಡೆ ಸರ ಹಾಕಿ 'ಗುಡ್ಡ'ನೆಂದು ಘೋಷಿಸುತ್ತಾರೆ.

''ನಾವು ಎಲ್ಲೀ ಹೋಗಲಿ ಒಳ್ಳೆಯ ಲೆಕ್ಕದಾಗೆ ಪರಮಾತ್ಮನ ಸೇವೆ ಮಾಡಿಕೊಂಡು ಇರ್ತೀವಿ. ಮತ್ತೆ ಯಾರೇ ಏನೇ ಮಾಡ್ಲಿ 'ಹಾಂ ನಮಃ ಶಿವಾಯ' ಅಂದು ಬಿಡೋರು. ಅವರಿಗೆ ಎದುರು ಮಾತಾಡೋದು, ಬೈಯೋದು ಹಂಗೆಲ್ಲ ಮಾಡಂಗಿಲ್ಲ. ಉಡುಪು ಹಾಕ್ಕಂಡಾಗ ಏನೇನೋ ಮಾತಾಡ್ತಾರೆ ಜನ ಅಯ್ ಈವ್ನಿಗೇನ್ ದಾಡ್ಯಾಗೈತಲೇ ದುಡುಕಂಡು ತಿಂಬೋದು ಬಿಟ್ಟು ಏನೋ ತರತರ ಮಾತಾಡ್ತಿರ್ತಾರ. ಆ ತರಹ ಮಾತನಾಡಿದಾಗ ನಾವು ಸುಮ್ನೆ ಹಂಗೆ ಹೋಗಿ ಬಿಡೋರು. ಅದಕ್ಕೆ ನಾವು ಜವಾಬು ಮಾಡಂಗಿಲ್ಲ. ಅವ್ರು ಏನು ಮಾತಾಡ್ತಿರ್ತಾರೋ ಪರಮಾತ್ಮ ಅವರದು ಅವರಿಗೆ ತೋರಿಸ್ತಾನೆ. ನಾವೇ ಅನ್ನಬೇಕು, ಬಯ್ಯಬೇಕು ಎನ್ನುವಂತಹದ್ದೇನು ಇಲ್ಲ. ಈ ತರಹ ಮಾತ್ರ ಖಂಡಿತವಾಗಿ ಆಗಿರೋದನ್ನ ನಾನು ಕಂಡೀನಿ. ಇನ್ನೊಂದು ಸಲ ಅವರ ಎದುರಿಗೆ ಹೋದಾಗ ಸ್ವಾಮಿ ನಮ್ದು ತಪ್ಪಾಗೈತೆ ಬರ್ರಿ ನಮ್ಮನಿಗೆ ಕಾಲಿಟ್ಟು ಹೋಗಬನ್ನಿ ಅಂತ ಅಂದು ಮಂತ್ಯಾಗ ಕರ್ಕಂಡ್ಹೋಗಿ ದಕ್ಷಿಣೆ ಕೊಟ್ಟು ನಮಸ್ಕಾರ ಮಾಡಿ ಕಳಿಸ್ತಾರೆ. ಇದು ಮಾತ್ರ ಸತ್ಯ ನಾನೆಷ್ಟ ನೋಡಾನಿ'' ಎಂದು ದೇವಲಾಪುರದ ಒಗ್ಗರು ಹನುಮಂತಪ್ಪ ಹೇಳುತ್ತಾರೆ.

ಹನುಮಂತಪ್ಪನವರು ಹೇಳುವ ಮಾತುಗಳಲ್ಲಿ ಸ್ವಾಮಿಯ ನಿಷ್ಠೆ ಕಾಣುತ್ತದೆ. ಯಾವುದೇ ಕಾರಣಕ್ಕೂ ಜನರನ್ನು, ಭಕ್ತರನ್ನು ನಿಂದಿಸುವ ಗೊಡವೆಗೇ ಹೋಗರು. ಇನ್ನೂ ಮುಖ್ಯವಾಗಿ ಈ ಕ್ಷೇತ್ರದ ಹಾಡುಗಳಲ್ಲಿ ಬಹುತೇಕ ಹಾಡುವವರು ಒಗ್ಗಪ್ಪನವರೇ. ಕೈಯಲ್ಲಿ ಡಮರುಗ ಹಿಡಿದು ಪಿಳ್ಳಂಗೋವಿ ಬಾರಿಸುತ್ತಾ ಹಾಡುಗಳನ್ನು ಲಯಬದ್ಧವಾಗಿ ಕೇಳುಗರು ಕುಣಿಯುವ ಹಾಗೆ ಹಾಡುತ್ತಾರೆ. ಅದರಲ್ಲಿ ಮುಖ್ಯವಾಗಿ ವಗ್ಗರು ಹನುಮಂತಪ್ಪನವರು ಅವರಿಗೆ ಕಲಿಸಿದ ಗುರುಗಳಾದ ಲಿಂಗದಹಳ್ಳಿಯ ಗೊರವರ ಸಿದ್ದಪ್ಪ ಇವರು ಪ್ರಮುಖರು.ಹಾಡುಗಾರರ ಒಂದು ತಂಡವೇ ಇಲ್ಲಿದೆ.

ಅಧ್ಯಾಯ - ೫

# ಮಲ್ಲಯ್ಯನ ಆಚರಣೆಗಳು

೫.೧. **ವಾರ್ಷಿಕಾವರ್ತನದ ಆಚರಣೆಗಳು :**

೫.೧.೧. ದಿನಂಪ್ರತಿ

೫.೧.೨. ವಾರದ ದಿನಗಳಲ್ಲಿ

೫.೧.೩. ಹುಣ್ಣಿಮೆ - ಅಮಾವಾಸೆ

೫.೧.೪. ಹಬ್ಬ ಹರಿದಿನಗಳು

೫.೧.೫. ಮಲ್ಲಯ್ಯನ ಜಾತ್ರೆ

೫.೧.೫.೧. ಕಂಕಣ

೫.೧.೫.೨. ದಸರಾ ಬನ್ನಿಯ ಕಾರ್ಯಕ್ರಮ

೫.೧.೫.೩. ಬಡಿಗೆ ಆಟ

೫.೧.೫.೪. ರಥೋತ್ಸವ

೫.೧.೫.೫. ಸರಪಳಿ ಪವಾಡ

೫.೧.೫.೬. ಓಕುಳಿ ಆಟ

೫.೨. **ಜೀವನಾವರ್ತನದ ಆಚರಣೆಗಳು :**

೫.೨.೧. ಹುಟ್ಟು

೫.೨.೨. ನಾಮಕರಣ

೫.೨.೩. ಯೌವ್ವನ

೫.೨.೪. ಮದುವೆ

೫.೨.೫. ಮರಣ

ಅಧ್ಯಾಯ - ೫

# ಮಲ್ಲಯ್ಯನ ಆಚರಣೆಗಳು

ಜನಪದರಿಗೆ ಮೊಟ್ಟ ಮೊದಲು ದೇವರ ಕಲ್ಪನೆ ಮೂಡಿದ್ದು ಅದ್ಭುತ ವಿಷಯ. ಅನಿರ್ವಚನೀಯ ಘಳಿಗೆ. ಅಂದಿನ ಆ ಕಲ್ಪನೆ ಶಾಶ್ವತವಾಗಿ ಮನುಕುಲವನ್ನು ಆಕ್ರಮಿಸಿಕೊಂಡು, ಅದರಿಂದ ಬಿಡಿಸಿಕೊಳ್ಳಲು ಇಂದಿಗೂ ಸಾಧ್ಯವಾಗಿಲ್ಲ. ಕಾಲ ಸರಿದಂತೆ ದೇವರ ಕಲ್ಪನೆಯೊಂದಿಗೆ ಆರಾಧನೆಯ ವಿಧಾನ, ಗುಡಿ-ಗೋಪುರಗಳ ನಿರ್ಮಾಣ, ಕಟ್ಟು ಕಟ್ಟಳೆ ಪ್ರಾರಂಭವಾಗಿದೆ. ಜನರ ದೇವರ ಕಲ್ಪನೆ ವಿಶಿಷ್ಟವಾಗಿದೆ, ವಿಚಿತ್ರವಾಗಿದೆ ಹಾಗೂ ಆತ್ಮೀಯವಾಗಿದೆ. ಜನಪದರ ಬದುಕಿಗೆ ದೇವರ ಅಸ್ತಿತ್ವ ಹಾಸು ಹೊಕ್ಕಾಗಿದೆ. ಜನಪದರು ತಮ್ಮ ಆತ್ಮವಿಶ್ವಾಸಕ್ಕೆ, ಬದುಕಿನ ನೆಮ್ಮದಿಗೆ, ಪ್ರಕೃತಿ ನಿಗೂಢದ ಅರಿವಿಗೆ, ಮನುಕುಲದ ಏಳಿಗೆಗೆ ದೇವರನ್ನು ನಂಬಿದ್ದಾರೆ. ತಾವು ಉಡುವ ಉಡುಪು ಸೇವಿಸುವಂತಹ ಆಹಾರವನ್ನು ನೈವೇದ್ಯದ ರೂಪದಲ್ಲಿ ಅರ್ಪಿಸುತ್ತಾರೆ. ಜೊತೆಗೆ ತಮ್ಮ ಮಕ್ಕಳು ಮರಿಗಳಿಗೆ ಅದೇ ದೇವರ ಹೆಸರನ್ನು ಇಡುತ್ತಾರೆ. ಆ ದೈವಕ್ಕೆ ಸಂಬಂಧಪಟ್ಟ ಹಾಡು, ಆತನ ವೈಭವ, ಹರಕೆ, [illegible] ಎಲ್ಲವೂ ಸಾಮೂಹಿಕವಾಗಿ ನಡೆಯುತ್ತವೆ. ಬೇರೆ ಬೇರೆ ಕೆಲಸಗಳನ್ನು ಹಂಚಿಕೊಂಡು ಆತ್ಮ ತೃಪ್ತಿಯಾಗಿ ದೇವರ ಸೇವೆಯನ್ನು ಮಾಡುತ್ತಾ, ಪ್ರತಿಯೊಬ್ಬರೂ ಮುನ್ನುಗ್ಗಿ ಈ ಕಾರ್ಯಕ್ರಮಗಳಲ್ಲಿ ಒಂದಾಗುತ್ತಾರೆ. ಅಂತೂ ಜನತೆಯ ಜೀವನದಲ್ಲಿ ಈ ದೇವರುಗಳು ಬೇರ್ಪಡಿಸಲಾರದಂತಹ ಸಂಬಂಧವನ್ನು ಇಟ್ಟುಕೊಂಡಿವೆ.

ಜನಪದರ ಪ್ರತಿಯೊಂದು ಆಚರಣೆಗಳನ್ನು ನಾವು ನೋಡಿದಾಗ ಅವು ಯಾವುದೋ ಒಂದು ನಂಬಿಕೆ ಯಿಂದಲೇ ರೂಪುಗೊಂಡಿರುತ್ತವೆ. ಒಂದು ವೇಳೆ ಸಂಬಂಧಪಟ್ಟ ಆಚರಣೆಯನ್ನು ನಡೆಸದಿದ್ದರೆ, ಏನೋ ಅನಿಷ್ಟ ಕಾದಿದೆ ಎಂಬ ನಂಬಿಕೆ, ಅದನ್ನು ಅನುಸರಿಸಿಕೊಂಡು ಬರುತ್ತದೆ. ಆದ್ದರಿಂದ ಆಚರಣೆಗಳು ಉಳಿದು ಬರುವುದಕ್ಕೆ ನಂಬಿಕೆಗಳು ಪ್ರೇರಕ ಶಕ್ತಿಗಳಾಗಿ ಕೆಲಸ ಮಾಡುತ್ತವೆ. ಈ ಹಿನ್ನೆಲೆಯಲ್ಲಿ ಹಲವಾರು ಆಚರಣೆಗಳು ಉಗಮಗೊಂಡು ಜನಪದರ ಜೀವನದಲ್ಲಿ ಅವು ಬೆಸೆದುಕೊಂಡಿವೆ. ಆಚರಣೆಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸುವರು. ಅವುಗಳೆಂದರೆ; ವಾರ್ಷಿಕಾವರ್ತನದ ಆಚರಣೆಗಳು ಮತ್ತು ಜೀವನಾವರ್ತನದ ಆಚರಣೆಗಳು.

## ೩.೧. ವಾರ್ಷಿಕಾವರ್ತನದ ಆಚರಣೆಗಳು :

ಮೈಲಾರಲಿಂಗ ದೇವತೆ ಕೇವಲ ಕರ್ನಾಟಕಕ್ಕೆ ಮಾತ್ರ ಮೀಸಲಾದ ದೇವತೆಯಾಗಿರದೆ, ಹೊರನಾಡುಗಳಾದ ಆಂಧ್ರ, ತಮಿಳನಾಡು, ಮಹಾರಾಷ್ಟ್ರ, ತೆಲಂಗಾಣ, ಗೋವೆ ಮುಂತಾದ ಕಡೆಗಳಲ್ಲೂ ಪ್ರತಿಷ್ಠಾಪನೆಗೊಂಡಿದ್ದು, ಮೈಲಾರಲಿಂಗ, ಮಲ್ಲಯ್ಯ, ಮೈಲಾರ, ಮೈಲಾರಿ, ಮಲ್ಲಾರಿ, ಮಲ್ಹಾರ, ಖಂಡೋಬ, ಏಳುಕೋಟಿ, ಕರಿಯಾಲ, ಮೇಂಗನಾಥ, ನಿಂಗಣ್ಣ (ಲಿಂ) ಎಂಬ ಅನೇಕ ಹೆಸರುಗಳಿಂದ ಪೂಜೆ ಗೊಳ್ಳುತ್ತಿದ್ದಾನೆ. ಅಸ್ಪೃಶ್ಯರಿಂದ ಹಿಡಿದು ಬ್ರಾಹ್ಮಣರವರೆಗೆ ಅನೇಕರಿಗೆ ಮನೆದೇವರಾಗಿಯೇ ಇರುವ ಮಲ್ಲಯ್ಯ ಕುತೂಹಲ ಕೆರಳಿಸುವ ದೇವತೆ. ಮುಸಲ್ಮಾನರು, ಮಲ್ಲೂಖಾನ್, ಅಜಮತ್‌ಖಾನ್ ಎಂದು ಈ ದೇವರನ್ನು ಕರೆಯುತ್ತಾರೆ. ಈ ದೇವರ ಬಗ್ಗೆ ಈಗಾಗಲೇ ಮಹಾರಾಷ್ಟ್ರ ಹಾಗೂ ಕರ್ನಾಟಕದ ಅನೇಕ ವಿದ್ವಾಂಸರೂ ಸಾಕಷ್ಟು ಅಧ್ಯಯನ, ಚರ್ಚೆ ಮಾಡಿದ್ದಾರೆ. ನೆರೆಯ ಆಂಧ್ರದಲ್ಲಿಯೂ ಈ ದೇವರ ಪ್ರಭಾವ ಸಾಕಷ್ಟು ಇದ್ದು, ತಕ್ಕಮಟ್ಟಿಗೆ ಅಧ್ಯಯನಗಳು ನಡೆದಿವೆ. ಪ್ರಸ್ತುತ ನನ್ನ ಅಧ್ಯಯನಕ್ಕೆ ಆರಿಸಿಕೊಂಡಿರುವ ಆಲೂರು ಬಳಿ ಇರುವ ಆದಿಮೀನಗೊಂದಿ ಸಿಂಹಾಸನದ ವಾರ್ಷಿಕ ಆಚರಣೆಗಳ ಅಧ್ಯಯನ ಇಲ್ಲಿದೆ.

### ೩.೧.೧. ದಿನಂಪ್ರತಿ :

ಆದಿ ಮೀನಗೊಂದಿ ಕ್ಷೇತ್ರದಲ್ಲಿ ಬಹುತೇಕ ಮಲ್ಲಯ್ಯ ಸಮಾಜದ ಎಲ್ಲಾ ವರ್ಗದವರಿಗೂ ಮನೆ ದೇವರಾಗಿರುವುದು ವಿಶೇಷ. ಪ್ರತಿನಿತ್ಯ ಭಕ್ತರು ಈತನ ಸ್ಮರಣೆ ಮಾಡದಲೇ ಏಳುವುದಿಲ್ಲ. ಅವರ ಪ್ರತಿ ಉಸಿರಿನಲ್ಲೂ ಸ್ವಾಮಿ ಮಲ್ಲಯ್ಯನೇ ತುಂಬಿರುವನು. ಮನೆಯಲ್ಲಿ ಮಲ್ಲಯ್ಯನ ಗುರುತುಗಳಾಗಿ ಭಕ್ತರು ಬೇರೆ ದೇವರುಗಳ ಭಾವಚಿತ್ರದೊಂದಿಗೆ ಈಶ್ವರನ, ಮಾಳಮ್ಮನ, ನಂದಿಯ ಹಾಗೂ ಇತ್ತೀಚಿನ ಶ್ರೀ ಮಾಳಾ ಮಲ್ಲೇಶ್ವರರ ಉತ್ಸವ ಮೂರ್ತಿಗಳ ಭಾವಚಿತ್ರಗಳನ್ನು ಕೆಲವು ಭಕ್ತರು ಇಟ್ಟುಕೊಂಡಿದ್ದಾರೆ. ಈ ಉತ್ಸವ ಮೂರ್ತಿಗಳ ಭಾವಚಿತ್ರಗಳನ್ನು ಇಟ್ಟುಕೊಳ್ಳುವ ಬೆಳವಣಿಗೆ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿದೆ. ಈ ಮೊದಲು ಮಲ್ಲಯ್ಯನ ಕುರಿತ ಯಾವುದೇ ಭಾವಚಿತ್ರ ಭಕ್ತರ ಬಳಿ ಇರಲಿಲ್ಲ. ಕಾರಣ ಆತನ ಭಾವಚಿತ್ರ ತೆಗೆದರೂ ಅದು ಬೀಳುವುದಿಲ್ಲ ಎನ್ನುವಂತಹ ನಂಬಿಕೆ ಜನರಲ್ಲಿ ಬೇರೂರಿತ್ತು. ಆ ಕಾರಣಕ್ಕಾಗಿ ಮನೆಯಲ್ಲಿ ಮಲ್ಲಯ್ಯನ ಪ್ರತೀಕವಾಗಿ ಈಶ್ವರನ ಭಾವಚಿತ್ರವನ್ನು ಭಕ್ತರು ಇಟ್ಟುಕೊಂಡಿದ್ದಾರೆ.

ಇನ್ನು ಗಣಾಚಾರಿಗಳು, ವಗ್ಗರು, ಕಂಚಾವೀರರು, ಕುದುರೆಕಾರರು, ಬಸಿವೆಯರು ಮುಂತಾದ ದೀಕ್ಷೆ ವಹಿಸಿದವರ ಮನೆಯಲ್ಲಿ ತ್ರಿಶೂಲ, ಡಮರುಗ, ಪಿಳ್ಳಂಗೋವಿ, ಮದ್ದಲಿ ಇತರೆ ದೇವರುಗಳ ಭಾವಚಿತ್ರಗಳ ಜೊತೆಗೆ ಮಲ್ಲಯ್ಯನ ಭಾವಚಿತ್ರಗಳನ್ನು ದೇವರ ಗದ್ದಿಗೆಯಲ್ಲಿ ಇಟ್ಟು ನಿತ್ಯವೂ ಪೂಜೆ ಸಲ್ಲಿಸುತ್ತಾರೆ.

ಪ್ರತಿನಿತ್ಯ ಭಕ್ತರು ಹೊತ್ತು ಹುಟ್ಟುವ ಮುಂಚೆ ಎದ್ದು, ತಮ್ಮ ನಿತ್ಯ ಕೃತ್ಯಗಳನ್ನು ಮುಗಿಸಿಕೊಂಡ ಮೇಲೆ ಜಳಕ ಮಾಡಿ ಇನ್ನು ಕೆಲವರು ಕೈಕಾಲು ಮುಖವನ್ನು ತೊಳೆದುಕೊಂಡು ಹಣೆಗೆ ಭಂಡಾರ, ವಿಭೂತಿಯನ್ನು ಹಚ್ಚಿ ಸ್ವಾಮಿಗೆ ಊದಿನಕಡ್ಡಿಯನ್ನು ಬೆಳಗುತ್ತಾರೆ. ಈ ಆಚರಣೆ ಬಹುತೇಕ ಕ್ಷೇತ್ರದ ಎಲ್ಲಾ ಜನವರ್ಗಗಳಲ್ಲಿ ಕಾಣುತ್ತೇವೆ. ಆದರೆ ದೀಕ್ಷೆಯನ್ನು ತೆಗೆದುಕೊಂಡವರು ತಪ್ಪದೆಯೇ ದಿನಾಲು ಜಳಕ ಮಾಡಿ, ಸ್ವಾಮಿಯ ಆಭರಣಗಳಾದ ತ್ರಿಶೂಲ, ಡಮರುಗ, ಪಿಳ್ಳಂಗೋವಿ ಭಾವಚಿತ್ರಗಳನ್ನು ಬಟ್ಟೆಯಿಂದ ಒರೆಸಿ, ದೇವರ ಗದ್ದಿಗೆಯನ್ನು ಚೊಕ್ಕಟವಾಗಿಟ್ಟು, ಪೂಜಾ ಕಾರ್ಯಕ್ರಮ ಮುಗಿದ ಮೇಲೆಯೇ ಆಹಾರವನ್ನು ಸೇವಿಸುವುದು. ಅಲ್ಲಿಯವರೆಗೆ ಅವರು ಯಾವುದೇ ಪಾನಿಯ ಅಥವಾ ನೀರನ್ನು ಸಹ ಮುಟ್ಟುವಂತಿಲ್ಲ. ಮಲ್ಲಯ್ಯನ ದೀಕ್ಷೆ ಪಡೆದ ಪ್ರತಿ ಕುಟುಂಬಗಳು ಬಹುತೇಕ ಇದೇ ತೆರನಾದ ಆಚರಣೆಯನ್ನು ಕೈಗೊಳ್ಳುತ್ತಾರೆ. ಆದರೆ ಕೆಲವರು ಪ್ರತಿನಿತ್ಯ ಈ ರೀತಿಯ ಕಟ್ಟುನಿಟ್ಟಾದ ಪೂಜಾ ವಿಧಾನವನ್ನು ಮಾಡದೇ, ಸಾಧಾರಣವಾಗಿ ಕೈಕಾಲು ಮುಖವನ್ನು ತೊಳೆದುಕೊಂಡು ಭಂಡಾರವನ್ನು ಹಚ್ಚಿ ಪೂಜೆಯನ್ನು ಸಲ್ಲಿಸುತ್ತಾರೆ.

ಗಿರಿಯಲ್ಲಿ ಸ್ವಾಮಿ ಮಲ್ಲೇಶ್ವರನ ಪೂಜೆ ಮಾಡುವ ಅಧಿಕಾರ ಕಾರಣಿಕದವರಾದ ಜೀರ್‍ರಿಗೆ ಇರುವುದ ರಿಂದ ಇವರು ದಿನಾಲು ಬೆಟ್ಟದ ಮೇಲೆ ಹೋಗಿ ದೇವರಿಗೆ ಪೂಜೆ ಮಾಡಿ ಕಾಯಿ ಕರ್ಪೂರ ಬೆಳಗಿ ಅಭಿಷೇಕವನ್ನು ಮಾಡುತ್ತಾರೆ. ಬ್ರಾಹ್ಮಣರಿಗೆ ಈ ದೇವರನ್ನು ಪೂಜಿಸುವ ಯಾವ ಅಧಿಕಾರವಿರುವುದಿಲ್ಲ. ಇವರು ತಮ್ಮ ಮನೆಗಳಲ್ಲಿ ದಿನಂಪ್ರತಿ ಮಲ್ಲೇಶ್ವರನ ಅಕ್ಷರಸ್ತೋತ್ರ, ಸಹಸ್ರ ನಾಮ ಸ್ತೋತ್ರ ಇತರ ಪುರಾಣಗಳ ಪಠಣ ಮುಂತಾದವುಗಳನ್ನು ನಡೆಸುತ್ತಾರೆ. ಗಣಾಚಾರಿಗಳಾದ ಮದ್ದಲಿಗೊರವರು ಕೆಲವು ದಿನಗಳಲ್ಲಿ ದೇವರ ಕೆಲಸಗಳಿಗೆ ಭಕ್ತರು ಕರೆಯಲು ಬಂದರೆ ಅವರ ಕೆಲಸ ಕಾರ್ಯಗಳಿಗೆ ಹೋಗುತ್ತಾರೆ. ಅವರ ಮನೆಯಲ್ಲಿ ಪೂಜಾಕಾರ್ಯಕ್ರಮವನ್ನು ನೆರವೇರಿಸಿ ಬರುತ್ತಾರೆ. ಒಡೆಯರು ಪ್ರತಿನಿತ್ಯ ಶೃಂಗೇರಿಯ ಶಾರದಾ ಪೀಠಸ್ತರನ್ನು (ಪೀಠಸ್ತರ ಭಾವಚಿತ್ರವನ್ನು)ಪೂಜಿಸುತ್ತಾರೆ. ಹರಿಜನರಲ್ಲಿ ಹೆಚ್ಚಾಗಿ ದೀಕ್ಷೆವಹಿಸಿ ಕೊಂಡಂತಹ ಬಸಿವೆಯರು ದಿನಾಲು ತಪ್ಪದೇ ಜಳಕ ಮಾಡಿ ಸ್ವಾಮಿಯ ಪೂಜೆಯನ್ನು ಮಾಡುತ್ತಾರೆ. ಜೊತೆಗೆ ಪ್ರತಿನಿತ್ಯ ವಾಲಗವನ್ನು ಹಾಕುತ್ತಾರೆ. (ಮಲ್ಲಯ್ಯನ ಹೆಸರಿನ ಮೇಲೆ ಬಸವಿಯರು ಹಾಕುವ ಶ್ಲೋಕ) ಮನೆಯಲ್ಲಿ ಪೂಜಾ ಕಾರ್ಯಕ್ರಮ ನೆರವೇರಿಸಿದ ನಂತರ ಭಿಕ್ಷಾಟನೆಗೆ ಹೋಗುತ್ತಾರೆ. ಗೊರವರು ಸಹ ಅಷ್ಟೇ. ಆದರೆ ಮೈಲಾರ ಕ್ಷೇತ್ರಕ್ಕೆ ಹೋಲಿಸಿದಾಗ ಈ ಕ್ಷೇತ್ರದಲ್ಲಿ ಭಿಕ್ಷಾಟನೆಗೆ ಹೋಗುವುದು ತುಂಬಾ ವಿರಳ. ಕೆಲವು ಬೆರಳಣಿಕೆಯಷ್ಟು ಜನ ಗೊರವರು, ಬಸವಿಯರು ತಮ್ಮ ಉಪಜೀವನಕ್ಕಾಗಿ ಭಿಕ್ಷಾಟನೆಯನ್ನೇ ಅವಲಂಬಿಸಿದ್ದಾರೆ. ಉಳಿದಂತೆ ಬಹುತೇಕ ಜನರು ಭಿಕ್ಷಾಟನೆಯ ಆಚರಣೆಯನ್ನು ಬಿಡದಂತೆ ಪ್ರತಿ ಭಾನುವಾರವೋ, ಪ್ರತಿ ಅಮಾವಾಸೆಗೋ ಇಲ್ಲವೇ ದಸರಾ ದಿನಗಳಲ್ಲಿ ಆಚಾರವೆಂಬಂತೆ ಸುಮಾರು ಐದಾರು ಮನೆಗಳಿಗೆ ಹೋಗಿ, ಭಿಕ್ಷೆಯನ್ನು ಬೇಡುತ್ತಾರೆ. ಗೊರವರೆಲ್ಲಾ ಪ್ರತಿನಿತ್ಯದ ಪೂಜೆಯನ್ನು ಮುಗಿಸಿಕೊಂಡ ಮೇಲೆ ಬೇಸಾಯದ ಕೆಲಸಗಳಲ್ಲಿ ತೊಡಗುತ್ತಾರೆ. ಹರಿಜನರ ಗುರುವಿನಿಂದ (ಪೂಜಾರಿ) ದೀಕ್ಷೆ ಪಡೆದ ಹರಿಜನರ ಗೊರವಪ್ಪನವರು ಮನೆಯಲ್ಲಿ ಪೂಜಾ ವಿಧಾನವನ್ನು ಇತರ ಗೊರವರಂತೆ ಮಾಡುತ್ತಾರೆ.

ಅಪವಾದವೆಂಬಂತೆ ಆದವಾನಿ ಲಸುಮವ್ವ, ಉರುಕುಂದಿ ಈರಣ್ಣ, ತಿರುಪತಿ ತಿಮ್ಮಪ್ಪ ಹೀಗೆ ಮುಂತಾಗಿ ಬೇರೆ ಬೇರೆ ದೇವರುಗಳು ಕೆಲವು ಕುಟುಂಬಗಳ ಮನೆದೇವರುಗಳಾಗಿವೆ. ಈ ಕ್ಷೇತ್ರದವರಿಗೆ ಮನೆ ದೇವರಾಗಿ ಬೇರೆ ಯಾವ ದೇವರುಗಳು ಇದ್ದರೂ ಸಹ ಅಷ್ಟೇ ಪ್ರಮಾಣದಲ್ಲಿ ಮಲ್ಲಯ್ಯನನ್ನು ಪೂಜಿಸುತ್ತಾರೆ. 'ನಮ್ಮನ್ಯಾಗ ದಿನಂಪ್ರತಿ ನಾವು ತಿರುಪತಿ ತಿಮ್ಮಪ್ಪನ ಪೂಜೆ ಮಾಡ್ತೀವಿ. ಅದು ನಮ್ಮ ಮನೆದೇವ್ರು, ಕ್ಷೇತ್ರದಲ್ಲಿ ಇರೋದಕ್ಕೆ ಈತಗ (ಮಲ್ಲಯ್ಯ) ನಡಕಳ್ತೀವಿ ಎಂದು ಅಲ್ಲಿಯ ಜನಪದರು ಹೇಳುತ್ತಾರೆ. ಆತನನ್ನ (ತಿಮ್ಮಪ್ಪ) ಕಡಿಮೆ ಮಾಡಿಕೊಂಡು ಈತಗ ಜಾಸ್ತಿ ನಡಕಂಡೀವಿ. ಈ ತೆರನಾಗಿ ಕ್ಷೇತ್ರದಲ್ಲಿ ಕೆಲ ಕುಟುಂಬಗಳಿಗೆ ಮನೆ ದೇವರು ಬೇರೆ. ಆಗಿದ್ದರೂ ಸಹ ಅವರು ಮಲ್ಲಯ್ಯನನ್ನು ತಪ್ಪದೇ ಪೂಜಿಸುತ್ತಾರೆ. ಆತನಿಂದ ಫಲಗಳನ್ನು ಸಹ ಪಡೆದುಕೊಂಡಿದ್ದಾರೆ. ಒಟ್ಟಾರೆ ಸ್ವಾಮಿ ಮಲ್ಲಯ್ಯನ ಭಕ್ತರು ಈತನನ್ನು ಪ್ರತಿನಿತ್ಯ ಪೂಜಿಸಿ, ತಮ್ಮ ತಮ್ಮ ಕಾಯಕದಲ್ಲಿ ತೊಡಗುವರು.

ಹಿರೇ ಮೈಲಾರದ ಒಂದು ಉಪ ಶಾಖೆಯಾಗಿ ಸ್ಥಾಪನೆಯಾದ ಎರ್ರಂಗಳಿ ಗ್ರಾಮ ಎರ್ರಂಗಳಿಯು ಬಳ್ಳಾರಿಯಿಂದ ಹದಿನೆಂಟು ಕಿ.ಮೀ. ದೂರದಲ್ಲಿರುವ ಮೈಲಾರ ಲಿಂಗನ ಗುಡಿಯ ಕರ್ತರಾದ ಶ್ರೀ ಕೆ.ಜಿ. ಬಡಿಗೇರ ಅವರು ಮೈಲಾರಲಿಂಗ ದೇವರ ನಿತ್ಯ ಪೂಜೆಯನ್ನು ಮನೆಯಲ್ಲಿಯೇ ಈ ರೀತಿ ಮಾಡುತ್ತಾರಂತೆ''. ಪ್ರತಿನಿತ್ಯ ಪೂಜೆಗೆ ಮಡಿಯಿಂದ ನೀರು ಮೊದಲಿಗೆ ತುಂಬಿ ಕೊಳ್ಳೀವಿ. ಅದು ಸ್ನಾನ ಮಾಡಿದ ನಂತರ. ಬೇರೆ ಯಾವುದೇ ವಸ್ತುವನ್ನು ಮುಟ್ಟದೆ ಅಥವಾ ಇನ್ನೊಬ್ಬರನ್ನು ಮುಟ್ಟದೆ ಹೋಗಿ ದೇವರ ಗದ್ದಿಗೆಯ ಮುಂದೆ ಪೀಠ ಹಾಕಿಕೊಂಡು ಕುಳಿತು, ಪದ್ಧತಿ ಪ್ರಕಾರ ದೇವರನ್ನು ಕೆಳಗೆ ಇಳಿಸಿಕೊಂಡು ಅವಕ್ಕೆ ಲಿಂಬೆಹಣ್ಣು, ವಿಭೂತಿ ಮುಂತಾದ ವಸ್ತುಗಳನ್ನು ಹಚ್ಚಿ ಆಮೇಲೆ ಬಟ್ಟೆಯಿಂದ ಒರೆಸಿ, ಗದ್ದಿಗೆಯಲ್ಲಿ ದೇವರನ್ನು ಕೂಡಿಸಿ, ಗಂಧ, ವಿಭೂತಿ ಹಚ್ಚಿ ಹೂವು,ಪತ್ರಿ ಹಾಕ್ತೀವಿ. ಇದನ್ನೆಲ್ಲಾ ಮಾಡಿಕೊಂಡು ದೂಪದೀಪ ಹಚ್ಚಿ, ಪೂಜೆ ಮಾಡ್ತೀವಿ. ಇದು ನಾವು ದಿನನಿತ್ಯ ಮಾಡುವಂತಹುದು''. ಈ ತೆರನಾಗಿ ಸ್ವಾಮಿಗೆ ಪ್ರತಿನಿತ್ಯ ಪೂಜೆಯು ಸಲ್ಲುತ್ತಿದೆ.

### ೩.೧.೨. ವಾರದ ದಿನಗಳಲ್ಲಿ :

ಮಲ್ಲಯ್ಯನಿಗೆ ಭಾನುವಾರ ಅತಿ ಶ್ರೇಷ್ಠವಾದ ದಿನ. ಆ ದಿನ ಆತನಿಗೆ ಭಕ್ತರು ವಿಶೇಷ ಪೂಜೆಯನ್ನು ಸಲ್ಲಿಸುತ್ತಾರೆ. ಕಾರಣವಾಗಿ ಆತನನ್ನು ' ಆಯಿತವಾರದಯ್ಯ' ಅಂತ ಕರೆಯುತ್ತಾರೆ. ಭಾನುವಾರದ ದಿನ ಮನೆಯನ್ನು ಚೆನ್ನಾಗಿ ಸಾರಿಸಿ, ಬಂಡೆಗಳನ್ನು ಸ್ವಚ್ಛಗೊಳಿಸಿಡುತ್ತಾರೆ. ಜಳಕದ ನಂತರ ದೇವರ ಭಾವಚಿತ್ರ, ಆಭರಣಗಳಾದ ತ್ರಿಶೂಲ, ಡಮರುಗ, ಮದ್ದಲಿ ಮುಂತಾದವುಗಳನ್ನು ದೇವರ ಗದ್ದಿಗೆಯ ಮೇಲಿನಿಂದ ಕೆಳಗಡೆ ಇಳಿಸಿ, ಅವುಗಳನ್ನೆಲ್ಲಾ ಚೆನ್ನಾಗಿ ಒದ್ದೆ ಬಟ್ಟೆಯಿಂದ ಒರೆಸಿ, ಪೂಜೆಗೆ ಸಕಲ ಸಿದ್ಧತೆಗಳು ನಡೆಯುತ್ತದೆ. ಎಡೆಗೆ ಸಿಹಿ ಪದಾರ್ಥವನ್ನು ಮಾಡಿ ಇಡುತ್ತಾರೆ. ಬಡವರಾದರೆ ಎಡೆಗೆ ಅನ್ನದ ಜೊತೆಗೆ ಒಂದಿಷ್ಟು ಬೆಲ್ಲದ ಚೂರುಗಳನ್ನು ಹಾಕುತ್ತಾರೆ. ಇದ್ದಂತವರು ಪಾಯಸವನ್ನೋ (ಗೋದಿ ನುಚ್ಚಿನ ಕೀರು), ಇಲ್ಲವೇ ತಮ್ಮ

ಕೈಲಾದಷ್ಟು ಯಾವುದಾದರೂ ಸಿಹಿ ಅಡುಗೆಯನ್ನು ಮಾಡಿ, ಎಡೆಗೆ ಅರ್ಪಿಸುತ್ತಾರೆ. ಈ ರೀತಿ ಪೂಜೆಗೆ ಎಡೆಯನ್ನು ನೀಡಿ, ಪೂಜಾ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಬಹುತೇಕ ಎಲ್ಲಾ ಮಲ್ಲಯ್ಯನ ಭಕ್ತರ ಮನೆಯಲ್ಲಿ ಇದೇ ತೆರನಾದ ಪೂಜಾ ಕಾರ್ಯಕ್ರಮವಿರುತ್ತದೆ. ದೇವರಿಗೆ ಎಡೆ ಹಾಕಿ, ಪೂಜೆ ಆಗುವವರೆಗೆ ಊಟ, ತಿಂಡಿಯನ್ನು ಸೇವಿಸುವ ಹಾಗಿಲ್ಲ. ಕೆಲ ಭಕ್ತರು ಕಟ್ಟುನಿಟ್ಟಾಗಿ ನೀರನ್ನು ಸಹ ಕುಡಿಯುವುದಿಲ್ಲ. ಮಲ್ಲಯ್ಯನಿಗೆ ಕುರುಬರೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರಾಗಿರುವುದರಿಂದ ಹಾಗೂ ದೀಕ್ಷೆಯನ್ನು ಪಡೆದಿರುವುದರಿಂದ ಆತ ಇವರಿಗೆ ಆರಾಧ್ಯ ದೈವ. ಗೊರವರು ಆ ದಿನ ಮನೆಯಲ್ಲಿ ಪೂಜಾ ಕಾರ್ಯಕ್ರಮಗಳು ನೆರವೇರಿದ ನಂತರ ಉಡುಪುಗಳೊಂದಿಗೆ ಜೋಳಿಗೆ, ಭಂಡಾರದ ಚೀಲ, ತ್ರಿಶೂಲ, ಡಮರುಗ ಹಿಡಿದು ಭಿಕ್ಷಾಟನೆಗೆ ತೆರಳುತ್ತಾರೆ. ಕೆಲವರು ಭಿಕ್ಷಾಟನೆಗೆ ಹೋಗದವರು ಗಿರಿಗೆ ಹೋಗಿ ಬರುತ್ತಾರೆ. ಆ ದಿನ ಯಾವುದೇ ರೀತಿಯಿಂದ ಭಕ್ತರು ಮಾಂಸದ ಅಡುಗೆ ಮಾಡುವುದು ನಿಷೇಧ.

ಬ್ರಾಹ್ಮಣರು ಭಾನುವಾರದ ದಿನ ಮಲ್ಲಯ್ಯನ ಬೆಳ್ಳಿ, ಬಂಗಾರ, ಹಿತ್ತಾಳೆ ಮತ್ತು ಕಟ್ಟಿಗೆ ಪ್ರತಿಮೆಗಳಿಗೆ ಅಭಿಷೇಕ ಮಾಡಿಸುತ್ತಾರೆ. ಜೊತೆಗೆ ಭಂಡಾರ, ಪುಷ್ಪದಿಂದ ಅರ್ಚನೆಯನ್ನು ಮಾಡುತ್ತಾರೆ. ಒಡೆಯರು ಆ ದಿನ ತಮ್ಮ ಗುರುಗಳನ್ನು ಪೂಜಿಸುವರು. ಗುಳ್ಯಂನಲ್ಲಿರುವ ಕಪಿಲಮುನಿ ಒಡೆಯರು ಶಾರದಾಪೀಠದ ಗುರುಗಳು ಎಂದು ಒಡೆಯುರು ಹೇಳುತ್ತಾರೆ. ಇವರು ಮಲ್ಲಯ್ಯನನ್ನು ನೇರವಾಗಿ ಪೂಜಿಸುವುದಿಲ್ಲ. ಕಾರಣ ಇವರೇ ದೇವರ ಸ್ವರೂಪದಂತೆ ಭಕ್ತರಿಗೆ ಗೋಚರಿಸುತ್ತಾರೆ. ಆ ಕಾರಣದಿಂದ ಬೆಟ್ಟಕ್ಕೆ ಆ ದಿನ ಅವರು ಬಂದು ಶಿವಸಾನ ಗದ್ದಿಗೆಯಲ್ಲಿರುವ ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ, ಒಡೆಯರು ಗದ್ದಿಗೆಯಲ್ಲಿ ಕುಳಿತಿರುತ್ತಾರೆ. ಬೆಟ್ಟಕ್ಕೆ ಬಂದ ಭಕ್ತರು ಒಡೆಯರ ಪಾದಗಳಿಗೆ ನಮಸ್ಕರಿಸಿ, ಅವರಿಂದ ಆಶೀರ್ವಾದದ ಜೊತೆಗೆ ಭಂಡಾರವನ್ನು ಪಡೆದು ಪುನೀತರಾಗುತ್ತಾರೆ. ಒಡೆಯರು ಪ್ರತಿ ಭಾನುವಾರ ಗಿರಿಗೆ ಬಂದ ಭಕ್ತರಿಗೆ ಮಧ್ಯಾಹ್ನ ದಾಸೋಹವನ್ನು ಏರ್ಪಡಿಸಿರುತ್ತಾರೆ. ಅದು ಇತ್ತೀಚಿನ ಬೆಳವಣಿಗೆ. ಈ ಮೊದಲು ಪ್ರತಿ ಭಾನುವಾರ ಯಾವುದೇ ರೀತಿಯ ಅನ್ನದಾಸೋಹದ ವ್ಯವಸ್ಥೆ ಇದ್ದಿಲ್ಲ. ಈಗಿನ ಒಡೆಯರು ತಮ್ಮ ಸ್ವಂತ ಖರ್ಚಿನಲ್ಲಿ ಪ್ರತಿ ಭಾನುವಾರ ಬಂದ ಭಕ್ತರಿಗೆ ಅನ್ನದ ದಾಸೋಹವನ್ನು ಏರ್ಪಡಿಸಿದ್ದಾರೆ. ಇದು ಒಳ್ಳೆಯ ಬೆಳವಣಿಗೆಯೆಂದೇ ಹೇಳಬಹುದು. ಹರಿಜನರು ಆ ದಿನ ಮನೆಯಲ್ಲಿ ಎಲ್ಲರೂ ಸ್ನಾನವನ್ನು ಮುಗಿಸಿಕೊಂಡು ಪೂಜೆ ಮಾಡುತ್ತಾರೆ. ಪೂಜೆಗೆ ಅವರಿಗೆ ಸಾಧ್ಯವಾದರೆ ಸಿಹಿ ಅಡುಗೆಯನ್ನು ಮಾಡುತ್ತಾರೆ. ಇಲ್ಲವಾದರೆ ತುಂಬಿದ ಕೊಡದ ನೀರಿಲೆ ಪಾವು ಆಗಲಿ, ಅಚ್ಚೇರು ಆಗಲಿ ಅನ್ನ ಮಾಡಿ ಅದರಾಗ ಬೆಲ್ಲ ಇಟ್ಟು ಎಡೆ ಹಾಕ್ತೀವಿ'' ಬಸವಿಯರು ಮಲ್ಲಯ್ಯನ ದಿನವಾದ ಭಾನುವಾರದಂದು ''ಜಳಕ ಮಾಡಿ ಹಣೆ ಮೇಲೆ ಭಸ್ಮ, ಭಂಡಾರ ಹಚ್ತೀವಿ. ಮತ್ತೆ ಆತನ ಭಾವಚಿತ್ರ ತೊಳೀತೀವಿ. ತ್ರೀಶೂಲ ತೊಳೀತಿವಿ. ಎಲ್ಲ ತೊಳೆದು ಅವನಿಗೆ ದೇವೀ ದೇವ ವಾರ್ನಾಲಗ್....ದೇವಿ ದೇವಾ ಅಂತ ವಾಲಗ ಹಾಕಿ ಪೂಜಾ ಕಾರ್ಯಕ್ರಮ ಮಾಡ್ತೀವಿ. ಅವತ್ತಿನ ದಿನ ಮನಿಯಾಗ ರೊಟ್ಟಿ ಮಾಡಂಗಿಲಕ್ಲ. ಯಾಕಂದ್ರೆ ಆತಗ ರೊಟ್ಟಿ ಬಡದಂಗಾಗ್ತದ. ಅದಕ್ಕ ಮಾಡಬಾರದು

ಮುದ್ದೆ ಮಾಡಬಹುದು, ಅನ್ನ ಮಾಡಬಹುದು, ಸಂಗಟಿ ಮಾಡಬಹುದು. ಏನರಾ ಮಾಡಿ ಆತುಗ ಅವತ್ತಿನ ದಿನ ಪೂಜೆ ನಡಸ್ತೀವಿ'' ಎಂದು ಹೇಳುತ್ತಾರೆ. ಬಸವಿಯರು ಮಲ್ಲಯ್ಯನ ಗುರುತುಗಳಾಗಿ ಮನೆಯಲ್ಲಿ ತ್ರಿಶೂಲ, ಜೋಳಿಗೆ, ಒಂದು ಕುಂಬಳಿ ಇಟ್ಟುಕೊಂಡಿರುತ್ತಾರೆ. ಇವರು ತಮ್ಮ ಜೀವನಕ್ಕೆ ಭಿಕ್ಷಾಟನೆಯನ್ನು ಅವಲಂಬಿಸಿದ್ದಾರೆ. ಬಹಳ ಕಡಿಮೆ ಜನ ಈ ಭಿಕ್ಷಾಟನೆಯನ್ನು ಅವಲಂಬಿಸಿರುವರು. ಅದು ಭಾನುವಾರ ಮತ್ತು ಗುರುವಾರಗಳಂದು ಮಾತ್ರ.ಉಳಿದಂತೆ ಬಸವಿಯರು ಬೇಸಾಯವನ್ನೇ (ಕೂಲಿ) ಮಾಡಿಕೊಂಡಿರುವರು.

ಈ ಕ್ಷೇತ್ರದ ಮೊದಲ ಗೊರವಮ್ಮನವರಾದ ಸಿಂಧವಾಳದ ದುರುಗಮ್ಮನವರು ಸಿಂಧವಾಳದಲ್ಲಿ ಮಲ್ಲಯ್ಯನ ಗುಡಿಯನ್ನು ಭಕ್ತರ ನೆರವಿನಿಂದ ಕಟ್ಟಿಸಿದ್ದಾಳೆ. ಆ ಗುಡಿಗೆ ಇವರೇ ಪೂಜೆ ನೆರವೇರಿಸುವ ಪೂಜಾರಿಯಾಗಿ ಇವತ್ತಿಗೂ ಕಾರ್ಯ ನೆರವೇರಿಸುತ್ತಾ ಬಂದಿರುವರು. ಇವರು ಭಾನುವಾರ ವಿಶೇಷವಾಗಿ ಜಳಕ ಆದ ಮೇಲೆ ದೇವರಿಗೆ ಮೈತೊಳೆಸಿ, ಹೂ-ಪತ್ರಿಗಳನ್ನು ಪೂಜೆಗೆ ಇಟ್ಟು ಭಂಡಾರ ಸಮರ್ಪಿಸಿ ಪೂಜಾ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಈ ಗುಡಿಗೆ ಭಕ್ತರು ತಂದ ಕಾಯಿಗಳನ್ನು ಒಡೆದು, ಮಂಗಳಾರತಿ ಮಾಡಿ ಅವರಿಗೆ ನೀಡುತ್ತಾರೆ. ಹಾಗೆ ಇವರು ವಾರದ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ವಿಶೇಷವೆಂದರೆ; ಭಾನುವಾರ ಬೆಳಿಗ್ಗೆ ೬.೩೦ ರಿಂದ ೭.೩೦ರವರೆಗೆ, ಸಂಜೆ ೭ ರಿಂದ ೯ಗಂಟೆಯ ಒಳಗೆ ಇವರಿಗೆ ಸ್ವಾಮಿ ಮಲ್ಲಯ್ಯ ಮೈದುಂಬುತ್ತಾನೆ. ಆ ಕಾರಣವಾಗಿ ಭಾನುವಾರ ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ತಮ್ಮ ಕಷ್ಟ ಕಾರ್ಪಣ್ಯಗಳನ್ನು ಕೇಳಿ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ಇದೇ ರೀತಿಯ ದೇವರು ಮೈದುಂಬುವ ಪರಿಯನ್ನು ನಾವು ನಮ್ಮ ಬಳ್ಳಾರಿ ಜಿಲ್ಲೆಯ (ತಾಲೂಕು) ಎರ್ರಂಗಳಿ ಗ್ರಾಮದಲ್ಲಿ ಸ್ಥಾಪನೆಯಾದ 'ಮೈಲಾರ ಲಿಂಗನ' ಗುಡಿಯ ಪೂಜಾರಿಯಾದ ಪೊಲೀಸ್ ಇಲಾಖೆಯ ಕೆ.ಬಿ.ಬಡಿಗೇರ್ ಅವರನ್ನು ಕಾಣಬಹುದು. ಇವರಿಗೂ ಸಹ ಪ್ರತಿ ಭಾನುವಾರ ದೇವರು ಮೈದುಂಬುತ್ತಾನೆ. ಇವರು ಭಾನುವಾರದಂದು ನಿತ್ಯ ಪೂಜೆ ಸಿದ್ಧತೆಗಳನ್ನು ಮಾಡಿಕೊಂಡು ಗೊರವರ ವೇಶ ಹಾಕಿ ಪೂಜೆಯ ನಂತರ ಡೋಣಿಯಲ್ಲಿ ಊಟ ಮಾಡುತ್ತಾರೆ.

ಭಾನುವಾರದ ದಿನ ಮೀನಗೊಂದಿಯ ಗಿರಿಯಲ್ಲಿ ಪ್ರತಿನಿತ್ಯಕ್ಕಿಂತ ಆ ದಿನ ವಿಶೇಷವಾಗಿದ್ದು, ಭಕ್ತರು ಬಂದು ಹೋಗುವ ಸಂಖ್ಯೆ ಸ್ವಲ್ಪ ಜಾಸ್ತಿ ಪ್ರಮಾಣದಲ್ಲಿರುತ್ತದೆ. ಜೀರ್ರರು ವಿಶೇಷವಾದ ಪೂಜೆಯನ್ನು ಆ ದಿನ ಸಲ್ಲಿಸುತ್ತಾರೆ. ಭಕ್ತರು ತಂದ ಕಾಯಿ,ಕರ್ಪೂರ, ಭಂಡಾರಗಳನ್ನು ಪಡೆದು ದೇವರಿಗೆ ಬೆಳಗಿ, ಭಂಡಾರದ ಜೊತೆ ಅವರಿಗೆ ಕೊಡುತ್ತಾರೆ. ಭಕ್ತರು ಶಿವಸಾನ ಗದ್ದಿಗೆಯಲ್ಲಿರುವ ಒಡೆಯರ ಪಾದಗಳಿಗೆ ನಮಸ್ಕರಿಸಿ ಅವರಿಂದಲೂ ಭಂಡಾರವನ್ನು ಪಡೆಯುತ್ತಾರೆ. ಜೊತೆಗೆ ಬಂದ ಭಕ್ತರಿಗೆ ಅನ್ನ ದಾಸೋಹವಿರುತ್ತದೆ. ಇವಿಷ್ಟು ವಿಶೇಷ ಅಂಶಗಳನ್ನು ಗಿರಿಯಲ್ಲಿ ಕಾಣುತ್ತೇವೆ. ಮೈಲಾರದಲ್ಲಿ ಪ್ರತಿ ಭಾನುವಾರ ದೇವರ ಉತ್ಸವ ಇರುತ್ತದೆ.

## ೫.೧.೩. ಹುಣ್ಣಿಮೆ-ಅಮಾವಾಸೆ :

ಮೀನಗೊಂದಿಯ ಈ ಕ್ಷೇತ್ರದಲ್ಲಿ ಹುಣ್ಣಿಮೆಗೆ ಯಾವುದೇ ರೀತಿಯ ವಿಶೇಷ ಕಾರ್ಯಕ್ರಮಗಳು ಜರುಗದೇ ಗೌಣವಾಗಿದೆ. ಆ ದಿನ ಪ್ರತ್ಯೇಕವಾಗಿ ಗಿರಿಯ ದೇವಾಲಯದಲ್ಲಾಗಲೀ, ಭಕ್ತರು ತಮ್ಮ ಮನೆಗಳಲ್ಲಾಗಲೀ ಯಾವುದೇ ವಿಶೇಷ ಪೂಜಾ ಕಾರ್ಯಕ್ರಮವನ್ನೇನು ಏರ್ಪಡಿಸುವು ದಿಲ್ಲ. ಪ್ರತಿ ನಿತ್ಯದಂತೆಯೇ ಅಂದು ಸಹ ಮಲ್ಲಯ್ಯನನ್ನು ಪೂಜಿಸುತ್ತಾರೆಯೇ ವಿನಃ ವಿಶೇಷವೇನು ಇರುವುದಿಲ್ಲ. ಆದೇನಿದ್ದರೂ ಅಮವಾಸೆಗೆ.

ಅಮವಾಸೆಯ ದಿನದಂದು ಭಕ್ತರು ಪ್ರತಿ ಭಾನುವಾರ ಯಾವ ರೀತಿ ಮನೆಯಲ್ಲಿ ಪೂಜಾ ಕಾರ್ಯಕ್ರಮವನ್ನು ನೆರವೇರಿಸುತ್ತಾರೋ, ಅದೇತೆರನಾಗಿ ನೆರವೇರಿಸುತ್ತಾರೆ. ಅದರಲ್ಲಿ ನಾವು ಯಾವುದೇ ರೀತಿಯ ಬದಲಾವಣೆಗಳನ್ನು ಕಾಣಲಾರೆವು. ಆದರೆ ಕೆಲವು ಭಕ್ತರು ಮನೆಯಲ್ಲಿ ಮಲ್ಲಯ್ಯನಿಗೆ ಕಾಯಿಯನ್ನು ಒಡೆದುಕೊಳ್ಳುತ್ತಾರೆ. ಜೊತೆಗೆ ಮನೆಗೆ ಕನಿಷ್ಟ ಒಬ್ಬರಾದರೂ ಗಿರಿಗೆ ತಪ್ಪದೇ ಹೋಗಿ ಬರುವ ಪದ್ಧತಿ ಇದೆ.

ಆ ದಿನ ಗಿರಿಯಲ್ಲಿ ಜನರ ಗದ್ದಲ ಜಾಸ್ತಿಯೇ ಇರುತ್ತದೆ. ಭಕ್ತರ ಓಡಾಟ ಚುರುಕಾಗಿರುತ್ತದೆ. ತೆಂಗಿನ ಕಾಯಿಗಳನ್ನು ಮಾರುವವರು, ಭಂಡಾರದ ಪೊಟ್ಟಣಗಳನ್ನು ಮಾರುವವರು, ಕಾರ ಮಂಡಕ್ಕಿ ಹಾಗೂ ಚಿಕ್ಕ ಚಿಕ್ಕ ಅಂಗಡಿಯವರು ಹೀಗೆ ಒಂದು ಸಣ್ಣ ಪರಿಸೇ ಇರುತ್ತದೆ. ಹಲವಾರು ಗೊರವರು ಪಿಳ್ಳಂಗೋವಿಯನ್ನು ಊದುತ್ತಾ, ಡಮರುಗವನ್ನು ಬಾರಿಸುತ್ತಾ, ಅದಕ್ಕೆ ಹೊಂದುವಂತೆ ಹೆಜ್ಜೆಗಳನ್ನು ಹಾಕುತ್ತಾ, ಬಂದ ಭಕ್ತರ ಹಣೆಗೆ ಭಂಡಾರವನ್ನು ಹಚ್ಚಿ, ಭಿಕ್ಷೆಯನ್ನು ಕೇಳುತ್ತಿರುತ್ತಾರೆ. ಭಕ್ತರು ಒಡೆಯರ ಪಾದಗಳಿಗೆ ನಮಸ್ಕರಿಸಿ, ಅವರಿಂದ ಭಂಡಾರದ ಜೊತೆಗೆ ಆಶೀರ್ವಾದವನ್ನು ಪಡೆದು, ವಿಘ್ನೇಶ್ವರನ ಗುಡಿಗೆ ನಮಸ್ಕರಿಸಿ ಗಿರಿಯನ್ನು ಹತ್ತುತ್ತಾರೆ. ಗಿರಿಯಲ್ಲಿ ನಾಲ್ಕೈದು ಜನ ಗೊರವರು ಕುಳಿತುಕೊಂಡು ಮಲ್ಲಯ್ಯನ ಮಹಿಮೆಯ ಹಾಡುಗಳನ್ನು ಹಾಡುತ್ತಾ, ಭಕ್ತರ ಗಮನವನ್ನು ಸೆಳೆದು ಸುಮಧುರವಾಗಿ, ಲಯಬದ್ಧವಾಗಿ ಹಾಡುತ್ತಿರುತ್ತಾರೆ. ಹಾಡುಗಳ ಸಂಧಿ ಮುಗಿದ ನಂತರ ಅಥವಾ ಹಾಡು ಮುಗಿದ ನಂತರ ಭಕ್ತರು ತಮಗೆ ತೋಚಿದಷ್ಟು ಹಣವನ್ನು ಗೊರವರಿಗೆ ನೀಡುತ್ತಾರೆ. ಕೊನೆಗೆ ಮಧ್ಯಾಹ್ನದ ದಾಸೋಹದ ಹೊತ್ತಿಗೆ ಬೆಳಗಿನಿಂದ ಸಂಗ್ರಹವಾದ ಹಣವನ್ನು ಕೂಡಿಸಿಕೊಂಡು ಹಂಚಿಕೊಳ್ಳುತ್ತಾರೆ. ಗರ್ಭಗುಡಿಯಲ್ಲಿ ಭಕ್ತರ ಒತ್ತಡ ಜಾಸ್ತಿಯಾಗಿದ್ದು, ಜೀರ್ರರು ಭಕ್ತರು ತಂದ ಕಾಯಿಗಳನ್ನು ಒಡೆದು ಪ್ರಸಾದದ ರೂಪದಲ್ಲಿ ಭಂಡಾರವನ್ನು ಕಾಯಿಯ ಬಟ್ಟಲಲ್ಲಿ ತುಂಬಿಕೊಡುತ್ತಾರೆ. ಭಕ್ತರು ಹೂ, ಕರ್ಪೂರ, ಊದಿನಕಡ್ಡಿಗಳನ್ನು ದೇವರಿಗೆ ಅರ್ಪಿಸಿ, ಹರಕೆ ಹೊತ್ತಿದ್ದರೆ ಮೀಸಲಿಟ್ಟ ದವಸ ಧಾನ್ಯಗಳನ್ನು ನೀಡುತ್ತಾರೆ. ಪಕ್ಕದಲ್ಲಿರುವ ಮಾಳಮ್ಮನ ಗುಡಿಗೆ ಬಂದು ಆಕೆಯ ದರ್ಶನ ಪಡೆದು ಮೀಸಲಿಟ್ಟ ಎಣ್ಣೆ-ತುಪ್ಪವನ್ನು ದೇವಿಗೆ ಅರ್ಪಿಸಿ ಸಂತೃಪ್ತರಾಗುತ್ತಾರೆ.

ಗಿರಿಯ ಕೆಳಗಡೆ ಮಧ್ಯಾಹ್ನ ಒಂದರ ಸುಮಾರಿಗೆ ನೆರೆದ ಭಕ್ತರಿಗೆ ಶ್ರೀ ಆಸ್ವರಸ್ವಾಮಿ ಮಠ (ಆಸಾದಿಸ್ವಾಮಿ)ದಲ್ಲಿ ಅನ್ನ ದಾಸೋಹವಿರುತ್ತದೆ. ದಾಸೋಹದ ಸಮಯ ಸಮೀಪಿಸುತ್ತಿದ್ದಂತೆ ಕಾರ್ಯಕರ್ತರು 'ಬರ್‍ರೆಪ್ಪಾ ದಾಸೋಹಕ್ಕೆ....ಬರ್‍ರೆಪ್ಪ ಮಲ್ಲಯ್ಯನ ಪ್ರಸಾದಕ್ಕೆ'' ಅಂತ ಭಕ್ತರನ್ನೆಲ್ಲಾ ಕೂಗಿ ಕರೆಯುತ್ತಾರೆ. ಇದನ್ನು ಆಲಿಸಿಕೊಂಡ ಭಕ್ತರು ಮಠದ ಒಳಗೆ ಸೇರುತ್ತಾರೆ. ಮಧ್ಯಾಹ್ನ ನಡೆಯುವ ಈ ದಾಸೋಹವನ್ನು ನೆರಣಿಕೆ ಗ್ರಾಮದ ಮುಖಂಡರು ನೆರವೇರಿಸುತ್ತಾರೆ. ದಾಸೋಹಕ್ಕೆ ಎಲ್ಲಾ ಸಿದ್ಧತೆಯಾದ ನಂತರ ಮದ್ದಲಿಗೊರವರು, ಕಂಚಾವೀರರು, ವಗ್ಗರು ಬಂದು ಮಲ್ಲಯ್ಯನ ಕುರಿತ ಶ್ಲೋಕಗಳನ್ನು ಹೇಳಿ ಏಳುಕೋಟಿ ಅಂದ ಮೇಲೆಯೇ ದಾಸೋಹ ಪ್ರಾರಂಭವಾಗುತ್ತದೆ. ಈ ದಾಸೋಹವನ್ನು ಮುಗಿಸಿಕೊಂಡ ಭಕ್ತರು ತಮ್ಮ ತಮ್ಮ ಊರುಗಳಿಗೆ ತೆರಳುತ್ತಾರೆ. ಕೆಲವರು ಅಲ್ಲಿಯೇ ಉಳಿದು ಸಂಜೆಗೆ ಹೊರಡುತ್ತಾರೆ. ಅಂದು ಸಂಜೆ ಏಳು ಎಂಟು ಗಂಟೆಯ ತನಕವೂ ಗಿರಿಗೆ ಭಕ್ತರು ಬರುತ್ತಲೇ ಇರುತ್ತಾರೆ. ಸಂಜೆಯ ಹೊತ್ತು ಗಿರಿಗೆ ಬಂದವರು ಬಹುಶಃ ತಿರುಗಿ ಹೋಗದೆ, ರಾತ್ರಿ ಅಲ್ಲಿಯೇ ನಿದ್ದೆ ಮಾಡಿ ಬೆಳಿಗ್ಗೆ ಹೋಗುವರು. ರಾತ್ರಿ ಭಕ್ತರಿಂದ (ಸಾಮಾನ್ಯವಾಗಿ ಗುಳ್ಯಂ ಗ್ರಾಮದವರಿಂದ) ದಾಸೋಹ ಇರುತ್ತದೆ. ರಾತ್ರಿ ೯ರ ಸುಮಾರಿಗೆ ಶಿವಸಾನ ಗದ್ದಿಗೆಯ ಮುಂಭಾಗದ ಬಯಲಲ್ಲಿ ಭಜನಾ ಕಾರ್ಯಕ್ರಮವಿರುತ್ತದೆ. ಹೀಗೆ ಭಕ್ತರು ರಾತ್ರಿ ಅಲ್ಲಿಯೇ ಉಳಿದು ಕೊಂಡಿದ್ದು, ಬೆಳಿಗ್ಗೆ ತಮ್ಮ ತಮ್ಮ ಊರುಗಳಿಗೆ ತೆರಳುತ್ತಾರೆ.

ಗಿರಿಯ ಹತ್ತಿರದಲ್ಲೇ ಇರುವ ಮಾದರ ಮಲ್ಲಯ್ಯನ ಗುಡಿಗೆ ಸ್ವಲ್ಪ ಪ್ರಮಾಣದಲ್ಲಿ ಮಾದರ ಭಕ್ತರು ಬಂದು ಕಾಯಿ ಕರ್ಪೂರ ಬೆಳಗಿಸಿ, ಪೂಜೆ ಸಲ್ಲಿಸಿಕೊಂಡು ಹೋಗುತ್ತಾರೆ. ನೆರಣಿಕೆ ಗ್ರಾಮದಲ್ಲಿರುವ ಮಾದರ ಮಲ್ಲಯ್ಯನ ಗುಡಿಯಲ್ಲಿ ಅಮವಾಸೆಯ ರಾತ್ರಿ ಭಜನಾ ಕಾರ್ಯಕ್ರಮ ಇರುತ್ತದೆ.

ಇತ್ತೀಚಿಗೆ ಭಕ್ತರು ತಪ್ಪದೆ ಅಮವಾಸೆಗೆ ಗಿರಿಗೆ ಬಂದು ನಿದ್ದೆ ಮಾಡಿ ಹೋಗುತ್ತಿದ್ದಾರೆ. ಅನುಕೂಲ ಆಗದೇ ಗಿರಿಗೆ ಬರದೇ ಇದ್ದವರು ಮನೆಯಲ್ಲಿಯೇ ಸ್ವಾಮಿಗೆ ಪೂಜೆಯನ್ನು ಮಾಡಿಕೊಂಡು ಕಾಯಿಯನ್ನು ಒಡೆದುಕೊಳ್ಳುತ್ತಾರೆ. ಒಟ್ಟಾರೆ ಭರತ ಹುಣ್ಣಿಮೆಗೆ ಯಾವುದೇ ರೀತಿಯ ಆಚರಣೆಯನ್ನು ಕೈಗೊಳ್ಳುವುದಿಲ್ಲ. ಅದೇನಿದ್ದರೂ ಅಮವಾಸೆಗೆ ಸೀಮಿತಗೊಳಿಸಿದ್ದಾರೆ. ಹಿರೇ ಮೈಲಾರದಲ್ಲಿ ಅಮಾವಾಸೆ ಗೌಣ. ಹುಣ್ಣಿಮೆ ಅವರಿಗೆ ಪ್ರಧಾನವಾಗಿ ಗೋಚರಿಸಿದೆ. ಅಂದೇ ಅವರು ದೇವರಿಗೆ ವಿಶೇಷವಾಗಿ ಪೂಜೆಯನ್ನು ಸಲ್ಲಿಸುತ್ತಾರೆ.

## ೫.೧.೪. ಹಬ್ಬ - ಹರಿದಿನಗಳಲ್ಲಿ :

ವಾರ್ಷಿಕ ಆಚರಣೆಯಲ್ಲಿ ಬರುವ ಹಬ್ಬ-ಹರಿದಿನಗಳಲ್ಲಿ ಈ ಕ್ಷೇತ್ರದಲ್ಲಿ ಮಲ್ಲಯ್ಯನಿಗೆ ಸಂಬಂಧಿಸಿದಂತೆ ಯಾವುದೇ ವಿಶೇಷ ಕಾರ್ಯಕ್ರಮ, ಪೂಜೆಗಳು ಜರುಗುವುದಿಲ್ಲ. ಅದು ಕ್ವಚಿತ್ತಾಗಿ ''ಶಿವರಾತ್ರಿಯ ದಿವಸ ನೆರಣಿಕೆ ಗ್ರಾಮದ ಭಕ್ತರಿಂದ ಲಿಂಗೋದ್ಭವ ಕಾಲದಲ್ಲಿ ಅಷ್ಟೋತ್ತರ ಶತಕ (೧೦೮) ಕುಂಭಗಳಿಂದ ಹೊನ್ನಿಕೆರೆ ತೀರ್ಥದಿಂದ ಜಲ ತೆಗೆದುಕೊಂಡು ಹೋಗಿ, ಸ್ವಾಮಿಗೆ ಅಭಿಷೇಕ ಮಾಡುವರು. ಶ್ರಾವಣಮಾಸದ ಒಂದು ತಿಂಗಳು ಬ್ರಾಹ್ಮಣರಿಂದ ವಿಶೇಷ ಪೂಜಾ ಕಾರ್ಯಕ್ರಮ ಇರುತ್ತದೆ. ಈ ಮಾಸದ ೩ನೇ ಭಾನುವಾರ ನೆರಣಿಕೆ ಗ್ರಾಮದ ಕಾರ್ಯಕರ್ತರು ಮತ್ತು ಭಕ್ತರು ದೇವರಿಗೆ ಪೂಜೆ ಮಾಡಿ ಯಾವ ಯಾವ ಕಾರ್ತೀಕದಲ್ಲಿ ಮಳೆ ಬರುವುದೋ ಅದನ್ನು ಗಂಗಿ ಮಾಳವ್ವನಿಗೆ ಮಲ್ಲಿಗೆ ಹೂ ಮುಡಿಸಿ ವರವನ್ನು ಬೇಡುವರು. ಯಾವ ಕಾರ್ತಿಕೆಯಲ್ಲಿ ಅಮ್ಮನವರು ಹೂವನ್ನು ವರ ಕೊಡುವರೋ ಆ ಕಾರ್ತಿಕೆಯಲ್ಲಿ ಮಳೆ ತಪ್ಪದಲೇ ಬರುತ್ತದೆ ಎಂದು ಭಕ್ತರ ದೃಢ ವಿಶ್ವಾಸ ನಂಬಿಕೆ. ವೈಶಾಖ ಮತ್ತು ಪುಷ್ಯಮಾಸಗಳಲ್ಲಿ ನೆರಣಿಕೆ ಗ್ರಾಮ ಪುರೋಹಿತರಿಂದ ಮಲ್ಲೇಶ್ವರ ಸಹಸ್ರ ಪರಾಯಣ, ಮಲ್ಲೇಶ್ವರ ನಾಮ ಜಪ, ರುದ್ರಾಭಿಷೇಕ, ಭಂಡಾರ ಕುಂಕುಮ ಬಿಲ್ವಾರ್ಚನೆಗಳು ಮತ್ತು ಭಕ್ತಾದಿಗಳಿಗೆ ಅನ್ನ ಅಂತರ್ಪಣೆ ನಡೆಯುವುದು''.

ಇದಿಷ್ಟನ್ನು ಬಿಟ್ಟರೆ, ಉಳಿದಂತೆ ದೀಪಾವಳಿ ಅಮವಾಸೆ, ನಾಗರ ಅಮವಾಸೆ, ಮಣ್ಣೆತ್ತಿನ ಅಮವಾಸೆ, ಬೆನಕನ ಅಮವಾಸೆ ಹೀಗೆ ಈ ಹಬ್ಬಗಳು ಬಂದಾಗ ಪ್ರತಿ ಅಮವಾಸೆಗೆ ಯಾವ ರೀತಿ ಮಲ್ಲಯ್ಯನ ಆಚರಣೆ ಇದೆಯೋ ಅದೇ ರೀತಿನೇ ಆಚರಿಸುತ್ತಾರೆ. ಆದರಲ್ಲಿ ಯಾವುದೇ ಬದಲಾವಣೆಗಳು ಇಲ್ಲ. ಯುಗಾದಿ, ಸಂಕ್ರಾಂತಿ ಮುಂತಾದ ಹಬ್ಬಗಳು ಬಂದರೂ ಸಹ ವಿಶೇಷ ಆಚರಣೆಗಳು ಮಲ್ಲಯ್ಯನಿಗೆ ಕುರಿತು ಇರದು. ಆದೇನಿದ್ದರೂ 'ದಸರಾ ಬನ್ನಿಯಲ್ಲಿ'.

## ೫.೧.೫. ಮಲ್ಲಯ್ಯನ ಜಾತ್ರೆ :

ವ್ಯಾಪಾರ ವ್ಯವಹಾರಗಳೊಂದಿಗೆ ಜನಪದರಿಗೆ ಮನರಂಜನೆಯನ್ನು ಒದಗಿಸುವ, ವರ್ಷದ ಯಾವುದೋ ಒಂದು ನಿರ್ಧಿಷ್ಟ ಕಾಲದಲ್ಲಿ ನಡೆಯುವ ಸಾಮಾಜಿಕ ಚಟುವಟಿಕೆ. ಜಾತ್ರೆ ಶಬ್ದವು ಯಾತ್ರಾ, ಯಾತ್ರೆಗಳ ತದ್ಭವ ರೂಪ. ಜಾತ್ರೆಯ ಮುಖ್ಯ ಬಂಡವಾಳ ಜನ. 'ಜನ ಸೇರದಿರೆ ಜಾತ್ರೆ', 'ಜನ ಮರುಳೋ ಜಾತ್ರೆ ಮರಳೋ' ಇತ್ಯಾದಿ ಗಾದೆಗಳು ಇದನ್ನು ದೃಢಪಡಿಸುತ್ತವೆ. ಹೀಗೆ ಸೇರಿದ ಜನಕ್ಕೆ ಬೇಕಾಗುವಂತಹ ಸಾಮಾನು ಸರಂಜಾಮುಗಳನ್ನು ಮಾರಲು ಅಂಗಡಿ ಮುಂಗಟ್ಟುಗಳನ್ನು ಇಲ್ಲಿ ಬಂದು ಸೇರುತ್ತವೆ.

## ೫.೧.೫.೧. ಕಂಕಣ :

ದಸರಾ ಅಮವಾಸೆಯಾದ ೫ನೇ ದಿನವಾದ ಅಶ್ವಿನಿ ಶುದ್ಧ ಪಂಚಮಿಯ ದಿನದಂದು ಶ್ರೀ ಮಾಳಾಮಲ್ಲೇಶ್ವರರಿಗೆ ಪಂಚಾಮೃತ ಮತ್ತು ಏಕಾದಶವಾದ ರುದ್ರಾಭಿಷೇಕ ಮಾಡಲಾಗುವುದು. ಆ ದಿನ ನೆರಣಿಕೆ ಗ್ರಾಮದ ದೇವರು ಮನೆಯಲ್ಲಿರುವ ಶ್ರೀ ಮಾಳಾಮಲ್ಲೇಶ್ವರರ ಕುದುರೆ ಉತ್ಸವ ಮೂರ್ತಿಗಳನ್ನು ಮೆರವಣಿಗೆಯ ಮೂಲಕ ಸಾಯಂಕಾಲ ಐದು ಗಂಟೆಯ ವೇಳೆಗೆ ಗಿರಿಗೆ ತಲುಪುತ್ತವೆ. ಸ್ವಾಮಿ ಮಲ್ಲೇಶ್ವರನಿಗೆ ಹೆಣ್ಣನ್ನು ಖಾಯಂ ಮಾಡುವ ನಿಶ್ಚಿತಾರ್ಥ ಕಾರ್ಯಕ್ರಮ ಆ ದಿನದ ವಿಶೇಷ. ಈ ಕಾರ್ಯಕ್ರಮಕ್ಕೆ ಸಂಜೆ ಏಳರ ಹೊತ್ತಿಗೆ ನೆರಣಿಕೆ ಗ್ರಾಮದ ಪುರೋಹಿತರು, ಅರ್ಚಕರು, ಕಂಚಾವೀರರು, ಮದಲಿ ಗೊರವಯ್ಯನವರು, ಎಳ್ಳಾರ್ಥಿ ಗೊರವಯ್ಯನವರು, ಇನ್ನೂ ಮುಂತಾಗಿ ಅನೇಕ ಗೊರವರು ಮತ್ತು ಭಕ್ತರು ಗಿರಿಗೆ ಬಂದು ಸೇರುತ್ತಾರೆ. ಕಂಕಣಕ್ಕೆ ಪುರೋಹಿತರು ಸಕಲ ಸಿದ್ದತೆಗಳನ್ನು ಮಾಡಿಕೊಂಡು ಮಲ್ಲೇಶ್ವರನಿಗೆ ಮಂತ್ರವನ್ನು ಪಠಿಸುವುದರೊಂದಿಗೆ ಐದು ಜನರಿಗೆ ಕಂಕಣಧಾರಣೆಯನ್ನು ಮಾಡುತ್ತಾರೆ. ಅದು ಕಂಚಾವೀರರಿಗೆ, ಎಳ್ಳಾರ್ಥಿಯ ಮದ್ದಲಿ ಗೊರವಯ್ಯನವರಿಗೆ ಹಾಗೂ ಕಾರಣೀಕದ ಪೂಜಾರಿಗೆ ಕಂಕಣವನ್ನು ಪುರೋಹಿತರು ಕಟ್ಟುತ್ತಾರೆ. ಈ ಐದು ಜನರಿಗೆ ಪುರೋಹಿತರು ಕಂಕಣ ಕಟ್ಟಿದ ಮೇಲೆಯೇ ಮಲ್ಲೇಶ್ವರನಿಗೆ ಹೆಣ್ಣನ್ನು ನಿಶ್ಚಯಿಸಿದಂತೆ ಇದು ಮಲ್ಲೇಶ್ವರ ಕಂಕಣ. ಸ್ವಾಮಿ ಮಲ್ಲೇಶ್ವರನ ಪರವಾಗಿ ಒಡೆಯರು, ಕಂಚಾವೀರರು, ಗೊರವರು ಇದ್ದರೆ ಮಾಳಮ್ಮನ ಪರವಾಗಿ ಪುರೋಹಿತರು ಇರುತ್ತಾರೆ. ಈ ಕಾರ್ಯಕ್ರಮ ನಮ್ಮ ಜನಪದರು ತಮ್ಮ ನಿಶ್ಚಿತಾರ್ಥದಲ್ಲಿ ಯಾವ ರೀತಿಯ ಕಾರ್ಯಕ್ರಮಗಳನ್ನು ನೆರವೇರಿಸುತ್ತಾರೆಯೋ ಅದೇ ರೀತಿಯಾಗಿಯೇ ಇರುತ್ತದೆ. ಈ ಕಾರ್ಯಕ್ರಮ ಗಿರಿಯ ಮೇಲೆ ಮುಗಿಯುವ ವೇಳಗೆ ರಾತ್ರಿ ಸುಮಾರು ೯ಗಂಟೆಯಾಗಿರುತ್ತದೆ. ಕಂಕಣ ಕಟ್ಟುವ ಈ ಕಾರ್ಯಕ್ರಮ ಮುಗಿದ ಮೇಲೆ ಉತ್ಸವ ಮೂರ್ತಿಗಳನ್ನು ಮೆರವಣಿಗೆಯ ಸಮೇತ ಗಿರಿಯಿಂದ ಕೆಳಗಡೆ ತರುತ್ತಾರೆ. ಕೆಳಗಡೆ ಶಿವಸಾನ ಗದ್ದಿಗೆಯಲ್ಲಿ ಮಂಗಳಾರತಿ ಕಾರ್ಯಕ್ರಮ ಮುಗಿದು ಮುಖ್ಯ ಬಜಾರಗುಂಟ ಉತ್ಸವಮೂರ್ತಿಗಳ ಮೆರವಣಿಗೆ ಸಾಗಿ ಹೊನ್ನಿಕೆರೆ ಕಟ್ಟೆಯನ್ನು ತಲುಪುತ್ತದೆ. ಆ ವೇಳೆಗಾಗಲೇ ಬಸಿವೇಯರು ಬಂದು ಅಲ್ಲಿಗೆ ತಂಗಿರುತ್ತಾರೆ. ಬಸಿವೇಯರು ಸ್ವಾಮಿ ಮಲ್ಲೇಶ್ವರನಿಗೆ ವಾಲಗವನ್ನು ಹಾಕುತ್ತಾರೆ. ಹಾಗೆ ಕೆಲ ಹಾಡುಗಳನ್ನು ಹಾಡಿದ ಮೇಲೆ ಅವರಿಗೆ ಕಂಕಣಧಾರಣೆಯನ್ನು ಮಾಡುತ್ತಾರೆ. ಬಸಿವೇಯರಿಗೆ ಕಂಕಣ ಕಟ್ಟುವ ಈ ಕಾರ್ಯಕ್ರಮ ಮುಗಿದು ದೇವರ ಉತ್ಸವ ಮೂರ್ತಿಗಳು ಮತ್ತೆ ಹಿಂತಿರುಗಿ ಬಜಾರಗುಂಟ ಸಾಗಿ ಕಾಡು ಸಿದ್ದಪ್ಪನ ಗುಡಿಯನ್ನು ಸೇರುತ್ತವೆ. ಆಗ ದೇವರುಗಳಿಗೆ ಮಂಗಳಾರತಿಯನ್ನು ಮಾಡುತ್ತಾರೆ. ಆಗ ನೆರದ ಸಮಸ್ತರಿಗೆ ಭೋಜನದ ವ್ಯವಸ್ಥೆಯನ್ನು ಮಾಡಿರುತ್ತಾರೆ. ಇಷ್ಟಾದರೆ ಆದಿನದ ಕಾರ್ಯಕ್ರಮ ಮುಗಿದಂತೆಯೇ. ಆ ರಾತ್ರಿ ಎಲ್ಲಾ ಭಕ್ತರು ಗಿರಿಯಲ್ಲಿ ತಂಗಿದ್ದು ಬೆಳಗ್ಗೆ ಎದ್ದು ತಮ್ಮ ತಮ್ಮ ಊರುಗಳಿಗೆ ತೆರಳುತ್ತಾರೆ. ದಸರಾ ಬನ್ನಿಗೆ ಇನ್ನೂ ಐದು ದಿನಗಳು ಇರುತ್ತವೆ. ಅಲ್ಲಿಯವರೆಗೆ ದೇವರ ಕುದುರೆ ಉತ್ಸವ ಮೂರ್ತಿಗಳು ಕಾಡುಸಿದ್ದಪ್ಪನ ಮಠದಲ್ಲಿಯೇ ಇರುತ್ತವೆ. ದೇವರುಗಳ ಕಾವಲಿಗಾಗಿ ಕಂಚಾವೀರರು, ಗಣಾಚಾರಿಗಳು ಇರುತ್ತಾರೆ.

ಈ ಐದು ದಿನ ಕಂಚಾವೀರರು ಪ್ರತಿನಿತ್ಯ ಸಾಯಂಕಾಲ ೭ರ ಹೊತ್ತಿಗೆ ಗಿರಿಗೆ ಬಂದು ಕಾಡಸಿದ್ದಪ್ಪನ ಮಠದಲ್ಲಿ ನಿದ್ದೆ ಮಾಡಿ ಮತ್ತೆ ಬೆಳಿಗ್ಗೆ ತಮ್ಮ ಊರಿಗೆ ತೆರಳುತ್ತಾರೆ. ಕಂಕಣವನ್ನು ಕಟ್ಟಿಸಿಕೊಂಡ ಎಲ್ಲರೂ ಮಡಿಯಿಂದಲೇ ಇರುತ್ತಾರೆ. ಯಾವುದೇ ನೀಸು ಪದಾರ್ಥವನ್ನು ಮುಟ್ಟುವ ಹಾಗೆ ಇಲ್ಲ. ಮದ್ಯ ಕುಡಿಯುವುದಾಗಲೀ, ಸಿಗರೇಟು-ಬೀಡಿ ಮುಂತಾದವುಗಳನ್ನು ಸೇದುವುದಾಗಲೀ ನಿಷಿದ್ಧ. ಪ್ರತಿನಿತ್ಯ ಜಳಕ ತಪ್ಪದಲೇ ಮಾಡಿ ಮಲ್ಲಯ್ಯನನ್ನು ಪೂಜಿಸಬೇಕು. ಇವರಿಗೆ ತುಂಬಿದ ಆರಿವೆ (ಕೊಡಪಾನ - ಮಣ್ಣಿನದು) ಯಿಂದ ಅಡುಗೆ ಮಾಡಿ ಬಡಿಸಬೇಕು. ಅಡುಗೆಮಾಡುವ ಮನೆಯ ಗೃಹಿಣಿಯರು ಸಹ ಸ್ನಾನಮಾಡಿ ದೇವರ ಜಪದೊಂದಿಗೆ ಅಡುಗೆ ಮಾಡಿ ಅವರಿಗೆ ಬಡಿಸಬೇಕು. ಇಷ್ಟೆಲ್ಲಾ ನಿಯಮಗಳು ಕಂಕಣಧಾರಣೆಯಾದವರಿಗೆ ಇರುತ್ತವೆ. ಕಂಕಣದ 5 ನೇ ದಿನಕ್ಕೆ ಗಿರಿಯಲ್ಲಿ ದಸರಾ ಬನ್ನಿಯ ಕಾರ್ಯಕ್ರಮವಿರುತ್ತದೆ.

### ೩.೧.೫.೨. ದಸರಾ ಬನ್ನಿಯ ಕಾರ್ಯಕ್ರಮ :

ವಿಜಯದಶಮಿಯ ದಿನದಂದು ಶ್ರೀ ಮಾಳಾ- ಮಲ್ಲೇಶ್ವರರಿಗೆ ಕಲ್ಯಾಣೋತ್ಸವದ ಕಾರ್ಯಕ್ರಮವಿರುತ್ತದೆ.''ಅಂದು ಬೆಳಗ್ಗೆ ನಾವು ಹೊನ್ನಿಕೆರೆಗೆ ಹೋಗಿ ಜಳಕ ಮಾಡಿಕೊಂಡು ಪಂಚಲಿಂಗೇಶ್ವರ ಗುಡಿಗೆ ಪೂಜೆ ಮಾಡಿ ಸಣ ಮಾಡಿಕೊಂಡು, ಬಸವಣ್ಣನ ಗುಡಿಗೆ ಬಂದು ಅಲ್ಲಿ ಸಣ ಮಾಡಿಕೊಂಡು, ಹನುಮಂತರಾಯನ ಗುಡಿಗೆ ಸಣ ಮಾಡಿಕೊಂಡು ಕಾಡ ಸಿದ್ದಪ್ಪನ ಗುಡ್ಯಾಗ ಬರ್ತೀವಿ. ಅಲ್ಲಿ ಪಲ್ಲಕ್ಕಿ ಹೋರೋರ ಕರಿಬೇಕು. ಎಲ್ಲರನ್ನು ಕಲೆಹಾಕಿದ ಮ್ಯಾಲೆ ಕಾಡು ಸಿದ್ದಪ್ಪನ ಗುಡ್ಯಾಗಿಂದ ದೇವರನ್ನು ಹೊತ್ಕಂಡು ಗಿರಿಮ್ಯಾಲೆ ಹೋಗ್ತೀವಿ'' ಎಂದು ಕಂಚಾವೀರರು ಹೇಳುತ್ತಾರೆ. ಗಿರಿಯ ಮೇಲೆ ಸಾಗಿದ ದೇವರುಗಳನ್ನು ದೇವರ ಗದ್ದಿಗೆಯಲ್ಲಿ ಕೂಡಿಸಿದ ಮೇಲೆ ಅಲಂಕಾರದ ಕಾರ್ಯಕ್ರಮ ನಡೆಯುತ್ತದೆ. ಈ ಅಲಂಕಾರವನ್ನು ಮಾಡುವವರು ಕಂಕಣವನ್ನು ಕಟ್ಟಿಸಿಕೊಂಡು ಕಂಚಾವೀರರು, ಮತ್ತು ಮದ್ದಲಿ ಗೊರವಯ್ಯನವರಾಗಿರುತ್ತಾರೆ. ಇನ್ನಿತರೆ ಗೊರವರು ಇದರ ಸಹಾಯಕ್ಕೆ ಇರುತ್ತಾರೆ. ಇವರೆಲ್ಲರ ಸಹಾಯದಿಂದ ಮಲ್ಲೇಶ್ವರನ ಉತ್ಸವಮೂರ್ತಿಗೆ ಆಭರಣಗಳನ್ನು ಹಾಕಿ ಅಲಂಕಾರ ಮಾಡುತ್ತಾರೆ. ಹಾಗೆ ಮಾಳಮ್ಮನ ಕುದುರೆ ಉತ್ಸವಮೂರ್ತಿಗೆ ಆಕೆಯ ವಿಗ್ರಹವಿರದು. ಬದಲಿಗೆ ರೋಜೋದ ಹೂವಿನ ಅಲಂಕಾರವನ್ನು ಮಾಡುತ್ತಾರೆ. ಮಾಳಮ್ಮನ ಕುದುರೆ ಉತ್ಸವ ಮೂರ್ತಿಯ ಬೆನ್ನಿನ ಮೇಲೆ ರೋಜೋದ (ಕಮಲ) ಹೂವನ್ನುಹಾಕಿ, ಒಡವೆಗಳನ್ನು ಹಾಕಿ ಬಟ್ಟೆಯನ್ನು ಹೊದಿಸಿ, ಉರುಕೋನಿ, ನೂಲಿನಹಗ್ಗಗಳಿಂದ ಸಡಿಲವಾಗದಂತೆ ಬಿಗಿಯಾಗಿ ಕಟ್ಟುತ್ತಾರೆ. ಈ ಉತ್ಸವ ಮೂರ್ತಿಗಳ ಅಲಂಕಾರ ಮುಗಿಯುವ ವೇಳೆಗೆ ಸಮಯ ಆಗಲೇ ಮದ್ಯಾಹ್ನ ಸುಮಾರು ಎರಡು ಗಂಟೆಯಾಗುತ್ತದೆ. ಅಲಂಕಾರದ ಬಳಿಕ ಮದ್ದಲಿ ಗೊರವಯ್ಯನವರು ಮತ್ತು ಕಂಚಾವೀರರು ಅವಶ್ಯವಿದ್ದರೆ ಗಿರಿಯ ಮೇಲೆ ಇರುತ್ತಾರೆ. ಇಲ್ಲದ ಪಕ್ಷದಲ್ಲಿ ಗಿರಿಯಿಂದ ಇಳಿದು ಅವರವರಿಗೆ ಮೀಸಲಾದ ಮಂಟಪಗಳಿಗೆ ತೆರಳುತ್ತಾರೆ.

ಈ ದಿನ ಬಲ್ಲೂರಿನ ಒಡೆಯರು ಶಿವಸಾನ ಗದ್ದಿಗೆಯಲ್ಲಿರುವ ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ ಗದ್ದಿಗೆಯಲ್ಲಿ ಕುಳಿತಿರುತ್ತಾರೆ. ಅಂದು ಒಡೆಯರು ವಿಶೇಷವಾದ ಕೋಟನ್ನು ಧರಿಸಿ, ತಲೆಗೆ ರೇಷ್ಮೆ ಸೀರೆಯ ರುಮಾಲನ್ನು ಸುತ್ತಿ ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡು ರಾಜ ಗಾಂಭೀರ್ಯದಲ್ಲಿ ಶಿವಸಾನ ಗದ್ದಿಗೆಯಲ್ಲಿ ಕುಳಿತಿರುತ್ತಾರೆ. ಗದ್ದಿಗೆಯ ಮುಂಭಾಗದಲ್ಲಿ ಭಕ್ತರು ತಂದ ಕಾಯಿಗಳನ್ನು ಒಡೆಯುವುದು, ಅವರು ನೀಡಿದ ಮುಡುಪು - ಮೀಸಲುಗಳನ್ನು ಸ್ವೀಕರಿಸಿ ಒಡೆಯರಿಗೆ ಕೊಡುವದು. ಹೀಗೆ ಗದ್ದಿಗೆಯ ಪೂಜಾಕಾರ್ಯಕ್ರಮವನ್ನು ನೋಡುವ ಉಸ್ತುವಾರಿ ಗಣಾಚಾರಿಗಳದಾಗಿರುತ್ತದೆ. ಭಕ್ತರು ಒಡೆಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದದೊಡನೆ ಭಂಡಾರವನ್ನು ಪಡೆದು ಪಾವನರಾಗುತ್ತಾರೆ. ಭಕ್ತರು ಒಡೆಯರನ್ನು ಸಾಕ್ಷಾತ್ ದೇವರ ಸ್ವರೂಪವೆಂದೇ ನಂಬುತ್ತಾರೆ. ಒಡೆಯರಿಂದ ಸ್ವೀಕರಿಸಿದ ಭಂಡಾರವನ್ನು ಜೋಪಾನವಾಗಿಟ್ಟುಕೊಳ್ಳುತ್ತಾರೆ. ಒಡೆಯರ ಪಾದಗಳಿಗೆ ನಮಸ್ಕರಿಸಿದ ಮೇಲೆ ಭಕ್ತರು ಗಿರಿಯನ್ನು ಹತ್ತುತ್ತಾರೆ. ಗಿರಿಯ ದೇವಾಲಯದಲ್ಲಿ ಭಕ್ತರು ದೇವರಿಗೆ ಮೀಸಲು ಮುಡುಪನ್ನು ನೀಡಿ ಕಾಯಿ ಒಡೆಸುತ್ತಾರೆ. ಜೊತೆಗೆ ತುಪ್ಪದ ಮಾಳಮ್ಮನಿಗೂ ಎಣ್ಣೆಯನ್ನು ಮೀಸಲು ರೂಪದಲ್ಲಿ ಅರ್ಪಿಸುತ್ತಾರೆ. ಅಂತೂ ಬನ್ನಿಯ ದಿನ ಬೆಳಗಿನಿಂದ ಭಕ್ತರು ಹೊತ್ತು ಹೊತ್ತಿಗೂ ಹಚ್ಚುತ್ತಲೆ ಇರುತ್ತಾರೆ. ಗಿರಿಯಲ್ಲಿ ದೇವರ ಗರ್ಭಗುಡಿಯ ಎದುರಿಗೆ ದೊಡ್ಡದಾದ ಬಂಡೆಯಿರುವ ಕಾರಣ ಭಕ್ತರು ದರ್ಶನಕ್ಕೆ ಬರಲು ಇಕ್ಕಟ್ಟಾದ ಸ್ಥಳ ಸಾಕಾಗದೇ ಇರುವುದರಿಂದ ನೂಕು ನುಗ್ಗಲು ಹೆಚ್ಚಾಗಿ ಕೆಲವರಿಗೆ ದೇವರ ದರ್ಶನ ಸಿಗುವುದೇ ಅಸಾಧ್ಯವಾಗಿ ಬಿಡುತ್ತದೆ.

ಈ ಕ್ಷೇತ್ರದ ಸುತ್ತ ಮುತ್ತ ಊರುಗಳಿಂದ ರಾತ್ರಿ ಸುಮಾರು ಎಂಟರ ವೇಳೆಗೆ ಭಕ್ತರು ತಮ್ಮ ತಮ್ಮ ಊರುಗಳಲ್ಲಿ ಹಾಲುಭಾಷೆಯನ್ನು ತೆಗೆದುಕೊಂಡು ಬಡಿಗೆಗಳನ್ನು ಹಿಡಿದು ಗಿರಿಯ ಹತ್ತಿರ ಬರುತ್ತಾರೆ. ಹೀಗೆ ಆಯಾ ಊರಿನವರು ಬಂದಾಗ ಆಯಾ ಊರಿನವರಿಗೆ ಆಗಿ ಪ್ರತ್ಯೇಕ ಮಂಟಪಗಳನ್ನು ಕಾಯ್ದಿರಿಸಿರುತ್ತಾರೆ. ಎಳ್ಳಾರ್ಥಿಯವರಿಗೆ ಒಂದು ಮಂಟಪವಿರುತ್ತದೆ. ಆ ಊರಿನವರು ಬಂದಾಗ ಅದೇ ಮಂಟಪದಲ್ಲಿ ಅವರು ಉಳಿಯಬೇಕು. ಸುಳುವಾಯಿಯವರು ಬಂದಾಗ ಅವರಿಗಾಗಿ ಕಾಯ್ದಿರಿಸಿದ ಮಂಟಪದಲ್ಲಿಯೇ ಆ ಊರಿನವರು ಉಳಿದುಕೊಳ್ಳಬೇಕು. ಇದು ಪ್ರತಿ ಬನ್ನಿಗೂ ಆಯಾ ಊರಿನವರಿಗೆ ಆ ಮಂಟಪಗಳು ಖಾಯಂ ಆಗಿರುತ್ತವೆ. ಮದ್ದಲಿಗೊರವಯ್ಯನವರು ಇಳಿದುಕೊಳ್ಳುವುದಕ್ಕೆ ಅವರದೇ ಆದ ಗೊರವಲಿಂಗನ ಗುಡಿಯಿದೆ. ಅವರು ಅಲ್ಲಿ ಉಳಿದುಕೊಂಡಿರುತ್ತಾರೆ. ಬಾರಿಕೇರ ನಾಗವೀರನ ಗುಡಿಯಲ್ಲಿ, ಮಡಿವಾಳರು ಮಡಿವಾಳರ ಮಾಚಿದೇವರ ಗುಡಿಯಲ್ಲಿ, ಜೀರ್ರರು ಮತ್ತು ಕಂಚಾವೀರರು ಕಾಡಸಿದ್ದಪ್ಪನ ಮಠದಲ್ಲಿ ತಂಗಿರುತ್ತಾರೆ. ಬ್ರಾಹ್ಮಣರಿಗೆ ಅವರದೇ ಆದ ಪ್ರತ್ಯೇಕ ಗೃಹವೊಂದಿದೆ. ಟ್ರಸ್ಟ್ ಮುಖಂಡರು, ನೆರಣಿಕೆಯ ಯಜಮಾನರು ಮುಂತಾದ ಗೌಡರು ಒಂದು ಮಹಡಿ ಮನೆಯಲ್ಲಿ ಉಳಿದಿರುತ್ತಾರೆ. ಇದೇ ಮಹಡಿಯ ಕೆಳಭಾಗದ ಒಂದು ಪ್ರತ್ಯೇಕ ಕೊಠಡಿಯನ್ನು ಪೊಲೀಸ್ ಅಧಿಕಾರಿಗಳು ಉಳಿದುಕೊಳ್ಳಲು ವ್ಯವಸ್ಥೆ ಮಾಡಿರುತ್ತಾರೆ. ಜೊತೆಗೆ

ಪೊಲೀಸ್ ಪೇದೆಯವರಿಗೆ ಗಿರಿಗೆ ಬರುವ ಮಂಟಪದಲ್ಲಿ ಅವರಿಗೆ ವಸತಿ ಕಲ್ಪಿಸಿರುತ್ತಾರೆ. ಒಡೆಯರು ಶಿವಸಾನ ಗದ್ದಿಗೆಯ ಪಕ್ಕದಲ್ಲಿರುವ ಮನೆಯಲ್ಲಿ ಉಳಿದಿರುತ್ತಾರೆ. ಹರಿಜನರು ಗಿರಿಯಿಂದ ಸ್ವಲ್ಪ ದೂರದಲ್ಲಿರುವ ಮಾದರ ಮಲ್ಲಯ್ಯನ ಗುಡಿಯ ಅಕ್ಕಪಕ್ಕದಲ್ಲಿ ಮಂಟಪಗಳಲ್ಲಿ, ಹಾಗೆ ಬ್ಯಾಗರರಿಗೆ (ಚಲುವಾದಿಗಳು) ಸಪ ಅವರದೇ ಆದ ಪ್ರತ್ಯೇಕ ಗುಡಿಯಿದೆ. ಕ್ಷೇತ್ರದ ಬ್ಯಾಗಾರರು ಬಂದು ಅಲ್ಲಿಯೇ ತಂಗಿರುತ್ತಾರೆ. ಹೀಗೆ ಪ್ರತಿಯೊಂದು ಪಂಗಡ, ಊರು, ಅಧಿಕಾರಸ್ಥರು ಮುಂತಾಗಿ ಅವರುಗಳು ತಮ್ಮದೇ ಆದ ಪ್ರತ್ಯೇಕ ವ್ಯವಸ್ಥೆಗಳನ್ನು ಮಾಡಿಕೊಂಡು ಪ್ರತಿ ವರ್ಷ ಅದೇ ಸ್ಥಳಗಳಲ್ಲಿ ಉಳಿದುಕೊಂಡಿರುತ್ತಾರೆ. ಈ ಪದ್ಧತಿಯಲ್ಲಿ ಬದಲಾವಣೆಗಳು ತೀರಾ ಕಡಿಮೆ. ಉಳಿದಂತೆ ಬನ್ನಿಗೆ ವಿವಿಧ ಕಡೆಗಳಿಂದ ಬಂದ ಭಕ್ತರು ಗಿರಿಯಲ್ಲಿ ಮೂರು ಮಹಡಿಯ ವ್ಯವಸ್ಥೆಯಿರುವ ಕಟ್ಟಡದಲ್ಲಿ ಜೊತೆಗೆ ತಮಗೆ ಅನುಕೂಲ ಇರುವ ಕಡೆಗಳಲ್ಲಿ ಉಳಿದಿರುತ್ತಾರೆ.

ಬನ್ನಿಯ ದಿನ ರಾತ್ರಿ ಸುಮಾರು ಎಂಟು - ಒಂಭತ್ತು ಗಂಟೆಯ ಹೊತ್ತಿಗೆ ತೇರಿನ ಬಜಾರದಲ್ಲಿ ಭಕ್ತರು ಕಿಕ್ಕಿರಿದು ತುಂಬಿರುತ್ತಾರೆ. ಜಾತ್ರೆಗೆ ವಿಶೇಷವಾಗಿ ಹಾಕಿದ ಅಂಗಡಿ ಮುಂಗಟ್ಟುಗಳ ಮುಂದೆ ಮೂರು-ನಾಲ್ಕು ಅಡಿ ಬಿಟ್ಟು ಬಲವಾಗಿ ಬಿದಿರು ಬೊಂಬುಗಳಿಂದ ಮನುಷ್ಯನ ಎತ್ತರದಷ್ಟು ಅಂಗಡಿಗೆ ಅಡ್ಡಲಾಸಗಿ ಕಾಂಪೌಂಡಿನ ತರಹ ಕಟ್ಟಿರುತ್ತಾರೆ. ಕಾರಣ ಉದ್ರಿಕ್ತಗೊಂಡ ಬಡಿಗೆ ಆಟಗಾರರ ನೂಕು ನುಗ್ಗಲಿನಲ್ಲಿ ಅಂಗಡಿಗಳಿಗೆ ಯಾವುದೇ ರೀತಿಯ ಅಪಾಯ ಒದಗದಿರಲಿ ಎಂದು ಈ ರೀತಿಯ ವ್ಯವಸ್ಥೆಯನ್ನು ಎಲ್ಲಾ ಅಂಗಡಿಯವರೂ ಮಾಡಿಕೊಂಡಿರುತ್ತಾರೆ. ಹೋಟೆಲ್‌ಗಳನ್ನು ಇಟ್ಟಿರುವವರು ಈ ರೀತಿಯ ಕಟ್ಟಿಗೆಗಳನ್ನು ಕಟ್ಟಿಕೊಳ್ಳುವುದ ಕಾಣಲಿಲ್ಲ. ಅವರು ಬೇರೆ ಬದಲಿ ವ್ಯವಸ್ಥೆಯನ್ನು ಸಹ ಮಾಡಿಕೊಂಡಿರುವುದಿಲ್ಲ.

ರಾತ್ರಿ ಹತ್ತು ಗಂಟೆಯಾಗುತ್ತಿದ್ದಂತೆ ಗಿರಿಗೆ ಸುತ್ತಮುತ್ತಲಿನ ಊರಿನವರು, ಬಡಿಗೆ ಆಡುವವರು ಹಣಿಕಿನ ಬಡಿಗೆಗಳನ್ನು ಹಿಡಿದು ಪಂಜಿನ ಸಮೇತರಾಗಿ ಹಲಗೆಯ ಧ್ವನಿಗೆ ಕುಣಿಯುತ್ತ ಬಡಿಗೆಗಳನ್ನು ಹಿಡಿದು ಪಂಜಿನ ಸಮೇತರಾಗಿ ಹಲಗೆಯ ಧ್ವನಿಗೆ ಕುಣಿಯುತ ಬಡಿಗೆಗಳನ್ನು ಎತ್ತಿ ಆಡಿಸುತ್ತಾ ಒಂದಕ್ಕೊಂದು ಬಡಿಗೆಗಳನ್ನು ತಾಗಿಸುತ್ತ ವಿಚಿತ್ರ ವಿಚಿತ್ರ ಧ್ವನಿಯಲ್ಲಿ ಬಜಾರಗುಂಟ 'ಘುರ್...ರ..' ಬಹುಪರಾಕ ಎಂದು ಕುಣಿಯುತ್ತಾ ಸಾಗುತ್ತಿರುತ್ತಾರೆ. ಈ ವೇಳೆಗಾಗಲೇ ಈ ಬಡಿಗೆ ಆಟವನ್ನು ವೀಕ್ಷಿಸಲು ನೆರೆದ ಜನಸ್ತೋಮ ಅವರವರಿಗೆ ಅನುಕೂಲವಾಗುವ ಸ್ಥಳಗಳಲ್ಲಿ ನೆಲೆಗೊಂಡಿರುತ್ತಾರೆ. ಈ ಕ್ಷೇತ್ರಕ್ಕೆ ಬಡಿಗೆ ಹಿಡಿದು ಬರುವ ಹಳ್ಳಿಗಳವರು ತಮ್ಮ ಮಂಟಪ ಬಿಟ್ಟು ಇನ್ನೊಂದು ಮಂಟಪಕ್ಕೆ ಹೋಗುವ ಹಾಗೆ ಇಲ್ಲ. ಅಪ್ಪಿ ತಪ್ಪಿ ಹೋದರೆ ಜಗಳಗಳು ಆಗುತ್ತವೆ. ಬನ್ನಿಯಲ್ಲಿ ಯಾವುದೇ ಕಾರಣಕ್ಕೆ ಜಗಳ ಆದರೆ ಸಾಕು ಬಡಿಗೆಗಳಿಂದ ಬಡಿದಾಡಿ ಪ್ರಾಣಗಳು ಹೋಗುವ ಮಟ್ಟಕ್ಕೆ ತಲುಪುತ್ತವೆ. ಆ ಕಾರಣಕ್ಕಾಗಿ ಸುತ್ತ ಮುತ್ತ ಹಳ್ಳಿಯವರು ತಮ್ಮ ತಮ್ಮ ನಿಗದಿತ ಮಂಟಪಗಳಲ್ಲಿ ಮತ್ತು ಅದರ ಅಕ್ಕ ಪಕ್ಕದಲ್ಲಿ ಉಳಿದಿರುತ್ತಾರೆ. ಬನ್ನಿಗೆ ಬಂದ ದೂರದ ಊರುಗಳಾದ ಆದೋನಿ, ಆಲೂರು, ಬಳ್ಳಾರಿ, ಹೊಸಪೇಟೆ, ಪತ್ತಿಕೊಂಡ, ರಾಯದುರ್ಗ, ಬೊಂಬಾಯಿ,

ಕನ್ಯಾಕುಮಾರಿ ಹೀಗೆ ಎಷ್ಟೋ ದೂರದಿಂದ ಭಕ್ತರು ಬನ್ನಿಯನ್ನು ವೀಕ್ಷಿಸಲು ಬರುತ್ತಾರೆ. ಅವರೆಲ್ಲ ಈ ಮಂಟಪಗಳ ಗೊಡವೆಗೆ ಹೋಗದೇ ಬಜಾರಗುಂಟ ಮಂಟಪಗಳ ಹಿಂದಿರುವ ಬಯಲಲ್ಲಿ, ಮೂರು ಮಹಡಿಯ ವಿಶಾಲ ಕಟ್ಟಡದಲ್ಲಿ, ಗಿರಿಯನ್ನು ಹತ್ತಿ ತಮಗೆ ಅನುಕೂಲವಾದ ಸ್ಥಳಗಳಲ್ಲಿ ಬಡಿಗೆ ಆಟ ಆಡುವುದು ಕಾಣುವ ಹಾಗೆ ಕುಳಿತಿರುತ್ತಾರೆ. ಇನ್ನೂ ಕೆಲ ಭಕ್ತರು ಬಜಾರದ ಉದ್ದಕ್ಕೂ ತಿರುಗುತ್ತಲೇ ಹೊತ್ತನ್ನು ಕಳೆಯುತ್ತಾರೆ. ಹೀಗೆ ದೂರದಿಂದ ಬಂದ ಭಕ್ತರು ಪ್ರತ್ಯೇಕವಾಗಿ ತಮಗೆ ಸೌಖ್ಯವಾದ ಸ್ಥಳಗಳಿಗೆ ಹೋಗಿ ಬಡಿಗೆ ಆಟವನ್ನು ವೀಕ್ಷಿಸಲು ನಿರತರಾಗುತ್ತಾರೆ.

ಈ ದೇವರ ಸಮಸ್ತ ಅಧಿಕಾರ ಬಂದು ನೆರಣಿಕೆ ಗ್ರಾಮದವರದೇ ಅಂತ ಅನೇಕ ಭಕ್ತರು ಹೇಳುತ್ತಾರೆ. ಕಾರಣ ದೇವರ ಮನೆಯಿರುವುದು ನೆರಣಿಕೆಯಲ್ಲಿ. ಅಲ್ಲಿಂದಲೇ ಉತ್ಸವ ಮೂರ್ತಿಗಳು ಕಂಕಣಕ್ಕೆ ಬರುತ್ತವೆ. ಬನ್ನಿಯ ದಿನ ಪಲ್ಲಕ್ಕಿ, ಮಾದರ ದೇವರುಗಳು, ಬ್ಯಾಗಾರರ ದೇವರುಗಳು ಬರುವುದು ಅಲ್ಲಿಂದನೇ ಜೀರರು, ಕಂಚಾವೀರರು, ಇರುವುದು ಸಹ ಅದೇ ಊರಿನಲ್ಲಿಯೇ, ಮೇಲಾಗಿ ಗಿರಿಗೆ ಹೆಚ್ಚಿನ ಸಂಖ್ಯೆಯಲ್ಲಿ ಬಡಿಗೆಗಳು ಬರುವುದು ಸಹ ಇಲ್ಲಿಂದನೇ. ಈ ಎಲ್ಲಾ ಕಾರಣಗಳಿಂದ ದೇವರ ಗುಡ್ಡದ ಪೂರ್ತಿ ಒಡೆತನ ಬಂದು ನೆರಣಿಕೆ ಗ್ರಾಮದವರಿಗೆ ಸಂದಿದೆ ಎಂದು ಬಹುತೇಕ ಜನರು ಅಭಿಪ್ರಾಯ ಪಡುತ್ತಾರೆ. ಆದರೆ ದೇವರ ಪೂರ್ತಿ ಅಧಿಕಾರ ಬಂದು ಸುಳುವಾಯಿಯವರಿಗೆ ಇರುವುದು. ಆದರೆ ನೆರಣಿಕೆಯವರು ದಬ್ಬಾಳಿಕೆಯಿಂದ ಕಸಿದುಕೊಂಡಿದ್ದಾರೆ ಎಂದು ಗುಳ್ಯಂನಲ್ಲಿ ವಾಸವಾಗಿರುವ ಕಪಿಲಮುನಿ ಒಡೆಯರು ಅಭಿಪ್ರಾಯ ಪಟ್ಟಿರುತ್ತಾರೆ.

ನೆರಣಿಕೆ ಗ್ರಾಮದಲ್ಲಿ ರಾತ್ರಿ ಸುಮಾರು ಎಂಟು ಗಂಟೆಗೆ ಮಾದರ ಮತ್ತು ಬ್ಯಾಗಾರರ ಗುಡಿಗಳಿಂದ ಗ್ರಾಮೀಣ ಮಲ್ಲೇಶ್ವರದ ಉತ್ಸವ ಮೂರ್ತಿಗಳನ್ನು ಪ್ರತ್ಯೇಕವಾಗಿ ಮಂಗಳಾರತಿಯ ನಂತರ ಎಬ್ಬಿಸುತ್ತಾರೆ. ಈ ಕುದುರೆ ಉತ್ಸವ ಮೂರ್ತಿಗಳನ್ನು ಹೊತ್ತ ಡೊಳ್ಳಿನ ಮೆರವಣಿಗೆ ಊರಲ್ಲಿ ಹೊರಡುತ್ತದೆ. ಈ ಮೆರವಣಿಗೆ ಆ ಊರಿನಲ್ಲಿ ಇರುವ ಗುಡಿಗಳಾದ ಸಾದಕಲ್ಲುತಾತ, ಷಕ್ಷಾವಲಿತಾತ, ಕೊಲ್ಲಪುರಮ್ಮವ್ವ, ಸುಂಕಲಮ್ಮವ್ವ, ಆಂಜಿನೇಯಸ್ವಾಮಿ, ಪೋತಪ್ಪಗುಡಿ, ಕಾಶೀಂತಾತ, ಮಲ್ಲಿಕಾರ್ಜುನಗುಡಿ, ಹೀಗೆ ದೇವರ ಉತ್ಸವ ಮೂರ್ತಿಗಳು ಡೊಳ್ಳು ಪಂಜಿನ ಸಮೇತರಾಗಿ ಪ್ರತಿ ಗುಡಿಗಳಿಗೆ ಬಂದು ದೀಪಾರಾಧನೆ (ದೀಪಗಳನ್ನು ಬೆಳಗಿಸಿ ಪೂಜೆ ಮಾಡುವುದು) ಮಾಡುತ್ತಾರೆ. ಹೀಗೆ ಎಲ್ಲಾ ಗುಡಿಗಳಿಗೆ ಉತ್ಸವ ಮೂರ್ತಿಗಳು ತೆರಳಿದ ನಂತರ ಬನ್ನಿಗೆ ಹೊರಡುವ ಬಡಿಗೆದಾರರು, ಜೊತೆಯಲ್ಲಿ ಅನೇಕ ಭಕ್ತರು ರಾತ್ರಿ ಒಂಬತ್ತರ ಸುಮಾರಿಗೆ ಊರಿನ ಪಂಚಾಯಿತಿ ಕಟ್ಟೆಗೆ ಬಂದು ತಲುಪುತ್ತಾರೆ. ಆ ಕಟ್ಟೆಯಲ್ಲಿ ಊರಿನ ಹಿರಿಯತು ಬನ್ನಿಗೆ ಹೋಗುವ ಬಡಿಗೆದಾರರಿಗೆ ಕೆಲ ಹಿತ ವಚನಗಳನ್ನು ಹೇಳುತ್ತಾರೆ. ಗ್ರಾಮ ಪಂಚಾಯ್ತಿಯಲ್ಲಿ ಏನ್ ಹೇಳ್ತಾರಂದ್ರೆ, "ನೀನು ಇನ್ನೊಬ್ಬನಿಗೆ ಏನನ್ನೋ ಅಂದಿರಬಹುದು, ಬ್ಯಾರೆಯವರು ಹೆಣ್ಣುಮಕ್ಕಳನ್ನು ಏನನ್ನೋ

ಅಂದಿರಬಹುದು, ಆದರೆ ಇವತ್ತು ನೀವೆಲ್ಲ ಏನೇ ಬಂದ್ರೂ ಗುಡ್ಡದಲ್ಲಿ ಒಂದೇ ಆಗಿರಬೇಕು. ಅಣ್ಣ-ತಮ್ಮನವರಾಗಿ ಹೋಗಣ್ರೀ, ನಮ್ಮದು ಏನೇ ಜಗಳ ಕಕ್ಷಿ ಇದ್ದರೂ ಒಕ್ಕಟ್ಟಿನಿಂದ ಹೋಗಣ್ರೀ, ನಮ್ಮ ಮ್ಯಾಲೆ ಯಾವುದೇ ಪ್ರಮಾದ ಜರುಗಿದ್ರು ಕೂಡಾ ಒಬ್ರಿಗೊಬ್ರು ಇರೋಣ'' ಹೀಗೆ ಹೇಳ್ತಾರೆ.

ಈ ರೀತಿ ಉಪದೇಶ ಮುಗಿದ ನಂತರ ರಾತ್ರಿ ೯-೩೦ರ ಸುಮಾರಿಗೆ ನೆರಣಿಕೆ ಗ್ರಾಮದ ಜನರು ಬಡಿಗೆ ಹಿಡಿದು ಡೊಳ್ಳಿನ ಮೆರವಣಿಗೆಯೊಂದಿಗೆ ದೇವರ ಉತ್ಸವ ಮೂರ್ತಿಗಳನ್ನು ಹೊತ್ತು ಗಿರಿಯ ಕಡೆಗೆ ಸಾಗುತ್ತಾರೆ.

ರಾತ್ರಿ ಸುಮಾರು ೧೦-೩೦ರ ಹೊತ್ತಿಗೆ ಗಿರಿ ಇನ್ನು ಸ್ವಲ್ಪ ದೂರದಲ್ಲಿ ಇರುತ್ತದೆ. ಆಗಲೇ ಮಾದರ ಮತ್ತು ಬ್ಯಾಗಾರರ ಗುಡಿಗಳು ಬರುತ್ತವೆ. ಆಯಾ ದೇವರ ಉತ್ಸವ ಮೂರ್ತಿಗಳು ತಮ್ಮ ತಮ್ಮ ಗುಡಿಗಳಲ್ಲಿ ಸೇರಿಕೊಳ್ಳುತ್ತವೆ. ಪಣಸಿನ ಬಡಿಗೆ ಹಿಡಿದ ನೆರಣಿಕೆ ಗ್ರಾಮದ ಸರದಾರರು ಡೊಳ್ಳಿನ ಬಂಡೆಗೆ ಬಂದು ತಲುಪುತ್ತಾರೆ. ಆ ವೇಳೆಗಾಲೇ ಹೊಸಪೇಟೆ, ತಾಂಡಗಳಿಂದ ಬಡಿಗೆಗಳು ಡೊಳ್ಳಿನ ಬಂಡೆಗೆ ಬಂದು ಸೇರಿರುತ್ತವೆ. ಆಗ ನೆರಣಿಕೆ ಗ್ರಾಮದ ಸರಪಂಚರು, ಅಧಿಕಾರಸ್ತರು, ಊರಿನ ಹಿರಿಯ ಗೌಡರು ಬಡಿಗೆದಾರರನ್ನೆಲ್ಲಾ ಇಲ್ಲೇ ಇರಲು ಹೇಳಿ ಬಜಾರಕ್ಕೆ ಬರುತ್ತಾರೆ.

ಆ ವೇಳೆಗಾಗಲೇ ಗಿರಿಯ ಸುತ್ತ ಮುತ್ತ ಊರುಗಳಿಂದ ಬಡಿಗೆಗಳು ಬಜಾರಕ್ಕೆ ಬಂದು ಪ್ರತ್ಯೇಕ ತಂಡಗಳಾಗಿ ಹಲಗೆಯ ನಾದಕ್ಕೆ ಕುಣಿಯುತ್ತಾ 'ಡುರ್...ರ..ಬಹುಫರಾಕ್' ಎಂದು ಹೇಳುತ್ತಾ ಪಂಜುಗಳನ್ನು ಹಿಡಿದು ಬಡಿಗೆಗಳನ್ನು ಎತ್ತಿ ಆಡಿಸುತ್ತಾ ಅಣಕ ಯುದ್ಧದ ರೀತಿಯಲ್ಲಿ ಬೆಟ್ಟವನ್ನು ಹತ್ತುತ್ತಿರುತ್ತಾರೆ. ಕೆಲ ತಂಡಗಳು ಅಷ್ಟೇ ರಭಸವಾಗಿ ಬೆಟ್ಟವನ್ನು ಇಳಿಯುತ್ತವೆ. ಎರಡು ತಂಡಗಳು ಹಾಗೆ ಎದುರಾದಾಗ ಕಾಲು ಕೆರೆದು ಜಗಳ ಮಾಡುವ ಸಂಭವವಿರುತ್ತದೆ. ಕಳೆದ ವರ್ಷ ಅಂದರೆ ೨೦೦೧ರ ದಸರೆಯಲ್ಲಿ ನೆರಣಿಕೆಯವರು ಇನ್ನು ಬರುವ ಮೊದಲೇ ಸುಮಾರು ರಾತ್ರಿ ೧೦-೩೦ರ ಸುಮಾರಿಗೆ ಎಳ್ಳಾರ್ತಿ ಮತ್ತು ಸುಳುವಾಯಿಯವರ ನಡುವೆ ಜಗಳ ನಡೆದು ಕಟ್ಟಿಗೆಗಳಿಂದ ಬಡಿದಾಡಿಕೊಂಡು ಸ್ಥಳದಲ್ಲಿಯೇ ನೋಡು ನೋಡುತ್ತಿರುವಂತೆ ಎರಡು ಹೆಣಗಳು ಉರುಳಿ ಬಿದ್ದವು. ಹೀಗೆ ಭೀಕರ ರೌದ್ರವಾಗುತ್ತದೆ. ಆ ಬಡಿಗೆ ಆಟ. ದೊಡ್ಡ ತಂಡವಾದ ನೆರಣಿಕೆಯ ಬಡಿಗೆದಾರರು ಬರುವ ಮುಂಚನೇ ( ಈ ಊರಿನಲ್ಲಿ ಹೊಸಪೇಟೆ, ಮತ್ತುತಾಂಡ ಸೇರುತ್ತದೆ ) ಇಷ್ಟಾಗಿತ್ತು. ಮಾಮೂಲಾಗಿ ನೆರಣಿಕೆಯವರು ಬಜಾರಕ್ಕೆ ಬಂದಾಗ, ಉತ್ಸವ ಮೂರ್ತಿಗಳನ್ನು ಹೊತ್ತು ತರುವಾಗ ನೂಕು ನುಗ್ಗಲಿನಲ್ಲಿ ಕೆಲವರಿಗೆ ಹೊಡೆತಗಳು ಬಿದ್ದು ಕೆಲವರು ಹೆಣವಾಗುತ್ತಿದ್ದರು. ಆದರೆ ಕಳೆದ ಬಾರಿ ಇವರು ಬರುವ ಮುಂಚನೇ ಇಬ್ಬರು ಹೆಣವಾಗಿದ್ದರು.

ಈ ರೀತಿ ನೆರಣಿಕೆ ಗ್ರಾಮದ ಹಣಸಿನ ಬಡಿಗೆ ಹಿಡಿದ ಸರದಾರರು ಬಜಾರಕ್ಕೆ ಬರುವ ಮುಂಚೆ ಅಲ್ಲಿನ ಪರಿಸ್ಥಿತಿಯನ್ನು ಗಮನಿಸಲು ನೆರಣಿಕೆ ಗ್ರಾಮದ ಯಜಮಾನರು ಬಜಾರಕ್ಕೆ ಬಂದು ಅಲ್ಲಿನ ಪರಿಸ್ಥಿತಿಯನ್ನು ಪೂರ್ತಿ ಅರ್ಥೈಸಿಕೊಂಡು ಎಲ್ಲೆಲ್ಲಿ ಯಾವ ಯಾವ ಊರಿನವರು (ಬಡಿಗೆ ಹಿಡಿದವರು) ಐದಾರ, ಬಜಾರದಾಗ ಏನೇನು ನಡಿಯಾಕತ್ತೈತಿ, ಏನು ಪ್ರಮಾದ ನಡಿತೈದಾವ, ಅಂತ ಚೆಕ್ ಮಾಡಿಕೊಂಡು ಒಬ್ಬ ಪೋಲೀಸ್ ಮುಖ್ಯ ಅಧಿಕಾರಿಯನ್ನು ಜೊತೆಯಲ್ಲಿಯೇ ಕರೆದುಕೊಂಡು ಡೊಳ್ಳಿನ ಬಂಡೆಗೆ ವಾಪಾಸಾಗುತ್ತಾರೆ. ಆ ವೇಳೆಗಾಗಲೇ ನಾಲ್ಕು ಅವುಟುಗಳನ್ನು ಬಿಟ್ಟಿರುತ್ತಾರೆ. ಗ್ರಾಮದ ಹಿರಿಯರು ಪೋಲೀಸ್ ಅಧಿಕಾರಿಗಳ ಸಮುಖ್ಯದಲ್ಲಿ ಸರದಾರರನ್ನು ಉದ್ದೇಶಿಸಿ ಹಿತನುಡಿಗಳನ್ನು ಹೇಳ್ತಾರೆ. ಎಲ್ಲರೂ ಒಂದಾಗಿರಬೇಕೆಂಬುದೇ ಅದರ ಉದ್ದೇಶ ''ನಾವೆಲ್ಲ ಎಲ್ಲಾರೂ ಬೇಸುಗುಟ್ಟಾಗಿ ಇರ್ತೀವಿ ಅಂತ್ಹೇಳಿ ಪ್ರಮಾಣ ಮಾಡಿಸ್ತಾರೆ''.

ಇಷ್ಟು ಪ್ರಮಾಣ ಆದ ಮೇಲೆ ಯಜಮಾನರು ಬಡಿಗೆ ಹಿಡಿದ ಸರದಾರರ ಮೇಲೆ ಭಂಡಾರವನ್ನು ಚೆಲ್ಲಿ 'ಗೆಫರಾಕ್' ಅಂತ ಹೇಳ್ತಾರೆ. ಆಗ ಶಿನೇ ಅವುಟು 'ಧನ' ಅಂತ ಹಾರುತ್ತೆ. ಶಿನೇ ಅವುಟು ಬಿಟ್ಟಾರ ಅಂದ್ರೆ ಬನ್ನಿ ಪ್ರಾರಂಭ ಅಂತ ಅರ್ಥ. ಅಂದರೆ ನೆರಣಿಕೆಯ ಬಡಿಗೆಗಳೂ ಬಜಾರಕ್ಕೆ ಬರ್ತಾವೆ ಅಂತ. ನೆರಣಿಕೆಯವರು ಬರುತ್ತಾರೆಂದರೆ ಆಗಲೇ ಬಡಿಗೆ ಹಿಡಿದು ಬಜಾರದಲ್ಲಿ ಆಡುವ ಕೆಲವರಿಗೆ ಮತ್ತಷ್ಟು ಹುರುಪು ಸಿಗುತ್ತದೆ. ಮತ್ತೆ ಬೆರಳೆಣಿಕೆಯಷ್ಟು ಕೆಲವರು ಹಿಂದೆ ನಿಧಾನವಾಗಿ ಸರಿದು ಗುಂಪುಗಳಲ್ಲಿ ನುಗ್ಗದೇ ಹೊರಗಡೆನೇ ಓಡಾಡುತ್ತಿರುತ್ತಾರೆ. ವೀಕ್ಷಿಸುವ ಜನರಂತೂ ಮತ್ತಷ್ಟು ಜಾಗೂರಕರಾಗಿ ಬನ್ನಿಯ ಬಡಿಗೆ ಆಟದ ರೌದ್ರತೆಯನ್ನು ವೀಕ್ಷಿಸಲು ಕಾತುರ ಹಾಗೂ ಅಷ್ಟೇ ಭಯದಿಂದ ವೀಕ್ಷಿಸುತ್ತಿರುತ್ತಾರೆ. ಕಾರಣ ಕೆಲವು ಬಾರಿ ಬಡಿಗೆ ಆಟ ಆಡುವವರು ಅಣಕ ಯುದ್ಧ ಮಾಡುತ್ತ ಮಾಡುತ್ತ ಜನಗಳ ಮೇಲೆ ನುಗ್ಗಿ ಬಿಡುತ್ತಾರೆ. ಆಗ ಜನರಿಗೆ ಪ್ರಾಣ ಉಳಿದರೆ ಸಾಕು ಎಂಬಂತೆ ಯಾರನ್ನೂ, ಯಾವುದನ್ನೂ ಗಮನಿಸದೆ ದಿಕ್ಕೆಟ್ಟು ಓಡುತ್ತಿರುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಪೆಟ್ಟು ತಿಂದವರೇ ಜಾಸ್ತಿ. ಆ ಕಾರಣವಾಗಿ ಭಕ್ತರು ನಿರಾತಂಕವಾಗಿರಲು ಬೆಟ್ಟವನ್ನು ಹತ್ತಿರುತ್ತಾರೆ.

ಶಿನೇ ಅವುಟು ಹಾರಿದ್ದೇ ತಡ ನೆರಣಿಕೆ, ತಾಂಡ, ಹೊಸಪೇಟೆ ಊರುಗಳ ಬಡಿಗೆದಾರರು ಒಮ್ಮೆಲೇ ರಭಸವಾಗಿ ಡೊಳ್ಳು, ಪಂಜು, ಇಲಾಲುಗಳೊಂದಿಗೆ ಬಜಾರಕ್ಕೆ ನುಗ್ಗುತ್ತಾರೆ. ಇಷ್ಟೊತ್ತು ಬಡಿಗೆಗಳನ್ನು ಹಿಡಿದು ಆಡುವವರ ಸಂಖ್ಯೆ ಕಾಲು ಭಾಗ ಇದ್ದರೆ. ಈ ಮೂರು ಊರಿನವರು ಸೇರಿ ಕಾಲು ಭಾಗದಷ್ಟು ಜನರು ಇರುತ್ತಾರೆ. ಇವರು ನೇರವಾಗಿ ಗಿರಿಮ್ಯಾಲೆ ಹೋಗುತ್ತಾರ. ಹೆಚ್ಚಿನ ಸಂಖ್ಯೆಯಲ್ಲಿ ಬಡಿಗೆಗಳು ಗಿರಿಯನ್ನು ತಲುಪುತ್ತವೆ. ಅಷ್ಟೇ ಪ್ರಮಾಣದ ಬಡಿಗೆಗಳು ಬಜಾರದಲ್ಲೇ ಓಡಾಡಿಕೊಂಡು ಇರುತ್ತವೆ.

ರಾತ್ರಿ ಸುಮಾರು ೧೨ರ ಹೊತ್ತಿಗೆ ಪುರೋಹಿತ ವರ್ಗವು ಶಿವಸಾನ ಗದ್ದಿಗೆಗೆ ಬಂದು ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ ಗಿರಿಯನ್ನು ಹತ್ತಿ ದೇವರ ಗದ್ದಿಗೆಯನ್ನು ತಲುಪುತ್ತಾರೆ. ಗದ್ದಿಗೆಯಲ್ಲಿ ಕುಳಿತ ಶ್ರೀ ಮಾಳಾ-ಮಲ್ಲೇಶ್ವರ ಉತ್ಸವ ಮೂರ್ತಿಗಳ ಸಮ್ಮುಖದಲ್ಲಿ ಪುರೋಹಿತರು ಮದುವೆಯ ಗದ್ದಿಗೆಯನ್ನು ನಿರ್ಮಿಸಿ ಕಂಕಣದ ದಿನ ಕಟ್ಟಿದವರಿಗೇನೆ ಮತ್ತೊಮ್ಮೆ ಕಂಕಣವನ್ನು ಕಟ್ಟುತ್ತಾರೆ. ಈ ಕಂಕಣವನ್ನು ಮೂಳಮ್ಮನ ಕಂಕಣ ಎಂದು ಕರೆಯುತ್ತಾರೆ. ಕಂಕಣವನ್ನು ಕಟ್ಟಿದ ನಂತರ ಅತ್ಯಂತ ವೈಭವೋಪೇತವಾಗಿ ಮಂತ್ರಗಳನ್ನು ಪಠಿಸುವುದರ ಮೂಲಕ ಪುರೋಹಿತರು ಶ್ರೀ ಮಾಳಾ-ಮಲ್ಲೇಶ್ವರರ ಕಲ್ಯಾಣೋತ್ಸವ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಸಮಯ ಆಗಲೇ ೧-೩೦ ಆಗಿರುತ್ತದೆ. ಆಗ ಗಿರಿಯಲ್ಲಿ ಮತ್ತೊಂದು ಅವುಟು ಹಾರಿಸುತ್ತಾರೆ. ಈದರಿಂದ ನೆರೆದ ಸಮಸ್ತ ಜನರಿಗೆ ದೇವರ ಲಗ್ನಕಾರ್ಯ ನೆರೆವೇರಿತು ಎಂದು ತಿಳಿದು ಹರ್ಷೋದ್ಗಾರದಿಂದ ಕೇಕೆ ಹಾಕುತ್ತಾರೆ.

ಅಷ್ಟರೊಳಗೆ ಪಲ್ಲಕ್ಕಿ ಸಿದ್ದವಾಗುತ್ತದೆ. ಈ ಪಲ್ಲಕ್ಕಿಯಲ್ಲಿ ಮಾಳಾ-ಮಲ್ಲೇಶ್ವರರ ಬೆಳ್ಳಿ ವಿಗ್ರಹಗಳನ್ನು ಇಡುತ್ತಾರೆ. ಜೊತೆಗೆ ಕುದುರೆ ಉತ್ಸವ ಮೂರ್ತಿಗಳನ್ನು ಹೊತ್ತು ಡೊಳ್ಳು, ಭಜಂತ್ರಿ, ಕಹಳೆ ಮುಂತಾದ ವಾದ್ಯಗಳಿಂದ ಮತ್ತು ಅಲ್ಲಿರುವ ಪ್ರತಿಯೊಬ್ಬರೂ ಬಡಿಗೆಗಳನ್ನು ಎತ್ತಿ ಹಿಡಿದು ಮಹಾ ಉತ್ತೇಜ ಮತ್ತು ಉತ್ಸಾಹದಿಂದ ಬಹುಪರಾಕ್ ಎಂದು ಉಚ್ಚರಿಸುತ್ತಾ, ಎಗರುತ್ತಾ ಭಕ್ತಿಯಿಂದ ಪರವಶರಾಗಿ ಬೆಟ್ಟವನ್ನು ಇಳಿಯುತ್ತಾರೆ. ಈ ಲಗ್ನಕಾರ್ಯ ಮುಗಿದು ದೇವರುಗಳು ಶಿವಸಾನ ಗದ್ದಿಗೆಗೆ ಬರುವ ಮುಂಚೆ ಗದ್ದಿಗೆಯಲ್ಲಿ ಕುಳಿತ ಒಡೆಯರಿಗೆ ಬ್ರಾಹ್ಮಣರು ಬಂದು ಕಂಕಣವನ್ನು ಕಟ್ಟುತ್ತಾರೆ.

ಬೆಟ್ಟವನ್ನು ಇಳಿಯುವಾಗ ಕೆಳಗೆ ದಾರಿಯ ಮಧ್ಯದಲ್ಲಿ ಕಾಳಭೈರವನ ಚಿಕ್ಕ ಗದ್ದಿಗೆಯ ಮೇಲೆ ಇರುವಗುಡಿ ಬರುತ್ತದೆ. ಅದನ್ನು ಪಿಂಜಾರರ ಕಟ್ಟೆ ಎಂದು ಬಹುತೇಕ ಜನರು ಕರೆಯುತ್ತಾರೆ. (ಈ ಪಿಂಜಾರ ಕಟ್ಟೆಯ ಸ್ಥಳ ಐತಿಹ್ಯವನ್ನು ಮುಂದಿನ ಅಧ್ಯಾಯಗಳಲ್ಲಿ ವಿವರಿಸಿದೆ. ) ಪಿಂಜಾರರು ಕಾಯಿ ಒಡೆಯುವ ಕಳಸದ ಗದ್ದಿಗೆ ಅಂತ ಕರೆಯುತ್ತಾರೆ. ''ದೇವರು ಬೆಟ್ಟದಿಂದ ಕೆಳಗೆ ಇಳಿಯುವಾಗ ಬರುವ ದೇವರಿಗೆ ಕಳಸ ಎದುರು ಒಯ್ಯುತ್ತಾರೆ. ಅದು ಬನ್ನಿಯ ದಿನ ಆಗಲಿ, ಕಂಕಣ ಕಟ್ಟುವ ದಿನ ಆಗಲಿ, ಒಂದು ಹೆಣ್ಣು ಮಗಳು ಕಳಸ ತಗಂಡು ಹೋಗಲೇ ಬೇಕು'' ಎಂದು ಕಂಚಾವೀರರು ಹೇಳುತ್ತಾರೆ ಎಂದು ಕಂಚಾವೀರರು ಹೇಳುತ್ತಾರೆ. ಆದರೆ ಬನ್ನಿಯ ಈ ಸಮಯದಲ್ಲಿ ಬಡಿಗೆಗಳ ಮಧ್ಯದಲ್ಲಿ ಕಳಸವನ್ನು ಒಯ್ಯುವರು ತುಂಬಾ ಕಠಿಣ. ದೇವರ ಉತ್ಸವ ಮೂರ್ತಿಗಳು ಪಿಂಜಾರರ ಕಟ್ಟೆಗೆ ಬರುವ ವೇಳೆಗೆ ಪಿಂಜಾರರು ಬರುವ ದೇವರಿಗೆ ಕಾಯಿಯನ್ನು ಒಡೆದು ಮಂಗಳಾರತಿ ಮಾಡುತ್ತಾರೆ. ದೇವರು ಅಲ್ಲಿ ಒಂದು ಕ್ಷಣವೂ ನಿಲ್ಲುವ ಹಾಗೆ ಇಲ್ಲ. ನಿಂತಿದ್ರೇ ಆದರೆ ಬೆಟ್ಟದ ಇಳಿಭಾಗ ಬೇರೆ, ಬಡಿಗೆ ಆಡುವವರ ನೂಕು ನುಗ್ಗಲು, ದೇವರನ್ನು ಹೊತ್ತುಕೊಳ್ಳುವ ಸ್ಪರ್ಧೆಯಲ್ಲಿ ಜಾಸ್ತಿಯಾಗಿ ಪ್ರಾಣಪಾಯಗಳು ಹೆಚ್ಚಿಗೆ ಸಂಭವಿಸುತ್ತವೆ ಅನ್ನುವ ಒಂದೇ ಕಾರಣಕ್ಕೆ ಬರುವ

ದೇವರಿಗೆನೇ ಪಿಂಜಾರರು ಕಾಯಿ ಒಡೆದು ಮಂಗಳಾರತಿ ಮಾಡಿ ದೇವರುಗಳು ಮುಂದೆ ಸಾಗಲು ಅನುವುಮಾಡಿ ಕೊಡುತ್ತಾರೆ. ಅಲ್ಲಿಂದ ಉತ್ಸವ ಮೂರ್ತಿಗಳೂ ಶಿವಸಾನ ಗದ್ದಿಗೆಗೆ ಬಂದು ಕುಳಿತುಕೊಳ್ಳುತ್ತವೆ. ದೇವರುಗಳು ಶಿವಸಾನ ಗದ್ದಿಗೆಯಲ್ಲಿ ಕುಳಿತಾಗ ಬಡಿಗೆದಾರರು ಗದ್ದಿಗೆಯ ಒಳಗಡೆ ಬರಬಾರದಂತೆ ತಡೆಗಟ್ಟಲು ಹೊಸಕೋಟೆಯ ಬಡಿಗೆದಾರರ ಪಡೆಯೊಂದು ಪ್ರತ್ಯೇಕವಾಗಿಯೇ ಇರುತ್ತದೆ. ಇವರು ಮೂಲತಃ ನೆರಣಿಕೆ ಗ್ರಾಮದವರು. ಕಾರಣಾಂತರಗಳಿಂದ ಹೊಸಕೋಟೆಯನ್ನು ಸೇರಿರುವರು. ಇವರ ತಂಡ ಸುಮಾರು ೧೫-೨೦ ಜನರಿಂದ ಒಡಗೂಡಿದೆ. ಇಲ್ಲಿ ಯುವಕರೇ ಹೆಚ್ಚಾಗಿದ್ದಾರೆ. ಇವರ ಮುಖ್ಯ ಕೆಲಸವೆಂದರೆ ಬಡಿಗೆ ಆಟ ಶುರು ಆದಾಗ ಶಿವಸಾನ ಕಟ್ಟೆಯಲ್ಲಿ ಕೋಟೆಯಂತೆ ನಿಂತು ಭಕ್ತರಿಗೆ ರಕ್ಷಣೆ ನೀಡುತ್ತಾರೆ. ಗದ್ದಿಗೆಗೆ ಬಡಿಗೆಗಳು ನುಗ್ಗಿ ಬರದಂತೆ ತಡೆಯುತ್ತಾರೆ. ಗದ್ದಿಗೆಯಲ್ಲಿ ತುಂಬಿರುವ ಜನರ ಗದ್ದಲವನ್ನು ತಡೆಯಲು ಅವರನ್ನೆಲ್ಲಾ ಹೊರಗಡೆ ತಳ್ಳುತ್ತಿರುತ್ತಾರೆ. ಒಟ್ಟಾರೆ ಇವರ ಮುಖ್ಯ ಕೆಲಸ ದೇವರುಗಳು ಗಿರಿಯಿಂದ ಇಳಿದು ಬಂದು ಶಿವಸಾನ ಗದ್ದಿಗೆಯಲ್ಲಿ ಕುಳಿತಾಗ ಬಡಿಗೆಗಳು ಗದ್ದಿಗೆಗೆ ನುಗ್ಗಿ ಬರದಂತೆ ತಡೆಯುವುದಾಗಿದೆ.

ದೇವರ ಕಲ್ಯಾಣ ಮುಗಿದ ನಂತರ ಶಿವಸಾನ ಗದ್ದಿಗೆಗೆ ಬಂದಾಗ ಮಂಗಳಾರತಿಯ ಕಾರ್ಯಕ್ರಮ ಒಡೆಯರಿಂದ ಬಲು ತಾರಾತುರಿಯಲ್ಲಿ ನಡೆಯುತ್ತದೆ. ಕಾರಣ ತಡೆ ಆದಂತೆ ಹೊರಗಡೆ ಬಡಿಗೆ ಹಿಡಿದ ಜನಸ್ತೋಮ ನಿಂತಂತೆಲ್ಲಾ ಗಲಾಟೆ ಆಗುವುದು ಜಾಸ್ತಿ. ಪ್ರತಿ ಬನ್ನಿಯಲ್ಲಿ ಇದೇ ವೇಳೆಯಲ್ಲಿ ಹೊಡೆದಾಟಗಳಾಗುವುದು ಜಾಸ್ತಿ. ಎಷ್ಟೇ ಬಾರಿ ಇದೇ ಸಂದರ್ಭದಲ್ಲಿ ಹೆಣಗಳು ಉರುಳಿವೆ. ಈ ಗದ್ದಿಗೆಯ ಮುಂಭಾಗದಲ್ಲಿ ಬಹಳ ನೂಕು ನುಗ್ಗಲು ಬಡಿಗೆ ಬಡಿಗೆಗಳನ್ನು ತಾಗಿಸುವ ವಿಪರೀತ ಶಬ್ದ. ಕೆಲವರು ಇಲಾಲಿನಲ್ಲಿ ಉರಿಯುತ್ತಿರುವ ಬೆಂಕಿಯ ಉಂಡೆಗಳನ್ನು ಬೇಕಾಗಿಯೇ ಮೇಲೆ ತೂರುತ್ತಾರೆ. ಅದು ಬೇರೆಯವರ ಮೇಲೆ ಬಿದ್ದು ಮೈ ಸುಡುವುದು. ಆದರಿಂದ ಗಲಾಟೆಯಾಗುವುದು. ಸೇಡು ಇದ್ದವರನ್ನು ಇದೇ ಸಂದರ್ಭದಲ್ಲಿ ಜಗಳ ತೆಗೆದು ಬಡಿಗೆಗಳಿಂದ ಬಡಿದು ಹೆಣವಾಗಿಸಿಬಿಡುತ್ತಾರೆ. ಇಲ್ಲವಾದರೆ ಬರೀ ಪಂಜುಗಳಿಂದಲೇ ಅವನನ್ನು ಸಾಯಿಸಿಬಿಡುತ್ತಾರೆ. ಇಲ್ಲ ಆ ಗುಂಪಿನಲ್ಲಿ ಯಾರಾದರೂ ಆಯತಪ್ಪಿ ಕೆಳಗಡೆ ಬಿದ್ದರೆ ಅವನನ್ನು ಎಳಿಸುವ ಗೊಡವೆಗೆ ಯಾರೂ ಹೋಗರು. ಕಾರಣ ಹೋದರೆ ಇನ್ನೊಬ್ಬರು ಇವನನ್ನು ದಬ್ಬಿಕೊಂಡು ಹೋಗಿಬಿಡುತ್ತಾರೆ. ಆಗ ಬಿದ್ದವನೇ ಬೇಗ ಎದ್ದರೆ ಸರಿ, ಇಲ್ಲವಾದರೆ ಅವನನ್ನು ಕಾಲಲ್ಲಿ ತುಳಿದೇ ಶವವಾಗಿಸಿಬಿಡುತ್ತಾರೆ. ಇಷ್ಟೆಲ್ಲಾ ಅನಾಹುತಗಳು ಈ ಸಮಯದಲ್ಲಿಯೇ ಸಂಭವಿಸುವುದು ಜಾಸ್ತಿ. ಇವುಗಳನ್ನು ತಡೆಯಲು ಒಡೆಯರು ಮಂಗಳಾರತಿಯನ್ನು ಆದಷ್ಟು ಬೇಗ ಮುಗಿಸುತ್ತಾರೆ. ಮಂಗಳಾರತಿ ಮಾಡುವ ಹೊತ್ತಿನಲ್ಲಿ ಗದ್ದಿಗೆಯ ಪಕ್ಕದಲ್ಲಿ ಇಬ್ಬರು ಮದ್ದಲಿ ಗೊರವರು ಮದ್ದಲಿಗಳನ್ನು ಬಾರಿಸುತ್ತಾರೆ. ಹೀಗೆ ಮಂಗಳಾರತಿ ಮುಗಿದ ಕ್ಷಣಾರ್ಧದಲ್ಲೇ ಉತ್ಸವ ಮೂರ್ತಿಗಳನ್ನು ಹೊರಡಿಸುತ್ತಾರೆ. ಉತ್ಸವ ಮೂರ್ತಿಗಳು ಹೊರಡುತ್ತಿದ್ದಂತೆ ಭಕ್ತರು ತಾವು ತಂದ ಭಂಡಾರದ ಪೊಟ್ಟಣಗಳನ್ನು ಮೂರ್ತಿಗಳ ಮೇಲೆ

ಚೆಲ್ಲುತ್ತಾರೆ. ಬಡಿಗೆದಾರರು ಉತ್ಸವ ಮೂರ್ತಿಗಳ ಮೆರವಣಿಗೆಯೊಂದಿಗೆ ಅಣಕ ಯುದ್ಧ ಮಾಡುತ್ತಾ ಸಾಗುತ್ತಾರೆ. ಸ್ವಾಮಿಮಲ್ಲಯ್ಯ ರಾಕ್ಷಸರನ್ನು ಸಂಹರಿಸಲು ಈ ಬಡಿಗೆದಾರರ ಸೈನ್ಯವನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿರುವಂತೆ ಭಾಸವಾಗುತ್ತದೆ. ಪ್ರಸ್ತುತ ಪುರಾಣಗಳಲ್ಲಿಯೂ ಸಹ ಇದೇ ರೀತಿಯ ವರ್ಣನೆ ಬರುತ್ತದೆ. ಮಲ್ಲಯ್ಯ ತನ್ನ ಸೈನ್ಯದೊಂದಿಗೆ ಮಣಿ-ಮಲ್ಲರನ್ನು ಸಂಹರಿಸಿದ ಎಂದು, ಒಟ್ಟಾರೆ ಯುದ್ಧಕ್ಕೆ ಹೊರಟ ಚಿತ್ರಣ ನಮಗೆ ಗೋಚರಿಸುತ್ತದೆ. ಮೆರವಣಿಗೆ ಮುಳ್ಳಿನ ಬಂಡೆಯ ಕಡೆಗೆ ಸಾಗುವಾಗ ಹೊಡೆದಾಟಗಳಾಗುವುದು ಕಡಿಮೆ.

ಶಿವಸಾನ ಗದ್ದಿಗೆಯಿಂದ ದೇವರುಗಳು ಹೊರಟ ನಂತರ ಕಂಚಾವೀರನು ತನ್ನ ಅನುಚರರೊಂದಿಗೆ ಶಿವಸಾನ ಗದ್ದಿಯಲ್ಲಿರುವ ವಿಘ್ನೇಶ್ವರನ ಬಳಿಗೆ ಬರುವನು. ಬಂದು ಪೂಜೆಯನ್ನು ಸಲ್ಲಿಸಿ ರಾಕ್ಷಸ ಪಡೆಗೆ ತೆರಳುತ್ತಾನೆ. ಅದರಂತೆ ಕಾರಣಿಕ ಗೊರವಪ್ಪನನ್ನೂ ಸಹ ಆತನ ಬೆಂಬಲಿಗರು ರಟ್ಟೆಗಳನ್ನು ಹಿಡಿದುಕೊಂಡು ಗದ್ದಿಗೆಗೆ ತರೆತರುತ್ತಾರೆ. ಕಾರಣ ೯ದಿನಗಳಿಂದ ಆತ ಒಂದೊತ್ತು ಇದ್ದು ಬನ್ನಿಯ ದಿನ ಪೂರ್ತಿ ಉಪವಾಸವಿರುವುದರಿಂದ ನಿಶ್ಯಕ್ತನಾದ ಆತನನ್ನು ಹಿಡಿದುಕೊಂಡೇ ಕರೆತರುತ್ತಾರೆ. ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ ಕಾರಣಿಕ ಹೇಳಲು ನಿಗದಿಯಾದ ಬಸವಣ್ಣನ ಗುಡಿಗೆ ಕರೆದುಕೊಂಡು ಹೋಗುತ್ತಾರೆ.

ಇತ್ತ ದೇವರ ಉತ್ಸವ ಮೂರ್ತಿಗಳ ಮೆರವಣಿಗೆ ಆಲೂರಿಗೆ ಹೋಗುವ ದಾರಿಯಲ್ಲಿ ನಡೆದು ಮಧ್ಯದಲ್ಲಿ ಅಡವಿಯೊಳಗೆ ಸಾಗಿ 'ಮುಳ್ಳಿನಬಂಡೆ' ಅನ್ನುವ ಸ್ಥಳಕ್ಕೆ ಸಾಗುತ್ತದೆ. ಅಲ್ಲಿ ದೇವರು ಹೊತ್ತವರು ನೃತ್ಯವನ್ನು ಮಾಡುವರು. ಸ್ವಾಮಿ ಮಲ್ಲಯ್ಯ ರಾಕ್ಷಸರನ್ನು ಸಂಹರಿಸಲು ಹೊರಟಾಗ ದಾರಿಯಲ್ಲಿ ಮುಳ್ಳನ್ನು ತುಳಿಯುತ್ತಾನಂತೆ. ಆ ಮುಳ್ಳನ್ನು ಸ್ವಾಮಿ ಬಂಡೆಯ ಮೇಲೆ ತೆಗೆದುಕೊಳ್ಳುತ್ತಾನೆ. ಆದ್ದರಿಂದ ಅದನ್ನು ಮುಳ್ಳಿನ ಬಂಡೆ ಅಂತಲೂ ಕರೆಯುತ್ತಾರೆ. ಅಂತೂ ಇದೊಂದು ವಿರಾಮ ಸ್ಥಳವಾಗಿದೆ. ಅಲ್ಲಿಂದ ದೇವರ ಸವಾರಿ 'ಪಾದಾಲಗಟ್ಟೆ' ಅನ್ನುವ ಸ್ಥಳಕ್ಕೆ ಬರುವದು. ಸ್ವಾಮಿಯ ಪಾದಗಳು ನೆಲೆಸಿರುವಂತಹ ಸ್ಥಳ ಅದು. ಅಲ್ಲಿ ಉತ್ಸವ ಮೂರ್ತಿಗಳನ್ನು ಇಟ್ಟು ಪಾದಗಳಿಗೆ ಪೂಜೆ ಮಾಡಿ ಮಂಗಳಾರತಿ ಮಾಡುವರು. ಅಲ್ಲಿಂದ ದೇವರುಗಳು ರಾಕ್ಷಸ ಪಡೆ ಅನ್ನುವ ಸ್ಥಳಕ್ಕೆ ಸಾಗುವವು. ರಾಕ್ಷಸರು ವಾಸವಾಗಿದ್ದರಿಂದ ಅದಕ್ಕೆ ಆ ಹೆಸರು ಬಂದಿದೆ. ದೇವರುಗಳು ರಾಕ್ಷಸ ಪಡೆಯನ್ನುತಲುಪುವ ವೇಳೆಗೆ ಮೊದಲೇ ಕಂಚಾವೀರನು ರಾಕ್ಷಸ ಪಡೆಯನ್ನು ತಲುಪಿರುತ್ತಾನೆ.

ರಕ್ಷಪಡೆಯಲ್ಲಿ ಕಂಚಾವೀರನು ಪವಾಡಮಾಡುವುದನ್ನು ನೋಡಲು ಬ್ರಾಹ್ಮಣರು, ಗೌಡರು, ಅನೇಕ ಭಕ್ತರು ಕಂಚಾವೀರನ ಹಿಂದೆಯೇ ಪಡೆಗೆ ನಡೆದು ಬಂದಿರುತ್ತಾರೆ. ಈ ಪಡೆಗೆ ಕೂಸಿನ ತಾಯಿಯರು, ಬಾಣಂತಿಯರು ಬರುವ ಹಾಗಿಲ್ಲ. ಒಂದು ವೇಳೆ ಯಾರಾದರೂ ಅಪ್ಪಿ ತಪ್ಪಿ ಬಂದರೆ ಕಂಚಾವೀರನು ದೇವರ

ಪರವಶನಾಗಿ 'ಅಲ್ಲಿ ಯಾವುದೋ ಮೂಳ ಬಂದೈತೆ ಕಳಿಸ್ರೀ ಅತ್ತಾಗ ಅದನ್ನು' ಅಂತ ಅಂದು ಬಿಡ್ತಾನೆ. ಕಾರಣ ಇಷ್ಟೇ ಮಣಿ-ಮಲ್ಲಾಸುರ ಎಂಬ ರಾಕ್ಷಸರು ಗರ್ಭವತಿಯ ಪಿಂಡವನ್ನು ಹಾರವಾಗಿ ಕೇಳಿತ್ತಂತೆ. ಅಂಥವರು ಏನಾದರೂ ಅಲ್ಲಿಗೆ ಬಂದರೆ ರಾಕ್ಷಸರು ಯಾವುದೋ ಮುಖಾಂತರವಾಗಿ ಬಂದು ಅವರನ್ನು ಸಂಹರಿಸುತ್ತಾನೆ ಅನ್ನುವಂತಹ ನಂಬಿಕೆ ಕ್ಷೇತ್ರದ ಬಹುಪಾಲು ಜನರಿಗಿದೆ. ಆದ್ದರಿಂದ ಬಾಣಂತಿಯರು, ಕೂಸಿನ ತಾಯಿಯರು ರಕ್ಷಪಡೆಗೆ ಹೋಗುವುದು ನಿಷಿದ್ಧ. ದೇವರ ಉತ್ಸವ ಮೂರ್ತಿಗಳು ರಾಕ್ಷಸ ಪಡೆ ಇನ್ನೂ ಅರ್ಧ ಕಿ.ಮೀ. ದೂರದಲ್ಲಿ ಬರುತ್ತಿರುವಂತೆಯೇ ಕಂಚಾವೀರನು ಪರವಶನಾಗಿ ಬಿಡುತ್ತಾನೆ. ಆಗಲೇ ನಿಗದಿತ ಸ್ಥಳದಲ್ಲಿ ಸುಮಾರು ಮೂರೂವರೆ ಅಡಿ ಉದ್ದವಿರುವ ಕಬ್ಬಿಣದ ಕಡ್ಡಿಗೆ ಹನ್ನೆರಡು ಮಾರು ಉದ್ದದ ನೂಲಿನ ಹಗ್ಗವನ್ನು ಪವಾಡ ಮಾಡಲು ಸಿದ್ಧಪಡಿಸಿಕೊಂಡಿರುತ್ತಾನೆ. ದೇವರುಗಳು ರಕ್ಷಪಡೆಗೆ ಸಮೀಪಿ ಸುತ್ತಿದ್ದಂತೆಯೇ ಪರವಶನಾದ ಕಂಚಾವೀರ ಗುಹೆಯ ಕಡೆಗೆ ಮುಖಮಾಡಿ 'ಭಲೇ ಎಚ್ಚರ' ಅಂತ ಕೂಗ್ತಾನೆ. ಭಂಡಾರವನ್ನು ಗುಹೆಯ ಕಡೆಗೆ ಉಗ್ಗುತ್ತಾನೆ. ಆಗ ಮೈಮ್ಯಾಲೆ ಬರೋ ರಾಕ್ಷಸರು ಓಡಿ ಹೋಗ್ತಾರಂತೆ. ಆಗ ರಾಕ್ಷಸರು ಬಾಯಿ ತೆರೆದುಕೊಂಡಿದ್ದು ಪವಾಡದಾತನಿಗೆ ಕಾಣಿಸುತ್ತದೆಯಂತೆ.

ಇದೇನು ದೇವರು ಹತ್ತಿರ ಬರುತ್ತಿದ್ದಂತೆಯೇ ಕಂಚಾವೀರ ತನ್ನ ಕಾಲಿಗೆ ನಿಂತುಕೊಂಡೇ (ಓಟದ ಸ್ಪರ್ಧೆಯಲ್ಲಿ ಯಾವ ರೀತಿ ನಿಂತಿರುತ್ತಾರೋ ಹಾಗೆ ನಿಂತುಕೊಂಡು) ಶಸ್ತ್ರವನ್ನು ಹಾಕಿಕೊಳ್ಳುತಾನೆ. ಇಲ್ಲಿ ಗಮನಿಸಬೇಕಾದ ಬಹು ಮುಖ್ಯ ಅಂಶವೆಂದರೆ ಕಂಚಾವೀರ ಕಾಲಿನ ಮೀನಗಂಡದಿಂದ ಕಡ್ಡಿಯನ್ನು ಸಿಕ್ಕಿಸಿಕೊಂಡಿರುತ್ತಾನೆ. ಆಗ ದೇವರು ಬಂದು ( ಉತ್ಸವ ಮೂರ್ತಿ ಹೊತ್ತುಕೊಂಡಿರುವಾತ) ಈತನ ಕಾಲಿನ ಹೆಬ್ಬೆಟ್ಟನ್ನು ತುಳಿದಾಗ ೧೨ ಮಾರು ಉದ್ದದ ಹಗ್ಗವನ್ನು ಸರಸರನೇ ಎಳೆಯುತ್ತಾನೆ. ಈ ರೀತಿ ಪವಾಡ ಮಾಡುವಾಗ ನಿಂತ ಜನಸ್ತೋಮ ಬಹುಪರಾಕ್ ಬಹುಪರಾಕ್ ಎಂದು ಕೂಗುತ್ತಲೇ ಇರುತ್ತಾರೆ. ಡೊಳ್ಳಿನ ಪೆಟ್ಟು ಮತ್ತಷ್ಟು ಹೆಚ್ಚುತ್ತಲೇ ನಡೆಯುತ್ತದೆ. ಕಂಚಾವೀರನ ಕಾಲಿನ ಮೀನಗಂಡದಿಂದ ೫ ಹನಿ ರಕ್ತ ಬಂಡೆಯ ಮೇಲೆ ಬೀಳುತ್ತದೆ. ರಕ್ತವನ್ನು ಮಣಿ-ಮಲ್ಲಾಸುರ ಎಂಬ ಎರಡು ಗುಂಡುಗಳಿಗೆ ಹಚ್ಚುತ್ತಾರೆ. ಪವಾಡ ಆದ ಮೇಲೆ ಕಂಚಾವೀರ ದೇವರ ಉತ್ಸವಮೂರ್ತಿಯನ್ನು ಹೊತ್ತುಕೊಂಡು ಐದು ಹೆಜ್ಜೆ ಕುಣಿಯುತ್ತಾನೆ. ದೇವರ ಹಿಂದೆಕೊಟ್ಟ ಮಾತಿನಂತೆ ಕಂಚಾವೀರನ ಮೀನಗಂಡದಿಂದ ಐದುಹನಿ ರಕ್ತವನ್ನು ಪ್ರತಿ ವರ್ಷ ನೀಡುತ್ತೇನೆ ಎಂಬ ಮಾತು ನೆರವೇರುತ್ತಿದ್ದಂತೆ ರಾಕ್ಷಸರು ಸಂತೃಪ್ತರಾಗುತ್ತಾರೆ ಎನ್ನುವ ನಂಬಿಕೆ ಜನಪದರಿಗಿದೆ.

ಶಸ್ತ್ರ ಪವಾಡ ಮುಗಿದ ಮೇಲೆ ದೇವರುಗಳು ಶಮೀವೃಕ್ಷದ (ಬನ್ನಿಮರ)ಸನ್ನಿಧಾನಕ್ಕೆ ಸಾಗುವರು. ಅಲ್ಲಿ ಪುರೋಹಿತರಿಂದ ವೇದ ಮಂತ್ರಗಳು, ಸ್ತೋತ್ರಗಳು, ಸಂಗೀತಗಾನಗಳು, ಇತ್ಯಾದಿಗಳಿಂದ ಸ್ವಾಮಿಯನ್ನು ಪೂಜಿಸಲ್ಪಡುವರು. ಶಮೀವೃಕ್ಷ ಪೂಜೆಮಾಡಿ ಪುರೋಹಿತರು ಪರಮಾರ್ಥ ಮಂತ್ರದಿಂದ

ಶಮೀವೃಕ್ಷದ ಮೂಲದಲ್ಲಿ ಬೀಜಾಕ್ಷರಗಳನ್ನು ಬರೆದು ಕಟ್ಟುವರು. ಇಲ್ಲಿಗೆ ದೇವರ ಬನ್ನಿ ಮುಡಿದಂತೆಯೇ. ಇದೇ ಸಂದರ್ಭದಲ್ಲಿ ನೆರಣಿಕೆ ಗ್ರಾಮದ ಗೌಡರು, ಶ್ಯಾನಭೋಗರು ಶಸ್ತ್ರ ಪವಾಡ ಮಾಡಿದ ಕಂಚಾವೀರನಿಗೆ ವಿಜಯದ ಸಂಕೇವಾಗಿ ಅಚ್ಚಡ (ಬಟ್ಟೆ)ಹಾಕ್ತಾರೆ. ಶಾಲು ಹೊದಿಸುವ ರೀತಿಯಲ್ಲಿ ಆತನಿಗೆ ಸನ್ಮಾನ ಮಾಡಿ ಅವರಿಗೆ ಇನಾಮನ್ನು ನೀಡುತ್ತಾರೆ. ಕಂಚಾವೀರನ ಸ್ವಾಧೀನಕ್ಕೆ ಈಗಾಗಲೇ ನೀಡಿದ ಪಂಜು, ಇಲಾಲು ಕಟ್ಟಿಗೆ, ಎಣ್ಣೆ ಮುಂತಾದವುಗಳ ಜೊತೆ ಶಸ್ತ್ರ ಕಡ್ಡಿಯನ್ನು ತೆಗೆದು ಕೊಂಡು ಕಾಡು ಸಿದ್ದಪ್ಪನ ಮಠವನ್ನು ಸೇರುತ್ತಾರೆ.

ದೇವರುಗಳು ಶಮೀವೃಕ್ಷದಲ್ಲಿ ಸ್ವಲ್ಪ ಹೊತ್ತು ಕುಳಿತುಕೊಂಡಿರುತ್ತವೆ. ನಾಲ್ಕೈದು ಮಂದಿ ಬಸವಿಯರು ಹಾಡುಗಳನ್ನು ಹಾಡುತ್ತಾರೆ. ಗೊರವರು ಒಡಪು ಮತ್ತು ಹಾಡುಗಳನ್ನು ಹಾಡುತ್ತಾರೆ. ಈ ವಿರಾಮದಲ್ಲಿ ಹಾಡು ಕುಣಿತಗಳು ಮುಗಿದ ನಂತರ ಉತ್ಸವ ಮೂರ್ತಿಗಳು ಹೊನ್ನಿಕೆರೆ ಕಟ್ಟೆಗೆ ಬರುತ್ತವೆ. ಅಲ್ಲಿ ದೇವರು ಸುಂದರವಾಗಿ ನರ್ತಿಸುವನು. ಈ ಸಮಯದಲ್ಲಿ ಬಡಿಗೆ ಆಟಗಾರರ ಗುಂಪುಗಳು ತಂಡೋಪ ತಂಡವಾಗಿ ಹಲಗೆಯ ನಾದಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಕುಣಿಯುತ್ತಲೇ ಇರುತ್ತಾರೆ. ಇನ್ನೇನು ಸಮಯ ಸುಮಾರು ಐದು ಗಂಟೆಯಾಗುತ್ತಿದ್ದಂತೆಯೇ ದೇವರುಗಳು ಎದುರು ಬಸವನ ಗುಡಿಗೆ ಬರಲು ಸಿದ್ಧವಾಗುತ್ತದೆ. ಯಾವಾಗ ದೇವರುಗಳು ಸಿದ್ದವಾಗುತ್ತವೆಯೋ ಆಗಲೇ ಬಡಿಗೆದಾರರು ಮತ್ತಷ್ಟು ಉತ್ಸುಕರಾಗಿ ವೇಗವಾಗಿ ಸಾಗುತ್ತಲೇ ಬಸವನ ಗುಡಿಗೆ ಉತ್ಸವಮೂರ್ತಿಗಳೊಂದಿಗೆ ಬಂದು ಸೇರುತ್ತಾರೆ. ಈ ವೇಳೆಗಾಗಲೇ ರಾಕ್ಷಸ ಪಡೆಗೆ ಹೋಗದೇ ಬಜಾರದಲ್ಲಿ ಉಳಿದುಕೊಂಡ ಬಡಿಗೆದಾರರೆಲ್ಲ ದೇವರುಗಳು ಕಾರಣಿಕ ನುಡಿಯಲು ಬಸವನ ಗುಡಿಗೆ ಬರುವಷ್ಟರಲ್ಲಿಯೇ ಜಮಾಯಿಸುತ್ತಾರೆ. ಭಕ್ತರ ಜನಸ್ತೋಮ ವಿಪರೀತವಾಗಿದ್ದು ಗುಡಿಯ ಸುತ್ತೆಲ್ಲ ಕಾರಣಿಕ ಕೇಳಲು ನೆರೆದಿರುತ್ತಾರೆ.

ಗುಡಿಯಮೇಲೆ ಎರಡು ದೊಡ್ಡದಾದ ಬಿದಿರುಗಳನ್ನು ಅಡ್ಡವಾಗಿ ಬಿಗಿದು ಎರಡು ಧ್ವನಿವರ್ಧಕ ಗಳನ್ನು ಏರ್ಪಡಿಸಿರುತ್ತಾರೆ. ದೇವರುಗಳು ಬಸವನ ಗುಡಿಗೆ ಬಂದಾಗ ಅರ್ಚಕರಿಂದ ಮಂಗಳಾರತಿಯ ಕಾರ್ಯಕ್ರಮ ನೆರವೇರುತ್ತದೆ. ಈ ಸಮಯದಲ್ಲಿ ಬಡಿಗೆದಾರರುಜನರು ಸಾಕಷ್ಟು ಇಲ್ಲೇ ಜಮಾಯಿಸಿರು ವುದರಿಂದ ಬಡಿಗೆಗಳ ನೂಕು ನುಗ್ಗಲು ಮತ್ತೆ ಹೆಚ್ಚಾಗಿರುತ್ತದೆ. ಈ ಸಂದರ್ಭದಲ್ಲಿಯೂ ಸಹ ಹೊಡೆದಾಟಗಳು ಸಂಭವಿಸುತ್ತವೆ. ಬಡಿಗೆದಾರರ ಆರ್ಭಟ ನೂಕುನುಗ್ಗಲಿಗೆ ಭಕ್ತರೆಲ್ಲ ಚೆಲ್ಲಾ ಪಿಲ್ಲಿಯಾಗಿ ಚದುರುತ್ತಿರುತ್ತಾರೆ. ಈ ಪರಿಸ್ಥಿತಿ ಬಹಳ ಹೊತ್ತು ಇರದು. ಇರುವಷ್ಟರಲ್ಲಿಯೇ ಹೊಡೆದಾಟಗಳು ಆಗುತ್ತಲೇ ಇರುತ್ತವೆ. ಎತ್ತಿದ ಬಡಿಗೆಗಳು ಎತ್ತಿಯೇ ಇರುತ್ತವೆ. ಆ ಬಡಿಗೆಗಳ ಸಪ್ಪಳದಲ್ಲಿ ಕಾರಣಿಕ ನುಡಿಯುವ ಕಾರ್ಯಕ್ರಮವಿರುತ್ತದೆ. ಕಾರಣಿಕ ನುಡಿವ ಸ್ವಾಮಿ ಬಸವನಗುಡಿಯಲ್ಲಿ ಮಂಗಳಾರತಿಯ ಕಾರ್ಯಕ್ರಮವನ್ನು ನೆರವೇರಿಸಿ ಪತ್ನಿಯ ಸಮೇತನಾಗಿ ಗುಡಿಯನ್ನು ಹತ್ತಿ ಕುಳಿತು ಭಕ್ತಿ ಪರವಶನಾಗಿ ಧ್ವನಿವರ್ಧಕದಲ್ಲಿ 'ಬಹುಪರಾಕ್' ಅಂತ ಕೂಗುತ್ತಾನೆ. ಆಗ ನೆರೆದ ಜನಸ್ತೋಮ ನಿಶ್ಶಬ್ದವಾಗಿ ಬಿಡುತ್ತದೆ. ಆಗ ದೇವರ ವಾಕ್ಯಗಳು ಕಾರಣಿಕ ಸ್ವಾಮಿಯಿಂದ ಹೊರಬೀಳುತ್ತವೆ.

ಬುಧವಾರ ದಿನಾಂಕ : ೧೬/೧೦/೨೦೦೨ರಂದು ಶ್ರೀ ಮಾಳಾ ಮಲ್ಲೇಶ್ವರ ಸ್ವಾಮಿ ತಿಳಿಸಿರುವ ಹೇಳಿಕೆ

೧. ೬೦೦ ಜೋಳ

೨. ೨೦೦೦ ನಗ ಹಳ್ಳಿ

೩ ೩-೬-೬ ವರನ (ವರ್ಣ ಆದೀತು)

೪. ಎರೆದೊರೆ ಆದೀತು.

ಹೇಳಿಕೆ ಮುಗಿದ ನಂತರ ಕಾರಣಿಕದಾತ ಭಂಡಾರವನ್ನು ಭಕ್ತರ ಮೇಲೆ ಎರಚುತ್ತಾನೆ. ಅಲ್ಲಿಗೆ ಕಾರಣಿಕ ಹೇಳುವ ಕಾರ್ಯಕ್ರಮ ಮುಗಿದಂತೆಯೇ. ಎತ್ತಿದ ಬಡಿಗೆಗಳು ಎತ್ತಿದ ರೀತಿಯಲ್ಲಿಯೇ ವಿಜೃಂಭಿಸುತ್ತಾ ಆಣಕದ ರೀತಿಯಲ್ಲಿ ಸಾಗಿ ದೇವರುಗಳು ಶಿವಸಾನ ಗದ್ದಿಗೆಗೆ ಬಂದು ಕುಳಿತುಕೊಳ್ಳುತ್ತವೆ. ಒಡೆಯರು ದೇವರಿಗೆ ಮಂಗಳಾರತಿಯ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಮಂಗಳಾರತಿಯ ಕಾರ್ಯಕ್ರಮ ಮುಗಿದು ಮದ್ದಲಿಗೊರವರು ಮದ್ದಲಿಯನ್ನು ಬಾರಿಸುತ್ತಿದ್ದಂತೆ ನೆರೆದ ಭಕ್ತರು ಚಪ್ಪಾಳೆಯನ್ನು ಎರಡು ಬಾರಿ ಜೋರಾಗಿ ತಟ್ಟುತ್ತಾರೆ. ಈ ರೀತಿ ಚಪ್ಪಾಳೆಯನ್ನು ತಟ್ಟಿದ ನಂತರ ಬಡಿಗೆದಾರರು ಎತ್ತಿದ ಬಡಿಗೆಗಳನ್ನು ಇಳಿಸುತ್ತಾರೆ. ಬಡಿಗೆಗಳನ್ನು ಇಳಿಸಿದ ಮೇಲೆ ಬಡಿಗೆ ಆಟದ (ಬನ್ನಿಯ )ಕಾರ್ಯಕ್ರಮ ಮುಗಿದಂತೆಯೇ.

ಬನ್ನಿಯ ಕಾರ್ಯಕ್ರಮ ಮುಗಿದ ಮೇಲೆ ಭಕ್ತರು ಕಾಯಿಗಳನ್ನು ಒಡೆಸಿಕೊಳ್ಳುವುದರಲ್ಲಿ ನಿರತರಾಗುತ್ತಾರೆ. ಕಾಯಿಯನ್ನು ಒಡೆಸಿಕೊಂಡವರು ತಮ್ಮ ತಮ್ಮ ಊರುಗಳಿಗೆ ತೆರಳುತ್ತಾರೆ. ಬಡಿಗೆದಾರರು ಮಂಗಳಾರತಿಯ ಕಾರ್ಯಕ್ರಮ ಮುಗಿದಿದ್ದೇ ತಡ ತಮ್ಮ ಊರುಗಳ ಹಾದಿಯನ್ನು ತುಳಿಯುತ್ತಾರೆ. ಇಲ್ಲಿಗೆ ದಸರಾ ಬನ್ನಿಯ ಪೂರ್ಣ ಕಾರ್ಯಕ್ರಮ ಮುಗಿದಂತೆಯೇ. ಸಮಯ ಬೆಳಿಗ್ಗೆ ೭ಗಂಟೆಯಾಗಿರುತ್ತದೆ. ಆ ದಿನ ಗಿರಿಯಲ್ಲಿ ಯಾವುದೇ ಕಾರ್ಯಕ್ರಮಗಳಿರದು. ಗೊರವರು, ದೂರದಿಂದ ಬಂದಂತಹ ಭಕ್ತರು ಮರಳಿ ಊರುಗಳಿಗೆ ಹೋಗದೆ ಮಂಟಪಗಳಲ್ಲಿಯೇ ಉಳಿದುಕೊಂಡಿರುತ್ತಾರೆ. ಉಳಿದಂತೆ ಅನೇಕ ಭಕ್ತರು, ಸುತ್ತ ಮುತ್ತ ಹಳ್ಳಿಯವರು ಬನ್ನಿಯ ಕಾರ್ಯಕ್ರಮ ಮುಗಿಯುತ್ತಿದ್ದಂತೆ ತಮ್ಮ ಊರುಗಳಿಗೆ ಹೋಗುತ್ತಾರೆ.

### ೨.೧.೫.೩. ಬಡಿಗೆ ಆಟ :

ಗಿರಿ ಮಲ್ಲಯ್ಯ ದಸರಾ ಉತ್ಸವದಲ್ಲಿ ನಡೆಯುವ ಅತ್ಯಂತ ಆಕರ್ಷ ಆಚರಣೆಯೆಂದರೆ 'ಬಡಿಗೆ ಆಟ'. ಬಡಿಗೆ ಆಟ ಬನ್ನಿಯಲ್ಲಿ ಇರುವುದರಿಂದಲೇ ಈ ಕ್ಷೇತ್ರ ವಿಶೇಷ ಕಳೆಯನ್ನು ಹೊಂದಿದೆ. ಮಣಿ- ಮಲ್ಲಾಸುರರ ಬೇಟೆಗೆ ದೇವರ ಸವಾರಿ ಹೊರಟ ಸಂದರ್ಭದಲ್ಲಿ ದೇವರ ಜೊತೆಗೆ ಸೈನ್ಯವು (ಬಡಿಗೆಗಳು) ಹೊರಡುತ್ತದೆ. ಇಲ್ಲಿ ಸೈನ್ಯವೆಂದರೆ ಸುತ್ತ ಮುತ್ತಲಿನ ಪ್ರದೇಶದಿಂದ ಬರುವ ಭಕ್ತರ ಸಮುದಾಯ. ಇವರು ಕೈಯಲ್ಲಿ ಬಡಿಗೆ,

ಭರ್ಚಿ ಮುಂತಾದ ಆಯುಧಗಳನ್ನು ಹಿಡಿದು ಅವುಗಳಿಂದ ಪರಸ್ಪರರನ್ನು ಬಡಿಯುವ, ತಿವಿಯುವ ಅಣಕ ಯುದ್ಧ ಮಾಡುತ್ತಾ ಸಾಗುತ್ತಾರೆ. ಈ ರೀತಿ ನಡೆಯುವ ಬಡಿಗೆಯ ಆಟವೇ ಬನ್ನಿಯ ಜೀವಾಳವೆಂಬಂತೆ ಜನರ ಮನದಲ್ಲಿ ಛಾಯೆಯೊತ್ತಿದೆ. ನೋಡಲು ಭಯಂಕರ ರೌದ್ರವಾಗಿ ನಡೆಯುವ ಈ ಆಟ ನೋಡುಗರನ್ನು ಬೆಚ್ಚಿ ಬೀಳಿಸಿ ಮನುಷ್ಯ ಮನುಷ್ಯರ ಹೊಡೆದಾಟದ ರಕ್ತ ಹೋಮ, ಜೀವದ ಹಂಗು ಇಲ್ಲದೆ ತಲೆಗಳೂ ಒಡೆದರೂ ಲೆಕ್ಕಿಸದೆ ಹಾಗೆ ಮುಂದುವರೆಯುವ ಬಡಿಗೆ ಆಟಗಾರರನ್ನು ನೋಡುತ್ತಿದ್ದಂತೆ ನೋಡುಗರ ಹೃದಯಗಳು ತಣ್ಣಗಾಗಿ ಮೂರ್ಚೆ ಹೋಗುವ ಸಂದರ್ಭಗಳು ಇರುತ್ತವೆ. ಮತ್ತೆ ಕೆಲವರು ಇವರ ಗೊಡವೆಯೇ ಬೇಡವೆಂಬಂತೆ ದೂರದಿಂದಲೇ ವೀಕ್ಷಿಸಿ ತೃಪ್ತಿಪಡುತ್ತಾರೆ. ಬಜಾರಗುಂಟ ಅವರು ಬಡಿಗೆ ಹಿಡಿದು ರೌದ್ರಾಕಾರವಾಗಿ ನಮ್ಮೆದುರಿಗೆ ಬಂದುಬಿಟ್ಟರೆ ಮೃತ್ಯುವೇ ಬಂದಂತೆ ಭಾಸವಾಗುತ್ತದೆ. ಬಡಿಗೆಗಳು ರಕ್ಷಪಡೆಗೆ ಹೋದಾಗ ಇನ್ನೆಷ್ಟೋ ಬಡಿಗೆ ಹಿಡಿದವರು ಬಜಾರದಲ್ಲೇ ಉಳಿದಿರುತ್ತಾರೆ. ಅವರ ಬಳಿಗೆ ಅಪ್ಪಿ ತಪ್ಪಿ ಜನರು ಹೋಗಲು ಭಯ ಪಡುತ್ತಾರೆ. ಇಷ್ಟೆಲ್ಲಾ ಜೀವದ ಭಯ ನೋಡುಗರಿಗೆ, ಭಕ್ತರಿಗೆ ಇದ್ದರೂ (ಕೆಲವರಿಗೆ) ಬಡಿಗೆ ಆಡುವವರಿಗೆ ಅದಾವುದರ ಪರಿವೆಯೇ ಇರದು. ಬಡಿಗೆ ಕೈಯೊಳಗೆ ಇದ್ದರೆ ಸಾಕು ಸಾವಿರಪಟ್ಟು ಬಲ ಅವರ ಮೈಯೊಳಗೆ ಸೇರಿಕೊಂಡಿರುವಷ್ಟು ಧೈರ್ಯ ತುಂಬಿಕೊಂಡಿರುತ್ತದೆ. ಸಾವಿಗೆ ಕಿಂಚಿತ್ತು ಹೆದರದೆ ಹೊಡೆತಗಳು ಬಿದ್ದರೂ ಉತ್ಸವ ಮೂರ್ತಿಯೆಡೆಗೆ ಸಾಗುವುದೇ ಅವರ ಮುಖ್ಯ ಗುರಿ, ನಿಲುವೂ ಆಗಿರುತ್ತದೆ. ಬಹಳಷ್ಟು ಹೊಡೆತ ಬಿದ್ದಾಗ ದೇವರ ಉತ್ಸವ ಮೂರ್ತಿಗಳ ಹಿಂದೆ ಹೋಗಲು ಆಗದೇ ಬದಲಿ ಚಿಕಿತ್ಸೆಗೆ ತೊಡಗುತ್ತಾರೆ. ಕೆಲವರು ಅಳುಕು (ಪುಳುಕು) ಸ್ವಭಾವದವರು ತೀರಾ ಗದ್ದಲದಿಂದ ಸ್ವಲ್ಪ ದೂರದಲ್ಲಿಯೇ ಬಡಿಗೆಗಳನ್ನು ಹಿಡಿದು ತಿರುಗುತ್ತಿರುತ್ತಾರೆ. ಅವರಿಗೆ ಯಾವುದೇ ಅಪಾಯದ ಹಂತ ಇಲ್ಲ ಎನ್ನುವ ಸ್ಥಿತಿ ಇದ್ದಾಗ ಮಾತ್ರ ಗುಂಪಿನಲ್ಲಿ ಬೆರೆತು ಬಡಿಗೆಗಳನ್ನು ಬೀಸುತ್ತಾ ಕುಣಿಯುತ್ತಾರೆ. ಜಗಳದ ಪರಿಸ್ಥಿತಿ ಎದುರಾದಾಗ ತಪ್ಪಿಸಿಕೊಳ್ಳುತ್ತಾರೆ. ಹೀಗೆ ತಪ್ಪಿಸಿಕೊಳ್ಳುವವರಿಗಿಂತ ಮುನ್ನುಗ್ಗುವವರೇ ಜಾಸ್ತಿ.

ಈ ಬಡಿಗೆಗಳನ್ನು ಬಿದಿರಿನ ಕಟ್ಟಿಗೆಯಿಂದ ಮಾಡುತ್ತಾರೆ. 'ಬಾಣಾ' ಕಟ್ಟಿಗೆ ಅಂತಲೂ ಬಳ್ಳಾರಿಯ ಸುತ್ತ ಮುತ್ತಣ ಜನರು ಹೇಳುತ್ತಾರೆ. ಆ ಕಟ್ಟಿಗೆಯ ಮುಕ್ಕಾಲು ಅಡಿಯಿಂದ ಒಂದು ಅಡಿಯವರೆಗೆ ಕಬ್ಬಿಣದ ಸರಳನ್ನು ಬಲವಾಗಿ ಸುತ್ತಿರುತ್ತಾರೆ. ಆ ಭಾಗಕ್ಕೆ ಕೆಂಪು ಬಣ್ಣವನ್ನು ಇಲ್ಲ ತಮಗೆ ಚೆಂದವಾಗಿ ಕಾಣುವ ಬಣ್ಣವನ್ನು ಹಚ್ಚಿರುತ್ತಾರೆ. ಹಣಸಿನ ಬಡಿಗೆಗೆ ವಿಶೇಷವಾಗಿ, ಆಕರ್ಷಕವಾಗಿ ಕಾಣುವ ರೀತಿಯಲ್ಲಿ ಬಣ್ಣವನ್ನು ಹಚ್ಚಿರುತ್ತಾರೆ. ಕೆಲವರು ಬಡಿಗೆಯ ಕೆಳಭಾಗದಲ್ಲಿ ಗೆಜ್ಜೆಯನ್ನು ಕಟ್ಟಿರುತ್ತಾರೆ. ಬಡಿಗೆಯ ಮುಂದೆ ಜಿಗಿಸಲಾಗಿರುವ ಕಬ್ಬಿಣದ ಸುರುಳಿ ಅತಿ ಬಲವಾಗಿದ್ದು ಆ ಭಾಗ ಸುಮಾರು ಒಂದು ಒಂದೂವರೆ ಕೆ.ಜಿ.ಗಳಷ್ಟು ಇರುತ್ತದೆ. ಈ ಬಡಿಗೆಯಿಂದ ತಲೆಗೆ ಸ್ವಲ್ಪ ಹೊಡೆತ ಬಿದ್ದರೂ ಸಹ ತಲೆ ಸೀಳುವುದರಲ್ಲಿ ಅನುಮಾನವಿಲ್ಲ.

ಬಡಿಗೆ ಆಟ ಆಡುವವರು ಬನ್ನಿಯ ಹಬ್ಬಕ್ಕೆಲ್ಲ ಬಿಳಿಯ ತೆಳುವಾದ ಅಂಗಿಯನ್ನು ಹೊಲಿಸಿಕೊಳ್ಳುತ್ತಾರೆ. ಬಣ್ಣದ ನಿಕ್ಕರನ್ನು ಸಹ ಸಿದ್ದಪಡಿಸಿ ಕೊಂಡಿರುತ್ತಾರೆ. ಲುಂಗಿ ದೋತರಗಳನ್ನು ಉಟ್ಟವರು ಬಿಗಿಯಾಗಿ ನಡುವಿನ ಹಿಂದೆ ಬಿಗಿದಿರುತ್ತಾರೆ. ಸುತ್ತಮುತ್ತ ಹಳ್ಳಿಗಳಾದ ನೆರಣಿಕೆ, ಎಳ್ಳಾರ್ಥಿ, ಸುಳುವಾಯಿ, ಆರಿಕೇರಿ,ಹೊಸಪೇಟೆ, ತಾಂಡ, ಇರಪಾಪುರ, ಆದೋನಿ ಇತ್ಯಾದಿ ಊರುಗಳಿಂದ ರಾತ್ರಿ ನಾಲ್ಕರ ಸುಮಾರಿಗೆ ತಮ್ಮ ತಮ್ಮ ಊರುಗಳಲ್ಲಿ ಹಾಲುಭಾಷೆ ಮಾಡಿಕೊಂಡು ಊರಿನ ಹಿರಿಯರಿಂದ ಆಶೀರ್ವಾದ, ಹಿತವಚನಗಳನ್ನು ಪಡೆದು, ಗಿರಿಗೆ ಬೆಂಕಿ, ಇಲಾಲುಗಳೊಂದಿಗೆ ಬರುತ್ತಾರೆ. ಬಂದ ಪ್ರತಿ ಊರಿನವರು ತಂಡೋಪ ತಂಡವಾಗಿ ಅವರವರ ಗುಂಪಿನ ಹಲಗೆಗಳ ಮೊಳಗಿಗೆ ಕುಣಿಯುತ್ತಿರುತ್ತಾರೆ. ಬಡಿಗೆಗಳನ್ನು ಕೊನೆಯ ಅಂಚು ಮೇಲೆ ಬರುವಂತೆ ಮಾಡಿ ಎತ್ತಿ ಕತ್ತರಿ ಆಕಾರದಲ್ಲಿ ಎದುರಿನ ಬಡಿಗೆಗಳಿಗೆ ತಾಗಿಸಿ ಟಕ್.... ಟಕ್ ಎಂಬ ಶಬ್ದವನ್ನುಂಟುಮಾಡಿ ನೋಡುಗರಿಗೆ ಭಯ ಹುಟ್ಟಿಸುತ್ತಾರೆ. ಬರಿ ಬೆಂಕಿಯ ಬೆಳಕಿನಲ್ಲಿ ಅವರ ಮುಖಗಳು ಕೆಂಪಗೆ ರೌದ್ರತೆಯನ್ನು ಪ್ರತಿನಿಧಿಸುತ್ತಿರುತ್ತವೆ. ಬಡಿಗೆದಾರರು ಹುರ್‍ರ್ರಾ....ಹುರ್‍ರ್ರಾ... ಎಂದು ಅರಚಿ ವಿಚಿತ್ರವಾಗಿ ಕೂಗುತ್ತಾ ಎಗರುತ್ತಾ ಗುಂಪುಗಳು ರಭಸವಾಗಿ ಗಿರಿಯನ್ನು ಹತ್ತುವಂತೆ ಮಾಡುವುದು, ಇಳಿಯುವುದು. ಈ ರೀತಿ ಅಣಕಯುದ್ಧ ಮಾಡುತ್ತಿರುತ್ತಾರೆ. ನಿಜವಾದ ಬಡಿಗೆ ಆಟ ಪ್ರಾರಂಭವಾಗುವುದು ನೆರಣಿಕೆಯವರು ಬಂದಾಗಲೇ. ಗಿರಿಯಲ್ಲಿ ಮಾಳಾ-ಮಲ್ಲೇಶ್ವರರಿಗೆ ಲಗ್ನವಾಗಿ ಕೆಳಗೆ ಇಳಿದು ಬರುವಾಗ ''ಮ್ಯಾಲಿನಿಂದ ಇಳಿಯೋ ಜನ ಹೆಚ್ಚು ಕಡಿಮೆ ಆಗ್ತಾರೆ. ದೇವರು ಹಿಂಗೆ ಇಳಿತಾ ಇರ್ತಾನಲ್ಲ ಡೌನಗೆ ಜನ ದೊಬ್ಬಿಕ್ಯಾಂತ ಬರ್ತಾಯಿರ್ತಾರ. ನಾನು ನೋಡ್ಬೇಕು, ನೀನು ನೋಡ್ಬೇಕು ಅಂತ ನೂಕಾಟ ಇರ್ತೈತೆ. ನೀನು ಒತ್ತುಲೇಯಂತೆ ನಾನು, ನಾನು ಒತ್ತುಲೀನಂತ ನೀನು ಹೀಗೆ ಒಬ್ರಿಗೊಬ್ರು ಬಡಿದಾಟ ನಡಿತೈತೆ. ಆ ಬನ್ನಿಯ ಸ್ಪೆಷಲ್ ಏನಪ್ಪ ಅಂದ್ರೆ ಒಬ್ರಿಗೆ ತಗುಲಿಸ್ಯಾರ ಅಂದ್ರೆ ಮುಗೀತು ಎಲ್ಲರೂ ಕಂಪ್ಲೀಟು ಬಡಕಂಬಿಡ್ತಾರೆ. ಅವಾಗ ಆ ಬಡದಾಟದಾಗ ಯಾರಿಗೆ ಯೆಂಗೆಂಗ ಬಿಳ್ತಿರ್ತಾವೋ ಗೊತ್ತಿರಂಗಿಲ್ಲ. ಬಡಿಗೆಗಳು ತಗುಲಿ ಸ್ವಲ್ಪ ಜನ ಕೆಳಗ ಬೀಳ್ತಾರೆ. ಕೆಲವರು ಸಾಯ್ತಾರೆ '' ಎಂದು ನೆರಣಿಕೆಯ ನರಸಪ್ಪನವರು ಹೇಳುತ್ತಾರೆ.

ಹೀಗೆ ದೇವರ ಉತ್ಸವ ಮೂರ್ತಿಯ ಹಿಂದೆ ಬಡಿಗೆದಾರರು ಉತ್ಸವ ಮೂರ್ತಿಯನ್ನು ತಮ್ಮ ತಮ್ಮ ಊರಿನವರೇ ಹೊತ್ತುಕೊಳ್ಳುವ ಸಲುವಾಗಿ, ದೇವರನ್ನು ನೋಡುವ ಸಲುವಾಗಿ, ತಮ್ಮ ಊರಿನ ಪ್ರತಿಷ್ಠೆಯನ್ನು ಮೆರೆಸುವ ಸಲುವಾಗಿ, ಅನಿವಾರ್ಯವಾಗಿ ಜನರ ಒತ್ತಡದಿಂದ ಆಗುವ ನೂಕು ನುಗ್ಗಲಿನ ಸಲುವಾಗಿ ಉಂಟಾದ ಜಗಳ ಎಷ್ಟೋ ಜನರಿಗೆ ತಲೆಗಳ ಒಡೆದು ಹೆಣಗಳಾಗಿ ಉರುಳುವ ಹಂತವನ್ನು ತಲುಪುತ್ತವೆ. ಬೆಂಕಿಯ ಇಲಾಲುಗಳು ಆ ಬೆಂಕಿಯ ಬೆಳಕಿನಲ್ಲಿ ಇವರು ಮಾಡುವ ವರ್ತನೆಗಳು ನಮಗೆ ಆದಿಮಾನವನು ತಾನು ಬೇಟೆಗಾಗಿ ಬೆಂಕಿ ಹಿಡಿದು, ಆಯುಧಗಳನ್ನು ಹಿಡಿದು ಪ್ರಾಣಿಗಳನ್ನು ಪಳಗಿಸಲು ಹವಣಿಸುವ ಬೇಟೆ ( ಯುಧ) ಯಂತೆ ಗೋಚರಿಸುತ್ತಾರೆ.

**ವಕ್ತೃಗಳ ಅನಿಸಿಕೆ :**

೧. ಈ ಬಡಿಗೆ ಆಟದ ಬಗ್ಗೆ ಮುಂಡ್ಲೂರು ಶೇಷಗಿರೆಪ್ಪನವರನ್ನು ವಿಚಾರಿಸಿದಾಗ '' ಇದು ಒಂದು ಉತ್ಸವ. ವಿಜಯ ದಶಮಿಯಂದು ಹೆಣ್ಣನ್ನು ಗೆದ್ದು ಬರುವಾಗ (ಮದುವೆಯಾಗಿ) ಮಾಡುವ ಮೆರವಣಿಗೆ ಅದು. ಶಿವ ಮಣಿ-ಮಾಲ್ಲಾಸುರರನ್ನು ಸಂಹಾರ ಮಾಡಿದಕ್ಕೆ ಸಂತೋಷ ಆಯ್ತು. ಆಗ ಈ ಸಂಭ್ರಮಕ್ಕೆ ಈ ಉತ್ಸವ ಮಾಡಿದರು. ಆಗ ಆತನನ್ನು ಕುದುರೆ ಮ್ಯಾಲೆ ಕೂಡಿಸಿ ಆದಾಗ ಕುದುರೆ ಪ್ರಕರಣ ಮಾಡಿ ಮೆರವಣಿಗೆ ಮಾಡಿದರು. ಆ ಮೆರವಣಿಗೆಯಲ್ಲಿ ಕೋಲು ಹಿಡಿದು ಕುಣಿಯುವುದು ಒಂದು ವಿಶೇಷ. ಮಣಿ-ಮಲ್ಲಾಸುರರನ್ನು ಸಂಹರಿಸಿದ ಶಿವ, ಆತನ ವಿಜಯದ ಸಂಕೇತವಾಗಿ ಉತ್ಸವ ನಡೆಯುತ್ತದೆ''. ಈ ಹೊಡೆದಾಟಕ್ಕೆ ಕಾರಣವನ್ನು ಕೇಳಿದಾಗ '' ಅದು ನಮ್ಮ ಅಜ್ಞಾನ ಅದು ಮೂಲತಃ ಉತ್ಸವ. ಅದರ ಹೆಸರಿನಲ್ಲಿ ಜನರು ಬಡಿದಾಡಿಕೊಂಡು ಸಾಯುತ್ತಿದ್ದಾರೆ. ಮೊದಲು ಹೊಡೆದಾಟ ಅನ್ನುವುದು ಇದ್ದಿಲ್ಲ. ಬರೀ ಕೋಲು ಹಿಡಿದು 'ಓಂ ನಮಃ ಶಿವಾಯ' ಅಂತ ಹೇಳ್ತಾ ಉತ್ಸವ ಆಚರಿಸುತ್ತಿದ್ದರು. ಆದರೆ ಕೆಲವರು ಮಲ್ಲೇಶ್ವರ ,ಮಲ್ಲೇಶ್ವರ ಅಂದ್ರೆ ಮತ್ತೆ ಕೆಲವರು ಹುಕ್ರೀ ಹುಕ್ರೀ ಅಂದರು. ಈಗ ಅದು ತನ್ನ ಸ್ವರೂಪವನ್ನೇ ಬದಲಾಯಿಸಿಕೊಂಡು ಎಲ್ಲರೂ ಹುಕ್ರಿ..ಹುಕ್ರಿ ಅನ್ನೋಕೆ ಶುರುಮಾಡ್ಯಾರ. ಈ ರೀತಿ ಸ್ವರೂಪ ಪಡೆದು ೧೦೦ವರ್ಷ ಮೇಲಾಗಿರಬಹುದು ಅಂತ ಹೇಳ್ತಾರೆ. ಮೊದಲೇನು ಇಲ್ಲಿ ಹೊಡೆದಾಟ ಆಗಿದ್ದಿಲ್ಲ. ಅಂತಹ ದೊಡ್ಡ ಸ್ಥಳದಲ್ಲಿ ಹೊಡೆದಾಡುವುದೆಂದರೆ ಸಣ್ಣತನ. ಆ ಸ್ಥಾನಕ್ಕೆ ನಾವು ಅಪವಿತ್ರ ಮಾಡಿದಂಗೆ''.

೨. ''ಬಡಿಗೆ ಆಟ ಅದೊಂದು ಉತ್ಸವ. ಇತ್ತೀಚಿಗೆ ಕುಡುಕರು ಜಾಸ್ತಿ ಆದರು. ಊರು ಊರುಗಳ ನಡುವೆ ಪಾರ್ಟಿಗಳಾದವು. ಇವ್ನ ಮೇಲೆ ಅವ್ನ ಬಡಕಾಡದು, ಅವ್ನ ಮೇಲೆ ಇವ್ನ ಬಡಕಾಡದು ಹಿಂಗಾದವು. ಈ ಮೊದಲು ಎಂದೂ ಬಡಿದಾಡಿಲ್ಲ. ಈ ನಾಲ್ಕೈದು ತಲೆಗಳಿಂದ ಸ್ವಲ್ಪ ಪಾರ್ಟಿಗಳಾಗಿ ಬಡಿದಾಡಿಕೊಂಡು ಸತ್ತಿದ್ದಾರೆ. ಅದು ಮೂಲತಃ ಮೆರವಣಿಗೇನೆ ಕುಡುಕರು, ಪೋಗರಿನ ಹುಡುಗರಿಂದ ಬಡಿದಾಟ ಜಾಸ್ತಿ ಆಗ್ಯೆದಾವ'' ಎಂದು ಎಳ್ಳಾರ್ಥಿಯ ಹಂಪಣ್ಣನವರು ಹೇಳುತ್ತಾರೆ.

೩. ''ಈ ಬಡಿಗೆ ಆಟ ಅನ್ನುವುದು ಪೂರ್ವದಿಂದಲೂ ಬಂದಿರುವಂತಹುರು ಅದು ನಿನ್ನ ಮೊನ್ನೆಯದಲ್ಲ ಪೂರ್ವದಲ್ಲಿ ಸ್ವಲ್ಪ ಸ್ವಲ್ಪ ಬಡಿದಾಡುವುದು ಇರಬಹುದು. ಈ ಹಿಂದೆ ನಮ್ಮ ತಾತನವರು ಏನು ಹೇಳ್ತಿದ್ದರೆಂದರೆ ಮಲ್ಲಯ್ಯ ಸ್ವಾಮೀನ ನಾವು ಹೊತ್ತುಕೊಂಡು ಹೋಗಬೇಕು, ನಾವು ಹೊತ್ತುಕೊಂಡು ಅಂತ ಬಡಿಗೆಗಳನ್ನು ತಗಂಡು ಎಲ್ಲರೂ ತಯ್ಯಾರಾಗಿ ನಿಂತಿರ್ತಾರೆ. ಅದರಾಗ ಊರ ಊರಿನ ಮಧ್ಯ ಯಾವುದೋ ನ್ಯಾಯ, ಬಡಿದಾಟ ಇತ್ಯಾದಿ ಎಲ್ಲವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಬಡಕಂಡು ಸಾಯ್ತಾರೆ. ಅದನ್ನ ದೇವರ ಹೆಸರಿನಲ್ಲಿ ಪ್ರಯೋಗಿಸ್ತಾರೆ. ಒಟ್ಟು ಬಡಿಗೆಗಳೇ ಬ್ಯಾಡ ಯಾಕೆಂದರೆ; ಹೆಣ್ಣು ಮಕ್ಕಳು ಬರಾಕ ಹೆದರ್ತಾರ. ಮಕ್ಕಳು ಮರಿಗಳನ್ನು ಕಟ್ಟಿಕೊಂಡು ಬರೋದು ಕಷ್ಟ ಆಗಿ ಬಿಡ್ತೈತೆ'' ಎಂದು ಆದೋನಿಯ ಮಲ್ಲಣ್ಣನವರು ಹೇಳುತ್ತಾರೆ.

೪. ಈ ಆಟದ ಬಗ್ಗೆ ದಮ್ಮೂರಿನ ಜಯಮ್ಮ ಅವರನ್ನು ಪ್ರಶ್ನಿಸಿದಾಗ ಅವರು ಪ್ರತ್ಯೇಕವಾದ ನಿಲುವನ್ನೇ ತಳೆದಿದ್ದಾರೆ. ಈ ಆಟ ಆಡಬೇಕೇ, ಇಲ್ಲ ಬೇಡವೇ ಎಂದಾಗ ''ಹೇ... ಇಲ್ಲಿ ಆಡಬೇಕಾದದ್ದೇ'' ಮತ್ತು ಜನ ಬಡದಾಡಿಕೆಂಡು ಸಾಯುವುದು ಚೆನ್ನಾಗೇನಮ್ಮ ಅಂತ ಅಂದಾಗ 'ಅವ್ರೇನು ಹಬ್ಬ ಅಂತ ಸಾಯ್ತಾರೇನು? ಊರಾಗ ನನಿಗೆ ನಿನಿಗೆ ಬೇಸಿರರೆಲ್ಲಪ್ಪ ಜಗಳ ಆಡಿ ಬಿಡಾದು. ಬರೋದು. ಇಲ್ಲಿ ಕೇಸು ಆಗದಿಲ್ಲ. ಒಬ್ಬರು ಬಲ ಆಗ್ತಾರೆ. ಒಬ್ಬರು ಎಡ ಆಗ್ತಾರೆ. ಎಡ ಆದವರು ಒದಿಸಿಕೆಂಡು ಸಾಯ್ತಾರೆ. ಅಂತದರಿಂದ ಈ ಜಗಳ ಮತ್ತೇನಿಲ್ಲ. ಅದರಿಂದ ಏನೂ ತೊಂದರೆಯಿಲ್ಲ.

೫. ''ಬಡಿಗ್ಯಾಟ ಅವತ್ತಿಗೂ ಇವತ್ತಿಗೂ ಸಂಪ್ರದಾಯ. ಅದು ಬರ್ತಾ ಬರ್ತಾ ಸಾವುಗಳು ಜಾಸ್ತಿ ಆಗಾಕ ಹತ್ತಿದವು. ಅದಕ್ಕಾಗಿ ೨-೩ ವರ್ಷದಿಂದ ಇದನ್ನು ಬಂದ ಮಾಡಬೇಕಂತ ಪೊಲೀಸನೋರು ಹೇಳ್ತಾನೇ ಐದಾರ. ಹಿಂದೆ ಒಂದ್ಸಲ ಕಲೆಕ್ಟ್ರು ಈ ಬಡಿಗೆ ಆಟನ ಬಂದ್ ಮಾಡ್ಬೇಕಂತ ಹೇಳಿದ್ರು. ಆದರೆ ಬಂದ ಮಾಡಾಕ ಆಗಲಿಲ್ಲ. ಇತ್ತಿತ್ತಿಲಾಗ ಪೊಲೀಸ್‌ನವರು ಸ್ಟ್ರಿಕ್ಟ್ ಮಾಡಿ ಹಣಸಿನ ಬಡಿಗೆ ತರಬಾರದು ಅಂತ ಸರ್ಕಾರ ಒದ್ಡಾಡತೈತಿ. ಆದ್ರೂ ಕಳೆದ ವರ್ಷ ಬನ್ನಿಯಲ್ಲಿ ಸಿ. ಐ.ಗನೂ ದೆಬ್ಬೆ (ಹೊಡೆತ) ತಗುಲಿದವು ಎಸ್.ಐ. ಗೂ ದೆಬ್ಬೆ ತಗುಲಿದವು. ಎಸ್.ಐ. ಅವರು ದೆಬ್ಬೆ ತಗುಲಿ ಆರು ತಿಂಗಳಿಗೆ ತೀರಿ ಹೋದರು. ಹಿಂಗಾದ್ರೂ ಪಾರ್ಟಿಯಿದ್ದರೆ ಇಲ್ಲಿ ಬಡದಾಡಿದ್ರೆ ಕೇಸು ಇಲ್ಲಿಲ್ಲ ಅಂತ ಒಂದು ಉದ್ದೇಶದಿಂದ ಹಂಗೆ ಮಾಡ್ತಾರೆ. ಆದರೆ ಈ ವರ್ಷ ಕೇಸು ಮಾಡ್ತೀವಂತ ಎಸ್. ಐ. ಮತ್ತು ಡಿ. ಎಸ್.ಪಿ. ಹೇಳಿದ್ದಾರೆ. ''ಯವರೇ ಕೊಟ್ಲ್ಯಾಡ್ನಿ ಅನುಮಾನಂ ಉನ್ನ ವಾಳಮಿದ ಯಿವರೈನ ಸಾಕ್ಷ್ಯಂ ಚೆಬಿತೆ ಮೇಮು ಕೇಸು ರಾಸುಕುಂಟಾಂ'' (ಯಾರೇ ಹೊಡೆದಾಡಲಿ ಅನುಮಾನವಿದ್ದವರ ಮೇಲೆ ಯಾರಾನ ಸಾಕ್ಷಿ ಹೇಳಿದರೆ ಕೇಸು ಬರಕಂತೀವಿ) ಎಂದು ಹೇಳಿದ್ದನ್ನು ಮುದ್ದು ಬಸವನ ಗೌಡ್ರು ಹೇಳುತ್ತಾರೆ.

ಕಳೆದ ವರ್ಷ ಎಸ್.ಐ.ಗೆ ಬಡೆದ ಗಲಾಟೆಗೆ ಸಂಬಂಧಿಸಿದಂತೆ ಎಳ್ಳಾರ್ಥಿ ಇವರು ಈ ಕೃತ್ಯವನ್ನು ಮಾಡಿರುವುದು ತಿಳಿದಾಗ ಸುಮಾರು ಆ ಊರಿನ ನಲವತ್ತು ಹಣಸಿನ ಬಡಿಗೆ ಹಿಡಿದು ಆಡುವವರನ್ನು ಅರೆಸ್ಟ್ ಮಾಡಿದರು. ಜಾಮೀನಿನ ಮೂಲಕ ಅವರೆಲ್ಲ ಹೊರಗಡೆ ಬಂದದ್ದೂ ಆಯಿತು. ಎಷ್ಟೆಲ್ಲಾ ಕೇಸು ಇರುತ್ತದೆಂದು ಗೊತ್ತಿದ್ದರೂ ಸಹ ೨೦೦೨ರ ಬನ್ನಿಯಲ್ಲಿ ಬಡಿಗೆಗಳನ್ನು ಹಿಡಿದಿಡಲು ಪೊಲೀಸರಿಂದ ಸಾಧ್ಯವಾಗಲಿಲ್ಲ. ಪರಿಣಾಮವಾಗಿ ಯಾವುದೇ ಸಾವು ಸಂಭವಿಸಲಿಲ್ಲ. ಬದಲಿಗೆ ಸುಮಾರು ಜನರಿಗೆ ತಲೆಗಳು ಒಡೆದು ಹೋದವು.

೬. “ಇಲ್ಲಿ ಇರುವಂತಹ ಮಣಿ-ಮಲ್ಲಾಸುರ ಅನ್ನುವಂತಹ ರಾಕ್ಷಸರನ್ನು ಶಿವ ಸಂಹಾರ ಮಾಡಿದ್ದರ ವಿಜಯದ ಸಂಕೇತ ಈ ಬಡಿಗೆ ಆಟ. ಇಂದಿಗೂ ಶಿವನ ಗಣಗಳು, ಯೋಧರು, ಯುದ್ಧದ ಕುರುಹಾಗಿ ವೀರ ವಿಹಾರವನ್ನು ಮಾಡುತ್ತಾರೆ. ಈಗ್ಗೆ ಸುಮಾರು ವರ್ಷಗಳ ಕೆಳಗೆ ಜನಸಂಖ್ಯೆ ಕಡಿಮೆ ಇದ್ದು, ಈ ಪ್ರದೇಶದಲ್ಲಿ ಚಿರತೆ, ಕರಡಿ ಮುಂತಾದ ಪ್ರಾಣಿಗಳು ಇರುತ್ತಿದ್ದವು. ರಾತ್ರಿಯ ಸಮಯದಲ್ಲಿ ಬೆಟ್ಟಕ್ಕೆ ಬರಬೇಕಾದರೆ ಈ ಪ್ರಾಣಿಗಳ ಭಯಕ್ಕೆ ಕತ್ತಲಲ್ಲಿ ಇಲಾಲುಗಳ ಜೊತೆ ಬಡಿಗೆಗಳನ್ನು ಪ್ರತಿಯೊಬ್ಬರೂ ಹಿಡಿದು ಚಿತ್ರವಾಗಿ ಧ್ವನಿ ಮಾಡುತ್ತ, ಗಿರಿಗೆ ಸೇರುತ್ತಿದ್ದರು. ಇವರು ಮಾಡುವ ಶಬ್ದ, ಜನರ ಗದ್ದಲ, ಬೆಂಕಿಗೆ ಪ್ರಾಣಿಗಳು ಓಡಿ ಹೋಗುತ್ತಿದ್ದವು. ಈ ಕಾರಣಕ್ಕಾಗಿ ಅವರು ಪಂಜು, ಇಲಾಲು, ಹಣಸಿನ ಬಡಿಗೆಗಳನ್ನು ಹಿಡಿದುಕೊಳ್ಳುತ್ತಿದ್ದರು. ಆದರೆ ಕೆಲವರ ವೈಮನಸ್ಸು ಕಸಿ ಮುಂತಾದವುಗಳ ಪರಿಣಾಮವಾಗಿ ಇಂದು ಅದರ ಸ್ವರೂಪವೇ ಬದಲಾಗಿದೆ” ಎಂದು ನೆರಣಿಕೆ ಸುಬ್ರಹ್ಮಣ್ಯಸ್ವಾಮಿ ಯವರು ಹೇಳುತ್ತಾರೆ.

ಬಡಿಗೆ ಆಟದ ಆಚರಣೆ ಹಾಗೂ ವಕ್ತೃಗಳು ಹೇಳಿರುವ ವಿವರಗಳನ್ನು ಗಮನಿಸಿದಾಗ ಕೆಲವು ಅಂಶಗಳು ಸ್ಪಷ್ಟಗೊಳ್ಳುತ್ತವೆ. ಈ ಬಡಿಗೆ ಆಡ ಸುಮಾರು ವರ್ಷಗಳ ಹಿಂದಿನಿಂದಲೂ ಬಂದಿರುವ ಸಾಧ್ಯತೆಗಳಿವೆ. ಕಾರಣ ಪ್ರತಿ ದಸರೆಯ ಬನ್ನಿಗೆ ಪೊಲೀಸ್‌ನವರು ಎಷ್ಟೇ ಬಡಿಗೆಗಳನ್ನು ಕಸಿದುಕೊಂಡರೂ, ಈ ಆಟವನ್ನು ನಿಲ್ಲಿಸಲು ಎಷ್ಟೇ ಪ್ರಯತ್ನಪಟ್ಟರೂ ಅದು ನಿಲ್ಲದೇ ಹಾಗೆ ಸಾಗಿದೆ. ಅತೀ ಪ್ರಾಚೀನದಿಂದ ಸಾಗಿಬಂದಂತಹ ಈ ಆಚರಣೆಯ ಬೇರುಗಳು ಜನಪದರಲ್ಲಿ ಬೇರೂರಿದ್ದು, ಅದನ್ನು ತಡೆದಷ್ಟು ಮತ್ತಷ್ಟು ಗಟ್ಟಿಗೊಳ್ಳುತ್ತಾ ಸಾಗಿದೆ. ಒಟ್ಟಾರೆ ಈ ರೀತಿಯ ಬಡಿಗೆಗಳ ಆಚರಣೆ ನಾವು ಎಲ್ಲಿಯೂ ಕಾಣಲು ಸಿಗದು.

### ೩.೧.೫.೪. ರಥೋತ್ಸವ :

ದಸರಾ ಬನ್ನಿಯಾದ ಮೂರನೇ ದಿನಕ್ಕೆ ದಾಳಿಯ ದಿನ ಸಂಜೆ ಐದರ ಸುಮಾರಿಗೆ ಮಲ್ಲಯ್ಯನ ರಥೋತ್ಸವ ಕಾರ್ಯಕ್ರಮವಿರುತ್ತದೆ. ಕಾರಣಿಕ ಮುಗಿಸಿಕೊಂಡು ತಮ್ಮ ತಮ್ಮ ಊರುಗಳಿಗೆ ತೆರಳಿದ ಭಕ್ತರು ರಥೋತ್ಸವದ ಹೊತ್ತಿಗೆ ಗಿರಿಗೆ ಬಂದಿಳಿಯುತ್ತಾರೆ. ಕೆಲವರು ಬನ್ನಿಗೆ ಬರದೆ ರಥೋತ್ಸವ ಹಾಗೂ ಮುಂದೆ ನಡೆಯುವ ಸರಪಳಿ ಪವಾಡದ ಕಾರ್ಯಕ್ರಮಕ್ಕೆ ಬರುತ್ತಾರೆ. ಒಟ್ಟಾರೆ ಜಾತ್ರೆಯನ್ನು ವೀಕ್ಷಿಸಲು ನಾನಾ ಕಡೆಯಿಂದ ಭಕ್ತರು ಬರುತ್ತಾರೆ. ಜಾತ್ರೆಗೆ ರಥವನ್ನು ವಿಶೇಷವಾಗಿ ಅಲಂಕರಿಸಿರುತ್ತಾರೆ. ರಥದಲ್ಲಿ ಪೂಜಾರಿಗಳಾದವರು ಪಲ್ಲಕ್ಕಿಯಲ್ಲಿ ಕುಳಿತು ಉತ್ಸವದಲ್ಲಿ ಹೊರಡುವ ಶ್ರೀ ಮಾಳಾ-ಮಲ್ಲೇಶ್ವರರ ಮೂರ್ತಿಗಳನ್ನು ಇಟ್ಟು ಸುಮಾರು ಮೂರು -ನಾಲ್ಕು ಜನ ಜೇರ್‍ರ ಕುಟುಂಬದವರೇ ರಥದಲ್ಲಿ ಮಂಗಳಾರತಿ ಮಾಡಿ ಕುಳಿತಿರುತ್ತಾರೆ. ಈ ಮೊದಲೇ ಡೊಳ್ಳಿನವರು ಡೊಳ್ಳನ್ನು ಬಾರಿಸುತ್ತ ರಥದ ಮುಂದೆ ಮನೋಹರವಾಗಿ ಕುಣಿಯುತ್ತಿರುತ್ತಾರೆ. ಈ ಡೊಳ್ಳಿನವರ ಹಿಂದೆ ಪಂಜಿನವರು ಇರಲೇಬೇಕು. ಒಂದೆಡೆ ಕ್ಷೇತ್ರಕ್ಕೆ ಆಗಮಿಸಿದ ಗೊರವರೆಲ್ಲರೂ ಸಾಲುಗಟ್ಟಿ ತೇರಿನ ಮುಂದೆ ಅರ್ಧ ವೃತ್ತಾಕಾರದಲ್ಲಿ

ಪಿಳ್ಳಂಗೋವಿಯನ್ನು ಊದುತ್ತ, ಡಮರುಗವನ್ನು ಬಾರಿಸುತ್ತಾ, ನೃತ್ಯವನ್ನು ಮಾಡುತ್ತಿರುತ್ತಾರೆ. ಇವರುಗಳು ನೃತ್ಯದ ಮಧ್ಯ ಆಕರ್ಷಕವಾಗಿ ಎಗರುವುದು, ನಾಯಿಯಂತೆ ಕಚ್ಚಾಡುವುದು, ತಿನಿಸುಗಳನ್ನು ಕಚ್ಚಾಡುತ್ತ ತಿನ್ನುವುದು ಹೀಗೆ ಕುಣಿತದ ಮಧ್ಯ ಈ ರೀತಿ ಮಾಡುತ್ತಾ ಜನರನ್ನು ಆಕರ್ಷಿಸುತ್ತಾರೆ. ಈ ಗೊರವಯ್ಯನವರ ತಂಡಗಳು ಎರಡು-ಮೂರು ಇರುತ್ತವೆ. ಬಹುತೇಕವಾಗಿ ಪತ್ತಿಕೊಂಡದಿಂದ ಬಂದ ಅನೇಕ ಗೊರವರು ಒಂದೇ ತಂಡವಾಗಿ, ಬಂದು ಪ್ರತ್ಯೇಕ ಚಿಕ್ಕ ತಂಡವಾಗಿ ನೃತ್ಯವನ್ನು ಮಾಡುತ್ತಲೇ ಇರುತ್ತಾರೆ. ಇವರಿಗೆ ಕನ್ನಡ ಭಾಷೆ ಬರದು, ಬರುವುದು ಬರೀ ತೆಲುಗು, ನೃತ್ಯ ಅನೇಕ ಜನರನ್ನು ಆಕರ್ಷಿಸುತ್ತದೆ. ಸಮಯ ಆಗುತ್ತಿದ್ದಂತೇ ಜನರ ಆಗಮನ ಕ್ಷಣದಿಂದ ಕ್ಷಣಕ್ಕೆ ಹೆಚ್ಚುತ್ತಲೇ ಇರುತ್ತದೆ. ರಥದ ಮೇಲೆ ಎರಚಲು ಪುಟ್ಟಿಯಲ್ಲಿಭಂಡಾರದ ಪೊಟ್ಟಣವನ್ನು ಮಾರುವವರು, ಹೂ-ಹಣ್ಣುಗಳನ್ನು ಮಾರುವವರು, ಜನಸಂದಣಿಯನ್ನು ಲೆಕ್ಕಿಸದೆ ಭಕ್ತರ ಖಾಲಿ ಕೈಗಳನ್ನು ಹುಡುಕುತ್ತಲೇ ಸಾಗಿ, ಭಕ್ತರಿಗೆ ಭಂಡಾರ, ಹೂ ಹಣ್ಣುಗಳನ್ನು ನೀಡಿ ಹಣವನ್ನುಪಡೆಯುತ್ತಲೇ ಇರುತ್ತಾರೆ. ಚಿಕ್ಕ ಚಿಕ್ಕ ಹುಡುಗರು ಉಲ್ಲಾಸದಿಂದ ಸ್ಪರ್ಧಾತ್ಮಕವಾಗಿ ಭಂಡಾರವನ್ನು ಮಾರುತ್ತಿರುತ್ತಾರೆ. ಈ ಜನಸಂದಣಿಯು ತೀವ್ರವಾಗುತ್ತಿದ್ದಂತೆ ಡೊಳ್ಳಿನವರು ನಿಗದಿತ ಸಮಯದಲ್ಲಿ ಮೆರವಣಿಗೆಯ ಸಮೇತ ಬ್ರಾಹ್ಮಣರ ಮಂಟಪಕ್ಕೆ ತೆರಳುತ್ತಾರೆ. ಅಲ್ಲಿ ಆಗಲೇ ಬ್ರಾಹ್ಮಣರು ರಥೋತ್ಸವದ ಪೂಜಾ ಕಾರ್ಯಕ್ರಮಕ್ಕೆ ಸಕಲ ಸಿದ್ದತೆಗಳನ್ನು ತಯಾರಿ ನಡೆಸಿ ಸಿದ್ಧವಾಗಿಯೇ ಇರುತ್ತಾರೆ. ಡೊಳ್ಳಿನವರು ಬಂದಾಗ ತಡಮಾಡದೇ ನೆರಣಿಕೆ ಗ್ರಾಮದ ಹಿರಿಯರಾದ ಪುರೋಹಿತ ಸುಬ್ರಹ್ಮಣ್ಯ ಶಾಸ್ತ್ರಿಗಳ ಜೊತೆಗೆ ನಾಲ್ಕೈದು ಜನ ಅವರ ಕುಟುಂಬದವರೇ ಮೆರವಣಿಗೆಯಲ್ಲಿ ಬಂದು ರಥದ ಮುಂದೆ ಸೇರುತ್ತಾರೆ. ನಂತರ ಡೊಳ್ಳಿನವರು ಮತ್ತೆ ಮೆರವಣಿಗೆಯನ್ನು ಬಜಾರದ ಗುಂಟ ಸಾಗಿ ಕುಂಬ ಹೊರುವವರ ಬಳಿಗೆ ನಡೆಯುತ್ತಾರೆ. ಅಲ್ಲಿ ಕುಂಬ ಹೊರಲು ಇಬ್ಬರು ಪುರುಷರು ತಯಾರಾಗಿರುತ್ತಾರೆ. ಇವರು ಜಾತಿಯಿಂದ ಗೊಲ್ಲರು. ಡೊಳ್ಳಿನವರು ರಥದ ಬಳಿಗೆ ಅವರನ್ನು ಕರೆದೊಯ್ಯಲು ಬಂದಾಗ ಒಬ್ಬ ಮುತ್ತೈದೆಯು ಆರತಿ, ಕಳಸವನ್ನು ಹಿಡಿದಿರುತ್ತಾಳೆ. ಅವರ ಹಿಂದೆ ಇಬ್ಬರು ಎರಡು ಪಡುಗ(ಕುಂಬ)ಗಳನ್ನು ಹೊತ್ತುಕೊಂಡು ಬರುತ್ತಾರೆ. ಆ ಕುಂಬಗಳಿಗೆ ಹೊರಗಡೆ ಅಲಂಕಾರಮಾಡಿ ಕಂಠಕ್ಕೆ ಹೂವಿನ ಹಾರವನ್ನು ಸುತ್ತಿರುತ್ತಾರೆ. ಇವೆರಡರಲ್ಲಿ ಒಂದು ಮಲ್ಲಯ್ಯನ ಪಡುಗ, ಇನ್ನೊಂದು ಮಾಳಮ್ಮನ ಪಡುಗ. ಡೊಳ್ಳಿನ ಮೆರವಣಿಗೆಯಲ್ಲಿ ಕುಂಬಗಳು ರಥದ ಬಳಿಗೆ ಬರುತ್ತವೆ. ಆಗ ಪೂರಾ ಬಡವರಾದ ಗೊಲ್ಲರಿಗೆ ಯಾವುದಾದರೂ ಸ್ವಾಮಿಯ ಕಾಯಕವನ್ನು ನೀಡಬೇಕೆಂದೆರೆಸಿ ಇವರಿಗೆ ಕುಂಬಹೋರುವ ಹಕ್ಕನ್ನು ನೀಡಿದಾರಂತೆ. ಈ ರೀತಿ ಕುಂಬಗಳು ರಥವನ್ನು ಎಳೆಯುವ ಮುಂಚೆ ಬರದೇ ಇದ್ದರೆ ರಥವನ್ನು ಎಳೆಯುವ ಹಾಗೆ ಇಲ್ಲ. ಗೊಲ್ಲರು ಕುಂಬಗಳನ್ನು ತಂದಾಗಲೇ ಮುಂದಿನ ಕೆಲಸ. ಇವರಿಗೆ ಧಾನ್ಯಗಳನ್ನು ದಾನವಾಗಿ ನೀಡುತ್ತಾರೆ. ಅಲ್ಲದೇ ಸ್ವಲ್ಪ ದಕ್ಷಿಣೆಯೂ ಸಿಗುತ್ತದೆ. ಜೊತೆಗೆ ಸ್ವಲ್ಪ ಪ್ರಮಾಣದ ಭೂಮಿ ದೇವಸ್ಥಾನದ ವತಿಯಿಂದ ಇವರಿಗೆ ಇನಾಮಾಗಿ ದೊರೆತಿದೆ.

ಕುಂಬಗಳಿಗೆ ಪೂಜೆಯನ್ನು ಸಲ್ಲಿಸಿ ಬ್ರಾಹ್ಮಣರು ಬಲಿಯ ಸಂಕೇತವಾಗಿ ಬೂದು ಕುಂಬಳ ಕಾಯಿಯನ್ನು ಒಡೆಯುತ್ತಾರೆ. ಎಲ್ಲಾ ಪೂಜಾ ವಿಧಿ ವಿಧಾನಗಳೆಲ್ಲ ಮುಗಿದ ಮೇಲೆ ರಥಕ್ಕೆ ಕಟ್ಟಿದ ಎರಡು ಪ್ರತ್ಯೇಕವಾಗಿ ದಪ್ಪನಾದ ಹಗ್ಗವನ್ನು ಭಕ್ತರಿಗೆ ಕೊಡುತ್ತಾರೆ. ಹಗ್ಗಗಳು ಸುಮಾರು ೨೫ ರಿಂದ ೩೦ ಅಡಿಗಳವರೆಗೆ ಉದ್ದ ಇರುತ್ತದೆ. ಈ ಹಗ್ಗವನ್ನು ಭಕ್ತರು ಬಲವಾಗಿ ಹಿಡಿದು ಮಲ್ಲಯ್ಯನ ನಾಮಸ್ಮರಣೆಯೊಂದಿಗೆ, ಆತನ ಘರಾಕನ್ನು ಉದ್ಘೋಷಿಸುತ್ತಾ ರಥವನ್ನು ಎಳೆಯುತ್ತಾರೆ. ರಥ ಮುಂದೆ ಮುಂದೆ ಸಾಗಿದಂತೆ ಭಕ್ತರು ತಾವು ತೆಗೆದುಕೊಂಡ ಭಂಡಾರದ ಪೊಟ್ಟಣಗಳನ್ನು, ಹೂ-ಕಾಯಿ ಗಳನ್ನು ರಥದ ಮೇಲೆ ಹಾಕಿ ಭಕ್ತಿ ಭಾವದಿಂದ ಕೈ ಮುಗಿಯುತ್ತಾರೆ. ರಥವು ಬಜಾರದ ಅರ್ಧದವರೆಗೆ ಸಾಗಿ ಮತ್ತೆ ಅದೇ ತೆರನಾಗಿ ಬಜಾರಗುಂಟ ಬಂದು ಪೂರ್ವದ ಸ್ಥಳದಲ್ಲಿಯೇ ಬಂದು ನಿಲ್ಲುತ್ತದೆ.

ಸಂಜೆ ರಥೋತ್ಸವ ಕಾರ್ಯಕ್ರಮ ಮುಗಿದ ನಂತರ ಭಕ್ತರು ತಮಗೆ ಅನುಕೂಲವಾದ ಸ್ಥಳಗಳನ್ನು ಹುಡುಕಿಕೊಂಡು ವಿಶ್ರಾಂತಿಯನ್ನು ಪಡೆಯುತ್ತಾರೆ. ರಾತ್ರಿ ೧೦ರ ಸುಮಾರಿಗೆ ನಿಂಗದಹಳ್ಳಿ ಗೊರವರು, ದ್ಯಾವಲಾಪುರದ ಗೊರವರು, ಮಂತಾದ ಗೊರವರಿಂದ ಶಿವಸಾನ ಮಂಟಪದ ಮುಂದಿರುವ ಬಯಲಲ್ಲಿ ಭಜನಾ ಕಾರ್ಯಕ್ರಮವಿರುತ್ತದೆ. ಹೆಚ್ಚಾಗಿ ಮಲ್ಲಯ್ಯನ ಮಹಿಮೆಗೆ ಸಂಬಂಧಿಸಿದ ಹಾಡುಗಳನ್ನೆಲ್ಲ ಗೊರವರು ಹಾಡುತ್ತಾರೆ.

### ೫.೧.೫.೫. ಸರಪಳಿ ಪವಾಡ :

ತ್ರಯೋದಶಿಯ ದಿನ ಮುಂಜಾನೆ ಸುಮಾರು ೭-೩೦ರ ಹೊತ್ತಿಗೆ ಶಿವಸಾನ ಮಂಟಪವು ಭಕ್ತರಿಂದ ತುಂಬಿರುತ್ತದೆ. ಗಣಾಚಾರಿಗಳು ಭಕ್ತರು ತಂದ ಮೀಸಲು ದವಸ ಧಾನ್ಯಗಳನ್ನು ಸ್ವೀಕರಿಸಿ ಒಡೆಯರಿಗೆ ನೀಡುತ್ತಾರೆ. ಕಾಯಿಗಳನ್ನು ಒಡೆದು ಭಕ್ತರಿಗೆ ಭಂಡಾರದ ಜೊತೆಗೆ ಅವುಗಳನ್ನು ಹಿಂದಿರುಗಿಸುತ್ತಾರೆ. ಬಲ್ಲೂರಿನಿಂದ ತೆಗೆದುಕೊಂಡು ಬಂದಂತಹ ಸರಪಳಿಯನ್ನು ಗದ್ದಿಗೆಯ ಮುಂದೆ ಇಟ್ಟು ಅದಕ್ಕೆ ಗಣಾಚಾರಿಗಳು ಪೂಜೆಯನ್ನು ಸಲ್ಲಿಸುತ್ತಾರೆ. ಹೊತ್ತು ಏರುತ್ತಿದ್ದಂತೆ ಸರಪಳಿ ಪವಾಡದ ಕಾರ್ಯಕ್ರಮವನ್ನು ವೀಕ್ಷಿಸಲು ಬಂದಭಕ್ತರು ಮಂಟಪಗಳ ಮೇಲೆ, ಮೂರು ಮಹಡಿಯ ಕಟ್ಟಡದ ಮೇಲೆ, ಶಿವಸಾನ ಮಂಟಪದ ಎಡಭಾಗದಲ್ಲಿರುವ ಆಲದ ಮರದ ಕಟ್ಟೆಯ ಮೇಲೆ ತಮಗೆ ಅನುಕೂಲವಾದ ಕಡೆಗೆಲ್ಲ ಜನರು ನಿಂತುಕೊಂಡು ಪವಾಡವನ್ನು ವೀಕ್ಷಿಸಲು ಸಿದ್ಧರಾಗುತ್ತಾರೆ. ಅದೇ ವೇಳೆಗೆ ಗೊರವರಿಂದ ನೃತ್ಯ ಪ್ರರಂಭ ವಾಗುತ್ತದೆ. ಗೊರವರು ತಂಡಗಳಂತೆ ವೃತ್ತಾಕಾರವಾಗಿ ನಿಂತು ಪಿಳ್ಳಂಗೋವಿ ಮತ್ತು ಡಮರುಗದ ತಾಳಕ್ಕೆ ತಕ್ಕಂತೆ ಕುಣಿದು ಜನರನ್ನು ರಂಜಿಸುತ್ತಿರುತ್ತಾರೆ. ಇವರ ಕುಣಿತವನ್ನು ಭಕ್ತರು ವೀಕ್ಷಿಸಿ ಆ ಪರಶಿವನೇ ಭೂಲೋಕಕ್ಕೆ ಇಳಿದು ಬಂದು ನರ್ತಿಸುತ್ತಿರುವನೇನೋ ಎಂದು ಭಾವಿಸುತ್ತಾರೆ. ಕುಣಿಯುತ್ತಿರುವಾಗ ಗೊರವಯ್ಯನವರ ಮೇಲೆ ಭಕ್ತರು ಭಂಡಾರವನ್ನು ಎರಚುತ್ತಾರೆ. ಅನೇಕ ಭಕ್ತರು ಬೆಂಡು, ಬತ್ತಾಸು,

ಬಾಳೆಹಣ್ಣು ಹಾಗೂ ಇತರೆ ತಿನಿಸುಗಳನ್ನು ಗೊರವಪ್ಪನವರಿಗೆ ತಿನಿಸುತ್ತಾರೆ. ಅವರು ನಾಯಿಯಂತೆ ಇತರ ಗೊರವಯ್ಯನವರೊಂದಿಗೆ ಕಚ್ಚಾಡುತ್ತಾ ಕಿತ್ತು ತಿನ್ನುತ್ತಾರೆ. ಕೆಲವರು ಹರಕೆ ಹೊತ್ತವರು ಚಿಕ್ಕ ಮುಳ್ಳಿಂದ ಗೊರವರಿಗೆ ತಿನಿಸುಗಳನ್ನು ತಿನ್ನಿಸುತ್ತಾರೆ. ಗೊರವರು ನಾಯಿಯಂತೆ ಅಣಕ ಮಾಡುತ್ತಾ ತಿನ್ನುವುದು ನೋಡುಗರಿಗೆ ಅಸಹ್ಯ ಏನನ್ನೂ ಹುಟ್ಟಿಸದೆ ಮಲ್ಲಯ್ಯನೇ ಭಕ್ತರ ಆಹಾರವನ್ನು ಸ್ವೀಕರಿಸುತ್ತಿರುವನು ಎಂದು ಜನರು ತಿಳಿದುಕೊಳ್ಳುತ್ತಾರೆ. ತಮ್ಮ ಕೈಯಿಂದ ಆಹಾರವನ್ನು ಮಲ್ಲಯ್ಯ ಕಸಿದುಕೊಂಡು ತಿನ್ನುತ್ತಿರುವುದು ಜನರಿಗೆ ಅಷ್ಟೇ ಸಂತೃಪ್ತಿಯನ್ನು ತಂದು ಕೊಡುತ್ತದೆ. ಆ ಮೂಲಕ ಭಕ್ತರು ಗೊರವರಿಗೆ ತಿನಿಸುಗಳನ್ನು ತಿನ್ನಿಸಿ ಅಂದುಕೊಂಡ ಹರಕೆಯನ್ನು ಪೂರೈಸಿಕೊಳ್ಳುತ್ತಾರೆ.

ಕೆಲ ಗೊರವರು ಹಾಗೂ ಗಣಾಚಾರಿಗಳು ಶಿವಸಾನ ಗದ್ದಿಗೆಗೆ ಸರಿಯಾಗಿ ದೇವರುಗಳ ಎದುರಿಗೆ ನಿಂತು ಒಡಪುಗಳನ್ನು ಆವೇಷ ಭರಿತವಾಗಿ ನುಡಿಯುತ್ತಾರೆ. ಗಣಾಚಾರಿಗಳು ಎಷ್ಟೆಷ್ಟು ಆವೇಷ ಭರಿತರಾಗಿ ಒಡಪುಗಳನ್ನು ಹೇಳುತ್ತಾರೆಯೋ, ಅಷ್ಟೇ ಆವೇಶ ಭರಿತರಾಗಿ ಇತರ ಗೊರವರು ಭಲೆ, ಭಲೆ ಅಂತಾನೇ ಅವರನ್ನು ಪ್ರೋತ್ಸಾಹಿಸುತ್ತಿರುತ್ತಾರೆ. ಅಲ್ಲದೇ ಭಕ್ತರು ಒಡಪು ಹೇಳುವವರು ಮೈಮೇಲೆ ಮಲ್ಲಯ್ಯ ಎಂದು ಕೂಗುತ್ತಾ ಭಂಡಾರವನ್ನು ಎರಚುತ್ತಾರೆ. ಭಂಡಾರವು ಮೈಮೇಲೆ ಬಿದ್ದಂತೆಲ್ಲ ಅವರು ಮತ್ತಷ್ಟು ಆವೇಷ ಭರಿತರಾಗಿ ಒಡಪುಗಳನ್ನೊ ಒಬ್ಬರಾದ ಮೇಲೆ ಒಬ್ಬರಂತೆ ನುಡಿಯುತ್ತಲೇ ಇರುತ್ತಾರೆ.

ಒಂದು ಕಡೆ ಶಿವಸಾನ ಗದ್ದಿಗೆಗೆ ಭಕ್ತರು ಬಂದು ಕಾಯಿ ಕರ್ಪೂರ ಮೀಸಲುಗಳನ್ನು ಅರ್ಪಿಸಿ, ಒಡೆಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಭಂಡಾರವನ್ನು ಪಡೆಯುವುದರಲ್ಲಿಯೇ ನಿರತರಾಗಿರುತ್ತಾರೆ. ಒಡೆಯರು ಅದೆಷ್ಟೇ ಭಕ್ತರು ಬಂದರೂ ಅಷ್ಟೇ ಹಸನ್ಮುಖರಾಗಿಯೇ ಅವರಿಗೆ ಆಶೀರ್ವಾದ ಮಾಡಿ ಭಂಡಾರವನ್ನು ಅವರ ಹಣೆಗೆ ಇಟ್ಟು ಅವರ ಕೈಗೆ ಒಂದಿಷ್ಟು ಭಂಡಾರವನ್ನು ನೀಡುತ್ತಾರೆ. ಒಂದು ಕ್ಷಣವೂ ಬಿಡದಂತೆ ಭಕ್ತರು ಒಡೆಯರ ದರ್ಶನಕ್ಕೆ ಬರುತ್ತಲೇ ಇರುತ್ತಾರೆ.

ಸರಪಳಿ ಪವಾಡದ ಸಮಯ ಹತ್ತಿರವಾಗುತ್ತಿದ್ದಂತೆಯೇ ಜನರ ನೂಕು ನುಗ್ಗಲನ್ನು ನಿಯಂತ್ರಿಸಲು ಅಸಾಧ್ಯವಾಗಿಬಿಡುತ್ತದೆ. ಅದೇ ವೇಳೆಯಲ್ಲಿ ಸುಮಾರು ಐದು- ಆರು ಜನ ಕುದುರೆಕಾರರು ಆವೇಶ ಭರಿತರಾಗಿ ತಮ್ಮ ಎರಡೂ ಕೈಗಳಲ್ಲಿ ಚಾಟಿ (ಬಾರುಕೋಲು) ಗಳನ್ನು ಹಿಡಿದು ಡೊಳ್ಳಿನ ಪೆಟ್ಟಿಗೆ ಕುಣಿಯುತ್ತಾ ತಮಗೆ ತಾವೇ ಹೊಡೆದುಕೊಂಡು ಭಕ್ತರ ಮೇಲೆ ಚಾಟಿಯನ್ನು ಬೀಸುತ್ತಾ ಹೋಗುತ್ತಾರೆ. ಆಗ ಜನರು ಆ ಚಾಟಿಯ ಹೊಡೆತ ತಮಗೂ ಬೀಳುತ್ತದೆಂದು ದಿಕ್ಕೆಟ್ಟು ಓಡುತ್ತಿರುತ್ತಾರೆ. ಒಂದು ಕಡೆ ಓಡಿಸಿದರೆ ಮತ್ತೊಂದು ಕಡೆ ಸೇರುತ್ತಾರೆ. ಈ ಎಲ್ಲಾ ಕಾರ್ಯಗಳ ಮಧ್ಯ ಗದ್ದಿಗೆಯಲ್ಲಿರುವ ಸರಪಳಿಗೆ ಗಣಾಚಾರಿಗಳಿಂದ ಪೂಜಾ ಕಾರ್ಯಕ್ರಮ ನೆರವೇರಿಸುತ್ತಾರೆ. ಸ್ವಾಮಿಗೆ ಮಂಗಳಾರತಿ ಬೆಳಗಿದ ಮೇಲೆ ಗಣಾಚಾರಿಗಳು ಶಿವಸಾನ

ಕಟ್ಟೆಗೆ ಹೊಂದಿಕೊಂಡಿರುವ ಕಂಬದ ಬಳಿಗೆ ಸರಪಳಿಯನ್ನು ಒಯ್ದು ಕಟ್ಟುತ್ತಾರೆ. ಸರಪಳಿ ಪವಾಡ ಮಾಡುವಾತ ಬಲ್ಲೂರಿನ ಕರಡಿಗೊರವರಾಗಿದ್ದಾರೆ. ಇವರೇ ಪ್ರತಿವರ್ಷ ಸರಪಳಿಯನ್ನು ಹರಿಯುವುದು. ಸರಪಳಿ ಪವಾಡದಾತ ಗದ್ದಿಗೆಯಲ್ಲಿಯ ದೇವರ ಉತ್ಸವ ಮೂರ್ತಿಗಳಿಗೆ ನಮಸ್ಕರಿಸಿ. ಒಡೆಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆದು ಸರಪಳಿಯ ಹತ್ತಿರ ಬರುತ್ತಾರೆ. ಸರಪಳಿಯು ಕಬ್ಬಿಣದಿಂದ ತಯಾರಾಗಿದ್ದು, ಸುಮಾರು ೫ ರಿಂದ ೬ ಅಡಿಗಳಷ್ಟು ಉದ್ದವಿರುತ್ತದೆ. ಕಂಬಕ್ಕೆ ಕಟ್ಟಿದ ಸರಪಳಿಯ ತುದಿಯನ್ನು ಪವಾಡದಾರ ಗಟ್ಟಿಯಾಗಿ ಹಿಡಿದು ದೇವರ ಕಡೆಗೆ ಮುಖವನ್ನು ಮಾಡಿ ಭಕ್ತಿಯಿಂದ ಪರವಶನಾಗುತ್ತಾನೆ. ಒಂದೆಡೆ ಡೊಳ್ಳಿನವರ ಶಬ್ದ. ಮತ್ತೊಂದೆಡೆ ಭಕ್ತರು ಭಂಡಾರವನ್ನು ಪವಾಡದಾರನ ಮೇಲೆ ಎರಚುತ್ತಾ ಮತ್ತಷ್ಟು ಆವೇಷ ಭರಿತನನ್ನಾಗಿಸುತ್ತಾರೆ. ಉಳಿದಂತೆ ಎಲ್ಲಾ ಭಕ್ತರು ಸರಪಳಿ ಹರಿಯುವ ದೃಶ್ಯ ಕಾಣಲು ಹವಣಿಸುತ್ತಿರುತ್ತಾರೆ. ಆದರೆ ಪವಾಡದಾರನ ಸುತ್ತಲೂ ಜನರು ತುಂಬಿದ್ದು ಬೇರೆಯವರಿಗೆ ಅದು ಅಷ್ಟಾಗಿ ಕಾಣಲು ಸಾಧ್ಯವೇ ಇಲ್ಲವಾಗುತ್ತದೆ. ಈ ಸರಪಳಿಯು ಎರಡು, ಮೂರು, ಇಲ್ಲ ನಾಲ್ಕೈದು ಏಟಿಗೆ ಹರಿಯುತ್ತದೆ. ಯಾವಾಗ ಸರಪಳಿ ಹರಿಯುತ್ತದೆಯೋ ಆಗ ಭಕ್ತರು ಹರ್ಷೋದ್ಗಾರದಿಂದ ಚಪ್ಪಾಳೆಯನ್ನು ತಟ್ಟುತ್ತಾರೆ. ಪವಾಡದಾರನಿಗೆ ಹೂವಿನಹಾರವನ್ನು ಹಾಕಿ ಆತನನ್ನು ಜನರಿಗೆ ಕಾಣುವ ಹಾಗೆ ಮೇಲೆತ್ತುತ್ತಾರೆ. ಹರಿದ ಸರಪಳಿಯ ತುಂಡನ್ನು ಜನರಿಗೆ ತೋರಿಸುತ್ತಾ ಸಾಹಸವನ್ನು ಮೆರೆಯುತ್ತಾರೆ. ಆಗ ಭಂಡಾರ ಉಗ್ಗುವಿಕೆ ಭಕ್ತರಿಂದ ಇನ್ನಷ್ಟು ಜೋರಾಗಿಯೇ ನಡೆಯುತ್ತದೆ. ಈ ಸರಪಳಿ ಪವಾಡ ಕಾರ್ಯಕ್ರಮ ಮುಗಿಯುವ ವೇಳೆಗೆ ಸಮಯ ಆಗಲೇ 9.30 ಆಗಿರುತ್ತದೆ. ಪವಾಡದ ನಂತರ ಭಕ್ತರೆಲ್ಲರೂ ಚದುರಿ ಹೋಗುತ್ತಾರೆ.

ಇತ್ತ ಪ್ರತ್ಯೇಕವಾಗಿ ಗೊರವಯ್ಯನವರಿಗೆ ಹಾಲು ಹಣ್ಣು ತಿನಿಸುಗಳನ್ನು ದೋಣಿಗೆ ಭಕ್ತರು ತುಂಬಿಸಿ ಇಷ್ಟಾರ್ಥಗಳನ್ನು ಸಿದ್ದಿಸಿಕೊಳ್ಳುತ್ತಾರೆ. ಕೆಲ ಭಕ್ತರು ದೋಣಿಗೆ ದಕ್ಷಿಣೆಯನ್ನು ಹಾಕಿ ಗೊರವರಿಂದ ದೋಣಿಯಲ್ಲಿಯ ಪ್ರಸಾದವನ್ನು ಪ್ರಸಾದದ ರೂಪವಾಗಿ ಪಡೆದುಕೊಳ್ಳುತ್ತಾರೆ. ಹೀಗೆ ಕೆಲವೊತ್ತು ಒಗ್ಗ ಸೇವೆ ಕಾರ್ಯಕ್ರಮ ನಡೆಯುತ್ತದೆ. ಎಲ್ಲಾ ಗೊರವರ ದೋಣಿಗಳು ತುಂಬಿ ಅದನ್ನ ಪ್ರಸಾದವಾಗಿ ಭಕ್ತರಿಗೆ ನೀಡಿ ಗೊರವರು ಭಕ್ತರನ್ನು ಆಶೀರ್ವದಿಸುತ್ತಾರೆ.

ಈ ಎಲ್ಲಾ ಕಾರ್ಯಕ್ರಮಗಳು ಮುಗಿದ ಮೇಲೆ ಭಕ್ತರು ತಮ್ಮ ಮಂಟಪಗಳಿಗೆ ತೆರಳುತ್ತಾರೆ. ಹೊನ್ನಿಕೆರೆಯ ಸುತ್ತಮುತ್ತ ಅನೇಕ ಭಕ್ತರು ಹರಕೆಯಂತೆ ದಾಸೋಹವನ್ನು ಏರ್ಪಡಿಸುತ್ತಾರೆ. ದಾಸೋಹ ಪ್ರಾರಂಭಕ್ಕೆ ಮುಂಚೆ ನಾಲ್ಕೈದು ಜನ ಗಣಾಚಾರಿಗಳು ಬಂದು ಪೂಜಾ ಕಾರ್ಯವನ್ನು ಮಾಡಿ ಸ್ವಾಮಿ ಮಲ್ಲಯ್ಯ ಪದಗಳನ್ನು ಹಾಡಿ ಡಮರುಗ ಬಾರಿಸಿದ ನಂತರ ಮೊದಲು ಗುರುಗಳಿಗೆ ಊಟವನ್ನು ಬಡಿಸುತ್ತಾರೆ. ನಂತರ ಭಕ್ತರನ್ನು ಕರೆದು ಊಟಕ್ಕೆ ಆಹ್ವಾನಿಸುತ್ತಾರೆ. ಈ ರೀತಿ ಹರಕೆಯಂತೆ ದಾಸೋಹ ನೀಡುವ ಮೂಲಕ ಗುರುಗಳಿಗೆ, ಭಕ್ತರಿಗೆ ಸೇವೆಯನ್ನು ಮಾಡುತ್ತಾರೆ.

## ೩೧.೫.೬. ಓಕುಳಿ ಆಟ (ಬಸಿವೇರ ಆಟ):

ಅದೇ ದಿನ ಮದ್ಯಾಹ್ನ ೨.೩೦ರ ಸುಮಾರಿಗೆ ಶಿವಸಾನಕಟ್ಟೆಯ ಮುಂದೆ ವಸಂತೋತ್ಸವ ಕಾರ್ಯಕ್ರಮವಿರುತ್ತದೆ. ಕಾರಣ ಇಲ್ಲಿಯವರೆಗೆ ನಡೆದ ಬನ್ನಿಯ ಕಾರ್ಯ, ಕಾರಣಿಕ, ರಥೋತ್ಸವ, ಶಸ್ತ್ರಪವಾಡ, ಒಗ್ಗರಾಟ, ಮುಂತಾದವುಗಳೆಲ್ಲ ಅತ್ಯಂತ ವಿಜೃಂಭಣೆಯಿಂದ ಸಾಂಗೋಪಾಂಗವಾಗಿ ನೆರವೇರಿದವು ಅನ್ನುವ ಸಂತೋಷಕ್ಕೆ ಓಕುಳಿ ಆಟವನ್ನು ಏರ್ಪಡಿಸಿರುತ್ತಾರೆ.

ಈ ಕಾರ್ಯಕ್ರಮವನ್ನು ಬಸಿವೇರ ಆಟ ಎಂತಲೂ ಕರೆಯುತ್ತಾರೆ. ಇವರು ಹರಿಜನದವರು. ಸ್ವಾಮಿಮಲ್ಲಯ್ಯರಿಗೆ ಸೇವೆ ಮಾಡುವ ಸಲುವಾಗಿ ತಮ್ಮನ್ನು ತಾವು ದಾಸಿಯರೆಂದು ಕರೆದುಕೊಂಡು ಒಡೆಯರಿಂದ ಬಸಿವೆಯರಾಗಿ ದೀಕ್ಷೆಯನ್ನು ಪಡೆದುಕೊಂಡಿರುವರು. ಇವರಿಗೆ ಅಮಾವಾಸೆಯಾದ 5ನೇ ದಿನಕ್ಕೆ ಹೊನ್ನಿಕೆರೆಯಲ್ಲಿ ಕಂಕಣವಿದೆ. ಶಮೀವೃಕ್ಷದ ಬಳಿ ದೇವರು ಬನ್ನಿಮುಡಿದ ನಂತರ ವಾಲಗ ಹಾಕುವ ಕಾಯಕ ಇವರದಾಗಿದೆ. ಅದು ಜಿಟ್ಟರೇ ಕ್ಷೇತ್ರದ ಬಸವಿಯರೆಲ್ಲ ಸೇರಿ ನಡೆಸಿಕೊಡುವ ಕಾರ್ಯಕ್ರಮ ಬಸಿವೆಯರ ಆಟ ಅಥವಾ ಓಕುಳಿ ಆಟವಾಗಿದೆ. ಈ ಓಕುಳಿ ಆಟಕ್ಕೆ ಬಸಿವೆಯರು ಬಿಳಿಯ ಸೀರೆ ಮತ್ತು ಬಿಳಿಯ ಕುಪ್ಪಸವನ್ನೇ ತೊಡಬೇಕು. ಮದ್ಯಾಹ್ನ ೨ಗಂಟೆಯ ಸುಮಾರಿಗೆ ಡೊಳ್ಳು ಮತ್ತು ಪಂಜಿನವರು ಸಿದ್ದರಾಗಿರುತ್ತಾರೆ. ಯಾವಾಗ ಡೊಳ್ಳಿನ ಶಬ್ದ ಆಗುತ್ತಲಿದೆಯೆಂದರೆ ಆಗ ಓಕುಳಿ ಆಟ ಪ್ರಾರಂಭವಾಗುತ್ತದೆ ಎಂದು ಅರ್ಥ. ಈ ವೇಳೆಗಾಗಲೇ ಭಕ್ತರು ಮತ್ತೊಮ್ಮೆ ಶಿವಸಾನ ಮಂಟಪದ ಬಳಿ ಸೇರಿ ಓಕುಳಿ ಆಟ ನೋಡಲು ಉತ್ಸುಕರಾಗಿರುತ್ತಾರೆ. ಬಸಿವೆಯರೆಲ್ಲರೂ ಶಿವಸಾನ ಮಂಟಪದ ಬಯಲಲ್ಲಿ ಕಲೆತು ಸ್ವಾಮಿ ಮಲ್ಲಯ್ಯನಿಗೆ ವಾಲಗವನ್ನು ಹಾಕುತ್ತಿರುತ್ತಾರೆ. ಡೊಳ್ಳಿನ ಪೆಟ್ಟುಜಾಸ್ತಿ ಆದಂತೆ ಅಗಸರು ಓಕುಳಿಯನ್ನು ಅಲ್ಯುಮಿನಿಯಂನ ದೊಡ್ಡದಾದ ಪಾತ್ರೆಯಲ್ಲಿ ಸಿದ್ಧಮಾಡಿಟ್ಟು ಬಸವಿ ಹತ್ತಿರ ಬರುತ್ತಾರೆ. ಅಗಸರು ಬಸವಿಯರನ್ನು ಹೊತ್ತು ಒಂದೈದು ಹೆಜ್ಜೆಯನ್ನು ಕುಣಿಸಿ ಇಳಿಸುತ್ತಾರೆ. ಹೀಗೆ ಕುಣಿಸುವಾಗ ಡೊಳ್ಳಿನ ಬಡಿತ ಮತ್ತಷ್ಟು ಜೋರಾಗಿರುತ್ತದೆ. ಆ ಬಡಿತದ ತಾಳಕ್ಕೆ ಅಗಸರು ಕುಣಿಯುತ್ತಿದ್ದಂತೆ ಭಕ್ತರು ಭಂಡಾರವನ್ನು ಅಗಸರು ಮತ್ತು ಬಸವಿಯರ ಮೇಲೆ ಎರಚುತ್ತಾರೆ. ಕೆಲ ಬಸವಿಯರಿಗೆ ಮೈದುಂಬುವ ಸಂದರ್ಭಗಳೂ ಬರುತ್ತವೆ. ಹೀಗೆ ಸ್ವಲ್ಪ ಹೊತ್ತು ಕುಣಿದ ಮೇಲೆ ಅಗಸರು ಓಕುಳಿಯನ್ನು ತಂದು ಬಸವಿಯರ ಮೇಲೆ ಮತ್ತು ನೆರೆದ ಭಕ್ತರ ಮೇಲೆ ಎರಚುತ್ತಾರೆ. ಜನರು ಓಕುಳಿಯಿಂದ ತಪ್ಪಿಸಿಕೊಂಡರೂ ಬಿಡದೆ ಓಕುಳಿಯನ್ನು ಹಾಕುತ್ತಾರೆ.

ಒಂದು ಕಡೆ ಓಕುಳಿಯ ಕಾರ್ಯಕ್ರಮ ನಡೆಯುತ್ತಿರುತ್ತಿದ್ದಂತೆಯೇ ಈ ಕಡೆ ಗದ್ದಿಗೆಯಲ್ಲಿ ದೇವರ ಮೂರ್ತಿಗಳಿಗೆ ಮತ್ತೊಮ್ಮೆ ಮಹಾ ಮಂಗಳಾರತಿಯ ಕಾರ್ಯಕ್ರಮ ಜರುಗುತ್ತದೆ. ಈ ಮಂಗಳಾರತಿ ಮುಗಿಯುತ್ತಿದ್ದಂತೆ ದೇವರ ಉತ್ಸವ ಮೂರ್ತಿಗಳನ್ನು ಎಬ್ಬಿಸುತ್ತಾರೆ. ಬನ್ನಿಯ ದಿನ ಉತ್ಸವ ಮೂರ್ತಿಗಳ

ಮೆರವಣಿಗೆ ಯಾವ ರೀತಿ ನಡೆಯುತ್ತಿತ್ತೋ ಅದೇ ರೀತಿಯಾಗಿ ದೇವರ ಉತ್ಸವ ಮೂರ್ತಿಗಳನ್ನು ಹೋರಲು ನೂಕು ನುಗ್ಗಲುಗಳಾಗುತ್ತವೆ. ಈ ಸಮಯದಲ್ಲಿ ಕೆಲವರು ಬಡಿಗೆಗಳನ್ನು ತಂದಿರುತ್ತಾರೆ. ಅದು ಬೆರಳೆಣಿಕೆಯಷ್ಟು. ಅದು ಬಡಿಗೆಗಳನ್ನು ತರಬೇಕೆಂಬ ನಿಯಮಗಳೇನು ಇಲ್ಲ. ಈ ಸಂದರ್ಭದಲ್ಲಿ ಬಡಿದಾಟಗಳಾದರೆ ಕೇಸುಗಳಾಗುತ್ತವೆ. ದೇವರನ್ನು ಹೊತ್ತು ಗಿರಿಗೆ ಸಾಗಿಸುವಾಗಲೂ ದೇವರನ್ನು ಹೋರುವ ಪೈಪೋಟಿಯಲ್ಲಿಯೇ ಕೆಲ ಚಿಕ್ಕ ಪುಟ್ಟ ಗಲಾಟೆಗಳು ಸಂಭವಿಸುತ್ತವೆ. ಈ ಗಲಾಟೆಯೊಳಗೇನೆ ದೇವರುಗಳನ್ನು ಗಿರಿಯ ಮೇಲೆ ತೆಗೆದುಕೊಂಡು ಹೋಗುವರು. ಅಲ್ಲಿ ಪುರೋಹಿತರಿಂದ ಮೂಲ ವಿರಾಟಗೆ ಮಂಗಳಾರತಿ ಮಾಡುವರು. ಅಲಂಕಾರ ಮಾಡಿದ ಆಭರಣಗಳು, ವಿಶೇಷ ವಸ್ತ್ರಗಳನ್ನು ತೆಗೆದು ಉತ್ಸವ ವಿಗ್ರಹಗಳನ್ನು ಕಾಡುಸಿದ್ದಪ್ಪನ ಮಠದಲ್ಲಿ ತಂದು ಸೇರಿಸುತ್ತಾರೆ. ಅದೇ ದಿನ ಸಂಜೆ ಮಾದರ ಮಲ್ಲಪ್ಪನ ಗುಡಿಯ ದೇವರುಗಳು ಮತ್ತು ಬ್ಯಾಗಾರ ಗುಡಿಯ ದೇವರ ಗುಡಿಯಲ್ಲಿ ಮಂಗಳಾರತಿ ಕಾರ್ಯಕ್ರಮ ಮಗಿದ ನಂತರ ದೇವರುಗಳನ್ನು ಎಬ್ಬಿಸುತ್ತಾರೆ. ಮೆರವಣಿಗೆಯ ಮೂಲಕ ಭಕ್ತರು ವಿಜೃಂಭಣೆಯಿಂದ ದೇವರುಗಳು ನೆರಣಿಕೆ ಗ್ರಾಮವನ್ನು ತಲುಪುತ್ತದೆ. ಊರಿಗೆ ತಲುಪಿದಾಗ ಮತ್ತೆ ಊರಿನ ತುಂಬೆಲ್ಲ ದೇವರನ್ನು ಹೊತ್ತು ಮೆರವಣಿಗೆ ನಡೆಸಿ ತಮ್ಮ ತಮ್ಮ ಗುಡಿಗಳನ್ನು ಸೇರುತ್ತದೆ. ಮರುದಿನ ಬೆಳಿಗ್ಗೆ ಸ್ವಾಮಿಯ ಭಂಡಾರದಿಂದ ದೇವರುಗಳಿಗೆ ಸ್ನಾನ ಮಾಡಿಸಿ ದೇವರ ಗದ್ದಿಗೆಯ ಮ್ಯಾಲೆ ಕೂಡಿಸುತ್ತಾರೆ. ಈ ದೇವರುಗಳು ಮತ್ತೆ ಬನ್ನಿ ಬರುವವರೆಗೆ ಗದ್ದಿಗೆಯನ್ನಿಳಿಯುವುದಿಲ್ಲ. ಅದೇನಿದ್ದರೂ ಮತ್ತೆ ಬನ್ನಿ ಬಂದಾಗಲೇ.

ಮಾರನೆಯ ಚತುರ್ದಶಿಯ ದಿನದಂದು ಗಿರಿಯಲ್ಲಿ ಕಾಡ ಸಿದ್ದಪ್ಪನ ಮಠದಲ್ಲಿ ಇರುವ ಉತ್ಸವ ಮೂರ್ತಿಗಳು ನೆರಣಿಕೆ ಗ್ರಾಮ ಪ್ರವೇಶ ಮಾಡಿ ಊರಿನ ಆಂಜನೇಯ ಸ್ವಾಮಿ ದೇವಾಲಯದಲ್ಲಿ ಇಡುವರು. ಆ ದಿನ ಸಾಯಂಕಾಲ ಗ್ರಾಮಸ್ಥರೆಲ್ಲರೂ ಸೇರಿ ಡೊಳ್ಳು ಬಾಜಾ ಭಜಂತ್ರಿ ಮೊಂತಾದ ವಾದ್ಯಗಳಿಂದ ಉತ್ಸವ ಮೂರ್ತಿಗಳ ಮೆರವಣಿಗೆಯ ಕಾರ್ಯಕ್ರಮ ಅತಿ ವೈಭವದಿಂದ ನಡೆಸುತ್ತಾರೆ. ಊರಿನಲ್ಲಿರುವ ಪ್ರತಿ ದೇವಸ್ಥಾನದ ಬಳಿ ದೇವರುಗಳು ಪ್ರವೇಶಿಸಿ ಮಂಗಳಾರತಿ ದೀಪಾರಾಧನೆ ಕಾರ್ಯಕ್ರಮವನ್ನು ನೆರವೇರಿಸಿ ಮುಂದೆ ಸಾಗುತ್ತದೆ. ಕೊನೆಯಲ್ಲಿ ಉತ್ಸವ ಮೂರ್ತಿಗಳಿಗೆ ಪುರೋಹಿತರಿಂದ ಮಂಗಳಾರತಿ, ಸ್ವಸ್ತಿವಾಚನ ಇತ್ಯಾದಿಗಳನ್ನು ವೇದ ಮಂತ್ರಗಳಿಂದ ಮಾಡಿ ಅಲ್ಲಿ ಬಂದಿರುವಂತಹ ಸಮಸ್ತ ಕಾರ್ಯಕರ್ತರಿಗೂ, ಭಕ್ತರಿಗೂ ಪ್ರಸಾದಗಳು ಹಂಚಲ್ಪಡುವುದು. ಆ ದಿವಸ ಬನ್ನಿ ಉತ್ಸವ ಪ್ರಾರಂಭದಿಂದ ಇಂದಿನವರೆಗೆ ಜರುಗಿರುವ ಕಾರ್ಯಕ್ರಮಗಳು ಜರುಗಿರುವ ವಿಷಯವನ್ನು ಪ್ರಸ್ತಾಪಿಸಿ ಮುಂದೆ ಜರುಗುವ ಬಗ್ಗೆ ಗಮನ ಕೊಟ್ಟು ಹಿಂದಿ ಜರುಗಿರುವ ಲೋಪದೋಶಗಳನ್ನು ಸರಿಪಡಿಸಿ ಮುಂಜಾಗ್ರತೆಯನ್ನು ತೆಗೆದುಕೊಂಡು ಇನ್ನು ಇಷ್ಟು ಉತ್ಸಾಹದಿಂದ ಮುಂದೆ ಕಾರ್ಯಕ್ರಮಗಳು ಜರುಗಬೇಕೆಂದು ಎಲ್ಲರೂ ಸಂಕಲ್ಪ ಮಾಡುವರು. ತದ ನಂತರ ದೇವರ ಉತ್ಸವ ಮೂರ್ತಿಗಳು ದೇವರ ಮನೆಯನ್ನು ಪ್ರವೇಶಿಸುತ್ತವೆ. ಅಲ್ಲಿಗೆ ಕಾರ್ಯಕರ್ತರಿಗೆ, ಭಕ್ತರಿಗೆ, ಟ್ರಸ್ಟ್‌ನವರಿಗೆ, ಊರಿನ ಹಿರಿಯ ಗೌಡರು, ಸರಪಂಚರಿಗೆ ದೇವರ ಕಾರ್ಯಕ್ರಮಗಳ ಜವಾಬ್ದಾರಿ ಮುಗಿದಂತೆ. ಮತ್ತೇನಿದ್ದರೂ ಅದು ಮುಂದಿನ ದಸರಾ ಬನ್ನಿಗೆ.

## ೫.೨. ಜೀವನಾವರ್ತನದ ಆಚರಣೆಗಳು :-

ಮನುಷ್ಯನಿಗೆ ಹುಟ್ಟು ಎಷ್ಟು ಸಹಜವೋ, ಸಾವು ಅಷ್ಟೇ ಸಹಜ. ಮನುಷ್ಯ ಹುಟ್ಟಿನಿಂದ ಸಾಯುವತನಕ ಒಂದಲ್ಲ ಒಂದು ರೀತಿಯಲ್ಲಿ ಬದುಕಿಗಾಗಿ ತನ್ನ ಜೀವನವನ್ನು ಸವೆಸಿ, ಕೊನೆಯುಸಿರೆಳೆಯುತ್ತಾನೆ. ಹೀಗೆ ಮನುಷ್ಯ ಬದುಕುವ ರೀತಿಯನ್ನು ಜೀವನ ಎನ್ನುತ್ತೇವೆ. ಆವರ್ತನ ಎಂದರೆ; ಮರುಕಳಿಸುವುದು, ಪುನರಾಗಮನ ಎಂಬ ಇತ್ಯಾದಿ ಅರ್ಥ ಹೊಂದಿದ್ದು, ಅದು ವೃತ್ತಾಕಾರವಾಗಿ ತಿರುಗುವಂತಹುದು. ಅಂದರೆ ಮನುಷ್ಯನ ಜೀವನದ ಹಂತಗಳಾದ ಜನನ, ನಾಮಕರಣ, ಯೌವ್ವನ, ಮದುವೆ, ವೃದ್ಧ್ಯಾಪ್ಯ , ಸಾವು ಹೀಗೆ ಇವು ಒಂದಾದ ನಂತರ ಒಂದರಂತೆ ಮನುಷ್ಯನ ಜೀವನದಲ್ಲಿ ಆವರ್ತನೆಯಾಗುತ್ತಿರುತ್ತವೆ. ಮತ್ತೆ ಮಗು ಹುಟ್ಟಿನಿಂದ ಸಾಯುವತನಕ ಈ ಹಂತಗಳು ಸಹಜವಾಗಿ ಎದುರಾಗುತ್ತವೆ. ಹೀಗೆ ವ್ಯಕ್ತಿಯ ಬದುಕಿನಲ್ಲಿ ಅನೇಕ ರೀತಿಯ ಸಂಕ್ರಮಣಗಳು ನಡೆಯುತ್ತವೆ. ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ಬದಲಾವಣೆಯಾಗುವುದು. ಈ ಸಂಕ್ರಮಣದ ಲಕ್ಷಣ. ಇದೊಂದು ಮಹತ್ವದ ಬದಲಾವಣೆಯಾದ್ದರಿಂದ ಅದು ಸುಸೂತ್ರವಾಗಿ ಜರುಗಬೇಕು. ಆದಕ್ಕೆ ಯಾವುದೇ ವಿಘ್ನವಾಗಬಾರದು ಎಂದು ಮನುಷ್ಯ ಕಾಳಜಿವಹಿಸುತ್ತಾನೆ. ಈ ಎಚ್ಚರ ಮತ್ತು ಕಾಳಜಿಗಳೇ ವಿವಿಧ ರೂಪದ ಆಚರಣೆಗಳ ಹುಟ್ಟಿಗೆ ಕಾರಣ. ಉದಾಹರಣೆಗೆ ಮರಣವೆನ್ನುವುದು ಬದುಕಿನಿಂದ ಸಾವಿಗೆ ಸಂಕ್ರಮಣ. ಮರಣಕ್ಕೆ ಸಂಬಂಧಿಸಿದಂತೆ ನಡೆಸುವ ಆಚರಣೆಗಳೆಲ್ಲವೂ ಈ ಸಂಕ್ರಮಣ ಕ್ರಿಯೆ. ಸುಸೂತ್ರವಾಗಿ ನಡೆಯಬೇಕು ಎಂಬ ಆಶಯ ಹೊಂದಿರುತ್ತದೆ. ಇದೇರೀತಿ ವಿವಾಹವೆಂಬುದು ಅವಿವಾಹಿತ ಬದುಕಿನಿಂದ ವಿವಾಹಿತ ಬದುಕಿಗೆ ಸಂಕ್ರಮಣ. ಹುಡುಗಿ ಮೈನೆರೆಯುವುದು ಬಾಲ್ಯದಿಂದ ಪ್ರೌಢಾವಸ್ಥೆಗೆ ಸಂಕ್ರಮಣ. ಮಗು ಹೊಸ್ತಿಲು ದಾಟುವುದು ಕೂಡ ಮಗು ಮನೆಯ ಒಳ ಜಗತ್ತಿನಿಂದ ಹೊರ ಜಗತ್ತಿಗೆ ಪ್ರವೇಶಿಸುವುದರ ಸಂಕ್ರಮಣವನ್ನು ಸೂಚಿಸುತ್ತದೆ. ಇದನ್ನು ವಿದ್ಯುಕ್ತವಾದ ಆಚರಣೆಯಿಂದ ಗುರುತಿಸಲಾಗುತ್ತದೆ. ಈ ರೀತಿ ಮಗುವಿನ ಜನನ, ನಾಮಕರಣ, ಒಸಗೆ, ಋತು ಸಂಸ್ಕಾರ, ವಿವಾಹ, ಸಾವು ಮೊದಲಾದವು ವ್ಯಕ್ತಿಯ ಬದುಕಿನ ಬೇರೆ ಬೇರೆ ಘಟ್ಟಗಳಿಗೆ ಸಂಬಂಧಿಸಿದಂತೆ ನಡೆಸುವ ಕೌಟುಂಬಿಕ ಆಚರಣೆಗಳೇ ಜೀವನಾವರ್ತನದ ಆಚರಣೆಗಳೆನಿಸಿವೆ. ಈ ಆಚರಣೆಗಳಲ್ಲಿ ಮುಖ್ಯವಾಗಿ ಮನೆ ಮಂದಿ ಹಾಗೂ ನೆಂಟರಿಷ್ಟರು ಪಾಲ್ಗೊಂಡು ತಮ್ಮದೇ ಆದ ಧಾರ್ಮಿಕ ವಿಧಿ-ವಿಧಾನಗಳ ಮೂಲಕ ಕಾರ್ಯಕ್ರಮವನ್ನು ನೆರವೇರಿಸಿ ಆ ಮೂಲಕ ಆತ್ಮತೃಪ್ತಿ, ಶಾಂತಿಯನ್ನು ಹೊಂದುತ್ತಾರೆ. ಮೇಲಿನ ಈ ಭೂಮಿಕೆಯ ಹಿನ್ನೆಲೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ 'ಶ್ರೀ ಮೀನಗೊಂದು ಮಲ್ಲಯ್ಯ'ನ ಕ್ಷೇತ್ರದ ಭಕ್ತರ ಜೀವನಾವರ್ತನದ ಆಚರಣೆಗಳ ಬಗ್ಗೆ.

ಮೀನಗೊಂದಿ ಮಲ್ಲಯ್ಯ ಆದವಾನಿ, ಆಲೂರು, ಆಂಧ್ರಪ್ರದೇಶದ ಬಹುಭಾಗದ ಜನರ ಜೊತೆಗೆ ಕರ್ನಾಟಕದ ಗಡಿ ಪ್ರದೇಶದ ಜನರಿಗೆ ಜನಪ್ರಿಯ ದೇವತೆಯಾಗಿದ್ದು, ತಮ್ಮದೇ ಆದಂತಹ ಆಚರಣೆಗಳನ್ನು ಈ ದೈವದೊಂದಿಗೆ ಇರಿಸಿಕೊಂಡು ತಮ್ಮ ಬದುಕಿನ ಏರುಪೇರುಗಳನ್ನು, ಸುಖ-ಸಂತೋಷಗಳನ್ನು, ಮನೋಕ್ಲೇಷಗಳನ್ನು ನಂಬಿಕೆಯಿಂದ ಮುಕ್ತಗೊಳಿಸಿಕೊಳ್ಳುತ್ತಾರೆ. ಇಲ್ಲಿಯೂ ಹುಟ್ಟಿನಿಂದ ಸಾವಿನವರಗೆ ಒಂದಲ್ಲ ಒಂದು ರೀತಿಯಲ್ಲಿ ಆಚರಣೆಗಳು ಬೆಸೆದುಕೊಂಡಿವೆ.

## ೩.೨.೧. ಹುಟ್ಟು :

ಹುಟ್ಟು ನಮ್ಮ ಜನಪದರ ಬದುಕಿಗೆ ಒಂದು ಸುಸಂದರ್ಭ. ಜಾಗತಿಕವಾಗಿ ಮಾನವನಿಗೆ ವಿಶೇಷವಾಗಿ ಇದು ಸಂಭ್ರಮದ ಕೊಡುಗೆಯಾಗಿ ಬಂದಂತಹುದು. ಇತರ ಪ್ರಾಣಿಗಳಲ್ಲಿ ಜನನದ ತರುವಾಯ ಈ ಸುಸಂದರ್ಭ ಕಾಣಲಾರೆವು. ಇಂಡಿಯಾದಂತಹ ಸಾಂಪ್ರದಾಯಿಕ ಸಮಾಜದಲ್ಲಿ ಜನನದ ಸುತ್ತ ಹೆಣೆದು ಕೊಂಡಿರುವಂತಹ ಆಚರಣೆಗಳು, ನಂಬಿಕೆಗಳು ವಿಶೇಷವಾಗಿ ನೆಲೆಗೊಂಡಿವೆ. ಈ ಉಪಕ್ರಮ ಕರ್ನಾಟಕಕ್ಕೆ ಹೊರತಾದುದ್ದಲ್ಲ. ಹುಟ್ಟು ದೇವರ ಕೊಡುಗೆ ಎಂದೇ ನಮ್ಮ ಜನಪದರು ನಂಬುತ್ತಾರೆ. ಪ್ರಸ್ತುತ ಮೀನಗೊಂದಿ ಪರಿಸರದ ಸುತ್ತಲೂ ಜನನ ಸಂದರ್ಭದಲ್ಲಿ ಈ ದೇವರೊಂದಿಗಿನ ಸಂಬಂಧವನ್ನು ತಿಳಿಯಬಹುದು.

ಮಗು ಜನನವಾದಾಗ ಬಹುತೇಕ ಎಲ್ಲಾ ಜನಾಂಗದವರೂ ಒಂದಲ್ಲ ಒಂದು ರೀತಿಯಲ್ಲಿ ಸಂಭ್ರಮಾ ಚರಣೆ ಮಾಡಿಕೊಳ್ಳುತ್ತಾರೆ. ಅದು ಹೆಣ್ಣಾಗಲೀ, ಗಂಡಾಗಲೀ ಸ್ವಾಮಿ ಮಲ್ಲಯ್ಯನ ಪ್ರಸಾದವೆಂದೇ ಭಾವಿಸುತ್ತಾರೆ. ಜನನದ ಪ್ರಸವ ಕ್ರಿಯೆಗಳನ್ನೆಲ್ಲಾ ಮುಗಿದ ತರುವಾಯ ಒಂದು ವಾರದೊಳಗೋ ಇಲ್ಲ, ಒಂದು ತಿಂಗಳು ತುಂಬುವುದರ ಒಳಗೋ ಸ್ವಾಮಿ ಇರುವ ಬೆಟ್ಟಕ್ಕೆ ಹೋಗಿ, ಪೂಜೆ ಸಲ್ಲಿಸಿಕೊಂಡು ಬರುತ್ತಾರೆ. ಮಲ್ಲಯ್ಯನಿಗೆ ಮೀಸಲು ಹರಕೆ ಹೊತ್ತಿದ್ದೇ ಆದರೆ ಅಕ್ಕಿ, ಬೇಳೆ, ಕೊಬ್ಬರಿ, ಬೆಲ್ಲ ಮುಂತಾದವನ್ನು ಮೀಸಲು ರೀತಿಯಲ್ಲಿ ನೀಡಿ, ಪೂಜೆ ಸಲ್ಲಿಸಿ ತಮ್ಮ ಹರಕೆಯನ್ನು ಪೂರೈಸಿಕೊಂಡು ಬರುತ್ತಾರೆ.

ವೈದಿಕ ಶಾಕೆಗೆ ಅಂಟಿಕೊಂಡು ವೈಷ್ಣವ ದೇವತೆಗಳನ್ನು ಪೂಜಿಸುವ ಬ್ರಾಹ್ಮಣರು ಮೀನಗೊಂದಿ ಮಲ್ಲಯ್ಯನೊಂದಿಗೆ ಅವಿನಾಭಾವ ಸಂಬಂಧ ಹೊಂದಿರುವುದು ವಿಶೇಷವಾಗಿ ಕಾಣುತ್ತೇವೆ. ಇಲ್ಲಿರುವ ಒಟ್ಟು ಬ್ರಾಹ್ಮಣ ಸಮುದಾಯಕ್ಕೆ ಮೀನಗೊಂದಿ ಮಲ್ಲಯ್ಯನೇ ಮನೆದೇವರಾಗಿದ್ದು, ಆತನನ್ನು ವಿಷ್ಣುವಿನ ಅವತಾರವೆಂದೇ ಭಾವಿಸುತ್ತಾರೆ. ಆ ಕಾರಣದಿಂದಲೇ ಉಬ್ಬುತಗ್ಗಾಕೃತಿಯಲ್ಲಿರುವ ಸ್ವಯಂಭೂಲಿಂಗವನ್ನು ಕೂರ್ಮಾವತಾರ ಎಂದು ಕರೆಯುತ್ತಾರೆ. ಈ ಸಮುದಾಯದಲ್ಲಿ ಮಗು ಜನನವಾದಾಗ ಪುರೋಹಿತ ಸುಬ್ರಹ್ಮಣ್ಯ

ಶಾಸ್ತ್ರಿಗಳು ತಿಳಿಸುವಂತೆ "ಮಗು ಹುಟ್ಟಿದ ಹತ್ತು ದಿನದ ನಂತರ ಹು(ಉ)ಡಿ ಗಂಗಮ್ಮ ಅಂತ ಮಾಡ್ತಿವಿ. ಅವರತ್ತಿನವರೆಗೂ ತಾಯಿ ಮಂಚದ ಮೇಲೆಯೇ ಇರ್ತಾಳೆ. ಮಿಗತವರು (ಮಿಕ್ಕವರು) ಯಾರೂ ಆ ತಾಯನ್ನುಮುಟ್ಟುವ ಹಾಗಿಲ್ಲ. ಆದರ ನಂತರ ಶಾಂತಿ ಪುಣ್ಯಃ ವಾಚಃ ಅಂತ ಮನೆಯಲ್ಲಿ ಶುದ್ಧಿ ಮಾಡಿಸಿ, ಅವರನ್ನು ಮನೆಯಲ್ಲಿ ಕರ್ಕ್ಕೋತೀವಿ". ಆ ಸಮಯದಲ್ಲಿ ಹೊತ್ತಿಗೆಯ ಪ್ರಕಾರ ಏನಾದರೂ ಶಾಂತಿಯನ್ನು ಮಾಡಿಸಬೇಕೆಂದಿದ್ದರೆ, ಮಲ್ಲಯ್ಯನ ಬೆಳ್ಳಿಯ ಮೂರ್ತಿಯನ್ನು ಇಟ್ಟುಕೊಂಡು ವೈದಿಕ ಸಂಪ್ರದಾಯದ ಪ್ರಕಾರ ಅಭಿಷೇಕ ಹೋಮಾದಿಗಳನ್ನು ಮಾಡಿ ಪೂಜಿಸುತ್ತಾರೆ.

ಲಿಂಗಾಯತ ಸಮುದಾಯವು ಮಲ್ಲಯ್ಯನನ್ನು ಪರಶಿವನ ಅವತಾರವೆಂದೇ ಭಾವಿಸಿ ಪೂಜಿಸುತ್ತಾರೆ. ಮೂಲತಃ ಶೈವ ಮತ್ತು ವೀರಶೈವ ಪಂಥದವರು ಲಿಂಗಾಧಾರಕರಾಗಿವುದರಿಂದ ಗಿರಿಯಲ್ಲಿ ಇರುವ ಸ್ವಯಂಭೂ ಲಿಂಗವೇ ತಮ್ಮ ಆರಾಧ್ಯ ದೈವವೆಂದು ನಂಬುತ್ತಾರೆ. ಈ ದೃಷ್ಟಿಯಿಂದ ಮಗು ಜನನಕ್ಕೆ ಮೊದಲು ಈ ಸಮುದಾಯದವರು ಅನೇಕ ಹರಕೆಗಳನ್ನು ಹೊರುತ್ತಾರೆ. ಒಂದು ಬಿಳಿ ವಸ್ತ್ರದಲ್ಲಿ ಒಂದಿಷ್ಟು ನಾಣ್ಯಗಳನ್ನು ಮುಡಿಪಾಗಿ ಕಟ್ಟಿಟ್ಟು, ಗಂಡಾದರೆ ಮಲ್ಲಯ್ಯ ಅಂತ, ಹೆಣ್ಣಾದರೆ ಮಾಳಮ್ಮ ಎಂದು ಹರಕೆಯೊಂದಿಗೆ ಆ ನಾಣ್ಯದ ಚಿಕ್ಕ ಗಂಟನ್ನು ಹೊಸ್ತಿಲಿಗೆ ಕಟ್ಟುತ್ತಾರೆ. ಆ ನಾಣ್ಯದ ಗಂಟಿಗೆ ಪ್ರತಿನಿತ್ಯ ಸ್ವಾಮಿಯ ಬಂಢಾರ ಹಚ್ಚಿ ಸಾಕ್ಷಾತ್ ಮಲ್ಲಯ್ಯ ಮಾಳಮ್ಮ ಎಂದು ಪೂಜಿಸುತ್ತಾರೆ. ಮಗು ಜನಿಸಿದಾಗ ಹರಕೆಯಂತೆ ಗಿರಿಗೆ ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ.

ಕುರುಬರಿಗೆ ಮೀನಗೊಂದಿ ಮಲ್ಲಯ್ಯ ಮತ್ತು ಮಾಳಮ್ಮ ಇಬ್ಬರೂ ಆರಾಧ್ಯ ದೇವತೆಗಳು. ಇವರು ಈ ದೇವರನ್ನು ಮನೆ ದೈವ, ಕುಲ ದೈವ ಎಂದು ಸೂಚಿಸುತ್ತಾರೆ. ಮಿಕ್ಕೆಲ್ಲಾ ದೇವರುಗಳಿಗಿಂತ ಈ ದೇವರನ್ನೇ ಹೆಚ್ಚಾಗಿ ಆರಾಧಿಸುವ ಇವರ ಮನೆ ಮನೆಗಳಲ್ಲಿ ನಿತ್ಯ ಚಟುವಟಿಕೆ ಆರಂಭವಾಗುವುದೇ ಮಲ್ಲಯ್ಯನ ಬಂಢಾರ ಧರಿಸುವುದರಿಂದ. ಮಕ್ಕಳಾದಿಯಾಗಿ ಎಲ್ಲರೂ ಮಲ್ಲಯ್ಯನ ಬಂಢಾರವನ್ನು ಧರಿಸಿ ನಿತ್ಯ ಚಟುವಟಿಕೆಯನ್ನು ಆರಂಭಿಸುತ್ತಾರೆ. ಇವರ ಮನೆಗಳಲ್ಲಿ ಒಂದು ತ್ರಿಶೂಲ, ಈಶ್ವರನ ಛಾಯಾಚಿತ್ರ, ಇಲ್ಲವೆ ಶ್ವೇತ ಅಶ್ವರೂಢ ವಾಗಿರುವ ಚಾಮರಸಹಿತ ಆಸೀನರಾದ ಮಾಳಾಸಹಿತ ಮಲ್ಲೇಶ್ವರನ ಛಾಯಾಚಿತ್ರಕ್ಕೆ ಪೂಜಿಸುತ್ತಾರೆ. ಈ ಸಮುದಾಯದಲ್ಲಿಯೇ ಒಳಗೊಳ್ಳುವ ಗೊರವರು ವಿಶೇಷವಾಗಿ ಮಲ್ಲಯ್ಯನ ದಾಸರಾಗಿ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ. ಮೀನಗೊಂದಿ ಕ್ಷೇತ್ರದಲ್ಲಿರುವ ಗೊರವರು ಕುರುಬ ಸಮುದಾಯದವರೇ. ಇವರಲ್ಲಿ ಕಂಚಾವೀರ, ದೀಕ್ಷಾ ಗೊರವರು, ಗೊಗ್ಗಯ್ಯಗಳು, ಕುದುರೆಕಾರರು, ಒಗ್ಗರು, ನಾಯಿಗೊರವರು ಮುಂತಾದ ಕೆಲವು ಪಂಗಡಗಳಿವೆ. ಇವರೆಲ್ಲರೂ ಒಂದೇ ಸಮುದಾಯದವರಾದರೂ ಕೂಡ ಅವರವರ ವೃತ್ತಿ, ಧಾರ್ಮಿಕ ಆಚರಣೆಯ ಪದ್ಧತಿಯಲ್ಲಿ ಸ್ವಲ್ಪ ಭಿನ್ನರಾಗಿ ಕಾಣುತ್ತಾರೆ. ಈ ಸಮುದಾಯದಲ್ಲಿ ಮಗು ಜನನವಾದ ಒಂದು ತಿಂಗಳ ಒಳಗಾಗಿ ಭಾನುವಾರ ಇಲ್ಲ ಅಮವಾಸೆಯ ದಿನದಂದು ಗಿರಿಗೆ ಹೋಗಿ ಕೆಲವರು ಅನುಕೂಲಸ್ತರು

ಪರುವು ಮಾಡಿಸುತ್ತಾರೆ. ಪರವು ಮಾಡುವುದೆಂದರೆ; ಅನ್ನ ದಾಸೋಹ ಮಾಡುವುದು. ಉಳಿದಂತೆ ಹಲವರು ಮೀಸಲು ರೀತಿಯಲ್ಲಿ ದೇವರಿಗೆ ಬಟ್ಟೆ, ಅಕ್ಕಿ, ಬೇಳೆ, ಕೊಬ್ಬರಿ, ಬೆಲ್ಲ ಮುಂತಾದವನ್ನು ಅರ್ಪಿಸಿ ಕಾಯಿಯನ್ನು ಒಡೆಸಿಕೊಂಡು ಪ್ರಸಾದದ ರೂಪವಾಗಿ ಗಿರಿಯಿಂದ ಬಂಢಾರ ತಂದು ಮಗುವಿನ ಹಣೆಗೆ ಹಚ್ಚುತ್ತಾರೆ. ಅದೇ ರೀತಿ ಕುಟುಂಬದವರೆಲ್ಲರೂ ಹಚ್ಚಿಕೊಳ್ಳುತ್ತಾರೆ.

ಆದಿ ಮೀನಗೊಂದಿ ಕ್ಷೇತ್ರದಲ್ಲಿ ಹರಿಜನರಿಗಾಗಿ ಪ್ರತ್ಯೇಕವಾದ ಮಲ್ಲಯ್ಯನ ಗುಡಿಯಿದೆ. ಅದನ್ನು 'ಮಾದರ ಮಲ್ಲಯ್ಯನ ಗುಡಿ' ಎಂದು ಕರೆಯುತ್ತಾರೆ. ಅದು ಮುಖ್ಯ ಗುಡಿಯಿಂದ ಅರ್ಧ ಕಿ.ಮೀ. ದೂರದಲ್ಲಿದೆ. ಕಟ್ಟುನಿಟ್ಟಿನ ಜಾತಿ ವ್ಯವಸ್ಥೆಯ ಕಾರಣವಾಗಿ ಇವರು ತಮ್ಮದೇ ಆದ ಒಂದು ಗುಡಿಯನ್ನು ನಿರ್ಮಿಸಿಕೊಂಡಿದ್ದಾರೆ. ಅಂದಿನವರು ವ್ಯವಸ್ಥೆಯ ವಿರುದ್ಧ ಈಜಲಾಗದೆ ಈ ಗುಡಿಯನ್ನು ನಿರ್ಮಿಸಿಕೊಂಡಂತಿದೆ. ಇವರಲ್ಲಿ ಬಸವಿಯರನ್ನು ಬಿಡುವ ಪದ್ಧತಿ ಇದೆ. ಇವರು ಗಣಾಚಾರಿ ಇಲ್ಲ ಒಡೆಯರಿಂದ ದೀಕ್ಷೆಯನ್ನು ಪಡೆದುಕೊಳ್ಳುತ್ತಾರೆ. ಇವರಲ್ಲಿ ಗೊರವರನ್ನಾಗಿ ಬಿಡುವ ಪದ್ಧತಿ ಇದ್ದರೂ ದೀಕ್ಷೆಯನ್ನು ನೀಡೋದು ಗಣಾಚಾರಿ ಹಾಗೂ ಒಡೆಯರಲ್ಲ. ಇವರ ಜಾತಿಯಲ್ಲಿಯೇ ಪೂಜಾರಿ ಅಂತ ಇರುತ್ತಾರೆ. ಅವರು ಇವರಲ್ಲಿ ಗೊರವರಾಗುವವರಿಗೆ ದೀಕ್ಷೆಯನ್ನು ನೀಡುತ್ತಾರೆ. ಜಾತಿಯ ಬೇಲಿಯಲ್ಲಿ ಗಿರಿಯ ಮೇಲಿರುವ ಗುಡಿಗೆ ಈ ಜನಾಂಗ ಅಷ್ಟಾಗಿ ಹೋಗದೇ ಇದ್ದರೂ ಸಹ ತಮ್ಮ ಗುಡಿಗೆ ವಿಶೇಷವಾಗಿ ನಡೆದುಕೊಳ್ಳುತ್ತಾರೆ. ಬಹುತೇಕ ಈ ಜನಾಂಗದ ಜನರಿಗೆ ಮಲ್ಲಯ್ಯನೇ ಮನೆದೇವರಾಗಿದ್ದಾನೆ. ಅವರ ಜೀವನದ ಪ್ರತಿಯೊಂದು ಘಟ್ಟಕ್ಕೂ ಮಲ್ಲಯ್ಯನೇ ಹಾಸುಹೊಕ್ಕಾಗಿದ್ದಾನೆ.

ಈ ಜನಾಂಗದಲ್ಲಿ ಮಗು ಜನನ ಆದಾಗ ಅದು ಮಲ್ಲಯ್ಯ ಸ್ವಾಮಿಯ ಕೃಪೆಯೆಂದೇ ಭಾವಿಸುತ್ತಾರೆ. ಜನನದ ಪೂರ್ವದಲ್ಲಿ ಮಗುವಿನ ತಂದೆ ತಾಯಿಯವರು ಏನಾದರೂ ಹರಕೆಯನ್ನು ಹೊತ್ತಿದ್ದರೆ ಆಕಳ, ಎಮ್ಮೆ, ಕುರಿ ಈದರೆ ಮಲ್ಲಯ್ಯಗೆಂದೇ ತುಪ್ಪವನ್ನು ಮೀಸಲಿಡುತ್ತಾರೆ. ಜೊತೆಗೆ ಧಾನ್ಯಗಳನ್ನು ಮೀಸಲಿಡುತ್ತಾರೆ. ಮಗು ಜನಿಸಿದ ಒಂದು ವರ್ಷದೊಳಗೆ ಅಮಾವಾಸೆ ಇಲ್ಲವೇ ವಾರದ ದಿನ ಗಿರಿಗೆ ಬಂದು ಮೀಸಲನ್ನು ನೀಡಿ ನಿದ್ದೆ ಮಾಡಿ ಶಾಂತಿಯನ್ನು ಪಡೆದುಕೊಂಡು ಹೋಗುತ್ತಾರೆ. ಅಲ್ಲಿಗೆ ಮಗುವಿಗಾಗಿ ಹೊತ್ತಿದ್ದ ಹರಕೆ ತೀರಿತು ಎಂದರ್ಥ.

### ೪.೨.೨. ನಾಮಕರಣ :

ನಾಮಕರಣವನ್ನು ತೊಟ್ಟಿಲು ಇಡುವ ಕಾರ್ಯಕ್ರಮ ಎಂದು ಕರೆಯುತ್ತಾರೆ. ಬಹುತೇಕ ಎಲ್ಲಾ ಜನಾಂಗದಲ್ಲಿ ಮಗು ಜನನವಾದ ವರ್ಷದ ಒಳಗೆ ಜೋಯಿಸರು ತಿಳಿಸಿದಂತೆ ನಾಮಕರಣಕ್ಕೆ ಒಂದು ದಿನವನ್ನು ನಿಗದಿಪಡಿಸುತ್ತಾರೆ. ಈ ಕಾರ್ಯಕ್ರಮಕ್ಕೆ ತಮ್ಮ ಬಂಧು ಮಿತ್ರರ ಜೊತೆ ನೆರೆಹೊರೆಯವರನ್ನು

ಕರೆಯುವುದು ವಾಡಿಕೆ. ಗೊತ್ತಾದ ದಿನದಂದು ತೊಟ್ಟಿಲ ಕಾರ್ಯಕ್ರಮಕ್ಕೆ ಸಕಲವೂ ಸಜ್ಜುಗೊಳ್ಳುತ್ತವೆ. ಮಗು ಗಂಡಾದರೆ ಮಲ್ಲಯ್ಯ, ಹೆಣ್ಣಾದರೆ ಮಾಳಮ್ಮ ಅಂತ ಕರೆದು ವ್ಯವಹಾರಿಕ ನಾಮವಾಗಿ ಕೆಲವರು ಬದಲಿ ಹೆಸರುಗಳನ್ನು ಇಡುತ್ತಾರೆ. ಆ ದಿನ ಕಾರ್ಯಕ್ರಮದಲ್ಲಿ ಸೋದರ ಮಾವನು ಮಗುವಿನ ಕಿವಿಯಲ್ಲಿ ಮೂರು ಸಾರಿ ಹೆಸರನ್ನು ಕೂಗುತ್ತ ಮನೆಯಿಂದ ಹೊರಗಡೆ ರಭಸವಾಗಿ ಓಡಿ ಬರುತ್ತಾನೆ. ಕಾರಣ ಆತ ಹೊರಗಡೆ ಬರುವಾಗ ಆತನ ಸಂಬಂಧಿಕರು ಬೆನ್ನಿಗೆ ಗುದ್ದಲು ಸಿದ್ಧತೆಯಲ್ಲಿರುತ್ತಾರೆ. ಅದನ್ನ ತಪ್ಪಿಸಲು ಆತ ಹಾಗೆ ಓಡಿ ಬರುತ್ತಾನೆ. ನಾಮಕರಣಕ್ಕೆ ಆಗಮಿಸಿದ ನೆಂಟರು, ನೆರೆಹೊರೆಯವರು ಮಗುವಿಗೆ ಉಡುಗೊರೆಗಳನ್ನು ನೀಡುತ್ತಾರೆ. ಈ ಸಮಯದಲ್ಲಿ ನಾಲ್ಕೈದು ಜನ ಅಜ್ಜಿಯರು ಸೇರಿ ಹಾಡುಗಳನ್ನು ಹಾಡುತ್ತಾರೆ. ಹೀಗೆ ಈ ರೀತಿಯ ಕಾರ್ಯಕ್ರಮ ಮುಗಿದ ನಂತರ ಮನೆಯವರಿಂದ ಸಿಹಿಯೂಟದ ವ್ಯವಸ್ಥೆಯಿರುತ್ತದೆ. ಕೆಲ ಜನಾಂಗದವರಲ್ಲಿ ಈ ರೀತಿಯ ನಾಮಕರಣ ಪದ್ಧತಿ ಇರದೆ, ಮಲ್ಲಯ್ಯನ ವಾರದಂದು ಇಲ್ಲ ಆಕಸ್ಮಿಕವಾಗಿ ಮಲ್ಲಯ್ಯ ದೇವರ ನಾಮವನ್ನು ಮಗುವಿಗೆ ಇಟ್ಟು ಸುಮ್ಮನಾಗಿಬಿಡುತ್ತಾರೆ. ಗಂಡಾದರೆ ಬಹುತೇಕವಾಗಿ ಮಲ್ಲಯ್ಯನ ಹೆಸರನ್ನೇ ಇಡುತ್ತಾರೆ. ಉದಾ: ಮಲ್ಲಯ್ಯ, ಗಿರಿಮಲ್ಲ, ಶೇಷಪ್ಪ,ಮಲ್ಲೇಶ್ವರ, ಮಲ್ಲಿಕಾರ್ಜುನ, ಮಾಲ್ಸಾಪತಿ ಇತ್ಯಾದಿಯಾಗಿ. ಹಾಗೆಯೇ ಹೆಣ್ಣು ಮಕ್ಕಳಿಗೂ ಸಹ ಮಾಳಮ್ಮ, ಗಂಗಿ, ಗಂಗಿಮಾಳಮ್ಮ ಇತ್ಯಾದಿ ಹೆಸರುಗಳಿರುವುದು ಯಥೇಚ್ಛವಾಗಿ ಕಾಣಬಹುದಾಗಿದೆ.

ಬ್ರಾಹ್ಮಣರಲ್ಲಿ ವಿಶೇಷವಾಗಿ ಮಗು ಜನನವಾದಾಗ ಮಲ್ಲಯ್ಯನ ಹೆಸರನ್ನು ಕರೆಯುತ್ತಾರೆ. ತದನಂತರ ವೈಷ್ಣವ ದೇವರ ಹೆಸರುಗಳನ್ನು ಇಡುತ್ತಾರೆ. ಈ ಪ್ರದೇಶದಲ್ಲಿ ಮಲ್ಲಿಕಾರ್ಜುನ ಶಾಸ್ತ್ರಿ, ಮಾರ್ತಾಂಡ ಭೈರವ, ಮಲ್ಲಿಕಾರ್ಜುನ ಶರ್ಮ, ಶೇಷಗಿರಿಶಾಸ್ತ್ರಿ, ಮಲ್ಲೇಶ್ವರ, ಮಾಲ್ಸಾಪತಿ, ಮಲ್ಹಾರಿ ಹೀಗೆ 'ಮ' ಎಂಬ ಅಕ್ಷರದಿಂದ ಶುರುವಾಗುವಂತಹ ಆತನ ಹೆಸರುಗಳನ್ನು ಇಡುತ್ತಾರೆ. ಈ ಸಮುದಾಯದಲ್ಲಿ ಹೆಣ್ಣು ಮಕ್ಕಳ ಜನನವಾದಾಗ ಮಲ್ಲಯ್ಯನೊಂದಿಗೆ ಸಂಬಂಧವಿರುವ ಹೆಸರುಗಳು ಹೆಚ್ಚಾಗಿ ಕಂಡುಬಂದಿಲ್ಲ. ಮಲ್ಲಮ್ಮ, ಮಾಳಿಕ ಇಂತಹ ಬೆರಳೆಣಿಕೆಯ ಹೆಸರುಗಳನ್ನು ಇಟ್ಟುಕೊಂಡಿರುವುದು ಮಾತ್ರ ಕಂಡುಬರುತ್ತದೆ. ನಾಮಕರಣದ ದಿನ ಶಾಂತಿ ಪುಣ್ಯಾಹವಾಚನ ಅಂತ ಮಾಡಿ ತಟ್ಟೆಯಲ್ಲಿ ಅಕ್ಕಿ ಹಾಕಿ ಅದರ ಮೇಲೆ ಉಂಗುರದಿಂದ ಜನುಮನಾಮ, ವ್ಯವಹಾರನಾಮ, ಕುಲದೇವರನಾಮ ಹೀಗೆ ಬರೆದು ಕೂಸಿನ ಬಲ ತುದಿಯಲ್ಲಿ ತಂದೆ ಮೂರು ಬಾರಿ ಕೇಳಿಸುತ್ತಾನೆ. ಅಂದರೆ ಗಟ್ಟಿಯಾಗಿ ಒದರುತ್ತಾನೆ. ಜೊತೆಗೆ ಮಲ್ಲಯ್ಯನ ಸಹಸ್ರನಾಮದೊಂದಿಗೆ ಬಿಲ್ವಾರ್ಚನೆ, ಪುಷ್ಪಾರ್ಚನೆ, ಕ್ಷೀರಾಭಿಷೇಕ, ಫಲಾಭಿಷೇಕ ಮುಂತಾದ ಪೂಜಾ ಕಾರ್ಯಕ್ರಮ ವನ್ನು ಮುಗಿಸುತ್ತಾರೆ. ನಂತರ ಬಂದವರು ಮಗುವಿಗೆ ಕಾಣಿಕೆಗಳನ್ನು ನೀಡುವರು. ಅಂದಿನ ಸಿಹಿಯೂಟದ ಕಾರ್ಯಕ್ರಮದೊಂದಿಗೆ ನಾಮಕರಣದ ಆಚರಣೆ ಮುಗಿದಂತೆ.

ಲಿಂಗಾಯತ ಸಮುದಾಯದಲ್ಲಿ ಮುಗು ಜನಿಸಿದ ನಂತರ ಗಂಡಿಗೆ ಮಲ್ಲಿಕಾರ್ಜುನ, ಮಲ್ಲಯ್ಯ, ಮಲ್ಲಪ್ಪ, ಗಿರೆಪ್ಪ, ಗಿರಿಯಲ್ಲಪ್ಪ, ಹೆಗ್ಗಡೆ, ಮಾಳಮ್ಮ, ಮಲ್ಲಮ್ಮ, ಮಲ್ಲೇಶ್ವರಿ, ಮಾಳವೀಕ, ಗಿರಿಮಲ್ಲಮ್ಮ, ಗಿರೆಮ್ಮ ಮುಂತಾಗಿ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. ಕೆಲವೊಮ್ಮೆ ಈ ಹೆಸರಿಡದಿದ್ದರೂ ತೊಟ್ಟಿಲು ತೂಗುವ ಸಂದರ್ಭದಲ್ಲಿ ಮಾಳಮ್ಮ ಮಲ್ಲೇಶ್ವರರ ಹೆಸರನ್ನು ಮೊದಲು ಕರೆದು ನಂತರ ಬೇರೆ ಹೆಸರುಗಳನ್ನು ಇಟ್ಟು ಕೊಳ್ಳುತ್ತಾರೆ. ಕೆಲವರು ಮಗು ಹುಟ್ಟಿದ ನಂತರ ವರ್ಷದೊಳಗೆ ಈ ಕ್ಷೇತ್ರಕ್ಕೆ ಮಂಡೆ ಕೊಡುತ್ತಾರೆ. ಇದನ್ನು ಕೂದಲು ಕೊಡುವುದು, ಜವಳ ತೆಗೆಸುವುದು ಎಂದು ಕರೆಯುತ್ತಾರೆ. ಮಗುವಿಗೆ ಜವಳ ತೆಗೆಸಿದ ನಂತರ ಕೆಲವರು ಪರುವು ಮಾಡಿಸುತ್ತಾರೆ. ಅವರವರ ಶಕ್ತ್ಯಾನುಸಾರ ಗೊರವಯ್ಯನವರನ್ನು ಕರೆಯಿಸಿ ಉಣಬಡಿಸುತ್ತಾರೆ. ಮಂಡೆ ತೆಗೆಸಿದ ಮಗುವನ್ನು ಗೊರವಯ್ಯನವರು ಎತ್ತಿಕೊಂಡು ಕಂಬಳಿಯ ಮೇಲೆ ಕೂಡಿಸಿ, ತಮ್ಮ ಟೊಪ್ಪಿಗೆಯನ್ನು ತೆಗೆದು ಮಗುವಿನ ತಲೆಯ ಮೇಲಿಟ್ಟು ಪಿಳ್ಳಂಗೋವಿ (ಕೊಳಲು) ಊದುತ್ತಾ, ಡಮರುಗ ಬಾರಿಸುತ್ತಾ ಏಳುಕೋಟಿ ಮಲ್ಲಯ್ಯ ಬಹುಪರಾಕ್ ಎಂದು ಮೂರು ಸಾರಿ ಉಚ್ಚರಿಸಿ, ಮಗುವಿಗೆ ಮಲ್ಲಯ್ಯನ ಬಂಢಾರವನ್ನು ಹಚ್ಚಿದ ಮೇಲೆಯೇ ಅವರು ಪ್ರಸಾದವನ್ನು ಸ್ವೀಕರಿಸುತ್ತಾರೆ.

ಗೊರವರಲ್ಲಿ ನಾಮಕರಣ ಪದ್ಧತಿಯು ಕುರುಬ ಸಮುದಾಯಕ್ಕಿಂತ ಕೊಂಚ ಭಿನ್ನವಾಗಿದೆ. ಹರಕೆಯ ಫಲವಾಗಿ ಮಗು ಜನಿಸಿದ್ದರೆ, ಮೊದಲೇ ಅಂದುಕೊಂಡಂತೆ ಮಲ್ಲಯ್ಯನಿಗೆ ಮೀಸಲು ರೂಪದಲ್ಲಿ ತುಪ್ಪ, ಅಕ್ಕಿ, ಬೇಳೆ ಮುಂತಾದವನ್ನು ತೆಗೆದಿರಿಸಿರುತ್ತಾರೆ. ಗೊತ್ತುಪಡಿಸಿದ ದಿನದಂದು ಗಿರಿಗೆ ಹೋಗಿ ಎಲೆ ಪೂಜೆ ಕಟ್ಟಿಸಿ, ಮೀಸಲು ಪದಾರ್ಥವನ್ನು ದೇವರಿಗೆ ಅರ್ಪಿಸಿ ಪೂಜೆಯ ಕಾರ್ಯಕ್ರಮ ಮುಗಿದ ನಂತರ ಮನೆಗೆ ತೆರಳುತ್ತಾರೆ. ಮರುದಿನ ಮನೆಯ ಬಳಿಗೆ ಒಗ್ಗರನ್ನು ಕರೆಯಿಸಿ ಒಗ್ಗ ಸೇವೆಯನ್ನು ಮಾಡಿಸೋದು, ಒಗ್ಗರಾಟವನ್ನು ನಡೆಸೋದು ಮುಂತಾದ ಕಾರ್ಯಕ್ರಮವನ್ನು ಈ ನಾಮಕರಣದ ಸಂದರ್ಭದಲ್ಲಿ ನೆರವೇರಿ ಸುತ್ತಾರೆ. ಇವರಲ್ಲಿ ಹೆಚ್ಚಾಗಿ ಗೊರವ ಮಲ್ಲಪ್ಪ, ಗೊರವರ ಗಿರಿಮಲ್ಲಪ್ಪ, ಗೊರವ ಗುಡ್ಡದಯ್ಯ, ಗೊರವರ ಶೇಷಗಿರಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಹೆಣ್ಣಾದರೆ ಯಥಾ ಪ್ರಕಾರ ಮಾಳಮ್ಮ, ಗಂಗಿ ಮಾಳಮ್ಮ ಅಂತಲೇ ಕರೆಯುತ್ತಾರೆ.

ಶ್ರೀ ಮಾಳಾ-ಮಲ್ಲೇಶ್ವರರಿಗೆ ಗುರುಗಳಾದ ಒಡೆಯರ ಕುಟುಂಬಗಳಲ್ಲಿ ಈ ಪದ್ಧತಿಯ ಸಮಯದಲ್ಲಿ ಬ್ರಾಹ್ಮಣರನ್ನು ಕರೆಯಿಸಿ ಮಗುವಿನ ಜಾತಕವನ್ನು ಬರೆಸುತ್ತಾರೆ. ನಾಮಕರಣದ ಸಮಯದಲ್ಲಿ ತಮ್ಮ ಗುರುಗಳಾದ ಶೃಂಗೇರಿ ಶಾರದಪೀಠಸ್ಥರ ಸಮ್ಮುಖದಲ್ಲಿ (ಅವರನ್ನು ಕರೆಸದೇ ಇದ್ದರೂ ಅವರ ಪೋಟೋ ಇರುತ್ತೆ) ನಾಮಕರಣದ ಕಾರ್ಯಕ್ರಮ ನೆರವೇರುತ್ತದೆ. ಮಕ್ಕಳನ್ನು ಶಾಲೆಗೆ ಸೇರಿಸುವ ಮುನ್ನವೂ ಸಹ ಈ ರೀತಿ ಗುರುಪೀಠಕ್ಕೆ ಪೂಜೆ ಸಲ್ಲಿಸಿಯೇ ಸೇರಿಸುತ್ತಾರೆಯೇ ವಿನಃ ಮಲ್ಲಯ್ಯನಿಗೆ ಕುರಿತಾಗಿ ಯಾವ ಪದ್ಧತಿಯೂ ಇವರಲ್ಲಿ ಕಾಣದು. ಬಹುತೇಕವಾಗಿ ಒಡೆಯರಲ್ಲಿ ಶಂಕರಾನಂದಗಿರಿ, ಗಿರಿಧಾರಿ, ಕಪಿಲಮುನಿ, ಗೋಮುನಿ,

ಮಲ್ಲಪ್ಪಯ್ಯ ಒಡೆಯರು, ಯಂಕಪ್ಪಯ್ಯ ಒಡೆಯರು ಮುಂತಾದ ಹೆಸರುಗಳನ್ನು ಇಟ್ಟುಕೊಂಡಿದ್ದಾರೆ. ಹೆಣ್ಣು ಮಕ್ಕಳಿಗೆ ಗಂಗಿ ಮಾಳಮ್ಮ ಎಂದು ಹೆಸರಿಡದೆ ತಮಗೆ ಇಷ್ಟವಾದ ಬೇರೆ ಬೇರೆ ಹೆಸರುಗಳನ್ನು ಇಟ್ಟುಕೊಂಡಿದ್ದಾರೆ.

ಹರಿಜನರ ಮನೆಯಲ್ಲಿ ಮೊದಲು ಹೆಣ್ಣೇ ಆಗಲಿ ಅಥವಾ ಗಂಡೇ ಆಗಲೀ ಈ ಮಗು ಹೆಣ್ಣಾಗಿದ್ದರೆ ಮಾಳಮ್ಮ ಅಂತ ಕರೆಯುತ್ತಾರೆ. ಗಂಡಾದರೆ ಮಲ್ಲಯ್ಯ ಎಂದು ಕರೆಯುತ್ತಾರೆ. ಈ ಜನಾಂಗದವರು ನಾಮಕರಣಕ್ಕೆ ಶಾಸ್ತ್ರ ಇತ್ಯಾದಿಗಳನ್ನು ಪಾಲಿಸದೇ ಯಾವುದಾದರೂ ಒಂದು ಒಳ್ಳೆಯ ಶುಭ ದಿನದಂದು ಇಲ್ಲವೆ, ಮಲ್ಲಯ್ಯನ ವಾರದಂದು ನಾಮಕರಣ ಕಾರ್ಯಕ್ರಮವನ್ನು ಏರ್ಪಡಿಸಿಕೊಂಡಿರುತ್ತಾರೆ. ಇದ್ದಂತವರು ತಮ್ಮ ಬಂಧುಗಳಿಗೆ ವಿಷಯವನ್ನು ತಿಳಿಸಿ, ಸುತ್ತಮುತ್ತಲಿನವರೆಲ್ಲರನ್ನು ನಾಮಕರಣಕ್ಕೆ ಆಹ್ವಾನಿಸಿ ಆ ಮಗುವಿಗೆ ಸೋದರ ಮಾವನವರು ಕಿರಿಯಲ್ಲಿ ಹೆಸರನ್ನು ಊದಿ ಹೇಳುತ್ತಾರೆ. ಈ ಕಾರ್ಯಕ್ರಮಕ್ಕೆ ತಮ್ಮಲ್ಲಿರುವ ಗೊರವರೂ ಸಹ ಆಹ್ವಾನಿತರಾಗಿರುತ್ತಾರೆ. ಆ ದಿನ ಬಂದವರಿಗೆಲ್ಲಾ ಸಿಹಿ ಅಡುಗೆಯ ವಿಶೇಷ ಭೋಜನವಿರುತ್ತದೆ. ಆದರೆ ತೀರಾ ಬಡವರಾದರೆ ಈ ರೀತಿಯ ಯಾವುದೇ ಆಡಂಬರವನ್ನು ಮಾಡುವುದಿಲ್ಲ. ವಿಶೇಷವೆಂದರೆ; ಕೆಲವು ಕುಟುಂಬಗಳಲ್ಲಿ ನಾಮಕರಣ ಅಂತ ಹೇಳಿ ತೊಟ್ಟಿಲು ಇಡುವ ಪದ್ಧತಿ ಇಲ್ಲ. ಅಂತಹ ಕುಟುಂಬಗಳಲ್ಲಿ ಈ ಪದ್ಧತಿ ಮೊದಲಿನಿಂದಲೂ ಸಾಗಿ ಬಂದಂತಿಲ್ಲ. ಒಂದು ಒಳ್ಳೆಯ ದಿನ ನೋಡಿ ಮನೆಯವರೇ ಮಲ್ಲಯ್ಯ ಮಾಳಮ್ಮ ಅಂತ ಕರೆದುಬಿಡುತ್ತಾರೆಯೇ ವಿನಃ ಯಾವುದೇ ವಿಶೇಷ ಆಚರಣೆಯನ್ನು ಮಾಡುವುದಿಲ್ಲ. ಬ್ಯಾಗಾರರು, ನಾಯಕರು, ಬಾರಿಕರು ಮುಂತಾದ ಜನಾಂಗಗಳಲ್ಲಿಯೂ ಸಹ ಇದೇ ತೆರನಾದ ಪದ್ಧತಿಯನ್ನು ನಾವು ಕಾಣುತ್ತೇವೆ.

ಒಟ್ಟಾರೆ ಈ ಕ್ಷೇತ್ರದಲ್ಲಿ ಹೆಚ್ಚಾಗಿ ಎಲ್ಲಾ ಜನಾಂಗಗಳಲ್ಲೂ ಮಲ್ಲಯ್ಯ ಹಾಗೂ ಮಾಳಮ್ಮನ ಹೆಸರುಗಳೇ ಪುನರಾವರ್ತನೆಯಾಗಿರುವುದನ್ನು ನಾವು ಕಾಣುತ್ತೇವೆ. ಹರಿಜನರಲ್ಲಿ ವಿಶೇಷವಾಗಿ ಮಾಳಮ್ಮ, ಮಲ್ಲಿಕಾರ್ಜುನ, ಗಿರಿ, ಶೇಷಮ್ಮ, ಶೇಕಣ್ಣ, ಶೇಷ, ಶೇಷಗಿರಿ ಹೀಗೆ ಮುಂತಾಗಿರುವುದು ವಿಶೇಷ. ಬಸವಿಯಾದ ತಳವಾರ ಸಣ್ಣಮ್ಮನವರು ತಮ್ಮ ಮಗನಿಗೆ ನಾಮಕರಣ ಮಾಡಿದುದರ ಹಿನ್ನೆಲೆಯನ್ನು ಹೀಗೆ ಹೇಳಿದ್ದಾರೆ ; ''ನನಿಗೆ ಒಂದು ಗಂಡು ಹುಡುಗ ಹುಟ್ಟಿದುನುರೀ. ಅವರ ಅಪ್ಪನ ಹೆಸರು ಮಲ್ಲಿಕಾರ್ಜುನ ಅಂತ. ಅದೇ ಹೆಸರು ಮಗನಿಗೆ ಇಡಬಾರ್ದು ಅಂತ ಹೇಳಿ ಪುರಾಣಿಕರನ್ನು ಕೇಳಿ ಬಂದ್ರೆ, ನಿಮ್ಮ ಮನಿದೇವ್ರು ಹೆಸರು ಇಟ್ಟ ಮ್ಯಾಲೆ ಬ್ಯಾರೆ ಹೆಸರು ನಿಮಗೆ ಬೇಕಾದದ್ದನ್ನು ಕರೀರಿ ಅಂತ ಅಂದಿದ್ರು. ನಮ್ಮ ಮನೆದೇವ್ರು ಬಂದು ಈರಣ್ಣ. ಮನ್ಯಾಗೆ ವೋಸು ಮಂದಿಗೆ ಮಲ್ಲಯ್ಯ ಮಾಳಮ್ಮ ಅಂತ ಇಟ್ಟರೆ ಹೆಂಗ ಅಂತ್ಹೇಳಿ ನಾವು ಅವನಿಗೆ ಈರಣ್ಣ ಅಂತ ಹೆಸರು ಕರ್ದೆವಿ. ಆ ಹೆಸರು ಇಟ್ಟಮ್ಯಾಲೆ ನಮಗೆ ಐದು ವರ್ಷ ಅಂಗ ತಿಕ್ಕಡಿ ಕಾಡಿಬಿಡ್ತು. ಮಲ್ಲಯ್ಯ ತಿಪ್ಪಲು ಭರ್ತಿ ಕೊಟ್ಟಿಟ್ಟಾ. ಹುಡುಗ ಹುಶಾರೀನೇ ಇರ್ಲಿಲ್ಲ, ಸತ್ತೋಗಂಗ ಆಗಿ ಬಿಟ್ಟಿದ್ದ. ಈ ಐದು

ವರ್ಷದಾಗ ಅವನಿಗೆ ದಾವಖಾನಿಗೆ ಇಪ್ಪತ್ತು ಸಾವಿರ ರೂಪಾಯಿ ಕಳಕಂಡೀವಿ. ಈಟೆಲ್ಲಾ ತಿಕ್ಕಡಿ ಆದದ್ದಕ್ಕೆ ನಮಿಗೆ ಹೆಸರು ಸರಿ ಬರಲಿಲ್ಲ ಅಂತ ಅನ್ಕಂಡು ಹೆಸರು ಬದಲಿ ಮಾಡಿ ಅವರಪ್ಪನ ಹೆಸರೇ ಇಟ್ಟೇವಿ. ಮಲ್ಲಿಕಾರ್ಜುನ ಅಂತ. ಆ ಹೆಸರು ಇಟ್ಟಮ್ಯಾಲ ಹುಡುಗ ಹುಶ್ಯಾರು ಆಗ್ಯಾನ. ಆವತ್ತಿನಿಂದ ಇವತ್ತಿಗೂ ( ಆ ಹುಡುಗನಿಗೆ ಈಗ ೭ ವರ್ಷ ಇದಾವೆ) ಏನೂ ಕಿರಿಕಿರಿ ಆಗಿಲ್ಲ. ಬರೀ ಹೆಸರು ಬದ್ಲಿ ಇಟ್ಟಿದ್ದಕ್ಕ ಇದೀಟು ಆಯ್ತು''.

ಇದು ಬರೀ ಒಬ್ಬ ಸಣ್ಣಮ್ಮನವರ ಉದಾಹರಣೆಯಲ್ಲ. ಬಹುತೇಕ ಕುಟುಂಬಗಳು ಈ ತೆರನಾದ ಸಮಸ್ಯೆಗೆ ತುತ್ತಾಗಿ ಮರಳಿ ಮಲ್ಲಯ್ಯ, ಮಾಳಮ್ಮ ಎಂದು ಹೆಸರನ್ನು ಇಟ್ಟಿರುವುದಾಗಿ ಇಲ್ಲಿನ ಜನ ನಂಬಿಕೊಂಡು ಬಂದಿದ್ದಾರೆ.

### ೪.೨.೩. ಯೌವ್ವನ :

ಹೆಣ್ಣು ಮಕ್ಕಳು ಪುಷ್ಪವತಿಯಾದಾಗ ಬಹುತೇಕ ಎಲ್ಲಾ ಜನಾಂಗದವರು ಮಲ್ಲಯ್ಯನಿಗೆ ಸಂಬಂಧಿಸಿ ದಂತೆ ಯಾವುದೇ ರೀತಿಯ ವಿಶೇಷ ಪದ್ಧತಿಯನ್ನು ಆಚರಿಸದೇ ತಮ್ಮ ತಮ್ಮ ಪದ್ಧತಿಯಂತೆ ಆಚರಣೆಯನ್ನು ನೆರವೇರಿಸುತ್ತಾರೆ. ವಿಶೇಷವಾಗಿ ವೈದಿಕರಲ್ಲಿ ಹೆಣ್ಣು ಮಕ್ಕಳು ಪುಷ್ಪವತಿಯಾದಾಗ ಈ ದೇವರೊಂದಿಗೆ ಕೆಲವರು ಆಚರಣೆಗಳನ್ನು ಇರಿಸಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ದೇವರಿಗೆ ಅಭಿಷೇಕ ಮಾಡುವ ಮೂಲಕ ಹನ್ನೊಂದು ದಿನ, ಕೆಲವರು ಹದಿನಾರು ದಿನಗಳಲ್ಲಿ ಮೈ ನೆರೆತ ದೋಷವನ್ನು ಕಳೆದುಕೊಳ್ಳುತ್ತಾರೆ. ಉಳಿದೆಲ್ಲಾ ಕಡೆ ಬ್ರಾಹ್ಮಣ ಸಮುದಾಯದಲ್ಲಿ ವೈಷ್ಣವ ದೇವತೆಗಳನ್ನು ಬಿಟ್ಟು ಅನ್ಯ ದೇವತೆಗಳನ್ನು ಪೂಜಿಸುವುದಿಲ್ಲ. ಆದರೆ ಈ ಕ್ಷೇತ್ರದಲ್ಲಿ ಮಲ್ಲಯ್ಯನನ್ನು ಪೂಜಿಸುವುದು ಕಂಡುಬರುತ್ತದೆ.

ಲಿಂಗಾಯತ ಸಮುದಾಯದಲ್ಲಿ ಹೆಣ್ಣು ಮೈನೆರೆತಾಗ ದೋಷವನ್ನು ಕಳೆದುಕೊಳ್ಳಲು ಅಕ್ಕಿ, ಕಡಲೆ ಬಿಟ್ಟು, ತೆಂಗಿನಕಾಯಿಯನ್ನು ದೇವರಿಗೆ ಅರ್ಪಿಸುತ್ತಾರೆ. ಆಕಳದ ತುಪ್ಪದಿಂದ ಘೃತಮಾರಿ (ತುಪ್ಪದ ಮಾಳಮ್ಮ)ಗೆ ಮನೆಯಲ್ಲಿಯೇ ಆಕೆಯ ನಾಮ ಉಚ್ಚರಿಸುತ್ತಾ ಜೊತೆಗೆ ಮಲ್ಲಯ್ಯನನ್ನು ಸ್ಮರಿಸುತ್ತಾ ದೀಪ ಹಚ್ಚುತ್ತಾರೆ. ಈ ಮೂಲಕ ತಮ್ಮ ದೋಷವನ್ನು ನಿವಾರಿಸಿಕೊಳ್ಳುತ್ತಾರೆ.

ಕುರುಬ ಮತ್ತು ಗೊರವರ ಈ ಎರಡೂ ಪಂಗಡಗಳಲ್ಲಿಯೂ ಹೆಣ್ಣು ಮೈನೆರೆದಾಗ ದೋಷ ನಿವಾರಣೆಯಾದನಂತರ ಒಂದು ಸಮಾರಂಭದಲ್ಲಿ ಆ ಮೈ ನೆರೆದ ಹೆಣ್ಣನ್ನು ಹಸೆಯ ಮೇಲೆ ಕೂಡಿಸಿ, ಮಾಳಮ್ಮನಿಗೆ ಸಂಬಂಧಿಸಿದ ಯೌವ್ವನದ ಹಾಡುಗಳನ್ನು ಈ ಹುಡುಗಿಗೆ ಹೋಲಿಸಿ ಹಾಡುತ್ತಾರೆ. ಜೊತೆಗೆ ಮಲ್ಲಯ್ಯ ಮಾಳಮ್ಮರ ಯೌವ್ವನ ಪ್ರಸಂಗದ ಹಾಡುಗಳನ್ನು ಸಹ ಹಾಡುತ್ತಾರೆ.

ಹರಿಜನರಲ್ಲಿ ಹೆಣ್ಣು ಮಕ್ಕಳು ಕೈಗೆ ಬಂದಾಗ ಮಲ್ಲಯ್ಯನಿಗೆ ಸಂಬಂಧಿಸಿ ಯಾವ ಆಚರಣೆಯನ್ನು ಮಾಡುವುದಿಲ್ಲ. ಕುದುರೆಕಾರರು ಸ್ವಾಮಿಯವರಿಗೆ (ಗಣಾಚಾರಿಗಳಿಗೆ) ಬಟ್ಟೆ ಬರೆ ಕೊಟ್ಟ ಸಂಭ್ರಮವನ್ನು ಆಚರಿಸುತ್ತಾರೆ. ಒಡೆಯರಲ್ಲಿ ಅಂತಹ ವಿಶೇಷ ಪದ್ಧತಿಯೇನು ಇರದೇ ಹೆಣ್ಣು ಪುಷ್ಪವತಿಯಾದ ಹನ್ನೆರಡು ದಿವಸದಾಗೆ ಮಲ್ಲಯ್ಯನ ಪೂಜೆ ಇರುತ್ತೆ.

### ೩.೨.೪. ಮದುವೆ :

ಮದುವೆ ಅನ್ನುವುದು ಪ್ರತಿಯೊಬ್ಬರ ಬದುಕಿನಲ್ಲಿ ಒಂದು ಮಹತ್ತರವಾದ ಘಟ್ಟ. ಬ್ರಹ್ಮಚರ್ಯದಿಂದ ಗೃಹಸ್ಥಾಶ್ರಮಕ್ಕೆ ಕಾಲಿರಿಸುವ ಒಂದು ಸಂಕ್ರಮಣ ಕಾಲ ಅದು. ಬ್ರಹ್ಮಚಾರಿಯಾಗಿದ್ದ ಒಬ್ಬ ಯುವಕ ಅಥವಾ ಯುವತಿ 'ಮದುವೆ' ಅನ್ನೋ ಮೂರು ಅಕ್ಷರದ ಬಂಧದಲ್ಲಿ ಎಲ್ಲೋ ಹುಟ್ಟಿದ ಗಂಡಿಗೆ ಎಲ್ಲೋ ಹುಟ್ಟಿ ಬೆಳೆದ ಹೆಣ್ಣು ಮದುವೆ ಅನ್ನೋ ಹಂದರದಲ್ಲಿ ಒಬ್ಬರಿಗೊಬ್ಬರು ದಂಪತಿಗಳಾಗಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಈ ಮದುವೆಗೆ ಸಂಬಂಧಿಸಿದಂತೆ ಶ್ರೀ ಮೀನಗೊಂದಿ ಮಲ್ಲಯ್ಯ ಕ್ಷೇತ್ರದ ಬಹುತೇಕ ಎಲ್ಲಾ ಜನಾಂಗದವರ ಮನೆದೇವರಾಗಿರುವುದರಿಂದ ಮದುವೆಯ ಶುಭ ಕಾರ್ಯದಲ್ಲಿ ಎಲ್ಲಾ ಜನಾಂಗದವರು ಮದುವೆಯ ಮುಂಚೆ ಮಧುಮಗನ ಜೊತೆ ಮತ್ತಿತರರು ಬೆಟ್ಟಕ್ಕೆ ಬಂದು ಮೀಸಲು ರೂಪದಲ್ಲಿ ಬಟ್ಟೆಯನ್ನು ಸ್ವಾಮಿ ಮಲ್ಲಯ್ಯನಿಗೆ ಏರಿಸುತ್ತಾರೆ. ಜೊತೆಗೆ ಧಾನ್ಯಗಳು, ಕೊಬ್ಬರಿ, ಬೆಲ್ಲ, ತುಪ್ಪ ಮುಂತಾದವನ್ನು ಅರ್ಪಿಸಿ ಕಾಯಿ ಒಡೆಸಿಕೊಂಡು ಮದುವೆ ಕಾರ್ಯಕ್ರಮಕ್ಕೆ ಶುಭ ಆಶೀರ್ವಾದವನ್ನು ಪಡೆದುಕೊಂಡು ಬರುತ್ತಾರೆ. ಹರಕೆ ಇಲ್ಲದವರು ಸಹ ಗಿರಿಗೆ ಬಂದು ಮನೆದೇವರಿಗೆ ಪೂಜೆಯನ್ನು ಸಲ್ಲಿಸಿ ಮದುವೆಯ ಮುಂದಿನ ಆಚರಣೆಗಳಿಗೆ ಅಣಿಯಾಗುತ್ತಾರೆ. ಇದು ಪ್ರತಿಯೊಂದು ಜನಾಂಗದವರಲ್ಲಿ ತಪ್ಪದೇ ನಡೆಯುವ ಆಚರಣೆ.ಬ್ರಾಹ್ಮಣ ಸಮುದಾಯದಲ್ಲಿ ಮದುವೆ ಮುಂತಾದ ಯಾವುದೇ ಶುಭ ಕಾರ್ಯ ನಡೆಯಲಿ ಕುಲ ದೇವರು ಅಂತ ಮಾಡ್ತಾರೆ. ಆದಕ್ಕೆ ಕಂಚಾವೀರ ಅಂತ ಹೆಸರು. ಕಂಚಾವೀರ ಅಂದರೆ ಗೊರವಯ್ಯನವರನ್ನು ಮನೆಗೆ ಕರೆಸುತ್ತಾರೆ. ಅದು ಮುಹೂರ್ತ ಕಟ್ಟಿದ ತರುವಾಯ ಗೊತ್ತುಪಡಿಸಿದ ದಿನದಂದು ಇವರನ್ನು ಕರೆಸಿ ನೈವೇದ್ಯ ಮಾಡಿ ಎಲೆಯಲ್ಲಿ ಪ್ರಸಾದ ಬಡಿಸಿ ಉಣಬಡಿಸುತ್ತಾರೆ. ಪ್ರಸಾದವನ್ನು ಸ್ವೀಕರಿಸಿದ ಗೊರವಯ್ಯನವರು ನಿಮಗೆ ಒಳ್ಳೆಯದಾಗಲಿ ಆ ಸ್ವಾಮಿ ಮಲ್ಲಯ್ಯನ ಅನುಗ್ರಹ ನಿಮಗಿರಲಿ ಎಂದು ಹಾರೈಸುತ್ತಾರೆ. ಗೊರವರ ಆಶೀರ್ವಾದವನ್ನು ಪಡೆದುಕೊಂಡ ತರುವಾಯವೇ ಮನೆಗೆ ಸುಣ್ಣ ಹಚ್ಚುವುದು, ಮದುವೆ ಸಾಮಾನುಗಳನ್ನು ತರುವುದು, ಲಗ್ನಪತ್ರಿಕೆ ಅಚ್ಚು ಹಾಕಿಸುವುದು ಮುಂತಾದ ಕೆಲಸಗಳನ್ನು ಹಮ್ಮಿಕೊಳ್ಳುತ್ತಾರೆ. ತಾಳಿಯ ದಿನ ಸಕ್ಕರೆ ಪಾನಕ ಮಾಡಿ ಮದುವೆ ಆಗುವವರ ಹೆಸರಿನಲ್ಲಿ ದೇವರಿಗೆ ಸ್ವಲ್ಪ ಹಣವನ್ನು ಕಟ್ಟುತ್ತಾರೆ. ಉಳಿದಂತೆ ಮದುವೆಯ ಕಾರ್ಯಕ್ರಮ ತಮ್ಮ ನಡಾವಳಿಯಂತೆ ನಡೆಯುತ್ತದೆ. ಮದುವೆಯಾದ ಒಂದು ವಾರದೊಳಗಾಗಿ ನೂತನ ದಂಪತಿಗಳು ಬೆಟ್ಟಕ್ಕೆ ಹೋಗಿ ಪೂಜೆ ಸಲ್ಲಿಸಿ ಕಾಯಿ ಒಡೆಸಿಕೊಂಡು ಬರುತ್ತಾರೆ. ಈ ಮೊದಲು ಮದುಮಗನು ಹೊಸ ಬಟ್ಟೆಗಳನ್ನು ಗಿರಿಮಲ್ಲಯ್ಯನಿಗೆ ಏರಿಸಿ ಅವರ ಆಶೀರ್ವಾದವನ್ನು ಪಡೆದುಕೊಂಡು ಬಂದಿರುತ್ತಾನೆ.

ಲಿಂಗಾಯತರು ಈ ಸಂದರ್ಭದಲ್ಲಿ ಮಲ್ಲಯ್ಯನ ಹೆಸರನ್ನು ಉಚ್ಚರಿಸುತ್ತ ಲಗ್ನಪತ್ರಿಕೆಯನ್ನು ಬರೆಸುತ್ತಾರೆ. ನೆರಣಿಕೆ ಗ್ರಾಮದಲ್ಲಿ ವಿಶೇಷವಾಗಿ ಸ್ವಾಮಿಯ ಉತ್ಸವ ಮೂರ್ತಿಗಳಿಗೆ (ನೆರಣಿಕೆಯ ದೇವರು ಮನೆಯಲ್ಲಿರುವ ಉತ್ಸವ ಮೂರ್ತಿಗಳು) ಪೂಜೆ ಮಾಡಿ ಈ ಕಾರ್ಯವನ್ನು ನೆರವೇರಿಸುತ್ತಾರೆ. ಕೆಲವರು ಈ ಕ್ಷೇತ್ರದಲ್ಲಿಯೇ ಮದುವೆಯಾದದ್ದುಂಟು.

ಒಡೆಯರು ಮದುವೆಯ ಸಂದರ್ಭದಲ್ಲಿ ಮುಹೂರ್ತ ಕಟ್ಟಿದ ತರುವಾಯ ಬಂಢಾರಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆಹ್ವಾನವನ್ನು ನೀಡುತ್ತಾರೆ. ಬಂಢಾರಕ್ಕೆ ಸಂಬಂಧಪಟ್ಟವರೆಂದರೆ; ಗಣಾಚಾರಿಗಳು, ವಗ್ಗರು, ಕುದುರೆಕಾರರು, ಬಸವಿಯರು, ಕಂಚಾವೀರರು ಹೀಗೆ ದೀಕ್ಷೆ ಪಡೆದ ಪ್ರತಿಯೊಬ್ಬರೂ ಆಗಿರುತ್ತಾರೆ.

ಈ ರೀತಿ ಒಡೆಯರು ಬಂಢಾರ ನೀಡುವ ಕಾರ್ಯವನ್ನು ತಮ್ಮ ಕೈಕೆಳಗಿನ ಗಣಾಚಾರಿಗಳಿಗೆ ತಿಳಿಸಿ ಬಿಡುತ್ತಾರೆ. ಗಣಾಚಾರಿಗಳು ಬಂಢಾರಕ್ಕೆ ಸಂಬಂಧಪಟ್ಟ ಎಲ್ಲರಿಗೂ ಒಡೆಯರು ನೀಡಿದ ಬಂಢಾರವನ್ನು ತಲುಪಿಸಿ ಮದುವೆಗೆ ಆಹ್ವಾನಿಸುತ್ತಾರೆ. ಒಡೆಯರು ಸ್ವತಃ ಭಕ್ತರಿಗೆ ಹಾಗೂ ಆಯಾ ಊರಿನ ಪ್ರಮುಖರಿಗೆ ಬಂಢಾರವನ್ನು ನೀಡಿ ಮದುವೆಗೆ ಆಹ್ವಾನಿಸುತ್ತಾರೆ. ತಮ್ಮ ಬಳಗದವರನ್ನು ಆಹ್ವಾನಿಸುವುದು ಸಹಜವೇ ಆಗಿದೆ. ಒಡೆಯರು ಮದುವೆಗೆ ಮುಂಚೆ ತಮ್ಮ ಗುರುಪೀಠವಾದ ಶೃಂಗೇರಿಗೆ ಹೋಗಿ ಪೂಜೆ ಸಲ್ಲಿಸಿ ಆಶೀರ್ವಾದವನ್ನು ಪಡೆದುಕೊಂಡು ಬರುತ್ತಾರೆ. ಅಲ್ಲಿಗೆ ಹೋಗಿ ಬರಲು ಆಗದಿದ್ದಾಗ ಮನೆಯಲ್ಲಿಯೇ ಪೂಜಾ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ನಂತರ ತಮ್ಮ ಮನೆದೇವರಾದ ಉರುಕುಂದಿ ಈರಣ್ಣ ದೇವರಿಗೆ ಬಟ್ಟೆ ಏರಿಸಿ ಪೂಜೆಯನ್ನು ಕೈಗೊಳ್ಳುತ್ತಾರೆ. ''ನಾವು ನಮ್ಮ ಮನೆದೇವ್ರಾದ ಉರುಕುಂದಿ ಈರಣ್ಣನಿಗೆ ಪ್ರತಿ ವರ್ಷ ನಡ್ಕಂತೀವಿ. ನಮ್ಮ ತಾತ ಮುತ್ತಾತನವರಿಗೆ ಈ ಬೆಟ್ಟದಿಂದ ಅಷ್ಟು ದೂರ ನಡ್ಕಂಡು ಹೋಗಿ ಬರಾಕ ತ್ರಾಸಾಗಿದ್ದರಿಂದ ಗುಡ್ಡದಲ್ಲಿಯೇ ಈರಣ್ಣನ ಗುಡಿ ಅಂತ ನಮ್ಮ ಸಿಂಹಾಸನದ ಎದುರುಗಡೆನೇ ಗುಡಿ ಕಟ್ಟಿದ್ದಾರೆ. ಮತ್ತೆ ಬಲ್ಲೂರಾಗ ಸಹ ಒಂದು ಸಣ್ಣ ಈರಣ್ಣನ ಗುಡಿ ಕಟ್ಟಿಸ್ಯಾರ ಎಂದು ಕಪಿಲಮುನಿ ಸ್ವಾಮಿಗಳು ಹೇಳುತ್ತಾರೆ. ಜೊತೆಗೆ ಇವರು ತಮ್ಮ ಮನೆಯ ಹೆಣ್ಣು ದೇವರಾದ ಹುಲಿಗೆಮ್ಮನಿಗೆ ಮದುವೆಗೆ ಮುಂಚೆ ಆ ತಾಯಿಯ ಆಶೀರ್ವಾದಕ್ಕಾಗಿ ಕಾಯಿಯನ್ನು ಕಳಿಸುತ್ತಾರೆ. ಅನುಕೂಲವಾದರೆ ಅವರ ಕುಟುಂಬದಲ್ಲಿ ಅವರಾದರೂ ಒಬ್ಬರು ಹುಲಿಗಿಗೆ ಹೋಗಿ ಬರುತ್ತಾರೆ. ಒಟ್ಟಾರೆ ಮದುವೆಗೆ ಮುಂಚೆ ಒಡೆಯವರು ಗುರುಪೀಠಸ್ತರಿಂದ, ಮನೆದೇವರಿಂದ, ಹೆಣ್ಣು ದೇವರಿಂದ ಆಶೀರ್ವಾದವನ್ನು ಪಡೆದು ಮುಂದಿನ ಕಾರ್ಯಗಳಿಗೆ ನಾಂದಿ ಹಾಡುತ್ತಾರೆ.

ಮದುವೆ ಇನ್ನೂ ನಾಲ್ಕೈದು ದಿನಗಳು ಇರುವ ಮುಂಚೆ ಬಂಢಾರಕ್ಕೆ ಸಂಬಂಧಪಟ್ಟ ಕಮಿಟಿಯ ಸದಸ್ಯರೆಲ್ಲ ಒಡೆಯರ ಬಳಿ ಬಂದಾಗ ಒಡೆಯರು ''ನೋಡ್ರಪ್ಪ ಪಲಾನ ಇಂತ ದಿನ ನಮ್ಮ ಮನ್ಯಾಗ ಲಗ್ನದ ಕಾರ್ಯವು ಐತೆ ನೀವೆಲ್ಲಾ ತಪ್ಪಸ್ದಂಗ ಬರ್ಬೇಕು'' ಎಂದು ಹೇಳುತ್ತಾರೆ. ಆದರಂತೆ ಗೊರವರು, ವಗ್ಗರು, ಕುದುರೆಕಾರರು, ಬಸವಿಯರು ಮುಂತಾಗಿ ದೀಕ್ಷೆ ಪಡೆದವರೆಲ್ಲಾ ಅವರವರಿಗೆ ಸಂಬಂಧಿಸಿದ ಗೊರವಿಕೆಯ ಉಡುಪುಗಳನ್ನು ಧರಿಸಿ ಬಂದು ಒಡೆಯರ ಪಾದಗಳಿಗೆ ನಮಸ್ಕರಿಸಿ, ಗುರುವಿಗೆ ಕೊಡಬೇಕಾದ ಕಾಣಿಕೆಯನ್ನು ನೀಡಿ ಅವರಿಂದ ಆಶೀರ್ವಾದ ಮತ್ತು ಬಂಢಾರವನ್ನು ಪಡೆಯುತ್ತಾರೆ. ಕೆಲವರು ಒಡೆಯರಿಗೆ ಬಟ್ಟೆಗಳನ್ನು ಈ ಮದುವೆಯ ಸಂದರ್ಭದಲ್ಲಿ ಕಾಣಿಕೆಯಾಗಿ ನೀಡುತ್ತಾರೆ. ದೀಕ್ಷಾಕಾರರು ಮದುವೆಯ ಸಂದರ್ಭದಲ್ಲಿ ಯಾವುದೇ ರೀತಿಯ ಒಗ್ಗರಾಟದಂತಹ ಕುಣಿತದ, ಹಾಡುಗಳನ್ನು ಹಾಡುವ ಆಚರಣೆಯನ್ನೇನು ಮಾಡುವುದಿಲ್ಲ. ಒಡೆಯರು ಸಹ ಸಿಂಹಾಸನದ ಕಟ್ಟೆಯಲ್ಲಿ ಕುಳಿತಾಗ ಉಡುವ ರಾಜರ ಉಡುಪು ಧರಿಸದೇ ಮಾಮೂಲಿನಂತಿರುತ್ತಾರೆ. ''ಮದುವೇಲಿ ನಾವು ಮಾಮೂಲಿ ಇರ್ತೀವಿ. ಗುಡಿ ಕಟ್ಟೋದಾಗಲೀ, ವಗ್ಗರಾಟ ಆಡೋವಾಗಾಗಲೀ ಇಲ್ಲ ದೇವರ ಕಾರ್ಯೆವು ಇದ್ದಾಗ ಮಾತ್ರ ನಾವು ರಾಜರ ಉಡುಗೆಯನ್ನು ಹಾಕ್ತೀವಿ (ರಾಜರ ಉಡುಗೆ ಅಂದ್ರೆ ತಲೆಗೆ ಜರಿಪೇಟ ಇರುತ್ತೆ, ಬಿಳಿ ಅಂಗಿಯ ಮೇಲೆ ಕೋಟು, ದೋತರವನ್ನು ಧರಿಸಿ ರುತ್ತಾರೆ. ಹಣೆಗೆ ಗಂಧದ ತಿಲಕವನ್ನಿಟ್ಟು ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡಿರುತ್ತಾರೆ) ಲಗ್ನದ ವಿಚಾರಕ್ಕೆ ನಾವು ಅವನ್ನೆಲ್ಲಾ ಬಳಸಂಗಿಲ್ಲ ಎಂದು ಕಪಿಲಮುನಿಸ್ವಾಮಿಗಳು ಹೇಳುತ್ತಾರೆ. ಮದುವೆಗೆ ಮುಂಚೆನೇ ದೋಣಿ ಪೂಜೆ, ಸ್ವಾಮಿಪೂಜೆ, ದೇವರ ಪೂಜೆ ಮಾಡಿಸಿ, ಭಕ್ತರಿಗೆ ಊಟ ಹಾಕಿಸಿ ಮಲ್ಲೇಶ್ವರನ ಕಾರ್ಯಕ್ರಮ ಮಾಡ್ತಾರೆ. ಇನ್ನು ಉಳಿದಂತೆ ಮದುವೆ ಕಾರ್ಯವೆಲ್ಲವೂ ಪುರೋಹಿತರು ನಡೆಸಿಕೊಡುವ ಪ್ರಕಾರದಲ್ಲಿಯೇ ನಡೆಯುತ್ತದೆ.

ಗಣಾಚಾರಿಗಳು ತಮ್ಮ ಮದುವೆಯ ಸಂದರ್ಭದಲ್ಲಿ ಲಗ್ನ ಇನ್ನು ಎರಡು ಮೂರು ದಿನ ಇರುವ ಮುಂಚೆ ಮದುಮಗನ ಸಮೇತ ಕೆಲವರು ಗಿರಿಗೆ ಹೋಗಿ ಎಲೆ ಪೂಜೆ ಕಟ್ಟಿಸಿ ಅಕ್ಕಿ, ಬೇಳೆ, ಕೊಬ್ಬರಿ, ಬೆಲ್ಲ, ತುಪ್ಪ ಮುಂತಾದ ಹರಕೆಯ ಪದಾರ್ಥಗಳನ್ನೆಲ್ಲಾ ಮೀಸಲು ರೂಪದಲ್ಲಿ ದೇವರಿಗೆ ನೀಡಿ ಪೂಜಾ ಕಾರ್ಯಕ್ರಮ ವನ್ನು ನೆರವೇರಿಸಿ ಮದುವೆ ಕಾರ್ಯಕ್ರಮಗಳಲ್ಲಿ ಯಾವುದೇ ವಿಘ್ನಗಳು ಬರದೇ ಸುಸೂತ್ರವಾಗಿ ನೆರವೇರಲಿ ಎಂದು ಬೇಡಿಕೊಂಡು ದೇವರ ಆಶೀರ್ವಾದದೊಂದಿಗೆ ಊರಿಗೆ ಮರಳುತ್ತಾರೆ. ತಾಳಿಗೆ ಒಂದು ದಿನದ ಮುಂಚೆ ಅಂದರೆ ದೇವರೂಟದ ದಿನದಂದು ಗಣಾಚಾರಿಗಳು ಬಂಢಾರ ನೀಡಿ ಆಹ್ವಾನಿಸಿದಂತೆ ಒಗ್ಗರು ಬಂದಿರುತ್ತಾರೆ. ಆ ದಿನ ಬೆಳಿಗ್ಗೆ ಎಂಟು ಒಂಭತ್ತರ ಸುಮಾರಿಗೆ ಒಗ್ಗ ಸೇವೆ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಮದುವೆ ಮನೆಯವರು ಪೂಜೆಯ ನಂತರ ಒಗ್ಗರ ದೋಣಿಗಳಿಗೆ ಹೋಳಿಗೆ, ಹಾಲು, ತುಪ್ಪ,ಹಣ್ಣು ಮುಂತಾದವನ್ನು ನೈವೇದ್ಯ ರೂಪದಲ್ಲಿ ನೀಡಿ ಗೊರವರಿಗೆ ಸಂತೃಪ್ತಿ ಪಡಿಸುತ್ತಾರೆ. ಇದರ ಜೊತೆಗೆ ಭಕ್ತರು ದೋಣಿಯನ್ನು ತುಂಬಿಸಿ ಒಗ್ಗರಿಗೆ ದಕ್ಷಿಣೆಯನ್ನು ನೀಡಿ

ಅವರಿಂದ ದೋಣಿಯಲ್ಲಿರುವ ಪದಾರ್ಥವನ್ನು ಪ್ರಸಾದವಾಗಿ ಸ್ವೀಕರಿಸುತ್ತಾರೆ. ಒಗ್ಗರಿಗೆ ಗಣಾಚಾರಿಗಳು ಗುರುಗಳಾಗಿರುವುದರಿಂದ ಒಗ್ಗರು ಗುರುಗಳ ಪಾದಗಳಿಗೆ ನಮಸ್ಕರಿಸಿ ಅವರಿಗೆ ಕಾಣಿಕೆಯನ್ನು ನೀಡುತ್ತಾರೆ. ಕೆಲವರು ಬಟ್ಟೆಯನ್ನು ಸಹ ಕೊಡುತ್ತಾರೆ. '' ಒಗ್ಗರು ನಮ್ಮ ಗುರುಗಳು ಅಂತ್ಹೇಳಿ ಹತ್ತು ಇಲ್ಲ ಹನ್ನೊಂದು ರೂಪಾಯಿ ನಮ್ಮ ಕೈಯಾಗ ದಕ್ಷಿಣೆ ಇಟ್ಟು, ಗುರು ಸೇವೆ ಮಾಡ್ತಾರೆ. ಒಗ್ಗಪ್ಪನವರು ನಮಗಿಂತಲೂ ದೊಡ್ಡ ವಯಸ್ಸಿನವರಾದ್ರೂ, ನಮ್ಮ ಪಾದ ಪೂಜೆಯನ್ನು ಮಾಡ್ಕಂತಾರೆ'' ಎಂದು ಗಣಾಚಾರಿ ಮಲ್ಲಯ್ಯನವರು ಹೇಳುತ್ತಾರೆ.

ಲಗ್ನದ ದಿನಕ್ಕೆ ಒಡೆಯರು ಗಣಾಚಾರಿಗಳ ಆಮಂತ್ರಣವನ್ನು ಮನ್ನಿಸಿ ಮದುವೆಗೆ ಆಗಮಿಸಿರುತ್ತಾರೆ. ಒಡೆಯರು ಮದುವೆ ಮಂಟಪಕ್ಕೆ ಬಂದಾಗ ಭಕ್ತರು, ಗೊರವರು, ಇತರೆ ಗಣಾಚಾರಿಗಳನ್ನು ಅವರ ಪಾದಗಳಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದುಕೊಳ್ಳುತ್ತಾರೆ. ತಾಳಿಗೆ ಇನ್ನು ಒಂದು ತಾಸು ಇರುವ ಮುಂಚೆ ಮದು ಮಗನು ಒಡೆಯರನ್ನು ಒಂದು ಪ್ರತ್ಯೇಕಪೀಠದಲ್ಲಿ ಕೂಡಿಸಿ ಹೂವು, ಹಣ್ಣು ಹಂಪಲುಗಳ ಜೊತೆ ಅಕ್ಕಿ, ಬೇಳೆ, ಕೊಬ್ಬರಿ, ಬೆಲ್ಲ, ಎಲೆ ಅಡಿಕೆಯ ಜೊತೆಗೆ ದಕ್ಷಿಣೆಯನ್ನು ನೀಡಿ ಹೊಸ ವಸ್ತ್ರವನ್ನು ಪೂಜೆಗೆ ಇಟ್ಟು, ಭಕ್ತಿ ಪೂರ್ವಕವಾಗಿ ಅವರ ಪಾದಪೂಜೆಯನ್ನು ಮಾಡುತ್ತಾನೆ. ಒಡೆಯರು ಆಗುವ ಶುಭಕಾರ್ಯಕ್ಕೆ ಆಶೀರ್ವದಿ ಸುತ್ತಾರೆ. ಈ ಕಾರ್ಯಕ್ರಮದ ನಂತರವೇ ಲಗ್ನದ ಮುಂದಿನ ಕಾರ್ಯಕ್ರಮಗಳು ನೆರವೇರುವುವು.

ಹರಿಜನರು ಮಲ್ಲಯ್ಯನಿಗೆ ಪೂಜೆ ಮಾಡದೇ ಹೊರತು ಯಾವುದೇ ಕಾರ್ಯಕ್ರಮವನ್ನು ಜರುಗಿಸುವುದೇ ಇಲ್ಲ. ತಾಳಿಯು ಒಂದು ದಿನ ಇರುವ ಮುಂಚೆ 'ನಿಬ್ಬಣ' ಅಥವಾ 'ದೇವರೂಟ' ಎನ್ನುವ ಕಾರ್ಯ ಇರುತ್ತದೆ. ''ನಿಬ್ಬಣದ ದಿನ ಬೀಗರು ಬರ್ತಾರೆ. ಆವಾಗ್ಲೇ ಕತ್ಲಾಗಿರ್ತೈತೆ. ರಾತ್ರಿ ಗುಡಿಗೆ ಬಂದು (ನೆರಣಿಕೆಯಲ್ಲಿರುವ ಮಾದರ ಕೇರ್ಯಾಗಿನ ಮಲ್ಲಯ್ಯನ ಗುಡಿ) ಮಲ್ಲಯ್ಯಗೆ ಮೀಸಲಾಗಿ ಅಕ್ಕಿ ಕೊಡುತ್ತಾರೆ; ಬೇಳೆ ಕೊಡುತ್ತಾರೆ. ಪೂಜೆಗೆ ಮದಲಿಂಗನ (ಮಧುಮಗ) ಬಟ್ಟೆಗಳನ್ನು ಇಡುತ್ತಾರೆ. ಆ ಮೇಲೆ ಕಾಯಿ ಒಡಕ್ಕೊಳ್ಳೋರು ಕಾಯಿ ಒಡಕಂತಾರೆ. ಹೀಗೆ ಮಲ್ಲಯಗ ಬಟ್ಟೆಗಳನ್ನು ನೀಡಿ ಮೀಸಲು ನೀಡಿ ಪೂಜಾ ಆದ ಮ್ಯಾಲೆ ಮದುವೆ ಕಾರ್ಯಾ ಮಾಡ್ತಾರೆ''. ಕೆಲವರು ಗಿರಿಗೆ ಹೋಗಿ ಇದೇ ಮೀಸಲನ್ನು ಮಾದರ ಮಲ್ಲಯ್ಯನ ಗುಡಿಗೆ ಕೊಟ್ಟು ಕಾಯಿ ಒಡೆಯಿಸಿಕೊಂಡು ಬರುತ್ತಾರೆ. ಗೊರವರು ಇಲ್ಲ ಬಸವಿಯರಾದ್ರೆ ತಪ್ಪದೆಯೇ ಮದುವೆಗೆ ಮುಂಚೆ ಗುಡ್ಡಕ್ಕೆ ಹೋಗಿ ಮಲ್ಲಯ್ಯನಿಗೆ ಮೀಸಲು ಕೊಟ್ಟು ಬಟ್ಟೆಗಳನ್ನು ಏರಿಸಿ, ಪೂಜೆಯನ್ನು ಮಾಡಿಕೊಂಡು ಬಂದ ಮೇಲೆಯೇ ಮದುವೆಯ ಕಾರ್ಯಕ್ರಮಗಳನ್ನು ಸೂಸೂತ್ರವಾಗಿ ನಡೆಸುತ್ತಾರೆ.

ಕುದುರೆಕಾರರು ಮತ್ತು ವಗ್ಗಯ್ಯನವರು ಮದುವೆಗೆ ಮುಂಚೆ ಗಿರಿಗೆ ಹೋಗಿ, ತಮ್ಮ ಗುರುವಾದ ಒಡೆಯರಿಗೆ ನಮಸ್ಕರಿಸಿ; ಹೂವು, ಹಣ್ಣು, ಧಾನ್ಯ, ಬಟ್ಟೆಯ ಕಾಣಿಕೆಗಳನ್ನು ನೀಡಿ ಅವರ ಪಾದಪೂಜೆ ಮಾಡಿ ಅವರಿಂದ ಬಂಢಾರದ ಜೊತೆ ಆರ್ಶಿರ್ವಾದವನ್ನು ಪಡೆಯುತ್ತಾರೆ. ಹಾಗೆ ಗಿರಿಯ ಮೇಲೇರಿ ಮಲ್ಲೇಶ್ವರನಿಗೆ ಕಾಯಿಯನ್ನು ಕೊಟ್ಟು ಬರುತ್ತಾರೆ. ಕೆಲವರು ಮದುವೆಯ ಸಂದರ್ಭದಲ್ಲಿಯೇ ದೀಕ್ಷೆಯನ್ನು ಪಡೆದುಕೊಂಡ ಉದಾಹರಣೆಯಿದೆ. ''ನನ ಮದುವ್ಯಾಗ ಮೂರು ದಿನದ ಮುಂಚೆ ಕೊಡೋ ಮುಡುಪು ಕೊಟ್ಟು ಬಂದ್ವಿ. ನಾಳೆ ತಾಳ ಐತೆ ಅನ್ಲಿಕ್ಕೆ ದೀಕ್ಷೆಯನ್ನು ಕೊಟ್ರು, ದೀಕ್ಷೆ ನೀಡಾಕೆ ಗಣಾಚಾರಿಗಳು, ವಗ್ಗರು ಮಾಡಾ ಪೂಜೆಯಲ್ಲ ಮಾಡಿ ಕಂಚಾವೀರ ಅಂತ ನನ್ಗೆ ಮುದ್ರೆ ಹಾಕಿದ. ಆಮ್ಯಾಕ ಕಂಕಣ ಕಟ್ಟಿಬಿಟ್ರು. ಹಿಂಗೆ ಮಾಡಿದ್ರೆ ನನ್ನ ದೇವರಿಗೆ ಬಿಟ್ಟಂಗೇ ಲೆಕ್ಕ. ಇನ್ನು ಮದುವೆ ಮಾಮೂಲು ನಡಿತೈತಿ'' ಎಂದು ಕಂಚಾವೀರ ಬಸವಣ್ಣನವರು ಹೇಳುತ್ತಾರೆ.

ಮೈಲಾರದಲ್ಲಿ ಮದುವೆ ಇರುವ ಮುಂಚೆ ಗ್ವಾರಮ್ಮನವರು ಹಡ್ಲಿಗಿಯನ್ನು ತುಂಬಿಸ್ತಾರೆ. ಜೊತೆಗೆ ದೋಣಿಯನ್ನು ತುಂಬಿಸ್ತಾರೆ. ಮದುವೆ ಆದ ಮ್ಯಾಲೆ ಗಂಡ ಹೆಂಡ್ತಿ ಕಳಸ ನೋಡಾಕ ಹೋಗುತ್ತಾರೆ. ಅದಕ್ಕೇನು ಜಾತ್ರೆ ಹುಣ್ಣಿಮೆ ಅಂತೇನು ಇಲ್ಲ; ಯಾವಾಗಾದ್ರು ಹೋಗಬಹುದು.

''ಮಹಾರಾಷ್ಟ್ರದಲ್ಲಿ ದೀಕ್ಷೆ ವಹಿಸಿದವರ ಮನೆಯಲ್ಲಿ ಲಗ್ನ ಮುಂತಾದ ವಿಶೇಷ ಕಾರ್ಯಕ್ರಮವಿದ್ದಾಗ ವಾಘ್ಯ ಮುರಳಿಯವರಿಂದ ಹಾಡು-ಕುಣಿತ ವಾದ್ಯಗಳ ಸೇವೆ ನಡೆಯುತ್ತದೆ. ನಂತರ ಬೆಳಿಗ್ಗೆ ಸರಪಳಿ ಪವಾಡ ನಡೆಯುತ್ತದೆ. ಮಾಂಸಹಾರಿಗಳಾದರೆ ಕುರಿಯ ಬಲಿ ನಡೆಯುತ್ತದೆ. ಶಾಖಾಹಾರಿಗಳು ಹೂರಣ, ಮೊಸರನ್ನ, ಹಸೀ ಉಳ್ಳೀಗಡ್ಡಿ, ಬದನೆಕಾಯಿ, ಉಪ್ಪು, ಬಳ್ಳೊಳ್ಳಿಗಳ ಸಮೇತ ನೈವೇದ್ಯ ಮಾಡಿ, ಕಾಯಿ ಒಡೆಯುತ್ತಾರೆ'' (ಡಾ। ಎಂ.ಬಿ.ನೇಗಿನಹಾಳ; ೧೯೯-೧೯೦). ಮದುವೆಯಂತಹ ಮಂಗಳ ಕಾರ್ಯದಲ್ಲಿ 'ಜಾಗರಣೆ' ಎಂದು ವಾಘ್ಯ ಮತ್ತು ಮುರಳಿಯರನ್ನು ಕರೆಸುತ್ತಾರೆ. ಹರಿಜನ ವಗ್ಗಯ್ಯ ಕುರುಬ ಗೊಗ್ಗಯ್ಯ ಎಂದು ಬೇಧ ಮಾಡದೇ ಭಕ್ತರು ಎಲ್ಲರೂ ಈ ಪ್ರಸಂಗದಲ್ಲಿ ಪಾದಕ್ಕೆ ಬೀಳುತ್ತಾರೆ. ಕಂಬಳಿ ಹಾಸಿ ಸಾಸಕ್ಕಿ ಹೊಯ್ದು, ರಂಗದಲ್ಲಿ ಮದುಮಗನನ್ನು ವಾಘ್ಯ ತಂದು ಕೂಡಿಸುತ್ತಾನೆ. ವಾಘ್ಯ ಮುರಳಿಯರ ಅಕ್ಷತಾರೋಪಣ ಮಾಡಿದ ಮೇಲೆ ಬೇರೆಯವರು ಅಕ್ಷತಾರೋಪಣ ಮಾಡುತ್ತಾರೆ. ವಾಘ್ಯಗಳು ಲಗ್ನಕ್ಕೆ ಹೋಗುವುದು ತಮ್ಮ ಭಕ್ತರ ಮನೆಗಳಿಗೆ ಮಾತ್ರ.

## ೩.೨.೫. ಮರಣ :

ಮರಣವೆನ್ನುವುದು ಮನುಷ್ಯ ಜೀವನದ ಕೊನೆಯ ಘಟ್ಟ. ಸತ್ತ ವ್ಯಕ್ತಿಯು ಯಾವುದೇ ಜನಾಂಗದವರಾಗಿದ್ದರೂ ಸಹ ಅವರದೇ ಆದ ಧಾರ್ಮಿಕ ಹಿನ್ನೆಲೆಯಲ್ಲಿ ಶವ ಸಂಸ್ಕಾರದ ಪದ್ಧತಿಯ ಆಚರಣೆ ಇರುವುದನ್ನು ನಾವು ಕಾಣುತ್ತೇವೆ. ಈ ಆಚರಣೆಗಳು ಸತ್ತ ವ್ಯಕ್ತಿಗೆ ನಾವು ತೋರಿಸುವ ಗೌರವ ಒಂದೆಡೆಯಾದರೆ, ಇನ್ನೊಂದೆಡೆ ವ್ಯಕ್ತಿಯ ಆತ್ಮಕ್ಕೆ ಶಾಂತಿಯನ್ನು ಕೋರುವ ಸಲುವಾಗಿ ಮಾಡುವ ಪದ್ಧತಿಗಳೇ ಆಗಿವೆ. ಮನೆಯಲ್ಲಿ ಸಾವು ಸಂಭವಿಸಿದಾಗ ಪ್ರತಿಯೊಂದು ಕುಟುಂಬದವರು ತಮ್ಮ ಬಂಧುಗಳಿಗೆ, ಹಿತೈಷಿಗಳಿಗೆ ಹೇಳಿ ಕಳುಹಿಸುತ್ತಾರೆ. ತಾವುಗಳು ತಂದ ಹೂವಿನಹಾರವನ್ನು ಸತ್ತವರ ಕೊರಳಿಗೆ ಹಾಕಿ, ಊದಿನ ಕಡ್ಡಿಯನ್ನು ಬೆಳಗಿ ಸತ್ತವರ ಆತ್ಮಕ್ಕೆ ಶಾಂತಿಯನ್ನು ಕೋರುತ್ತಾರೆ. ಆ ದಿನ ರಾತ್ರಿ ಭಜನೆ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಶವ ಸಂಸ್ಕಾರ ಮಾಡಿ ಬರುವವರೆಗೆ ಸತ್ತವರ ಮನೆಯಲ್ಲಿ ಯಾವುದೇ ರೀತಿಯ ಅಡುಗೆಯನ್ನು ಮಾಡುವುದಿಲ್ಲ. ಅಲ್ಲಿಯವರೆಗೆ ಆ ಮನೆಯವರ ಎರಡನೇ ಅಣ್ಣ ತಮ್ಮಂದಿರು, ಸೋದರ ಮಾವನವರು ಇಲ್ಲವೇ ಬಂದು ಬಳಗದವರು ಸತ್ತವರ ಕುಟುಂಬದವರನ್ನು ಊಟಕ್ಕೆ ಕರೆದುಕೊಂಡು ಹೋಗುತ್ತಾರೆ. ಸತ್ತವರು ಮಲ್ಲಯ್ಯನ ದೀಕ್ಷೆಯನ್ನು ವಹಿಸಿದವರಾಗಿದ್ದರೆ ಅಂಥವರನ್ನು ಕೂಡಿಸುತ್ತಾರೆ. ಉಳಿದಂತೆ ಹೆಣವನ್ನು ಮಲಗಿಸುತ್ತಾರೆ. ಶವ ಸಂಸ್ಕಾರವು ಆಯಾ ಮತಗಳ ವಿಧಿಗನುಸಾರವಾಗಿ ಕೆಲವರು ಹೂಳಿದರೆ ಮತ್ತೆ ಕೆಲವರು ಸುಡುತ್ತಾರೆ.

ವ್ಯಕ್ತಿ ಸತ್ತ ಐದನೇ ದಿನಕ್ಕೋ, ಒಂಭತ್ತನೇ ದಿನಕ್ಕೋ, ಇಲ್ಲವೇ ಹದಿನಾರನೆಯ ದಿನಕ್ಕೋ 'ದಿವಸದ' ಕಾರ್ಯಕ್ರಮವನ್ನು ನಿಗದಿಪಡಿಸುತ್ತಾರೆ. ಆ ವೇಳೆಗಾಗಲೇ ಮನೆಗೆ ಸುಣ್ಣ ಬಳಿದು ಶುಭ್ರಗೊಳಿಸಿರುತ್ತಾರೆ. ದಿವಸದ ದಿನದಂದು ಪೂಜೆಗೆ ಸಕಲ ಸಿದ್ಧತೆಗಳನ್ನು ಮಾಡುತ್ತಾರೆ. ಸತ್ತ ವ್ಯಕ್ತಿಯ ಭಾವಚಿತ್ರವನ್ನು ಇಟ್ಟು, ರಾಗಿ ಬಿಂದಿಗೆ ಇಲ್ಲವೆ, ತಂಬಿಗೆಗೆ ತುಂಬಿದ ಕೊಡಪಾನದ ನೀರು ಹಾಕಿ, ಅದರ ಮೇಲೆ ತೆಂಗಿನ ಕಾಯಿಯನ್ನು ಇಟ್ಟು, ಅದರ ಬೆನ್ನಿಗೆ ಪೂಜೆಗೆ ಏರಿಸುವ ಬಟ್ಟೆಗಳನ್ನು ಇಡುತ್ತಾರೆ. ಹೂವು, ಹಣ್ಣುಗಳ ಜೊತೆಗೆ ಕಳಸವನ್ನು ತುಂಬಿರುತ್ತಾರೆ. ಹೀಗೆ ಪೂಜೆಗೆ ಎಲ್ಲಾ ಸಿದ್ಧವಾದ ಮೇಲೆ ಋಣ ನೀಡಿದವರಿಂದ (ಮಣ್ಣು ಕೊಟ್ಟವರಿಂದ) ಪೂಜಾ ಕಾರ್ಯಕ್ರಮ ನೆರವೇರುತ್ತದೆ. ನಂತರ ನೆಂಟರು ಹಾಗೂ ಹಿತೈಷಿಗಳು ತಾವು ತಂದ ಹಾರವನ್ನು ಹಾಕಿ ಪೂಜೆಗೆ ಬಟ್ಟೆಯನ್ನು ಇಟ್ಟು, ಕಾಯಿ ಒಡೆದು ಕರ್ಪೂರ ಬೆಳಗುತ್ತಾರೆ. ಪ್ರತಿಯೊಂದು ಜನಾಂಗದಲ್ಲೂ ಪ್ರತ್ಯೇಕವಾಗಿ ಧರ್ಮಗುರುಗಳು, ಕುಲಗುರುಗಳು ಇದ್ದು, ಸತ್ತ ವ್ಯಕ್ತಿಯ ಸೂತಕವನ್ನು ಕಳೆಯಲು ಗಂಗೆಗೆ ಹೋಗಿ ಪೂಜೆಯನ್ನು ಸಲ್ಲಿಸಿ ಗಂಗೆಯ ನೀರನ್ನು ಹಾಗೂ ಆಕಳ ಪಂಚಮಿಯನ್ನು ತಂದು ಕುಟುಂಬದವರಿಗೆ ಹಾಗೂ ಮನೆಯವರಿಗೆ ಚಿಮುಕಿಸುತ್ತಾರೆ. ಹೀಗೆ ಮಾಡಿದಾಗ ಸೂತಕ ಕಳೆದಂತೆಯೇ ಸರಿ. ಈ ರೀತಿಯ ಆಚರಣೆಯನ್ನು ನಾವು ಬಹುತೇಕ ಎಲ್ಲಾ ಜನಾಂಗದವರಲ್ಲಿ ಕಾಣಬಹುದಾಗಿದೆ.

ವಿಶೇಷವಾಗಿ ಒಡೆಯರು ಸಾವಿನ ಸಂದರ್ಭದಲ್ಲಿ ಮಲ್ಲಯ್ಯನಿಗೆ ಸಂಬಂಧಪಟ್ಟಂತೆ ಯಾವುದೇ ಕಾರ್ಯಕ್ರಮವನ್ನು ಮಾಡುವುದಿಲ್ಲ. ಗುರುವಿನ ಅಂತಿಮ ದರ್ಶನವನ್ನು ಪಡೆಯಲು ಬಂಧಾರಕ್ಕೆ ಸಂಬಂಧಪಟ್ಟವರೆಲ್ಲರೂ ಬರುತ್ತಾರೆ. ಗಣಾಚಾರಿಗಳು ಮುಂದೆ ನಿಂತು ಭಕ್ತರು ತಂದ ಪುಷ್ಪ, ಹೂವಿನಹಾರ ವನ್ನು ಸತ್ತ ವ್ಯಕ್ತಿಯ ಮೇಲೆ ಹಾಕಿ ಪೂಜೆಯನ್ನು ಸಲ್ಲಿಸಿ ಕೊನೆಯ ಬಾರಿ ಗುರುವಿಗೆ ಸೇವೆಯನ್ನು ಸಲ್ಲಿಸುತ್ತಾರೆ. ಗುರು ತೀರಿಕೊಂಡರೂ ಅವರ ಆಶೀರ್ವಾದ ಸದಾ ಶಿಷ್ಯರಾದ, ಭಕ್ತರಾದ ನಮ್ಮ ಮೇಲಿರಲಿ ಎಂದು ಬೇಡಿಕೊಂಡು ಅವರ ಆತ್ಮಕ್ಕೆ ಶಾಂತಿಯನ್ನು ಕೋರುತ್ತಾರೆ. ಮಲ್ಲಯ್ಯನಿಗೆ ಸಂಬಂಧಿಸಿದ ಇಷ್ಟು ಕಾರ್ಯವನ್ನು ಬಿಟ್ಟರೆ ಬೇರೆ ಯಾವುದೇ ರೀತಿಯಲ್ಲಿ ಸ್ವಾಮಿಯ ಆಚರಣೆಯಿರದು. ಒಡೆಯರು ತಮ್ಮ ಪದ್ಧತಿಯ ಪ್ರಕಾರ ಶವ ಸಂಸ್ಕಾರವನ್ನು ಮಾಡುತ್ತಾರೆ. ವಿಶೇಷವೆಂದರೆ; ಇವರು ಗುರುವಿನ ಸ್ಥಾನದಲ್ಲಿದ್ದರೂ ಇವರನ್ನು ಕೂಡಿಸಿಕೊಂಡು ಕಾಡಿಗೆ ಕಳಿಸದೆ ಮಲಗಿಸಿಕೊಂಡೇ ಹೊರಡುತ್ತಾರೆ. ಶವವನ್ನು ಇವರು ಸುಡುತ್ತಾರೆ. ನಂತರ ಬ್ರಾಹ್ಮಣರನ್ನು ಕರೆಯಿಸಿ, ಸಾವು ಸಂಭವಿಸಿದ ಘಳಿಗೆಯ ಕುರಿತು ವಿಚಾರಿಸುತ್ತಾರೆ. ಒಂಭತ್ತು, ಹನ್ನೊಂದು ಇಲ್ಲವೇ ಹದಿನಾರನೆಯ ದಿನಕ್ಕೆ ದಿವಸದ ಕಾರ್ಯಕ್ರಮವನ್ನು ನಿಗದಿಪಡಿಸಿ, ಬ್ರಾಹ್ಮಣರನ್ನು ಆಹ್ವಾನಿಸಿ, ಅವರಿಂದ ಪೂಜಾ ಕಾರ್ಯಕ್ರಮವನ್ನು ನೆರವೇರಿಸಿ ಋಣ ಕೊಟ್ಟ ವ್ಯಕ್ತಿಯಿಂದ ಗಂಗೆಯಲ್ಲಿ ಪಿಂಡ ಪ್ರಧಾನ ಮಾಡಿಸುತ್ತಾರೆ. ಹಂಪೆ, ಮಂತ್ರಾಲಯ, ಧರ್ಮಸ್ಥಳ ಮುಂತಾದ ಪವಿತ್ರ ಸ್ಥಳಗಳ ನದಿಗಳ ದಂಡೆಗೆ ಹೋಗಿ ಈ ಕಾರ್ಯಕ್ರಮವನ್ನು ಮಾಡುತ್ತಾರೆ. ಸತ್ತ ವ್ಯಕ್ತಿಯ ಭಸ್ಮವನ್ನು ಭಕ್ತರಿಗೆ ಒಂದಿಷ್ಟು ಕೊಟ್ಟು ಉಳಿದದ್ದನ್ನು ಕಾಶಿಗೋ, ಇಲ್ಲವೇ ಸಮುದ್ರಕ್ಕೋ ಕಳುಹಿಸುತ್ತಾರೆ. ನಂತರ ಮನೆಗೆ ಬಂದು ಆಕಳ ಪಂಚಾಮೃತವನ್ನು ಮನೆಯಲ್ಲಿ ಚಿಮುಕಿಸುತ್ತಾರೆ. ಇಲ್ಲಿಗೆ ಸೂತಕ ಕಳೆದಂತೆಯೇ ಎಂದು ಭಾವಿಸಲಾಗುತ್ತದೆ. ಈ ಎಲ್ಲಾ ಕಾರ್ಯಕ್ರಮ ಮುಗಿದ ನಂತರ ಶಾಂತಿಗಾಗಿ ಯಾವುದಾದರೊಂದು ಪುಣ್ಯ ಕ್ಷೇತ್ರದ ದೇವಾಲಯಕ್ಕೆ ಹೋಗಿ ಒಂದು ದಿನ ಅಥವಾ ಅದಕ್ಕೂ ಹೆಚ್ಚು ದಿನ ಉಳಿದುಕೊಂಡು ಬರುವ ವಾಡಿಕೆ ಕೆಲವರಲ್ಲಿದೆ.

ಅದೇ ರೀತಿ ಗಣಾಚಾರಿಗಳು ತೀರಿಕೊಂಡಾಗ ಅವರನ್ನು ಕೂಡಿಸುತ್ತಾರೆ. ಕಾರಣ ಅವರು ಗುರುವಿನ ಮಕ್ಕಳು. ಇವರಿಂದ ದೀಕ್ಷೆ ಪಡೆದ ಒಗ್ಗರು, ನಾಯಿಗೊರವರು, ಕುದುರೆಕಾರರು, ಕಂಚಾವೀರರು, ಬಸವಿಯರು ಮುಂತಾದವರು ಬಂದು ವಸ್ತ್ರ, ಹೂವು, ಹಣ್ಣು, ವಿಭೂತಿ, ಊದುಬತ್ತಿ ಎಲ್ಲವನ್ನು ತಂದು ಗುರುಗಳಿಗೆ ಅರ್ಪಿಸಿ ಪೂಜೆ ಮಾಡಿಕೊಳ್ಳುತ್ತಾರೆ. ರಾತ್ರಿ ಭಜನಾ ಕಾರ್ಯಕ್ರಮ ಸಹಜವಾಗಿಯೇ ನಡೆಯುತ್ತದೆ. ಈ ಭಜನೆಯಲ್ಲಿ ಒಗ್ಗರು, ಮತ್ತಿತರ ಗೊರವರ ಜೊತೆಗೆ ಭಕ್ತರು ಮಲ್ಲಯ್ಯನ ಪದಗಳನ್ನೇ ಹಾಡುತ್ತಾರೆ. ವ್ಯಾಗ್ಯಾಗಳು ಸಹ ಈ ಸಂದರ್ಭದಲ್ಲಿ ಕೈಯಲ್ಲಿ ತುಂತುಣಿ ಹಿಡಿದು ಹಾಡುವುದು ಮಹಾರಾಷ್ಟ್ರ ಕಡೆಯ ವಿಶೇಷ. ತಮ್ಮ ಗುರುವನ್ನು ಮಣ್ಣು ಕಾಣಿಸುವಾಗ ಕುಟುಂಬದವರ ಜೊತೆ ಶಿಶುಮಕ್ಕಳು ಮುಂದೆ ನಿಂತು ಸಂಸ್ಕಾರದ ಎಲ್ಲಾ ಕಾರ್ಯವನ್ನು ಮಾಡುತ್ತಾರೆ. ಗಣಾಚಾರಿಗಳು ದಿವಸದ ಕಾರ್ಯಕ್ರಮದಲ್ಲಿ

ಸೂತಕವನ್ನು ಕಳೆಯಲು ತಮ್ಮ ಕುಲಗುರುವನ್ನು ಕರೆಯಿಸುತ್ತಾರೆ. ಅವರು ಬಂದು ಗಂಗೆಯ ದಡದಲ್ಲಿ ಪೂಜೆಯನ್ನು ಮಾಡಿ, ಗಂಗೆಯ ನೀರನ್ನು ಎಲ್ಲರಿಗೂ ಚಿಮುಕಿಸಿದಾಗ ಸೂತಕ ಕಳೆದಂತೆಯೇ. ಗಣಾಚಾರಿಗಳ ಈ ಗುರುವು ಕುರುಬರೇ ಆಗಿದ್ದಾರೆ. ಇವರಿಗೆ ಗಣಾಚಾರಿಗಳು 'ಸ್ವಾಮಿ' ಎಂದು ಕರೆಯುತ್ತಾರೆ. ''ನಾವು ಮುಟ್ಟುಚಿಟ್ಟನ್ನು ಕಳಿಯಾಕೆ ನಮ್ಮ ಕುಲ ಗುರುವನ್ನು ಕರಿಸ್ತೀವಿ ಹೊರತು ನಮ್ಮ ಮಲ್ಲಯ್ಯನ ಗುರುವಾದ ಒಡೆಯರನ್ನು ಕರಸಂಗಿಲ್ಲ. ನಮ್ಮ ಕುಲಗುರುಗಳು ಬೇರೆ ಯಾವ ಶುಭ ಕಾರ್ಯಗಳಿಗೆ ಅಷ್ಟಾಗಿ ಬರಲ್ಲ. ಆದರೆ ಮುಟ್ಟು ಚಟ್ಟು ಕಳಿಯಾಕ ಮಾತ್ರ ತಪ್ಪದೇ ಬರ್ತಾರೆ'' ಎಂದು ಗಣಾಚಾರಿ ಮಲ್ಲಯ್ಯನವರು ಹೇಳುತ್ತಾರೆ. ಇನ್ನು ಒಡೆಯರಿಂದ ಹಾಗೂ ಗಣಾಚಾರಿಗಳಿಂದ ದೀಕ್ಷೆ ಪಡೆದ ಗಣಾಚಾರಿಗಳೇ ಪ್ರತಿಯೊಬ್ಬರ ಸಾವಿನ ಸಂದರ್ಭದಲ್ಲಿ ಹೋಗಿ (ದೀಕ್ಷೆ ಪಡೆದವರು ಸೂತಕವನ್ನು ಕಳೆಯಲು ಗಣಾಚಾರಿಗಳನ್ನು ಕರೆಸುತ್ತಾರೆ) ಆರಾಧನೆಯ ದಿನದಂದು ಸೂತಕವನ್ನು ಕಳೆದು ಬರುತ್ತಾರೆ.

ಕುರುಬರು, ಬೇಡರು, ಕಬ್ಬೇರರು ಮುಂತಾದವರ ಸಾವಿನ ಸಂದರ್ಭಧಲ್ಲಿ ಗೊರವರು ಮನೆಗೆ ಹೋಗಿ ಸೂತಕವನ್ನು ಕಳೆಯುತ್ತಾರೆ. ಇವರು ಹೋದಾಗ ಇವರ ಪಾದಕ್ಕೆ ನೀರು ಹಾಕಿ ಮನೆ ಒಳಗೆ ಕರೆಯುತ್ತಾರೆ. ಅವರ ಮನೆಯ ಕಳಸ, ಭಾವಚಿತ್ರ, ತುಂಬಿದ ಕೊಡ, ಗೋಮೂತ್ರ ತೆಗೆದುಕೊಂಡು ಮುಂದೆ ಮದ್ದಲಿ ಬಾರಿಸಿಕೊಂಡು ಹೋಗುತ್ತಾರೆ. ಹಿಂದೆ ಮನೆಯವರೆಲ್ಲಾ ಹೋಗುತ್ತಾರೆ. ಬಾವಿ, ಕೆರೆ ಮುಂತಾದ ಗಂಗೆಗೆ ಹೋಗಿ ಪೂಜೆ ಮಾಡಿ ನಂತರ ನಮಸ್ಕರಿಸಿ ತೀರಿದವರ ಹೆಸರ ಮೇಲೆ ''ಸತ್ತವರು ಭೂಲೋಕ ಬಿಟ್ಟು ದೇವಲೋಕಕ್ಕೆ ಹೋದರು. ಅಲ್ಲಿ ಅಧಿಪತಿ ಆದರು'' ಎಂದು ಹೇಳುತ್ತಾ ಗೊರವ ಅವರೆಲ್ಲರ ಮೇಲೆ ನೀರು ಚಿಮುಕಿಸಿ ಸೂತಕವನ್ನು ಕಳೆಯುತ್ತಾನೆ. ಅವರ ಮನೆಯಲ್ಲಿ ಋಣ ಕೊಟ್ಟವರಿಗೆ ಗೊಂಗಡಿ (ಕರೀ ಕಂಬಳಿ) ತಲೆ ಮೇಲೆ ಹಾಕಿ ಬಟ್ಟೆ ಹಾಕುತ್ತಾರೆ. ಕಳಸಗಿತ್ತಿಗೂ ಬಟ್ಟೆ ಹಾಕುತ್ತಾರೆ. ಮನೆಗೆ ಹೋಗಿ ಪೂಜೆ ಮಾಡಿ, ಅಣ್ಣ-ತಮ್ಮಂದಿರಿಗೆಲ್ಲಾ, ಮನೆಗೆ ಗೋಮೂತ್ರ, ಗಂಗೆ ನೀರು ಚಿಮುಕಿಸುತ್ತಾರೆ. ಗಣಾಚಾರಿಗೆ ದಕ್ಷಿಣದ ರೂಪದಲ್ಲಿ ೧೦೧ರೂ., ಆಕಳು, ಕುರಿಮರಿ, ಅಕ್ಕಿ, ಬೇಳೆ, ಬಟ್ಟೆ ಮುಂತಾದವನ್ನು ಅವರವರ ಯೋಗ್ಯತೆಗೆ ಅನುಸಾರವಾಗಿ ಕೊಡುತ್ತಾರೆ.

ಹರಿಜನರಲ್ಲಿ ಯಾರಾದರೂ ದೀಕ್ಷೆ ವಹಿಸಿದವರು ತೀರಿಕೊಂಡರೆ ಹರಿಜನರ ಗಣಾಚಾರಿಯೇ ಈ ಮೇಲಿನ ಎಲ್ಲಾ ಕಾರ್ಯಕ್ರಮವನ್ನು ಮಾಡುತ್ತಾರೆ. ಒಂದು ವೇಳೆ ದೀಕ್ಷೆ ವಹಿಸದೇ ಇರುವವರು ತಮ್ಮ ಕುಲದ ಗುರುವಿನ ಆಚರಣೆಯಂತೆ ಸೂತಕವನ್ನು ಕಳೆದುಕೊಳ್ಳುತ್ತಾರೆ. ಲಿಂಗಾಯತರ ಮನೆಗಳಲ್ಲಿ ಸೂತಕವನ್ನು ಕಳೆಯಲು ಜಂಗಮರನ್ನು ಕರೆಯಿಸುತ್ತಾರೆ.

ಅಧ್ಯಾಯ - ೬

# ಮಲ್ಲಯ್ಯ : ನಂಬಿಕೆ ಮತ್ತು ವಿಧಿ-ನಿಷೇಧಗಳು

೬.೧. ನಂಬಿಕೆಗಳು

೬.೧.೧. ಜನನ

೬.೧.೨. ವಿವಾಹ

೬.೧.೩. ಮರಣ

೬.೧.೪. ಬೇಟೆ

೬.೧.೫. ಹಬ್ಬ-ಹರಿದಿನ

೬.೧.೬. ಬಂಢಾರದ ಹಿನ್ನೆಲೆಯಲ್ಲಿ ವೈದ್ಯ

೬.೧.೬.೧. ಪಶುವೈದ್ಯ

೬.೧.೬.೨. ಗೊರವಯ್ಯನವರ ವೈದ್ಯ

೬.೧.೭. ವ್ಯವಸಾಯ

೬.೧.೮. ವ್ಯಾಪಾರ

೬.೧.೯. ರಾಜಕೀಯ

೬.೧.೧೦. ಬಸವಿಯರು

೬.೧.೧೧. ಇತರೆ

೬.೨. ವಿಧಿ-ನಿಷೇಧಗಳು

ಅಧ್ಯಾಯ - ೬

# ಮಲ್ಲಯ್ಯ : ನಂಬಿಕೆ ಮತ್ತು ವಿಧಿ-ನಿಷೇಧಗಳು

ಜಾನಪದವು ಯಾವುದೇ ಜನಾಂಗದ ಜೀವಂತ ಪಳೆಯುಳಿಕೆ. ಸಹಸ್ರಾರು ವರ್ಷಗಳಿಂದ ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದ ಜನಪದರ ಕ್ರಿಯಾತ್ಮಕ, ಭಾವನಾತ್ಮಕ ಮತ್ತು ಕಲಾತ್ಮಕ ಅಭಿವ್ಯಕ್ತಿ ಮಾಧ್ಯಮಗಳಿಗೆ ಸಂಬಂಧಿಸಿದ ಸಕಲ ವಸ್ತು ಸಾಮಾಗ್ರಿಗಳು, ಸಾಹಿತ್ಯಿಕ ರೂಪ ಪ್ರಕಾರಗಳು, ವಿಶಿಷ್ಟವಾದ ಶಿಲ್ಪ, ಕಲಾ ನಮೂನೆ ಮಾದರಿಗಳು ಮುಂತಾದವು ಜಾನಪದದ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ.

ಅನಕ್ಷರಸ್ಥ ಜನಪದರು ಪರಿಪಾಲಿಸುವ ಆಚರಣೆಗಳಿಗೆ ಪ್ರಾಚೀನ ಕಾಲದಿಂದ ಹರಿದು ಬಂದ ಅಚಲ ಶ್ರದ್ಧೆ, ನಂಬಿಕೆಗಳೇ ಪ್ರೇರಕ. ಈ ಬಗೆಯ ನಂಬಿಕೆಗಳಿಗೆ ನಾವು ಎರಡು ಬಗೆಯ ಕಾರಣಗಳನ್ನು ಕೊಡಬಹುದು. ಒಂದು ಕತ್ತಲು ಭೇದಿಸಿ ಬಂದ ಸೂರ್ಯ, ಧಿಮ್ಮೆಂದು ಸಿಡಿದ ಜ್ವಾಲಾಮುಖಿ ಇತ್ಯಾದಿಗಳು. ಯಾವುದೇ ಆದಿಮ ಗುಂಪಿನ ವ್ಯಕ್ತಿಗತ ಭಯ, ವಿಸ್ಮಯಗಳಿಗೆ ಮಾತ್ರ ಸೀಮಿತವಾಗದೆ, ಇಡೀ ವೃಂದದ ಅಥವಾ ವೃಂದಗಳ ವಿಸ್ಮಯ ಭಯಗಳ ಸಾಮೂಹಿಕ ಅನುಭವಗಳ ಪ್ರಕ್ರಿಯೆ ಕಾರಣವಾಗುವವು. ಕಾಲಾಂತರದಲ್ಲಿ ಅದ್ಭುತ ಅಮಾಯಕ ಕಲ್ಪನೆಗಳಿಗೆ ಪ್ರೇರಕವಾದವು. ಹೀಗೆ ಇತಿಹಾಸ ಪೂರ್ವಕಾಲದಿಂದಲೇ ಪ್ರಾದಿಮ ಗುಂಪುಗಳು ತಮ್ಮ ಸುತ್ತಣ ಅಗಾಧ, ವಿಸ್ಮಯಕಾರಿ, ರುದ್ರ-ರಮ್ಯ, ನಿಸರ್ಗಶಕ್ತಿಗಳಿಗೆ ಒಂದು ಮೂರ್ತ ಸ್ವರೂಪ ಕೊಡುವ ಹಂತದಲ್ಲಿಯೇ ಧಾರ್ಮಿಕ ಸ್ವರೂಪದ ನಂಬುಗೆಯ ಹುಟ್ಟು, ನೆಲೆ. ಟೇಲರ್ ಹೇಳುವ 'ಬಿಲೀಫ್ ಇನ್ ಸ್ಪರಿಚು ಯಲ್ ಬೀಯಿಂಗ್ಸ್' ಆಧ್ಯಾತ್ಮ ಜೀವಿಗಳಲ್ಲಿ ನಂಬಿಕೆ ಮತ್ತು ಪಿರಾಡಿನ್ ಹೇಳುವ ಸೋಶಿಯಲ್ ಪ್ರಿಸೆಪ್ಟೇಟ್ ಆಫ್ ಫಿಯರ್ ಭಯದ ಸಾಮಾಜಿಕ ವಿಧಗಳ ಜನಪದದ ನಂಬಿಕೆ ಮತ್ತು ಆಚರಣೆಯ ಎರಡು ಸೂಕ್ಷ್ಮ ಅಂಶಗಳ ಕಡೆ ಬೆರಳು ಮಾಡುತ್ತದೆ (ಡಾ. ದೇವೇಂದ್ರ ಕುಮಾರ ಹಕಾರಿ; ೧೯೯೪ : ೪೬).

ಜನಪದರ ನಂಬಿಕೆ ಒಂದು ಅಲಿಖಿತ ಹೃದಯಾಂತರ್ಗತ ಕರಾರು ಪತ್ರ. ಇಂಥ ಒಂದು ನಂಬಿಕೆಯ ಫಲವಾಗಿ ತಮ್ಮ ತಮ್ಮ ಬುಡಕಟ್ಟು ವೃಂದವನ್ನು ನಿಯಂತ್ರಿಸಿ, ಕಾಪಾಡಿ ಆಯಾ ವೃಂದದ ಭಯ ವಿಸ್ಮಯಗಳಿಗೆ, ನಂಬಿಕೆ ಗೌರವಗಳಿಗೆ ಪಾತ್ರರಾಗಿ, ಮರಣಾನಂತರ ಆಚರಿಸಲ್ಪಟ್ಟ, ಕಾಲಾನಂತರ ಅವರು ಸತ್ತು ಹುಟ್ಟಿಕೊಂಡ ಐತಿಹ್ಯ, ಕಟ್ಟುಕಥೆ, ಪುರಾಣಗಳಲ್ಲಿ ಹುದುಗಿ ಹೋದ ಅಜ್ಞಾತ ಸಾಂಸ್ಕೃತಿಕ ವೀರರನ್ನು, ವ್ಯಕ್ತಿಶಕ್ತಿಗಳನ್ನು ಪ್ರತ್ಯೇಕಗೊಳಿಸಿ, ವರ್ಷದ ನಿರ್ಧಿಷ್ಟ ಕಾಲದಲ್ಲಿ ಆಚರಿಸುವುದು, ವಿವಿಧ ಬಗೆಯ ರೂಢಿಗಳನ್ನು

ಅಭಿನಯಿಸು ವುದು, ಆಚರಣೆಗಳ ಮೂಲಕ ತಮ್ಮ ಹರಕೆಗಳನ್ನು ಸಲ್ಲಿಸುವುದು ಇತ್ಯಾದಿ. ಜನಪದ ರ ಸಾಮಾಜಿಕ, ಧಾರ್ಮಿಕ ಜೀವನದ ವ್ಯಾಪಕ ಸ್ವರೂಪವನ್ನು ರೂಪಿಸುತ್ತ ಬಂದ ಸಂಗತಿಗಳಾಗಿವೆ. ಈ ರೀತಿ ಜನಪದರಲ್ಲಿ ದೈವದ ಬಗೆಗಿನ ನಂಬಿಕೆ ಮೊದಲಿನಿಂದಲೂ ಪರಂಪರಾಗತವಾಗಿ ಸಾಗುತ್ತಾ ಬಂದು, 'ಮುನ್ನೂರ ಮೂವತ್ತು ಮೂರು ಕೋಟಿ' ದೇವತೆಗಳು ಆಗಿರುವವು. ಸರ್ವ ವಸ್ತುಗಳಲ್ಲಿಯೂ ಪರಮಾತ್ಮನನ್ನು ಕಾಣುವ ಪ್ರವೃತ್ತಿ ಅವರಲ್ಲಿ ಬೆಳೆದು ಬಂದಿತು. ವಿಶೇಷ ಪೂಜೆಗಳಲ್ಲಿ ಪಶುಬಲಿ, ನರಬಲಿಯನ್ನು ಕೊಡುತ್ತಿದ್ದರು. ಇಂತಹ ಕಾರ್ಯಗಳು ಜನ ಸಮಸ್ಯೆಯಿಂದಲೇ ನಡೆಯುತ್ತಿದ್ದವು. ಮನೆಯ ದೇವತೆಯ ಹಬ್ಬವನ್ನು ಅವರವರ ಮನೆಯವರೇ ಆಚರಿಸಿದರೂ ಗ್ರಾಮ ದೇವತೆಯ ಹಬ್ಬವನ್ನು ಊರಿಗೆ ಊರೇ ಸೇರಿ ಸಂಭ್ರಮದಿಂದ ಆಚರಿಸುತ್ತದೆ. ವರ್ಷದ ಎಲ್ಲಾ ಕಾಲದಲ್ಲೂ 'ಕೆಲಸ ಬೊಗ್ಸೆ'ಗಳಲ್ಲೂ ಕಾಲ ಕಳೆಯುವುದರಿಂದ ಅವರಿಗೆ ಸಂತೋಷ ಸಿಗುವುದು ಇಂತಹ ಸಮಯದಲ್ಲೇ.

ನಂಬಿಕೆಗಳ ವಿಚಾರದಲ್ಲಿ ಗಮನಿಸಬಹುದಾದ ಇನ್ನೊಂದು ಸಂಗತಿಯೆಂದರೆ; ನಂಬಿಕೆಗಳು ಹುಟ್ಟುತ್ತಲೇ ನಂಬಿಕೆಗಳಾಗಿ ಹುಟ್ಟುವುದಿಲ್ಲ. ಯಾವುದೋ ಒಂದು ಅನುಭವದ ಹಿನ್ನೆಲೆಯಲ್ಲಿ ಮೂಡಿ ಬಂದ ಜ್ಞಾನವೇ ಹೇಳಿಕೆಯ ರೂಪ ಪಡೆದುಕೊಂಡು ಪರಂಪರೆಯಲ್ಲಿ ನಂಬಿಕೆಯಾಗಿ ರೂಪುಗೊಂಡಿರುತ್ತದೆ. ಸಾಮಾನ್ಯವಾಗಿ ಮನುಷ್ಯ ಯಾವ ವಿಷಯದ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಾನೋ, ಅಂತಹ ವಿಷಯದ ಬಗ್ಗೆಯೇ ಆತಂಕವೂ ಹೆಚ್ಚಾಗುತ್ತದೆ. ಆದ್ದರಿಂದ ಅಂತಹ ವಿಷಯಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ನಂಬಿಕೆಗಳು ರೂಪುಗೊಂಡಿರುತ್ತವೆ. ಹಾಗಾದರೆ ನಾವೀಗ ನಂಬಿಕೆಯ ಅರ್ಥ ಮತ್ತು ವರ್ಗೀಕರಣದ ಬಗ್ಗೆ ಗಮನ ಹರಿಸೋಣ.

''ಸಾಂಪ್ರದಾಯಿಕವಾಗಿ ಅಂಗೀಕಾರವಾದ ಒಂದು ತಿಳುವಳಿಕೆಯನ್ನು ನಂಬಿಕೆ ಎನ್ನಬಹುದು''. ನಂಬಿಕೆಗಳು ಯಾವುದೇ ಒಂದು ಅವ್ಯಕ್ತ ಭಯ ಅಥವಾ ಆತಂಕವನ್ನು ಸೂಚಿಸುತ್ತದೆ. ಆದ್ದರಿಂದ ಇವು ಮಾನಸಿಕ ಸ್ಥಿತಿಗೆ ಸಂಬಂಧಿಸಿದಂತಹವು. ಯಾವುದೇ ವಿಷಯವನ್ನು ಕುರಿತ ಪರಿಮಿತ ತಿಳುವಳಿಕೆ ಮೂಲ ವಸ್ತು ಸ್ಥಿತಿಯೊಡನೆ ಅಸಂಬದ್ಧ, ವೈಜ್ಞಾನಿಕ ಸಂಬಂಧವನ್ನು ಕಲ್ಪಿಸಿದಾಗ ನಂಬಿಕೆಗಳು ಜನ್ಮತಾಳುತ್ತವೆ'' ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಆರ್. ಎಸ್. ಬಾಗ್ಸ್ ಅವರು ನಂಬಿಕೆಗಳನ್ನು ಆರು ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ಅವು ಪುರಾಣ, ಐತಿಹ್ಯ, ಪದ್ಧತಿ, ಮಾಂತ್ರಿಕತೆ, ವೈದ್ಯ, ಕಾಲಜ್ಞಾನ. ಇವು ವಸ್ತು ವಿಷಯಗಳನ್ನು ಆಧರಿಸಿದ ವರ್ಗೀಕರಣಗಳಾಗಿವೆ.

ವೇಲ್ಯಾಂಡ್ ಎಂಬ ವಿದ್ವಾಂಸರು ನಂಬಿಕೆಗಳನ್ನು ಹೀಗೆ ವಿಂಗಡಿಸಿದ್ದಾರೆ. ಮನುಷ್ಯನ ಶರೀರ ಮತ್ತು ವೈದ್ಯಕ್ಕೆ ಸಂಬಂಧಿಸಿದವು, ಜೀವನ ಕ್ರಮಕ್ಕೆ ಸಂಬಂಧಿಸಿದವು,(ಹುಟ್ಟು, ಮದುವೆ, ಸಾವು ಇತ್ಯಾದಿ), ಆರ್ಥಿಕ ಮತ್ತು ಸಾಮಾಜಿಕ ಸಂಬಂಧಕ್ಕೆ ಸಂಬಂಧಿಸಿದವು (ಸಾರಿಗೆ ಸಂಚಾರ, ಕಾನೂನು ವಿಚಾರಗಳು, ಮನೆ, ಶಾಲೆ, ಮುಂತಾದವು), ಮಾಟ-ಮಂತ್ರ, ಭೂತ-ಪ್ರೇತ,ಸಾವು ಮೊದಲಾದವುಗಳಿಗೆ ಸಂಬಂಧಿಸಿದವು. ಸಂಖ್ಯೆ ಮತ್ತು ಖಗೋಳ ಸಂಗತಿಗಳು, ಬೇಸಾಯಕ್ಕೆ ಸಂಬಂಧಿಸಿದವು (ಪ್ರಾಣಿ ಸಾಕಾಣಿಕೆ, ಪ್ರಾಣಿಸಾಕಾಣಿಕೆ, ಸಸ್ಯಗಳನ್ನು ಬೆಳೆಸುವುದು, ಬೇಟೆ ಮೀನುಗಾರಿಕೆ ಇತ್ಯಾದಿ.)ಇತ್ಯಾದಿಗಳಾಗಿವೆ.

ಅಂತೂ ನಮ್ಮ ಜನಪದರು ದೈವದಲ್ಲಿ ನಂಬಿಕೆಯುಳ್ಳವರು. ದೇವರನ್ನು ನಮಿಸದೇ ಯಾವ ಕೆಲಸಕ್ಕೂ ಕೈ ಹಾಕುವುದಿಲ್ಲ. ತಮ್ಮ ಸುಖಃ ದುಃಖಗಳಿಗೆ ಕಾರಣೀಭೂತನೆಂದರೆ ಆ ಭಗವಂತನೇ ಎಂದು ನಂಬುತ್ತಾರೆ. ತಮ್ಮ ಬೆಳೆಗಳು ಚೆನ್ನಾಗಿ ಬೆಳೆಯಬೇಕಾದರೆ, ತಮ್ಮ ಮಕ್ಕಳು ಸುಖವಾಗಿರಬೇಕಾದರೆ, ತಾವು ಕೈಗೊಳ್ಳುವ ಕೆಲಸಗಳು ನೆರವಾಗಬೇಕಾದರೆ ಆ ಭಗವಂತನ ಪ್ರೇರಣೆ ಇಲ್ಲದಿದ್ದರೆ ಸಾಧ್ಯವೇ ಇಲ್ಲ ಎಂದು ಗಾಢವಾಗಿ ನಂಬಿರುವರು.

ಈ ನಂಬಿಕೆಗಳ ಹಿನ್ನೆಲೆಯಲ್ಲಿ ಸಾಗಿ ಬರುವ ಪ್ರತಿಯೊಂದು ದೈವದ ಆಚರಣೆಗಳೂ ತನ್ನದೇ ಆದಂತಹ ನಂಬಿಕೆ ವಿಧಿ-ನಿಷೇಧಗಳನ್ನು ಹುಟ್ಟು ಹಾಕಿಕೊಂಡಿರುತ್ತವೆ. ಅವು ಆದರದೇ ಆದ ಪ್ರತ್ಯೇಕ ನಿಯಮಗಳನ್ನು ರೂಪಿಸಿಕೊಂಡು ಇಂದಿಗೂ ಜನಪದರಲ್ಲಿ ಜೀವಂತವಾಗಿ ಉಳಿಯುವಂತಾಗಿದೆ. ಮಲ್ಲಯ್ಯ ಎನ್ನುವುದು ಒಂದು ದೈವದ ಪರಿಕಲ್ಪನೆ. ಕರ್ನಾಟಕ, ಮಹಾರಾಷ್ಟ್ರ ಹಾಗೂ ನೆರೆಯ ತೆಲುಗುನಾಡಿನಲ್ಲಿಯೂ ಈ ದೇವರ ಪ್ರಾಭಲ್ಯವಿದೆ. ಮೈಲಾರ, ಮೈಲಾರಪ್ಪ, ಮೈಲಾರಯ್ಯ, ಖಂಡೋಬ, ಮೈಲಾರಲಿಂಗ, ಮೈಲಾರೇಶ್ವರ, ಮಲ್ಲಯ್ಯ, ಮಲ್ಲಿಕಾರ್ಜುನ, ಭಂಡಾರದಯ್ಯ, ಏಳ್ಕೋಟಿ ಮುಂತಾದ ಹೆಸರುಗಳಿಂದ ಈತನನ್ನು ಕರೆಯುತ್ತಾರೆ. ಈ ದೇವರ ನಾಮಗಳಲ್ಲಿ 'ಮೈಲಾರ' ಎಂಬ ಹೆಸರು ಪ್ರಾಚೀನವಿದ್ದು, 'ಮೈಲಾರಿ' ಎಂಬುದು ಆ ಬಳಿಕ ರೂಢಿಗೆ ಬಂದುದು ಆಗಿದೆಯೆಂದು ಶ್ರೀ ಬಿ. ಎಸ್. ಕುಲಕರ್ಣಿಯವರು ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ. ಡಾ। ಎಂ.ಬಿ. ನೇಗಿನಹಾಳರು ಜನಪ್ರಿಯತೆಯ ದೃಷ್ಟಿಯಿಂದ ಮಲ್ಲಯ್ಯ ಎಂಬುದು ಈ ದೇವರ ಬಹುಜನಪ್ರಿಯವಾದ ಹೆಸರು ಎಂದಿದ್ದಾರೆ. ಇದಕ್ಕೆ ನಿದರ್ಶನವಾಗಿ ಕಾರಿಮನಿ ಮಲ್ಲಯ್ಯ, ಮಂಗಸೂಳಿ ಮಲ್ಲಯ್ಯ, ಯಾತಗಿರಿ ಮಲ್ಲಯ್ಯ, ಹಿಪ್ಪಗಿರಿ ಮಲ್ಲಯ್ಯ ಇತ್ಯಾದಿಯಾಗಿದೆ. ಬೀದರ್‌ನ ಮೈಲಾರದಲ್ಲಿ 'ಮಲ್ಲಣ್ಣ' ಎನ್ನುವುದಿದೆ. ಆಂಧ್ರದ ಮೀನಗೊಂದಿ ದೇವಾಲಯದಲ್ಲಿ ಮಲ್ಲಯ್ಯ, ಮಲ್ಲೇಶ್ವರ ಎಂದು ಕನ್ನಡಿಗರೂ, ತೆಲುಗರೂ ಹೇಳುತ್ತಾರೆ. ಆಂಧ್ರದ ಆಯಿನ ವೊಲು (ವಾರಂಗಲ್) ದೇವಾಲಯದ ದೇವರನ್ನು ಮೈಲಾರಾ 'ಮಲ್ಲನ್ನ' ಎನ್ನುವು ದುಂಟು. ಹೀಗೆ ಬಹುತೇಕವಾಗಿ ಸಾಮಾನ್ಯ ಭಕ್ತರು ಈತನನ್ನು 'ಮಲ್ಲಯ್ಯ' ಎಂದೇ ಕರೆಯುತ್ತಾರೆ.

## ೬.೧.೧. ಜನನ :

ಜನಪದರು ತಮ್ಮ ಕ್ಷೇತ್ರದಲ್ಲಿ ಇರುವಂತಹ ಪ್ರಮುಖ ದೇವರನ್ನು ತಮ್ಮ ಇಷ್ಟದೈವವೆಂದು ಭಾವಿಸಿ, ಆತನನ್ನೇ ಮನೆಯ ದೇವರನ್ನಾಗಿ ಸ್ವೀಕರಿಸಿ ಆತನಿಗೆ ನಡೆದುಕೊಳ್ಳುತ್ತಾರೆ. ತನ್ನ ದೇವರಿಗೆ ಧಾನ್ಯಗಳನ್ನು ಮೀಸಲಿಡುವುದು, ತುಪ್ಪವನ್ನು ಮೀಸಲಿಡುವುದು ಮುಂತಾಗಿ ಸರ್ವವನ್ನೂ ಆತನಿಗೆ ಅರ್ಪಿಸುತ್ತಾರೆ. ಪ್ರತಿ ಕ್ಷಣದಲ್ಲೂ ಮಲ್ಲಯ್ಯನ ಸ್ಮರಣೆಯೇ ಈ ಕ್ಷೇತ್ರದ ಭಕ್ತರಿಗೆ ಮುಖ್ಯವಾಗಿ ಬಿಡುತ್ತದೆ. ನಮಗೆ ಜನಿಸಿರುವ ಮಗು ಅದು ಸ್ವಾಮಿ 'ಮಲ್ಲಯ್ಯ'ನ ಕೃಪೆ ಎಂದೇ ಸ್ವೀಕರಿಸಿ, ಹುಟ್ಟಿದ ಗಂಡು ಮಗುವಿಗೆ ಆ ಹೆಸರನ್ನಿಡುತ್ತಾರೆ. ಹೆಣ್ಣಾದರೆ ಮಾಳಮ್ಮ ಅಂತ ಹೆಸರು ಇಡುತ್ತಾರೆ. ನಾಗರೀಕತೆಯ ಬೆನ್ನು ಹತ್ತಿದ ಕೆಲವರು ಹೆಸರುಗಳನ್ನು ಬೇರೆ ಬೇರೆಯದಾಗಿ ಇಟ್ಟರೂ ಸಹ ಹೆಸರಿಡುವಾಗ ಮಲ್ಲಯ್ಯ, ಮಾಳವ್ವ ಎಂದು ಕರೆದು, ಬೇರೆ ಹೆಸರನ್ನು ಇಡುತ್ತಾರೆ. ಈ ರೀತಿ ಹೆಸರಿಡುವುದರಿಂದ ವಂಶ ಚೆನ್ನಾಗಿ ಆಗುತ್ತದೆ ಅನ್ನುವಂತಹ ನಂಬಿಕೆ ಇದೆ. ಇದು ವಿಶೇಷವಾಗಿ ಕುರುಬ ಜನಾಂಗದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

ಮಗುವಿಗೆ ನಾಮಕರಣವನ್ನು ಮಾಡುವ ಸಮಯದಲ್ಲಿ ತೊಟ್ಟಿಲಿನಲ್ಲಿ ಬಂಢಾರ ಹಾಕಿ ನಾಮಕರಣದ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಹೀಗೆ ಮಾಡಿದಲ್ಲಿ ಅದು ಶುಭವೆಂದು ಭಾವಿಸಲಾಗುತ್ತದೆ. ಇಂತಹ ನಂಬಿಕೆ ಈ ಪ್ರದೇಶದ ಸುತ್ತಮುತ್ತಲಿನ ಜನರಲ್ಲಿದೆ. ನಾಮಕರಣದ ದಿವಸ ಗೊರವಯ್ಯನವರನ್ನ ಮನೆಗೆ ಕರೆಯಿಸಿ ಊಟ ಹಾಕಿಸಿದರೆ ಆ ಮಗು ಮುಂದೆ ಅನ್ನದಾತನಾಗುತ್ತಾನೆ ಎನ್ನುವ ನಂಬಿಕೆಯೂ ಸಹ ಇಲ್ಲಿನ ಜನಪದರಲ್ಲಿದೆ. ಕೆಲವು ಭಕ್ತರು ಹರಕೆಯಂತೆ ದೋಣಿ ಸೇವೆಯನ್ನು ಸಹ ಮಾಡಿಸುತ್ತಾರೆ.

ತಮ್ಮ ಇಷ್ಟ ದೈವದ ಮೊರೆ ಹೋದ ಭಕ್ತರು , ತಮ್ಮ ಇಷ್ಟದಂತೆ ಗಂಡಾದರೆ ಅಥವಾ ಹೆಣ್ಣಾದರೆ ಅದೆಲ್ಲಾ ಮಲ್ಲಯ್ಯನ ಭಿಕ್ಷೆ ಎಂದೇ ಭಾವಿಸುತ್ತಾರೆ. ನನಗೆ ಹುಟ್ಟಿದ ಮಗು ಗಂಡಾದರೆ ಅವನನ್ನು ನಿನ್ನ ಸೇವೆಗೆ ಅರ್ಪಿಸುತ್ತೇನೆ. ಹೆಣ್ಣಾದರೆ ತುಪ್ಪದ ಮಾಳಮ್ಮನ ಗುಡಿಗೆ ಬಂದು ಮೀಸಲಿಟ್ಟ ತುಪ್ಪವನ್ನು ಹಾಕುತ್ತೇನೆ. ಹೀಗೆ ವಿಧವಿಧವಾಗಿ ಭಕ್ತರು ದವಸಧಾನ್ಯಗಳು ಮುಂತಾದವುಗಳನ್ನು ಮೀಸಲು ರೀತಿಯಲ್ಲಿ ದೇವರಿಗೆ ತೆಗೆದಿಟ್ಟಿರುತ್ತಾರೆ. ಈ ಎಲ್ಲಾ ತರಹ ಮೀಸಲನ್ನು ದೇವರಿಗೆ ಸಮರ್ಪಿಸಿದಾಗ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆಯಿದೆ.

೬.೧.೨. ವಿವಾಹ :

ಮದುವೆ ಎನ್ನುವುದು ಜೀವನದ ಒಂದು ಪ್ರಮುಖ ಘಟ್ಟ. ಅಥವಾ ಬದುಕಿನ ಒಂದು ತಿರುವ ಎಂದರೆ ತಪ್ಪಾಗಲಾರದು. ಇಂಥ ಮದುವೆಯಲ್ಲೂ ಸಹ ನಮ್ಮ ಜನಪದರು ನಂಬಿಕೆಗಳ ಆಧಾರವಾಗಿಟ್ಟು ಕೊಂಡೇ ಸಕಲ ಕಾರ್ಯಗಳನ್ನು ಮಾಡುತ್ತಾರೆ. ಅಂತೆಯೇ ಈ ಕ್ಷೇತ್ರಕ್ಕೆ ಸಂಬಂಧಿಸಿದ ವಿವಾಹದ ಕುರಿತಾದ ನಂಬಿಕೆಗಳು ಬಹಳಷ್ಟು ಪ್ರಮುಖವೆನಿಸುತ್ತವೆ.

೧. ಹೆಣ್ಣು ಮಕ್ಕಳು ಪುಷ್ಪವತಿಯಾಗಿ ಬಹಳ ವರ್ಷಗಳು ಕಳೆದರೂ ಕಂಕಣಭಾಗ್ಯ ಒದಗಿ ಬರದೇ ಇರುವ ಸಂದರ್ಭದಲ್ಲಿ ಬೆಟ್ಟದಲ್ಲಿರುವ ತುಪ್ಪದ ಮಾಳಮ್ಮಗ ಬೇಡಿಕೊಂಡರೆ ಕಂಕಣ ಭಾಗ್ಯ ಬೇಗನೇ ಕೂಡಿ ಬರುತ್ತದೆ ಎನ್ನುವ ನಂಬಿಕೆ ಇದೆ.

೨. ಮದುವೆಯ ಆಚರಣೆಯ ಸಂದರ್ಭದಲ್ಲಿ ಮಧುಮಕ್ಕಳಿಗೆ ಸುರುಗಿ ನೀರು ಹಾಕುವುದು ಸಹಜ. ಆದರೆ ಸ್ನಾನಕ್ಕೆ ಉಪಯೋಗಿಸುವ ನೀರಿನಲ್ಲಿ ಬಂಢಾರವನ್ನು ಕಲೆಸಿ, ಮದು ಮಕ್ಕಳಿಗೆ ಸ್ನಾನವನ್ನು ಮಾಡಿಸುವುದರಿಂದ ಅವರ (ದಂಪತಿಗಳ) ಮುಂದಿನ ಜೀವನ ಸುಖದಾಯಕವಾಗಿರುತ್ತದೆಂದು ಈ ಕ್ಷೇತ್ರದವರ ನಂಬಿಕೆಯಾಗಿದೆ.

೩. ನವದಂಪತಿಗಳು ತಾವು ಮದುವೆಯಾದ ಮೊದಲ ವರ್ಷದಲ್ಲಿ ದಸರಾ ಹಬ್ಬಕ್ಕೆ ಬೆಟ್ಟಕ್ಕೆ ಹೋಗುತ್ತಾರೆ. ಅಲ್ಲಿ ಬೆಟ್ಟದಲ್ಲಿ ನಡೆಯುವ ರಥೋತ್ಸವವನ್ನು ನೋಡಿದರೆ ಅವರಿಗೆ ಶುಭವಾಗುತ್ತದೆ ಎನ್ನುವಂತಹ ನಂಬಿಕೆ ಇದೆ.

೪. ಮದುವೆಯಾದ ಕೆಲ ದಿವಸಕ್ಕೆ ನವದಂಪತಿಗಳು ಈ ಕ್ಷೇತ್ರದ ಗೊರವಯ್ಯನವರನ್ನು ಮನೆಗೆ ಕರೆಸಿಕೊಂಡು ಅವರಿಗೆ ಊಟವನ್ನು ಹಾಕಿಸುವುದು, ಅಥವಾ ದೋಣಿ ತುಂಬಿಸುವುದು, ಹರಕೆಯಂತೆ ಮೀಸಲು ಇತ್ಯಾದಿಗಳನ್ನು ಅವರಿಗೆ ನೀಡುವುದು, ಹೊಸ ವಸ್ತ್ರಗಳನ್ನು ಕೊಡಿಸುವುದು, ದಕ್ಷಿಣೆಯನ್ನು ಕೊಡುವುದು ಮುಂತಾದ ಸೇವೆಗಳನ್ನು ಗೊರವರಿಗೆ ಮಾಡುವುದರಿಂದ ಮಲ್ಲಯ್ಯನಂತಹ ಗಂಡು ಮಕ್ಕಳು ಹುಟ್ಟುತ್ತಾರೆ ಮತ್ತು ಮಾಳಮ್ಮನಂತಹ ಹೆಣ್ಣು ಮಕ್ಕಳು ಹುಟ್ಟುತ್ತಾರೆ ಎನ್ನುವಂತಹ ನಂಬಿಕೆ ಇದೆ. ಗೊರವಯ್ಯನವರು ಭಿಕ್ಷಾಟನೆಗೆ ಹೋಗಿ ಭಿಕ್ಷೆಯನ್ನು ಸ್ವೀಕರಿಸಿದಾಗ, ದಾಸೋಹಕ್ಕೆ ಹೋದಾಗ, ಭಕ್ತರು ನೀಡಿದ ಮೀಸಲನ್ನು ಸ್ವೀಕರಿಸಿದಾಗ ಗೊರವರು ಭಕ್ತರಿಗೆ ಆಶೀರ್ವದಿಸುತ್ತಾ ಈ ಕೆಳಗಿನ ಶ್ಲೋಕವನ್ನು ತಪ್ಪದಲೇ ಹಾಡುತ್ತಾರೆ.

''ಸಾಂಬ ಶಿವ ಹೊನ್ನು ಮೈಲಾರ ಲಿಂಗ
ಖಂಡುಗ ಬಂಢಾರದಯ್ಯ ಕಾರಣಿಕದಯ್ಯ
ಯಾವ ಕಲ್ಲಿಗೆ ಕೊಟ್ರೆ ದೇವ ಕಲ್ಲಿಗೆ ಕೊಡೋ
ದೇವೇಂದ್ರನಂಥ ಬಲ ಕೊಡೋ..
ನೀಡಿದವರಿಗೆ ನೆರಳು ಕೊಡೋ
ಬೇಡಿದ ಭಾಗ್ಯ ಕೊಡೋ
ಕುಂಬಳ ಬಳ್ಳ್ಯಾಂಗೆ ಕುಡಿ ಸಾಗಲಿ
ಹಾಗಲ ಬಳ್ಳಿಹಾಂಗೆ ಹಬ್ಬಲಿ ಮನೆ
ರಕ್ಕಳಕ್ಕಳವಾಗಿ (?) ಮಕ್ಕಳೇ ಫಲವಾಗಿ
ಹೊತ್ತು ಹುಟ್ಟಿದರೆ ಹೊನ್ನು ಬಸವನ ಪೂಜೆ
ಮದ್ಯಾಹ್ನದ ಪೂಜೆ ಮಲ್ಲೆ ಬಸವರ ಪೂಜೆ
ಸ್ವಾತಂತ್ರ ಪೂಜೆ ಶತಕೋಟಿ ಪೂಜೆ
ಗಾದಿಲಿಂಗ ನಿಜಲಿಂಗ ಮೀನಗೊಂದಿ ಮಲ್ಲಯ್ಯ
ಬಹುಫರಾಕ್... ಬಹುಫರಾಕ್.

೫. ಮದುವೆಯ ಸಂದರ್ಭದಲ್ಲಿ ಗೊರವರು ಪರವು ಮಾಡಿಸಿದರೆ ಶುಭವಾಗುತ್ತದೆ ಎಂದು ನಂಬುತ್ತಾರೆ.

೬. ಮದುವೆ ಆಗಿ ಬಹಳ ವರ್ಷಗಳು ಕಳೆದರೂ ದಂಪತಿಗಳಿಗೆ ಮಕ್ಕಳಾಗಲಿಲ್ಲವೆಂದಾಗ, ಮಕ್ಕಳಾಗದವರು ತುಪ್ಪದ ಮಾಳಮ್ಮನ ಗುಡಿಯ ಹತ್ತಿರವಿರುವ ಬನ್ನಿ ಮರಕ್ಕೆ ಹಸಿರು ಬಳೆ ಕಟ್ಟಿ ನಡೆದು ಕೊಂಡರೆ ಮಕ್ಕಳಾಗುತ್ತವೆ ಎನ್ನುವಂತಹ ನಂಬಿಕೆ ಇದೆ.

೭. ಮಕ್ಕಳಾದ ಮೇಲೆ ದಂಪತಿಗಳು ಮಗುವಿನ ಸಮೇತ ಜಾತ್ರೆಗೆ ಬಂದು ಗೊರವಯ್ಯನವರ ದೋಣಿಗೆ ಮಗುವಿನ ಕೈಯಿಂದ ಬೆಂಡು, ಬೆತ್ತಾಸು ಮುಂತಾದ ತಿನಿಸುಗಳನ್ನು ಹಾಕಿಸಿದಾಗ ದಂಪತಿಗಳ ರೋಗವೆಲ್ಲಾ ಹೋಗುತ್ತದೆ ಎಂಬ ಭಾವನೆ ಇದೆ. ಅಲ್ಲದೆ ಮಗುವಿಗೆ ಮುಂದೆ ಒಳ್ಳೆಯದಾಗುತ್ತದೆ ಎಂದು ಸಹ ನಂಬಲಾಗುತ್ತದೆ.

ಈ ರೀತಿ ಇಷ್ಟ ದೈವದ ಮೊರೆಹೊಕ್ಕ ಜನಪದರು ವಿವಾಹಕ್ಕೆ ಸಂಬಂಧಿಸಿದಂತೆ ಮಲ್ಲಯ್ಯ ಇಲ್ಲ ಮಾಳಮ್ಮಗ ನಡೆದುಕೊಂಡರೆ ತಮ್ಮ ಹರಕೆಗಳೆಲ್ಲ ಖಂಡಿತ ನೆರವೇರುತ್ತವೆ ಎಂದು ಗಾಢವಾಗಿ ನಂಬಿದ್ದಾರೆ.

### ೬.೧.೩. ಮರಣ:

ಕುರುಬ ಜನಾಂಗದಲ್ಲಿ ಸಾವು ಸಂಭವಿಸಿದಾಗ, ಇಲ್ಲ ಬ್ಯಾಗಾರು, ಕಬ್ಬೇರು ಮುಂತಾದವರ ಸಾವಿನ ಸಂದರ್ಭದಲ್ಲಿ ಗೊರವಯ್ಯನವರನ್ನು ಕರೆಸುತ್ತಾರೆ. ಲಿಂಗಾಯಿತರು ಬ್ರಾಹ್ಮಣರು ಈ ರೀತಿ ಗೊರವರನ್ನು ಕರೆಸದೇ ತಮ್ಮ ವಿಧಿಗನುಸಾರವಾಗಿ ಶವಸಂಸ್ಕಾರವನ್ನು ನೆರವೇರಿಸುತ್ತಾರೆ. ಇವರು ಮನೆಗೆ ಹೋಗಿ ಸೂತಕವನ್ನು ಕಳೆಯುತ್ತಾರೆ. ಇವರು ಹೋದಾಗ ಇವರ ಪಾದಕ್ಕೆ ನೀರನ್ನು ಹಾಕಿ ಮನೆಯೊಳಗೆ ಕರೆಯುತ್ತಾರೆ. ಅವರ ಮನೆಯ ಕಳಸ, ಭಾವಚಿತ್ರ, ತುಂಬಿದ ಕೊಡದ ನೀರು, ಆಕಳ ಪಂಚಾಮೃತ ತೆಗೆದುಕೊಂಡು ಮುಂದೆ ಮದ್ದಲೆ ಬಾರಿಸಿಕೊಂಡು ಹೋಗುತ್ತಾರೆ. ಇವರ ಹಿಂದೆ ಮನೆಯವರೆಲ್ಲಾ ಹೋಗುತ್ತಾರೆ. ಬಾವಿ, ಕೆರೆ ಮುಂತಾದೆಡೆ ಗಂಗೆಗೆ ಹೋಗಿ ಪೂಜೆ ಮಾಡಿ ನಂತರ ನಮಸ್ಕರಿಸಿ, ತೀರಿಕೊಂಡವರ ಹೆಸರ ಮೇಲೆ ''ಸತ್ತವರು ಭೂಲೋಕ ಬಿಟ್ಟು ದೇವ ಲೋಕಕ್ಕೆ ಹೋದರು; ಅಲ್ಲಿ ಅಧಿಪತಿಯಾದರು'' ಎಂದು ಹೇಳುತ್ತಾ ಗೊರವಯ್ಯ ಅವರೆಲ್ಲರ ಮೇಲೆ ನೀರು ಚಿಮುಕಿಸಿ ಸೂತಕವನ್ನು ಕಳೆಯುತ್ತಾನೆ. ಅವರ ಮನೆಯಲ್ಲಿ ಋಣ ಕೊಟ್ಟವರಿಗೆ ಗೊಂಗಡಿ (ಕರೀ ಕಂಬಳಿ) ತಲೆ ಮೇಲೆ ಹಾಕಿ, ಕಳಸಗಿತ್ತಿಗೆ ಬಟ್ಟೆ ಹಾಕುತ್ತಾರೆ.

ಗೊರವಯ್ಯನನ್ನು ಮನೆಯೊಳಗೆ ಕರೆದುಕೊಂಡು ಹೋಗಿ, ಆತನಿಗೆ ಹೊಸಬಟ್ಟೆ ಧಾನ್ಯ ಎಲ್ಲವನ್ನು ಕೊಟ್ಟು, ಮನೆಯಲ್ಲಿ ಮಾಡಿದ ಸಿಹಿ ಊಟವನ್ನು ಮಾಡಿಸುತ್ತಾರೆ. ಗೊರವಯ್ಯ ಮನೆಯಿಂದ ಹೊರಗಡೆ ಹೋಗುವಾಗ ಈ ವಾಕ್ಯವನ್ನು ಹಾಡುತ್ತಾನೆ.

''ಶಿವ ಶಿವಾ ಮೈಲಾರದಯ್ಯ
ಮಾಳಮ್ಮನ ಗಂಡ
ಖಂಡುಗ ಬಂಢಾರದಯ್ಯ ಕಾರಣಿಕದಯ್ಯ
ಯಾವ ಕಲ್ಲಿಗೆ ಕೊಟ್ರೆ ದೇವ ಕಲ್ಲಿಗೆ ಕೊಡೋ
ದೇವೇಂದ್ರನಂಥ ಬಲ ಕೊಡೋ
ನೀಡಿದವರಿಗೆ ನೆರಳು ಕೊಡೋ
ಬೇಡಿದ ಭಾಗ್ಯ ಕೊಡೋ...''.

ಏಳುಕೋಟಿ ಬಹು ಘರಾಕ್ ಎಂದು ಅವರ ಮನೆಯೊಳಗೆ ಬಂಢಾರವನ್ನು ಎರಚುತ್ತಾರೆ. ಇದು ಮರಣಕ್ಕೆ ಸಂಬಂಧಿಸಿದ ನಂಬಿಕೆಯಾಗಿದೆ.

ಸತ್ತವರ ಮನಸ್ಸಿಗೆ ಶಾಂತಿಯನ್ನು ತರಲು ಜನಪದರು ತಮ್ಮ ದೈವದ ಮೂಲಕ (ಗೊರವರು) ಅಂತ್ಯ ಕ್ರಿಯೆಯನ್ನು ಮಾಡುವುದರಿಂದ ಶಾಂತಿ ಹಾಗೂ ನೆಮ್ಮದಿಯನ್ನು ಸ್ಥಾಪಿಸುತ್ತಾರೆ. ಈ ಹಿನ್ನೆಲೆಯಲ್ಲಿ ತಮ್ಮದೇ ಆದ ಆಚರಣೆ, ಆಚರಣೆಗಳ ಜೊತೆಗೆ ನಂಬಿಕೆಗಳು ಸಹ ಹೊಸೆದುಕೊಂಡಿರುವುದನ್ನು ಗಮನಿಸಬಹುದು.

**೬.೧.೪. ಬೇಟೆ :**

ಬೇಟೆ ಜನಪದರ ಜೀವನಕ್ಕೆ ಹೊಂದಿಕೊಂಡು ಬಂದಂತಹ ಸಹಜ ಕ್ರಿಯೆ. ಪ್ರಾಚೀನ ಕಾಲದಲ್ಲಿ ಬೇಟೆ ಎರಡು ಕಾರಣಗಳಿಗಾಗಿ ಪ್ರಮುಖವಾಗಿತ್ತು. ಆಹಾರ ಸಂಗ್ರಹಣೆ ಒಂದಾದರೆ ತನ್ನ ರಕ್ಷಣೆ ಎರಡನೆಯದಾಗಿತ್ತು. ಅಹಿಂಸೆ-ಹಿಂಸೆ, ಸಸ್ಯಹಾರ-ಮಾಂಸಹಾರ ಇವುಗಳ ನಡುವಿನ ವ್ಯತ್ಯಾಸ ಹಾಗೂ ಪರಿಕಲ್ಪನೆಗಳು ಇಲ್ಲದ ಆ ಕಾಲದಲ್ಲಿ ಬೇಟೆಯು ಆತನಿಗೆ ಅನಿವಾರ್ಯವಾದ ಮಾರ್ಗವೇ ಆಗಿತ್ತು. ಮೊದ ಮೊದಲು ಎಲ್ಲಾ ಪ್ರಾಣಿಗಳನ್ನು ತಿನ್ನುತ್ತಿದ್ದ ಆತ ಕೆಲವು ಪ್ರಾಣಿಗಳನ್ನು ಮಾತ್ರ ತಿನ್ನತೊಡಗಿದ. ಅದರಲ್ಲಿ ವ್ಯಕ್ತಿಗತ ಅಭಿಪ್ರಾಯಗಳು ಮುಖ್ಯವಾದವು. ಸ್ಥಳೀಯ ಹಾಗೂ ಸಾಂದರ್ಭಿಕ ಕಾರಣಗಳಿಂದ ಕೆಲವು ಪ್ರಾಣಿಗಳ ಮಾಂಸ ನಿಷಿದ್ಧ. ಕ್ರಮೇಣ ಸಾಂಪ್ರದಾಯಿಕವಾಗಿ ಬೆಳೆಯಲು ಕಾರಣವಾಯಿತು. ಇದೇ ಕಾರಣಕ್ಕಾಗಿಯೇ ಪ್ರಾಣಿಗಳನ್ನು ಬೇಟೆಯಾಡುವ ಪದ್ಧತಿ ಮುಂದುವರೆಯುತ್ತಾ ಹೋಯಿತು.

ನಂತರದ ದಿನಗಳಲ್ಲಿ ಜನಪದರು ಬೇಟೆಯನ್ನು ಹಬ್ಬ-ಹರಿದಿನಗಳಲ್ಲಿ ಸಂತೋಷದ ದೃಷ್ಟಿಯಿಂದ, ವಿಜಯದ ಸಂಕೇತವಾಗಿ ಆಡಲು ಗುಂಪುಗೂಡಿ ಆಯುಧಗಳನ್ನು ಹಿಡಿದು ಬೇಟೆಯಾಡಿ ವಿಜಯಶಾಲಿ ಎಂಬಂತೆ ಬರುತ್ತಿದ್ದರು. ಆಯಾ ಬೇಟೆಯನ್ನು ಹಬ್ಬ ಹರಿದಿನಗಳಲ್ಲಿ ವಿಜಯದ ಸಂಕೇತವಾಗಿ ಆಡುತ್ತಾ ಬಂದಿದ್ದಾರೆ. ಪ್ರಸ್ತುತ ಮಲ್ಲಯ್ಯನ ಕ್ಷೇತ್ರ ಗಮನಿಸುವುದಾದರೆ ಮಣಿ ಮಲ್ಲಾಸುರರನ್ನು ಮಲ್ಲಯ್ಯನು ಗೊರವಯ್ಯನ ರೂಪತಾಳಿ ಮಾರ್ತಾಂಡ ಭೈರವನಾಗಿ ಅವರನ್ನು ಸಂಹರಿಸಿ, ವಿಜಯಿಯಾದ. ಈ ಹಿನ್ನೆಲೆಯಲ್ಲಿ ಬನ್ನಿಯಲ್ಲಿ ಬಡಿಗೆ ಹಿಡಿದು ಸಂಹರಿಸಲು ಬೇಟೆಯ ರೀತಿಯಲ್ಲಿ ಆಯುಧಗಳನ್ನು ಹಿಡಿದು ಪಂಜಿನ ಸಮೇತವಾಗಿ ಹೊರಡುತ್ತಾರೆ. ಈ ಹಿನ್ನೆಲೆಯಲ್ಲಿ ಕೆಲವಾರು ನಂಬಿಕೆಗಳನ್ನು ನಾವು ನೋಡಬಹುದಾಗಿದೆ.

ಪೌರಾಣಿಕ ಕಥೆಯ ಹಿನ್ನೆಲೆಯಲ್ಲಿ ಬೇಟೆ ನಡೆಯುತ್ತಿರುವುದು ಈ ಕ್ಷೇತ್ರದಲ್ಲಿ ವಿಶೇಷ. ಅಂದರೆ ಮಣಿಮಲ್ಲಾಸುರ ಕಾಳಗಕ್ಕೂ ಬೇಟೆಗೂ ಸಂಬಂಧವನ್ನು ಈ ಕ್ಷೇತ್ರದ ಜನರು ಕಲ್ಪಿಸುತ್ತಾರೆ. ಮುಖ್ಯವಾಗಿ ಮಣಿಕಾಸುರ ಮಲ್ಲಾಸುರರು ನಮಗೆ ಪ್ರತಿ ವರ್ಷ ಇಷ್ಟು ಬೇಟೆ (ಮನುಷ್ಯ ಬಲಿ) ಬೇಕು ಎಂದು ಮಲ್ಲಯ್ಯನನ್ನು ಕೇಳಿದಾಗ ಅದಕ್ಕೆ ಒಪ್ಪದ ಮಲ್ಲಯ್ಯ ಪ್ರತಿ ವರ್ಷ ಇಷ್ಟು ಹನಿ ರಕ್ತ ಕೊಡ್ತೀವಿ ಅದರಾಚೆ ನೀನು ಏನನ್ನೂ ಬೇಡುವ ಹಾಗಿಲ್ಲ ಎನ್ನುತ್ತಾನೆ. ಹಾಗಾಗಿ ಇವತ್ತಿನವರೆಗೂ ಪ್ರತಿ ದಸರಾಕ್ಕೆ ಕಂಚಾವೀರರು ತಮ್ಮ ಮೀನಗಂಡದಿಂದ ರಕ್ತ ಕೊಡೋದು ಬೇಟೆಯ ಸಂಕೇತವಾಗಿದೆ ಎಂದು ಜನಪದರ ನಂಬಿಕೆಯಾಗಿದೆ.

೨. ಈ ಕ್ಷೇತ್ರದಲ್ಲಿ ದಸರಾ ಹಬ್ಬದ ದಿನದಂದು ಯಾವುದೇ ಪ್ರಾಣಿಯ ವಧೆ ಮಾಡುವ ಹಾಗಿಲ್ಲ. ಈ ಕಾರಣಕ್ಕಾಗಿಯೇ ಇಲ್ಲಿ ನಡೆಯುವ ಬಡಿಗೆ ಆಟದಲ್ಲಿ ಯಾರಾದರೂ ಒಬ್ಬರು ಸಾಯುತ್ತಾರೆ. ಬೇಟೆ ಕೊಡಲಿಲ್ಲ ಎನ್ನುವ ಒಂದೇ ಕಾರಣಕ್ಕಾಗಿ ಮಲ್ಲಯ್ಯ ಯಾವುದೋ ಒಂದು ರೂಪದಲ್ಲಿ ಮನುಷ್ಯರನ್ನು ಬಲಿಯಾಗಿ ತೆಗೆದುಕೊಳ್ಳುತ್ತಾ ಇದ್ದಾನೆ ಎನ್ನುವಂತಹದು ಕೆಲವು ಜನರ ನಂಬಿಕೆಯಾಗಿದೆ. ಮತ್ತೆ ಕೆಲವರು ಇಲ್ಲ, ಆ ದಿನ ಬನ್ನಿಯಲ್ಲಿ ಮಣಿ ಮಲ್ಲಾಸುರರೇ ತಮಗೆ ಕಂಚಾವೀರನು ನೀಡುವ ಬೊಗಸೆ ರಕ್ತ (೫ಹನಿ) ಸಾಲದು ಎಂದು ಬಡಿಗೆ ಆಡುವ ಜನಗಳ ಮೈಯಲ್ಲಿ ಹೊಕ್ಕು ರೌದ್ರಾವತಾರವಾಗಿ ಬೇಟೆಯ ಹಿನ್ನೆಲೆಯಲ್ಲಿ ಬಡಿಗೆ ಆದ ರೂಪವನ್ನೇ ಬದಲಾಗಿಸಿ ಅನೇಕ ಜನರನ್ನು ಬಲಿ ತೆಗೆದುಕೊಳ್ಳುತ್ತಾ ಇದ್ದಾನೆ ಎಂದು ನಂಬಲಾಗುತ್ತಿದೆ.

೩. ಬನ್ನಿಯ ದಿನ ಕಂಚಾವೀರನು ರಕ್ಷಪಡೆ (ರಾಕ್ಷಸಪಡೆ)ಗೆ ಹೋಗಿ ತನ್ನ ಮೀನಗಂಡದಲ್ಲಿ ದಾರವನ್ನು ಪೋಣಿಸಿಕೊಂಡು ಶಸ್ತ್ರ ಪವಾಡವನ್ನು ಮಾಡುತ್ತಾನೆ. ಈ ಸಂದರ್ಭದಲ್ಲಿ ಜನಪದದರು ಎರಡು ರೀತಿಯ ನಂಬಿಕೆಗಳನ್ನು ಕಲ್ಪಿಸುತ್ತಾರೆ. ಒಂದನೆಯದು ರಾಕ್ಷಸರನ್ನು ತಣಿಸುವುದಕ್ಕಾಗಿಯೇ ಐದು ಹನಿ ರಕ್ತ ವನ್ನು ಕೊಡುತ್ತಾನೆ ಎನ್ನುವಂತಹುದು. ಎರಡನೆಯದಾಗಿ ಮಲ್ಲಯ್ಯನನ್ನು ತಣಿಸುವ ಸಲುವಾಗಿ ಕೊಡುವಂತಹ ಪವಾಡ ಎಂದು ಜನರು ನಂಬುತ್ತಾರೆ. ಮೂಲತಃ ಈ ಶಸ್ತ್ರ ಪವಾಡ ಮಲ್ಲಯ್ಯನಿಗೆ ಸಂಬಂಧಿಸಿ ರುವುದು ಅಲ್ಲ. ಅದು ರಾಕ್ಷಸರಿಗೇ ಸಂಬಂಧಿಸಿರುವುದಾಗಿದೆ.

೪. ಎರಡನೇ ಅಂಶದಲ್ಲಿ ತಿಳಿಸಿರುವಂತೆ ಮಣಿ-ಮಲ್ಲಾಸುರರೇ ಬನ್ನಿಯ ದಿನ ತಮ್ಮ ರಾಕ್ಷಸ ಕೃತ್ಯವನ್ನು ತೋರಿಸಿ ಜನರ ರಕ್ತವನ್ನು ಹೀರುತ್ತಿದ್ದಾರೆ ಎನ್ನುವುದು ನಂಬಿಕೆ.

೫. ಬನ್ನಿಯ ದಿನದಂದು ಕಂಚಾವೀರನು ಶಸ್ತ್ರ ಪವಾಡವನ್ನು ಮಾಡುತ್ತಾನೆ. ಆಗ ಆತನ ಕಾಲಿನಿಂದ ಎಷ್ಟು ರಕ್ತ ಬೀಳುತ್ತದೆಯೋ ಅಷ್ಟು ಹನಿ ರಕ್ತವನ್ನು ಅಲ್ಲಿರುವ ಗುಂಡಿಗೆ ಹಚ್ಚಿ ಬರ್ತಾರೆ. ರಾಕ್ಷಸ ಪಡೆಯಲ್ಲಿ ಮಣಿಆಸುರ ಮಲ್ಲಆಸುರ ಎಂಬ ಎರಡು ಗುಂಡುಗಳು ಇವೆ. ಮಾರನೇ ದಿವಸ ಅಲ್ಲಿ ಹೋಗಿ ನೋಡಿದರೆ ರಕ್ತದ ಗುರುತುಗಳೇನು ಅಲ್ಲಿರುವುದಿಲ್ಲ. ಇದರಿಂದ ಜನಪದರು ತಿಳಿದುಕೊಳ್ಳುವುದೇನೆಂದರೆ; ಇವತ್ತಿಗೂ ಅಲ್ಲಿ ರಾಕ್ಷಸರ ವಾಸ ಇದೆ. ಕಂಚಾವೀರ ನೀಡಿದ ರಕ್ತ ವನ್ನು ಅವರು ಕುಡಿಯುತ್ತಾರೆ ಎಂದು ಜನಪದರು ನಂಬುತ್ತಾರೆ.

೬. ಬೇಟೆಯ ಸಾಂಕೇತಿಕ ರೂಪವಾಗಿ ನಿಂಬೆ ಹಣ್ಣನ್ನು ನೈವೇದ್ಯಗೆ ಇಡುತ್ತಾರೆ. ಯಾವುದೇ ಪ್ರಾಣ ಹಾನಿ ಆಗಬಾರದು ಎನ್ನುವ ಒಂದು ಕಾರಣಕ್ಕೆ ತುಂಬಿದ ಜೀವದಂತಿರುವ ನಿಂಬೆಹಣ್ಣನ್ನು ಕೊಯ್ದು ಹಾಕಿ ಆ ರೂಪದಲ್ಲಿ ಪ್ರಾಣ ಬಲಿ ಕೊಡುತ್ತಾರೆ ಎನ್ನುವುದು ಜನರ ನಂಬಿಕೆ. ಇವತ್ತಿಗೂ ಹೊಸ ವಾಹನಗಳಿಗೆ ಪೂಜೆ ಮಾಡುವಾಗ, ಇಲ್ಲವೆ ಅಮವಾಸೆಯ ದಿನದಂದು ಪೂಜೆ ಮಾಡುವಾಗ ವಾಹನಗಳ ಗಾಲಿ ಕೆಳಗೆ ನಿಂಬೆ ಹಣ್ಣನ್ನು ಇಟ್ಟು ಓಡಿಸುವುದನ್ನು ಕಾಣುತ್ತೇವೆ. ಕಾರಣ ಯಾವುದೇ ಪ್ರಾಣ ಹಾನಿ ಆಗದು ಎಂದು ನಂಬುತ್ತಾರೆ. ಕುಂಬಳಕಾಯಿಯು ಸಹ ಒಂದು ಜೀವ ತುಂಬಿರುವ ವಸ್ತುವೆಂದು ಕಲ್ಪನೆ. ಪ್ರತಿ ದಸರಾಕ್ಕೆ ಬೆಳಿಗ್ಗೆ ಕುಂಬಳಕಾಯಿಯನ್ನು ಒಡೆದು, ಅದಕ್ಕೆ ಬಂಢಾರ, ಕುಂಕುಮ ಹಚ್ಚುತ್ತಾರೆ. ಇವೆಲ್ಲ ಬೇಟೆಯ ಸಂಕೇತಗಳಾಗಿವೆ.

೭. ದಸರಾ ಅಮವಾಸೆಯ ದಿನದಂದು ನೆರಣಿಕೆ ಗ್ರಾಮದ ದೇವರು ಮನೆಯಿಂದ ದೇವರನ್ನು ಹೊತ್ತ ಪಲ್ಲಕ್ಕಿಯು ಬೆಟ್ಟದ ಮೇಲಿರುವ ಮಲ್ಲಯ್ಯನ ಗುಡಿಗೆ ಸೇರುತ್ತದೆ. ಅಂದಿನಿಂದ ನವರಾತ್ರಿಯ ಆಚರಣೆ, ಬನ್ನಿ, ರಥೋತ್ಸವ, ವಗ್ಗರ ಸೇವೆ, ಬಸವಿಯರ ಆಟ ಇತ್ಯಾದಿ ಎಲ್ಲಾ ಆಚರಣೆಗಳು ಮುಗಿಯುವ ವೇಳೆಗೆ ಹುಣ್ಣಿಮೆಯು ಬಂದು ಬಿಡುತ್ತದೆ. ಹುಣ್ಣಿಮೆಯ ದಿನದಂದು ದೇವರುಗಳು ಬೆಟ್ಟದಿಂದ ಇಳಿದು ನೆರಣಿಕೆ ಗ್ರಾಮದ ದೇವರು ಮನೆಯನ್ನು ಸೇರುತ್ತವೆ. ಈ ನಡುವೆ ಬರುವ ೧೫ ದಿನಗಳವರೆಗೆ ಕ್ಷೇತ್ರದಲ್ಲಿ ಭಕ್ತಾದಿಗಳು ಯಾರೂ ಮಾಂಸ ಆಹಾರವನ್ನು ಸೇವಿಸುವ ಹಾಗೆ ಇಲ್ಲ. ಒಂದು ವೇಳೇ ಸೇವಿಸಿದ್ದೇ ಆದರೆ ಆತನಿಗೆ ಏನಾದರೂ ಕೆಟ್ಟದ್ದು ನಡಿತೈತೆ ಎನ್ನುವ ಒಂದು ನಂಬಿಕೆ ಜನರ ಮನಸ್ಸಿನಲ್ಲಿದೆ.

ಬಡಿಗೆಯನ್ನು ಹಿಡಿದು ಬೇಟೆಗೆ ಹೊರಟಿರುವಂತೆ ಜನಪದರಿಗೆ ಭಾಸವಾಗಿವೆ. ಅವರ ನಂಬಿಕೆಯಂತೆ ಇಂದಿಗೂ ರಾಕ್ಷಸರು ಆ ಕ್ಷೇತ್ರದಲ್ಲಿ ವಾಸಿಸುತ್ತಿರುವರು. ಅವರಿಗೆ ನಾವು ರಕ್ತ ನೀಡಿ ತಣಿಸುತ್ತಿದ್ದೇವೆ ಎಂದು ದೈವದ ಹಿನ್ನೆಲೆಯಲ್ಲಿ ಜನಪದರು ನಂಬಿದ್ದಾರೆ.

### ೬.೧.೫. ಹಬ್ಬ-ಹರಿದಿನ :

ಮೂಲತಃ ನಂಬಿಕೆಗಳು ಹುಟ್ಟಿಕೊಳ್ಳುವುದು ದೇವರು ಎನ್ನುವ ಒಂದು ಪರಿಕಲ್ಪನೆಯ ಮೂಲಕ. ದೇವರನ್ನು ಆಚರಿಸುವಂತಹ ಹಬ್ಬ-ಹರಿದಿನಗಳಲ್ಲಿ ಬಹಳಷ್ಟು ನಂಬಿಕೆಗಳನ್ನು ಜನಪದರು ಹೊಸೆದು ಕೊಂಡಿರುತ್ತಾರೆ. ಅದು ದೈವದ ಹಿನ್ನೆಲೆಯಲ್ಲಿ ತಾರ್ಕಿಕವಾಗಿ ಹುಟ್ಟಿಕೊಂಡಿರಬಹುದು. ಅಂತೆಯೇ ಮಲ್ಲಯ್ಯನ ಹಬ್ಬವಾದ ದಸರಾ ದಿನಗಳಲ್ಲಿ ಹಾಗೂ ಅಮವಾಸೆ, ಭಾನುವಾರ ಮುಂತಾದ ದಿನಗಳಲ್ಲಿ ಭಕ್ತರು ವಿಶೇಷವಾದ ನಂಬಿಕೆಗಳನ್ನು ಹುಟ್ಟು ಹಾಕಿಕೊಂಡಿದ್ದಾರೆ. ನಂಬಿದಂತೆ ನಡೆದರೆ ಒಳ್ಳೆಯದಾಗುತ್ತದೆ. ಇಲ್ಲವಾದರೆ ಕೆಡಕು ಸಂಭವಿಸುತ್ತದೆ ಎಂಬ ಪ್ರಮೇಯವನ್ನು ಮೊದಲೇ ಜನಪದರು ಸೃಷ್ಟಿಸಿದ್ದಾರೆ.

೧. ಬನ್ನಿಯದಿನ ಸುತ್ತಮುತ್ತಲಿನ ಊರಿನ ಜನರು ಬಡಿಗೆಗಳನ್ನು ಹಿಡಿದು ಉತ್ಸುಕತೆಯಲ್ಲಿ ಮಲ್ಲಯ್ಯನ ಬೆಟ್ಟಕ್ಕೆ ಸೇರುತ್ತಾರೆ. ಬೆಟ್ಟದಲ್ಲಿ ರಾತ್ರಿಯಿಡೀ ಬಡಿಗೆ ಆಟದ ಕಾರ್ಯಕ್ರಮ ನೆರವೇರುತ್ತದೆ. ಈ ಬಡಿಗೆ ಆಟದಲ್ಲಿ ಎಷ್ಟೋ ಜನರಿಗೆ ತಲೆಗಳು ಹೊಡೆದು ಹೋಗುತ್ತವೆ. ಕೆಲವರಿಗೆ ಗಾಯಗಳಾಗುತ್ತವೆ. ಮತ್ತೆ ಕೆಲವರು ಸತ್ತೇ ಹೋಗುತ್ತಾರೆ. ಇದೆಲ್ಲಾ ಆಕಸ್ಮಿಕವಾಗಿ ಕೆಲವು ಘಟಿಸಿದರೆ, ಅತಿ ಹೆಚ್ಚಾಗಿ ಕಾಲು ಕೆರೆದು ಜಗಳ ಮಾಡುವ ಪ್ರಸಂಗ ಉದ್ಭವಿಸುತ್ತವೆ. ತಮ್ಮ ತಮ್ಮ ಊರುಗಳ ಮಧ್ಯ ಇರುವಂತಹ ದ್ವೇಷವನ್ನು ಬಡಿಗೆ ಆಟದಲ್ಲಿ ಅವರನ್ನು ಹೊಡೆಯುವುದರರ ಮೂಲಕ, ಇಲ್ಲವೇ ಸಾಯಿಸುವುದರ ಮೂಲಕ ಸೇಡನ್ನು ತೀರಿಸಿ ಕೊಳ್ಳುತ್ತಾರೆ. ಈ ಬಡಿಗೆ ಆಟ ನಿಗದಿತ ಸಮಯದೊಳಗೆ ಮಾತ್ರ ಆಡಬೇಕು ಎನ್ನುವ ನಿಯಮವಿದೆ. ಈ ನಿಯಮಕ್ಕೆ ಸಂಬಂಧಿಸಿದಂತೆ ಜನರ ಆಡು ಮಾತಿನ ಒಂದು ಗಾದೆ ಈ ರೀತಿ ಇದೆ; ''ಬಂಢಾರ ಹಾರಿದ ಮ್ಯಾಲೆ ಬಡಿಗೆ ಎತ್ತಂಗಿಲ್ಲ''. ಕಾರಣ ಬೆಳಗಿನ ಜಾವ ರಕ್ತಪಡೆಯಿಂದ ಮರಳಿ ಬಂದ ದೇವರುಗಳು ಬಸವಣ್ಣನ ಗುಡಿ ಯಲ್ಲಿ ಬಂದು ಸೇರುತ್ತವೆ. ಆಗ್ಗೆ ಸಮಯ ಸುಮಾರು ಬೆಳಗಿನ ಜಾವ ೪-೩೦ ರಿಂದ ೫-೦೦ ಗಂಟೆಯ ಒಳಗೆ ಇರುತ್ತದೆ. ಗುಡಿಯಲ್ಲಿ ಪೂಜೆಯ ವಿಧಾನಗಳೆಲ್ಲ ಮುಗಿದ ಮೇಲೆ ಕಾರಣಿಕದ ಗೊರವಯ್ಯ ಗುಡಿಯ ಮೇಲೆ ಏರಿ ಕಾರಣಿಕವನ್ನು ನುಡಿಯುತ್ತಾನೆ. ಈ ಹೇಳಿಕೆ ಹೇಳಿದ ಮೇಲೆ ಗೊರವಯ್ಯ ಒಂದು ಹೊಸ ಬಂಢಾರದ ಚೀಲವನ್ನು ಬಿಚ್ಚಿ ಬಂಢಾರವನ್ನು ಭಕ್ತಾದಿಗಳ ಮೇಲೆಲ್ಲಾ ಎರಚುತ್ತಾನೆ. ಈ ರೀತಿ ಎರಚಿದಾಗ ಅಲ್ಲಿಯ ವರೆಗೆ ಎತ್ತಿದ ಬಡಿಗೆಗಳನ್ನೆಲ್ಲಾ ಇಳಿಸ ಬೇಕು. ಬಂಢಾರ ಹಾರಿದ ಮ್ಯಾಲೆ ಯಾವುದೇ ಕಾರಣಕ್ಕೆ ಬಡಿಗೆಯನ್ನು ಎತ್ತಿ ಹೊಡೆದಾಡುವ ಹಾಗೆ ಇಲ್ಲ. ಒಂದು ವೇಳೆ ಈ ರೀತಿ ಹೊಡೆದಾಡಿದ್ದೇ ಆದರೆ ಅಂಥವರು ಇಷ್ಟು ದಿನಕ್ಕೆ ಸಾಯುತ್ತಾನೆ ಎನ್ನುವಂತಹ ಒಂದು ನಂಬಿಕೆ ಇದೆ.

೨. ದೇವರಗುಡ್ಡದ ಸುತ್ತಮುತ್ತಲಿನ ಪ್ರದೇಶದ ಊರುಗಳಾದ ನೆರಣಿಕೆ, ಎಳ್ಳಾರ್ಥಿ, ಸುಳುವಾಯಿ, ಬಿಳಿಹಾಲು, ಹೊಸಪೇಟೆ, ಅರಿಕೆರೆ ತಾಂಡ ಇತ್ಯಾದಿ ಊರುಗಳಿಂದ ರಾತ್ರಿ ಬನ್ನಿಗೆ ಗುಂಪು ಗುಂಪಾಗಿ ಬಡಿಗೆ ಹಿಡಿದುಕೊಂಡು ಬರುತ್ತಾರೆ. ಬೆಟ್ಟಕ್ಕೆ ಬರುವ ಮುಂಚೆ ಅವರವರ ಊರುಗಳಲ್ಲಿ ಸಾಯಂಕಾಲ ಹಾಲುಭಾಷೆ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ''ಯಾವುದೇ ಕಾರಣಕ್ಕೆ ಬನ್ನಿಯಲ್ಲಿ ಬಡಿಗೆ ಹಿಡಿದು ಹೊಡೆದಾಟಕ್ಕೆ ಹೋಗಬಾರದು. ಒಂದು ವೇಳೆ ಯಾರಾದರೂ ಹೊಡೆದಾಡೋಕೆ ಬಂದ್ರೆ ಅವರನ್ನ ಬಿಡಬಾರದು. ನಮ್ಮ ನಮ್ಮದರಲ್ಲೇ ಎಷ್ಟೇ ದ್ವೇಷ ಇದ್ದರೂ ಸಹ ನೀವು ಅಲ್ಲಿಗೆ ಹೋಗಿ ಅಣ್ಣ - ತಮ್ಮಂದಿರ ಹಾಗೆ ಎಲ್ಲಾ ಒಗ್ಗಟ್ಟಾಗಿ ಇರಬೇಕು''. ಈ ರೀತಿ ಭಾಷೆಯನ್ನು ತೆಗೆದುಕೊಳ್ತಾರೆ. ಈ ಭಾಷೆಗೆ ತಪ್ಪಿದವನು ಸಾಯುತ್ತಾನೆ. ಇಲ್ಲ ಏನೋ ಅವನಿಗೆ ಕೆಟ್ಟದ್ದು ಆಗುತ್ತೆ ಎನ್ನುವ ನಂಬಿಕೆ ಇದೆ. ಯಾರಾದರೂ ಬಡಿಗೆ ಆಟದಲ್ಲಿ ಆಕಸ್ಮಿಕವಾಗಿ ಸತ್ತರೆ ''ಅವ್ರು ಭಾಷೆಗೆ ತಪ್ಪಿರಬಹುದು, ಇಲ್ಲ ದೇವ್ರಿಗೆ ಸರಿಯಾದ ರೀತಿಯಲ್ಲಿ ನಡೆದುಕೊಂಡಿಲ್ಲ. ಕುಡಿಯೋದು, ತಿನ್ನೋದು ಕಲ್ತು ಸರಿಯಾಗಿ ನಿಯಮಗಳನ್ನು ಪಾಲಿಸಿಲ್ಲ'' ಎನ್ನುವಂತಹ ಊಹೆಗಳನ್ನು ಜನಪದರು ಕಲ್ಪಿಸುತ್ತಾರೆ. ಒಟ್ಟಾರೆ ಹಾಲುಭಾಷೆಗೆ ತಪ್ಪಿ ನಡೆದರೆ ಏನಾದರೂ ಕೆಡಕು ನಡೆಯುತ್ತೆ ಎನ್ನುವಂತಹ ನಂಬಿಕೆ ಈ ಕ್ಷೇತ್ರದ ಜನಪದರಿಗಿದೆ.

೩. ಬಡಿಗೆ ಆಟದಲ್ಲಿ ಬಡಿಗೆ ಹಿಡಿದವರು ಕುಡಿದು (ಮಧ್ಯಪಾನ) ಆಡುತ್ತಿದ್ದರೆ ಅವರಿಗೆ ಬೆಳಕು ಮೂಡುವುದರೊಳಗೆ ಏನೋ ಒಂದು ಅನಾಹುತ ಆಗುತ್ತದೆ ಎನ್ನುವ ನಂಬಿಕೆ ಇದೆ. ಬಡಿಗೆ ಆಟದಲ್ಲಿ ಪಂಜು ಹಿಡಿದರೆ ಕೈ ಸುಡೋದು, ಬೇರೆ ಸಂದರ್ಭದಲ್ಲಿ ಕಾಲು ಉಳುಕೋದು, ಶಾಟ್ ಬಡಿಗೆ ಹೊಡೆಯೋದು. ಹೀಗೆ ಒಟ್ಟಾರೆ ಕೆಟ್ಟದ್ದಾಗುತ್ತದೆ ಎನ್ನುವ ದೃಢವಾದ ನಂಬಿಕೆ ಜನರಲ್ಲಿದೆ. ಬಹಳ ಜನರಿಗೆ ಈ ರೀತಿ ಜಾತ್ರೆಯಲ್ಲಿ ಆಗುತ್ತಿವೆ. ವಿಶೇಷವಾಗಿ ಬನ್ನಿಯಲ್ಲಿ ತಲೆ ಒಡೆದುಕೊಂಡು ಬಂದವರೇ ಜಾಸ್ತಿ.

೪. ನಾನಾ ಕಡೆಯಿಂದ ಸ್ವಾಮಿಯ ಕ್ಷೇತ್ರಕ್ಕೆ ಆಗಮಿಸಿದ ಭಕ್ತಾದಿಗಳು ದೇವರಿಗೆ ಕಾಯಿಯನ್ನು ಒಡೆಸಿ ತೇರಿನ ಹತ್ತಿರ ಬಂದು ತೇರಿನ ಜೊತೆಗೆ ನೆರೆದ ಜನಗಳ ಮೇಲೆ ಬಂಢಾರವನ್ನು ಎರಚುತ್ತಾರೆ. ಒಂದು ವೇಳೆ ತೇರಿಗೆ ಮತ್ತು ಜನಗಳಿಗೆ ಬಂಢಾರವನ್ನು ಎರಚಲಿಲ್ಲವೆಂದರೆ ಜಾತ್ರೆಗೆ ಹೋಗಿ ಸಾರ್ಥಕ ಇಲ್ಲ ಎನ್ನುವ ಮತ್ತೊಂದು ನಂಬಿಕೆಯಿದೆ. ಅಥವಾ ಈ ರೀತಿ ಮಾಡದೇ ಇದ್ದರೆ ಮನೆಯಲ್ಲಿ ಏನೋ ಒಂದು ಕಾಡಾಟ (ತಿಕ್ಕಾಟ) ಆಗುತ್ತದೆ ಎನ್ನುವಂತಹ ನಂಬಿಕೆ ಸಹ ಇದೆ.

೫. ಹಬ್ಬದ ದಿವಸ ಸ್ವಾಮಿಯ ಕ್ಷೇತ್ರದಿಂದ ತೆಗೆದುಕೊಂಡು ಬಂದ ಬಂಢಾರ ಶ್ರೇಷ್ಠವಾದುದು ಎನ್ನುವ ನಂಬಿಕೆ ಇದೆ. ಹಬ್ಬದ ದಿನ ತಂದುಕೊಂಡು ಬಂದ ಭಕ್ತಾದಿಗಳು ಅದನ್ನು ಒಂದು ವರ್ಷದವರೆಗೆ ಮಾಡುತ್ತಾರೆ. ತುಂಬಾ ಪ್ರಮಾಣದಷ್ಟು ಬಂಢಾರವನ್ನು ತಂದುಕೊಂಡಿರುತ್ತಾರೆ.

೬. ಬನ್ನಿಯ ದಿನ ರಾತ್ರಿ ಸುಮಾರು ಒಂದು ಗಂಟೆಯ ವೇಳೆಗೆ ಮಲ್ಲಯ್ಯ ಮತ್ತು ಮಾಳಮ್ಮನವರಿಗೆ ಮದುವೆಯ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಇದಾದ ನಂತರ ದೇವರುಗಳನ್ನು ಪಲ್ಲಕ್ಕಿಯಲ್ಲಿ ಹೊತ್ತು ಬೆಟ್ಟದ ಮೇಲಿಂದ ಶಿವಸಾನ ಗದ್ದುಗೆಗೆ ತರುತ್ತಾರೆ. ನಂತರ ಅಲ್ಲಿ ಮಂಗಳಾರತಿ ಮುಗಿದ ಮೇಲೆ ಅಲ್ಲಿಂದ ಅದೇ ರಸ್ತೆಯ ಮಾರ್ಗವಾಗಿ ಪಾದಾಲಗಟ್ಟೆ, ರಕ್ಷಪಡೆ, ಮುಳ್ಳಿನ ಬಂಡೆಗೆ ದೇವರುಗಳು ಪಲ್ಲಕ್ಕಿಯಲ್ಲಿ ಸಾಗುತ್ತವೆ. ಈ ಸಮಯದಲ್ಲಿ ದೇವರುಗಳು ಕೆಲವರಿಗೆ ಕಾಣದು. ಈ ರೀತಿ ದೇವರು ಯಾರಿಗೆ ಕಂಡಿಲ್ಲವೋ ಅಂಥವರಿಗೆ ಏನೋ ಒಂದು ರೀತಿ ಕೆಡಕು ಆಗುತ್ತದೆ ಎನ್ನುವ ನಂಬಿಕೆಯೊಂದಿದೆ.

೭. ವಿಶಿಷ್ಟವಾದ ಆಚರಣೆಯಲ್ಲಿ ಸಾಗಿಬರುವ ಈ ಬನ್ನಿಯ ಹಬ್ಬದ ಪ್ರತಿ ಕ್ಷಣದಲ್ಲೂ ನಾವು ಒಂದು ರೀತಿಯ ವಿಶೇಷತೆಯನ್ನು ಕಾಣುತ್ತೇವೆ. ಸುತ್ತ ಊರುಗಳಿಂದ ಬಡಿಗೆ ಹಿಡಿದು ಬಂದ ಭಕ್ತಾದಿಗಳು ಬೆಟ್ಟದ ಮೇಲಿಂದ ಇಳಿದು ಬರುವ ದೇವರ ಪಲ್ಲಕ್ಕಿಯನ್ನು ನಾವು ಹೊರಬೇಕು. ನಾವು ಹೊರಬೇಕು ಎಂದು ಉತ್ಸಾಹಿಗಳಾಗಿರುತ್ತಾರೆ. ಪ್ರತಿ ಊರಿನ ಬಡಿಗೆಯ ಗುಂಪುಗಳು ಹೀಗೆ ಬರುವಾಗ ದೇವರ ಪಲ್ಲಕ್ಕಿಯನ್ನು ಹೊತ್ತು ತರುತ್ತಿರುವಂತಹ ನೆರಣಿಕೆ ಗ್ರಾಮದ ಬಡಿಗೆ ಹಿಡಿದ ಸರದಾರರ ಗುಂಪು ದೇವರನ್ನು ಹೊತ್ತು ಸಾಗುವ ಪಲ್ಲಕ್ಕಿಯ ಸುತ್ತ ಸೆಕ್ಯುರಿಟಿಯಂತೆ ಕಾವಲಿದ್ದು, ಅಡ್ಡ ಬಂದವರನ್ನು ತಳ್ಳುತ್ತಾ ಮುಂದೆ ಸಾಗುತ್ತಾರೆ. ದೇವರ ಪಲ್ಲಕ್ಕಿಯನ್ನು ಹೊತ್ತುಕೊಳ್ಳಲು ಜೀರ್‍ರು ಅನ್ನುವಂತಹ ಪ್ರತ್ಯೇಕವಾದ ಮನೆತನವಿದೆ. ಜೀರ್‍ರು ಕುಟುಂಬದವರೇ ದೇವರ ಪಲ್ಲಕ್ಕಿಯನ್ನು ಹೊತ್ತುಕೊಳ್ಳಲು ಅರ್ಹರು. ಬೇರೆಯವರು ಪಲ್ಲಕ್ಕಿಯನ್ನು

ಹೊತ್ತರೆ ಅವರಿಗೆ ಕೇಡು ಆಗುತ್ತದೆ. ಇಲ್ಲವೇ ಸತ್ತು ಹೋಗುತ್ತಾರೆ ಎನ್ನುವ ಮತ್ತೊಂದು ನಂಬಿಕೆಯಿದೆ. ಇದಕ್ಕೆ ನಿದರ್ಶನವಾಗಿ ವಕ್ತೃವಾದ ಜಾಜಿ ದೇವೇಂದ್ರಪ್ಪನವರು ತಮ್ಮ ಊರಿನಲ್ಲಿ ನಡೆದ ಘಟನೆಯನ್ನು ಹೇಳಿದ್ದಾರೆ. ಅವರು ವಿವರಿಸುತ್ತಾ; ''ನಮ್ಮೂರಲ್ಲಿ ಒಬ್ಬಾತ ಸಣ್ಣಣ್ಣ ಅಂತ ಹೇಳಿ ಇದ್ದ. ಆತ ಕುರುಬ ಜನಾಂಗದವನು. ಆತ ಲೇ ನಾನ್ಯಾಕಲೇ ದೇವರನ್ನ ಹೊತ್ಕೋಬಾರ್ದು ಅಂತ ಹೇಳಿ ಬನ್ನಿಯಲ್ಲಿ ದೇವರನ್ನು ಹೊತ್ಕೊಂಡ್ಹೋದ. ಹೊತ್ಕಂಡ ತಿರುಗ ಬೆಳಿಗ್ಗೆಗೆಲ್ಲಾ ಆತ ಹೆಣವಾಗಿದ್ದ. ಎಂಥ ಮನುಷ್ಯ ಆತ ಜನ ಹೊಟ್ಯಾಗ ಬರೀ ಪಂಜುಗಳೇ ಇಟ್ಟು ಸಾಯಿಸಿಬಿಟ್ಟು''. ಅವನು ದೇವರನ್ನು ಹೊತ್ತುಕೊಂಡಿದ್ದಕ್ಕೆ ಸತ್ತ ಅಂತ ಜನಗಳು ನಂಬುತ್ತಾರೆ. ಅದೇ ಸುತ್ತೆಲ್ಲಾ ಪ್ರಚಾರವಾಗುತ್ತದೆ. ಒಟ್ಟಾರೆ ದೇವರ ಪಲ್ಲಕ್ಕಿಯನ್ನು ಬೇರೆಯವರು ಹೊತ್ತರೆ ಖಂಡಿತವಾಗಿ ಕೇಡು ಆಗುತ್ತೆ ಎನ್ನುವ ಒಂದು ನಂಬಿಕೆ ಇಲ್ಲಿ ಬೇರೂರಿದೆ. ಈ ಅಂಶವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ತಲತಲಾಂತರದಿಂದಲೂ ಹರಿದು ಬಂದಿರುವಂತಹ ಪದ್ಧತಿಯನ್ನು ಮುರಿಯಲು ಸಾಧ್ಯವಾಗದು ಎನ್ನುವ ಅಂಶ ಸ್ಪಷ್ಟವಾಗುತ್ತದೆ. ಜೊತೆಗೆ ಬದಲಾವಣೆ ತರುವ ಹುನ್ನಾರ ಇದ್ದರೂ ಸಹ ಸಂಪ್ರದಾಯವಾದಿಗಳು ಅದನ್ನು ತಳ್ಳಿಹಾಕಿ, ಅವನನ್ನು ಸಾಯಿಸುವ ಕ್ರಮಕ್ಕೆ ಕೈ ಹಾಕಿ ಅದೆಲ್ಲ ದೇವರ ಇಚ್ಛೆಯಾಗಿದೆ ಎಂದು ಜನಗಳಿಗೆ ನಂಬಿಸಿ ಬಿಡುತ್ತಾರೆ. ಜೀರ್‍ರು ಪಂಗಡದವರೇ ಪಲ್ಲಕ್ಕಿಯನ್ನು ಹೊರವರು ಎಂದು ಜನಪದರಲ್ಲಿ ಬೇರೂರಿಬಿಟ್ಟಿದೆ.

೮. ಬನ್ನಿಯಲ್ಲಿ ನಡೆಯುವ ಬಡಿಗೆಯ ಆಚರಣೆ ನೋಡುಗರನ್ನು ಬೆಚ್ಚಿ ಬೀಳಿಸುತ್ತದೆ. ನೋಡು ನೋಡುತ್ತಿರುವಂತೆ ಕೆಲವರು ಕಣ್ಣೆದುರಿಗೆ ಹೆಣವಾಗಿ ಬೀಳುತ್ತಾರೆ,. ಬಡಿಗೆಯ ಆ ಹೊಡೆತದಿಂದ ಎಂಥವರು ಕೆಳಕ್ಕೆ ಬಿದ್ದ ಮೇಲೆ ಮೇಲೇಳುವ ಹಾಗೆಯೇ ಇಲ್ಲ. ಕಾಲಿನಿಂದಲೇ ಅವನನ್ನು ತುಳಿದು ಪಂಜುಗಳಿಂದಲೇ ಅವನನ್ನು ಸುಟ್ಟುಬಿಡುತ್ತಾರೆ. ಅದೆಷ್ಟೋ ಜನರಿಗೆ ಕೈ ಮೈಯೆಲ್ಲಾ ಸುಟ್ಟಿರುತ್ತೆ. ಕೆಲವರಿಗೆ ಶಾಟ್ ಬಡಿಗೆ ಗಳಿಂದ ತಲೆಗಳೇ ಒಡೆದುಹೋಗಿರುತ್ತವೆ. ಬನ್ನಿಯಲ್ಲಿ ಇಷ್ಟೆಲ್ಲಾ ಹಿಂಸೆ, ನೋವು, ಸಾವುಗಳಿದ್ದರೂ ಇಲ್ಲಿಯವರ ಒಂದು ವಿಶೇಷವಾದ ನಂಬಿಕೆಯೆಂದರೆ; ''ಬನ್ನಿಯದಿನ ಬಡಿಗೆ ಹಿಡಿಯದವನು ಗಂಡಸೇ ಅಲ್ಲ'' ಎನ್ನುವ ವಿಚಾರವಿದೆ. ಇದೊಂದು ನಂಬಿಕೆ. ನಮ್ಮನ್ನೆಲ್ಲಾ ಮಲ್ಲಯ್ಯ ಕಾಪಾಡುತ್ತಾನೆ. ನಾವು ದೇವರಿಗೆ ಸರಿಯಾಗಿ ನಡೆದುಕೊಂಡರೆ ನಮಗೆ ಏನೂ ಆಗಿರುವುದಿಲ್ಲ. ನಾವು ದೇವರಿಗೆ ನಡೆದುಕೊಳ್ಳುವುದರಲ್ಲಿ ಏನಾದರೂ ಹೆಚ್ಚು ಕಡಿಮೆ ಆಗಿದ್ರೆ ಅಥವಾ ದೇವರ ನಿಯಮಗಳನ್ನು ಮುರಿದರೆ ಅಂಥವನು ಸಾಯ್ತಾನೆ. ಇಲ್ಲ ತಲೆ ಒಡಿತೈತಿ, ಕೈ ಸುಡುತ್ತೆ ಹಿಂಗೆ ಏನಾದರೂ ಒಂದು ಆಗೈತೆ. ಏಟು ಬೀಳ್ತಾವೆ, ಸುತ್ತೋಗ್ತೀವೇನೋ ಅಂತ ಅದನ್ನೆಲ್ಲಾ ನಾವು ಲೆಕ್ಕನೇ ಮಾಡಂಗಿಲ್ಲ. ಯಾವುದೇ ರೀತಿಯ ಅನುಮಾನ ನಮ್ಮಲ್ಲಿ ಸುಳಿಯುವುದೇ ಇಲ್ಲ. ಎಲ್ಲಾ ಆತನ ಮೇಲೆ ಭಾರ ಹಾಕಿ ಉಳಿಸೋದು ಬಿಡೋದು ನಿನ್ನ ಕೈಯಲ್ಲಿದೆ ಎಂದು ಅನ್ಕಂತೀವಿ ಅಷ್ಟೇ'' ಎಂದು ಬಹಳಷ್ಟು ಬಡಿಗೆ ಹಿಡಿದು ಆಡುವವರು ಇದೇ ರೀತಿಯ ಅಭಿಪ್ರಾಯವನ್ನು ಹೇಳಿದ್ದಾರೆ.

ಬನ್ನಿ ಆಟದಲ್ಲಿ ಬಡಿಗೆಯೇ ಮುಖ್ಯವಾದ ಕೇಂದ್ರಬಿಂದು. ಇದು ಪೌರುಷದ ಸಂಕೇತವಾಗಿದ್ದು, ಪ್ರತಿಯೊಬ್ಬನನ್ನು ಬಡಿಗೆ ಆಟದ ಕಡೆ ಹುರಿದುಂಬಿಸುತ್ತದೆ. ಲೋಕೋಭಿನ್ನರುಚಿ ಎಂಬಂತೆ ಬಹಳ ಜನರು ಬಡಿಗೆ ಆಟವನ್ನು ಇಷ್ಟಪಡುವುದಿಲ್ಲ. ಅಂಥವರು ಬಡಿಗೆ ಹಿಡಿಯಲು ನಿರಾಕರಿಸಿದರೆ ಕೆಟ್ಟದಾಗುತ್ತದೆ ಎಂದು ಜನಪದರೇ ದೈವದ ಸ್ಥಾನದಲ್ಲಿ ನಿಂತು ನುಡಿದು ಅವನನ್ನು ಬಡಿಗೆ ಹಿಡಿಯುವಂತೆ ಮಾಡುತ್ತಾರೆ. ಅಂದರೆ ಕೆಲವೊಮ್ಮೆ ಒತ್ತಾಯವಾಗಿ ಹೇರುತ್ತಾರೆಂಬುದು ಸ್ಪಷ್ಟ. ಒಟ್ಟಾರೆ ಕೆಡಕು ಆಗುತ್ತೆ ಎನ್ನುವ ನಂಬಿಕೆ ಯಿಂದ ಬಡಿಗೆ ಹಿಡಿದು ಬನ್ನಿಯಲ್ಲಿ ಮೇಲ್ನೋಟಕ್ಕೆ ಆಡಿದಂತೆ ಮಾಡಿ ಮರೆಯಾಗುವ ಜನರು ಸಹ ಇದ್ದಾರೆ.

ಆದರೆ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಸಾಗಿ ಬಂದಾಗ ಕೈಯಲ್ಲಿ ಬಡಿಗೆ ಹಿಡಿದರೆ ಅದೊಂದು ರೀತಿಯ ಶಕ್ತಿ ನಮಗೆ ಬರುತ್ತೆ. ಈ ರೀತಿ ಬಡಿಗೆ ಹಿಡಿದು ಬನ್ನಿಯಲ್ಲಿ ಹೊರಟೆನೆಂದರೆ; ನಮಗೆ ಒಂದು ರೀತಿಯಲ್ಲಿ ಉಲ್ಲಾಸ ಎಂದು ಕೆಲವರು ಹೇಳುತ್ತಾರೆ. ಆದಕ್ಕೆ ಹುಡುಗ ಸ್ವಲ್ಪ ವಯಸ್ಸಿಗೆ ಬಂದನೆಂದರೆ ಅವನು ಬಡಿಗೆಯನ್ನು ಬನ್ನಿಯಲ್ಲಿ ಹಿಡಿದುಕೊಂಡಿರುತ್ತಾನೆ. ನಾನು ನೋಡಿರುವಂತೆಯೇ ಸುಮಾರು ೪೦-೪೫ ವಯಸ್ಸಿನವರೂ ಸಹ ಗೋಸಿಯನ್ನು ಚೆನ್ನಾಗಿ ಬಿಗಿದು ಉತ್ಸಾಹದಿಂದ ಹುರ್ರೇ, ಹುರ್ರೇ ಎನ್ನುತ್ತಾ ಕೈಯಲ್ಲಿ ಬಡಿಗೆಯನ್ನು ಹಿಡಿದಿರುತ್ತಾರೆ. ಅಷ್ಟೇ ಅಲ್ಲ ಚಿಕ್ಕ ಚಿಕ್ಕ ಹುಡುಗರು ತಮ್ಮ ತಮ್ಮ ಊರುಗಳಲ್ಲಿ ಉತ್ಸುಕತೆ ಯಿಂದ ಹಾಲು ಭಾಷೆ ಮಾಡುವ ಮೆರವಣಿಗೆಯಲ್ಲಿ ಕೈಯಲ್ಲಿ ಬಡಿಗೆ, ಕತ್ತಿ, ಇಲ್ಲವೆ ಗಂಡಗೊಡ್ಲಿ ಮುಂತಾದ ಮಾರಕಾಯುಧಗಳನ್ನು ಹಿಡಿದುಕೊಂಡು ವಿಜೃಂಭಿಸುತ್ತಾರೆ. ಅಂತೂ ಚಿಕ್ಕ ಹುಡುಗರಿದ್ದಾಗ ಲಿಂದಲೇ ಬಡಿಗೆ ಆಟದ ಬಗ್ಗೆ ಆಸಕ್ತಿಯನ್ನು ಹೊಂದಿರುತ್ತಾರೆ. ಒಟ್ಟಾರೆ ಹೆಚ್ಚಿನ ಜನರು ಬಡಿಗೆ ಆಟದಲ್ಲಿ ಪಾಲ್ಗೊಳ್ಳುತ್ತಾರೆ.

೯. ಕ್ಷೇತ್ರದಲ್ಲಿ ಗೊರವರು ಶಸ್ತ್ರ ಪವಾಡ, ಸರಪಣಿ ಪವಾಡ ಮುಂತಾದ ಪವಾಡಗಳನ್ನು ನೆರವೇರಿಸುತ್ತಾರೆ. ಜಾತ್ರೆಯಾದ ನಂತರ ಶಿವಸಾನ ಕಟ್ಟೆಯ ಕೆಳಗೆ ಇರುವ ಕಂಬಕ್ಕೆ ಸರಪಣಿ ಪವಾಡದ ಕಾರ್ಯಕ್ರಮವಿರುತ್ತದೆ. ಈ ಪವಾಡವನ್ನು ನೋಡಿದವರಿಗೆ ಬಹಳ ಪುಣ್ಯ ಬರುತ್ತದೆ ಎನ್ನುವ ನಂಬಿಕೆ ಇದೆ. ಈ ಪವಾಡವನ್ನು ನೋಡಲು ಎಲ್ಲರಿಗೂ ಸಿಗದು. ಕಾರಣ ಬೆಳಿಗ್ಗೆ ೭ ಗಂಟೆಯಿಂದ ೮ರ ಒಳಗೆ ಈ ಪವಾಡ ನಡೆಯುತ್ತದೆ. ಅಲ್ಲದೇ ಆ ಜನಸ್ತೋಮದ ನಡುವೆ ಈ ಪವಾಡ ಕೆಲವೇ ಜನಗಳಿಗೆ ಮಾತ್ರ ಕಾಣುವುದು.

ಒಂದು ಉದಾಹರಣೆಯ ಮೂಲಕ ಮೇಲಿನ ನಂಬಿಕೆಯನ್ನು ಅರ್ಥೈಸುವುದಾದರೆ ಜನಪದರು ನಂಬಿರುವ ಪ್ರಕಾರ 'ನರಿಮುಖ ನೋಡಿದರೆ ಒಳ್ಳೆಯದಾಗುತ್ತದೆ' ಎನ್ನುವ ಒಂದು ನಂಬಿಕೆಯಿದೆ. ನರಿ ಅಪರೂಪಕ್ಕೆ ಗೋಚರಿಸುವಂತಹ ಪ್ರಾಣಿ. ಅದು ಕೆಲವರಿಗೆ ಕಾಣಸಿಗುತ್ತದೆ. ಈ ರೀತಿ ಅಪರೂಪವಾಗಿರುವಂತಹುದನ್ನು ನೋಡಿದರೆ (ಬೇರೆ ಪ್ರಾಣಿಗಳನ್ನು ಹೊರತುಪಡಿಸಿ ಮನುಷ್ಯ ಈ ಪ್ರಾಣಿಯ ಬಗ್ಗೆ ನಂಬಿಕೆಯಿರಿಸಿಕೊಂಡು ಬಂದಿದ್ದಾನೆ) ಇದರಿಂದ ಒಳ್ಳೆಯದಾಗುತ್ತದೆ ಎಂದು ಜನಪದರು ನಂಬಿರುವರು. ಹಾಗೆಯೇ ಎಲ್ಲರಿಗೂ ಕಾಣಸಿಗದ ಈ ಸರಪಣಿ ಪವಾಡವನ್ನು ನೋಡಿದವರಿಗೆ ಪುಣ್ಯ ಬರುತ್ತೆ ಎನ್ನುವ ನಂಬಿಕೆ ಇದೆ.

೧೦. ಜನಪದರ ನಂಬಿಕೆಯಂತೆ ಶಿವನು ಕಂಬಳಿ ಗೊರವನ ವೇಷದಲ್ಲಿ ಬಂದು ದೈತ್ಯರನ್ನು ಕೊಂದ ಎಂಬುದರ ಸಂಕೇತವಾಗಿ ಹರಕೆ ಹೊತ್ತ ಜನರು ಆ ದೀಕ್ಷೆಯನ್ನು ಪಡೆದು ಆತನ ರೂಪವನ್ನು ಲೋಕಕ್ಕೆ ಮೆರೆಯಿಸುವ ಉದ್ದೇಶದಿಂದ ಧಾರ್ಮಿಕ ವೃತ್ತಿಗಾಯಕರಾಗಿ ಸಂಚರಿಸುತ್ತಾರೆ. ಇವರ ವೇಷಭೂಷಣ, ಬಣ್ಣದ ಬಟ್ಟೆಯಿಂದ ಕಸೂತಿ ಮಾಡಿದ ಕಂಬಳಿಯ ನಿಲುವಂಗಿ, ತಲೆಗೆ ಕರಡಿಯ ಚರ್ಮದಿಂದ ತಯಾರಿಸಿದ ಟೊಪ್ಪಿಗೆ ಅಥವಾ ಮುಂಡಾಸನ್ನು, ಕೊರಳಲ್ಲಿ ಬಂಢಾರ ತುಂಬಿದ ಚರ್ಮದ ಚೀಲ, ಕೊಳಲು ಊದಿ ಡಮರುಗ ನುಡಿಸುತ್ತಾ, ನಾಟ್ಯ ಮಾಡುತ್ತಾ ಹಾಡು ಕಟ್ಟಿ ಹಾಡುವರು. ಇವರ ಹೆಗಲ ಮೇಲೆ ಹಿತ್ತಾಳೆಯ ಅಥವಾ ಕಟ್ಟಿಗೆಯಿಂದ ತಯಾರಿಸಿದ ದೋಣಿಯೊಂದು ಇದ್ದು, ಬೇಡಿಕೊಂಡ ಭಕ್ತರು ಈ ದೋಣಿ ಸೇವೆ ಮಾಡಿಸುವರು. ಕಾರಣ ನಮ್ಮ ಜನಪದರು ಗೊರವಯ್ಯರನ್ನ ಶಿವನ ಪ್ರತಿರೂಪವೆಂದೇ ಭಾವಿಸುತ್ತಾರೆ. ಆ ಕಾರಣಕ್ಕಾಗಿ ಮಲ್ಲಯ್ಯನಿಗೆ ಬೇಡಿಕೊಂಡವರು ಅವರು ಬೇಡಿಕೊಂಡಷ್ಟು ದೋಣಿಗಳಿಗೆ ತಿನಿಸುಗಳನ್ನು ತುಂಬುತ್ತಾರೆ. ಗೊರವಯ್ಯಗಳಾದವರು ಡಮರುಗ, ಕೊಳಲು ಬಾರಿಸುತ್ತಾ, ಆ ದೋಣಿಗಳ ಸುತ್ತ ತಿರುಗುತ್ತ ಏಳುಕೋಟಿ..., ಏಳುಕೋಟಿ... ಎನ್ನುತ್ತಾ ತಿರುಗಿ ಆ ದೋಣಿಯಲ್ಲಿನ ತಿನಿಸುಗಳನ್ನು ಸ್ವಲ್ಪ ತಿಂದು ಉಳಿದುದನ್ನು ಪ್ರಸಾದದ ರೂಪದಲ್ಲಿ ಭಕ್ತರಿಗೆ ಕೊಡುತ್ತಾರೆ. ಅಲ್ಲದೇ ಬೇಡಿಕೊಂಡ ಭಕ್ತರು ವಗ್ಗರನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಅವರ ದೋಣಿಗಳಿಗೆ ಹಾಲು-ಹಣ್ಣು ಸಿಹಿ ತಿನಿಸುಗಳನ್ನು ತುಂಬುತ್ತಾರೆ. ವಗ್ಗರಾದವರು ದೋಣಿಗಳಿಗೆ ಪೂಜೆ ಸಲ್ಲಿಸಿ ಡಮರುಗ ನುಡಿಸುತ್ತ ತಿರುಗಿದ ಮೇಲೆ ಅಲ್ಲಿಗೆ ಬಂದಿರುವ ವಗ್ಗರೆಲ್ಲ ನಾಯಿಯಂತೆ ಕಚ್ಚಾಡುತ್ತ ಬೊಗಳುತ್ತ, ಆ ದೋಣಿಯಲ್ಲಿನ ತಿನಿಸುಗಳನ್ನು ಬಾಯಿಯಿಂದಲೇ ತಿನ್ನಬೇಕು. ಹೀಗೆ ಅವರು ಬಾಯಿ ಹಚ್ಚಿ ತಿಂದ ತಕ್ಷಣ ಅಲ್ಲದೆ ಭಕ್ತರು ಅವರನ್ನ ಹಿಡಿದುಕೊಂಡು ಉಳಿದ ತಿನಿಸುಗಳನ್ನು ಪ್ರಸಾದವೆಂದು ತಿನ್ನುತ್ತಾರೆ. ನಂತರ ವಗ್ಗರಿಗೆ ಹೊಸಬಟ್ಟೆ, ದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸುತ್ತಾರೆ. ಭಿಕ್ಷಾಟನೆಗೆ ಬಂದ ಗೊರವರಿಗೆ ಧಾನ್ಯ ನೀಡುವುದರಿಂದ, ದಾಸೋಹ ಮಾಡಿಸುವುದರಿಂದ ತಮ್ಮ ಸಂಪತ್ತು ಅಭಿವೃದ್ಧಿ ಆಗುತ್ತೆ ಎನ್ನುವ ಒಂದು ನಂಬಿಕೆಯಿದೆ. ದಸರಾ ಹಬ್ಬದಲ್ಲಿ ಈ ರೀತಿಯ ದಾಸೋಹವನ್ನು ಹಲವಾರು ಭಕ್ತರು ಹಮ್ಮಿಕೊಂಡಿರುತ್ತಾರೆ. ಮೊದಲಿಗೆ ಐದು ಜನ ಗೊರವಯ್ಯನವರಿಗೆ ಊಟ ಹಾಕಿಸಿದ ಮೇಲೆ ಭಕ್ತಾದಿಗಳಿಗೆ ಅನ್ನದಾನವನ್ನು ಮಾಡುತ್ತಾರೆ. ಅವರು ಎಷ್ಟೆಷ್ಟು ಗೊರವರಿಗೆ ಸೇವೆ ಮಾಡ್ತಾರೋ ಅಷ್ಟಷ್ಟು ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆಯಿದೆ.

ಗೊರವರನ್ನು ಶಿವನ ಪ್ರತಿರೂಪವೆಮದೇ ಜನಪದರು ಸ್ವೀಕರಿಸಿದ್ದಾರೆ. ಈ ಕಾರಣಕ್ಕಾಗಿ ಗೊರವರಿಗೆ ದಾಸೋಹ, ಧಾನ್ಯಗಳು ನೀಡುವುದು ದೇವರಿಗೆ ಪ್ರತಿಯೊಂದನ್ನು ಅರ್ಪಿಸಿದಂತೆ ಎಂದು ಜನಪದರು ಕಲ್ಪಿಸಿದಂತಿದೆ. ಆ ಕಾರಣಕ್ಕಾಗಿ ಗೊರವರಿಗೆ ದಾಸೋಹ, ಧಾನ್ಯ ನೀಡುವುದು, ದಕ್ಷಿಣೆ ಕೊಡುವುದು, ಹೊಸ ಬಟ್ಟೆಯನ್ನು ಕೊಡುವುದು, ಹೀಗೆ ಮಾಡುವುದರಿಂದ ಸಂತೃಪ್ತನಾದ ಗೊರವರು ಭಕ್ತರನ್ನು ಹರಸಿ ಶುಭ ಕೋರುತ್ತಾರೆ.

೧೧. ಪ್ರತಿದಿನ ಸ್ನಾನ ಇಲ್ಲ ಮುಖ ತೊಳೆದಾಗ ವಿಭೂತಿ ತರಹ ಬಂಢಾರ ಹಚ್ಚಿದರೆ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಇದೆ. ಮಲ್ಲಯ್ಯನನ್ನೇ ನಂಬಿರುವ ಭಕ್ತರು ಸ್ವಾಮಿಯ ಬಂಢಾರವೊಂದನ್ನು ಹಚ್ಚಿಬಿಟ್ಟರೆ ಎಂಥಹ ವಿಘ್ನಗಳು ಬಂದರು. ಸಹ ಸ್ವಾಮಿ ಮಲ್ಲಯ್ಯ ನಮ್ಮ ರಕ್ಷಣೆಗೆ ಇದ್ದಾನೆ. ಅವನೇ ಅದನ್ನು ಪಾರುಮಾಡುತ್ತಾನೆ ಎಂದು ತಮಗೆ ಬಂದ ಕಷ್ಟಗಳನ್ನು ಸ್ವಾಮಿಯ ಮೇಲೆ ಹಾಕುತ್ತಾರೆ. ಬಂಢಾರವನ್ನು ಹಣೆಗೆ ಹಚ್ಚಿಕೊಂಡರೆ ರಕ್ಷಣಾ ಕವಚವಾಗಿ ಸ್ವಾಮಿ ಭಕ್ತರಲ್ಲಿ ನೆಲೆನಿಂತಿರುತ್ತಾನೆ ಎಂದು ಜನಪದರು ಭಾವಿಸಿದಂತಿದೆ. ಆ ಕಾರಣಕ್ಕಾಗಿ ಯಾವಾಗಲೂ ಮುಖ ತೊಳೆದಾಗ, ಸ್ನಾನ ಮಾಡಿದಾಗ ಬಂಢಾರವನ್ನು ಹಚ್ಚುವುದರಿಂದ ಒಳ್ಳೆಯದಾಗುತ್ತದೆ ಎಂದು ನಂಬಿದ್ದಾರೆ.

೧೨. ದೇವರ ಗುಡ್ಡದಲ್ಲಿ ಅಮವಾಸೆಯ ದಿನ ಭಕ್ತಾದಿಗಳಿಗೆ ದಾಸೋಹ ಮಾಡಿಸಿದರೆ, ಅಂದಿನ ದಿನ ನೀಡುವ ಪ್ರಸಾದವನ್ನು ಸ್ವೀಕರಿಸಿದರೆ, ಇಲ್ಲವೆ ನಿದ್ದೆ ಮಾಡಿ ಬಂದರೆ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಇದೆ. ಮಲ್ಲಯ್ಯನಿಗೆ ಅಮವಾಸೆ ಶ್ರೇಷ್ಠವಾದ ದಿನ ಆ ದಿನದಂದು ಕ್ಷೇತ್ರಕ್ಕೆ ಭಕ್ತನು ಭೇಟಿಕೊಟ್ಟರೆ ಅವನಿಗೆ ಒಳ್ಳೆಯದಾಗುತ್ತದೆ ಎನ್ನುವ ಕಲ್ಪನೆ ಜನಪದರಲ್ಲಿ ಮೂಡಿದೆ.

೧೩. ದಸರಾ ಅಮವಾಸೆಯ ದಿವಸ ದೇವರು ನೆರಣಿಕೆಯ ದೇವರ ಮನೆಯಿಂದ ಗಿರಿಗೆ ಹೋಗುತ್ತಾನೆ. ಅಲ್ಲಿ ಗಿರಿಯಲ್ಲಿ ಗೊರವರಿಗೆ ಮತ್ತೆ ಕೆಲ ಭಕ್ತರಿಗೆ ಕಂಕಣಧಾರಣೆಯನ್ನು ಮಾಡುತ್ತಾರೆ. ಮತ್ತೆ ಬರುವ ಹುಣ್ಣಿಮೆಗೆ ದೇವರು ಗಿರಿಯಿಂದ ಇಳಿದು ಬಂದು ದೇವರ ಮನೆಗೆ ಸೇರುತ್ತಾನೆ. ಈ ನಡುವಿನ ೧೫ ದಿನಗಳವರೆಗೆ ಕೈಯಲ್ಲಿ ಕಟ್ಟಿಕೊಂಡಿರುವಂತಹ ಕಂಕಣ ಯಾವ ಕಾರಣಕ್ಕೂ ಹರಿದು ಹೋಗಬಾರದು, ಇಲ್ಲ ಕಿತ್ತು ಹೋಗಬಾರದು ( ಎಲೆ ಉದುರಿದರೂ ಸಹ ದಾರ ಇರಲೇಬೇಕು ) ಕಂಕಣ ಏನಾದರೂ ಬಿಚ್ಚಿ ಹೋದರೆ ಕೆಡಕು ಆಗುತ್ತೆ ಎನ್ನುವಂತಹ ನಂಬಿಕೆ ಇದೆ.

ದೇವರ ಸಾನಿಧ್ಯದಲ್ಲಿ ಕಟ್ಟಿಕೊಂಡಂತಹ ಕಂಕಣವನ್ನು ಕಾಪಾಡುವುದು ಅವರ ಕರ್ತವ್ಯ. ಅದಕ್ಕೆ ೧೫ ದಿನಗಳವರೆಗೆ ಜೋಪಾನ ಮಾಡುವ ಒಂದೇ ಒಂದು ಉದ್ದೇಶದಿಂದ ಕಂಕಣ ಹರಿದರೆ ಕೆಡಕು ಆಗುತ್ತದೆ ಎನ್ನುವಂತಹ ನಂಬಿಕೆಯನ್ನು ಜನಪದರು ಹುಟ್ಟು ಹಾಕಿದಂತಿದೆ.

### ೬.೧.೬. ಬಂಢಾರದ ಹಿನ್ನೆಲೆಯಲ್ಲಿ ವೈದ್ಯ :

ಸ್ವಾಮಿ ಮಲ್ಲಯ್ಯನ ಪೂಜೆಗೆ ಅತಿ ಮುಖ್ಯವಾಗಿ ಬೇಕಾಗುವಂತಹುದು ಬಂಢಾರ. ಬಂಢಾರ ಎಂದರೆ Store, Stock ಎನ್ನುವ ಅರ್ಥದ ಜೊತೆಗೆ ಬೊಕ್ಕಸ, ಕೋಶ, ದೇವರ ಪ್ರಸಾದ ರೂಪವಾಗಿ ಕೊಡುವ ಅರಿಶಿಣ ಎಂಬಿತ್ಯಾದಿ ಅರ್ಥಗಳಿವೆ. ಬಂಢಾರವೇ ಈತನಿಗೆ ಪ್ರಿಯವಾದುದರಿಂದ 'ಬಂಢಾರದಯ್ಯ' ಎನ್ನುವ ಪ್ರಿಯನಾಮವನ್ನು ಜನಪದರು ಸೂಚಿಸಿದ್ದಾರೆ. ಇದಕ್ಕೆ ಹಿನ್ನೆಲೆಯಾಗಿ ಜನಪದರು ಸೃಷ್ಟಿಸಿರುವ ದಂತಕಥೆ ಈ ರೀತಿಯಾಗಿದೆ.

ಈ ಬಂಢಾರ ಹುಟ್ಟಿದ್ದು ಹೇಗೆಂದರೆ ಮಣಿ-ಮಲ್ಲಾಸುರರನ್ನು ಕೊಂದು ಮೂರ್ಚೆ ಹೋಗಿದ್ದ ಮೈಲಾರನಿಗೆ ಪಾರ್ವತಿ ಆರಿಶಿಣಕೊಂಬನ್ನು ಅರೆದು ಕುಡಿಸಿದಳಂತೆ. ಅದನ್ನು ಕುಡಿದ ಮೈಲಾರನಿಗೆ ಚೈತನ್ಯ ಬಂದು ಎದ್ದು ಕುಳಿತನಂತೆ. ಅಂದಿನಿಂದ ಮಲ್ಲಯ್ಯ ಬಂಢಾರವಿಲ್ಲದೆ ಯಾವ ಕಾರ್ಯವನ್ನು ಮಾಡಲಾಗುವುದಿಲ್ಲ.

ಈ ಕಥೆಯ ಹಿನ್ನಲೆಯಲ್ಲಿ ಜನಪದರು ಕಲ್ಪಿಸಿಕೊಂಡಿರುವ ಅಂಶವೇನೆಂದರೆ; ಎಂತಹ ವಿಘ್ನಗಳು ಬಂದರೂ, ರೋಗ ರುಜಿನಗಳು ಬಂದರೂ ಆದಕ್ಕೆಲ್ಲಾ ಒಂದೇ ಉಪಶಮನವಾಗಿ ಬಂಢಾರವನ್ನು ಸೇವಿಸಿದರೆ ಎಲ್ಲವೂ ಗುಣಮುಖವಾಗುತ್ತದೆ ಎಂದು ನಂಬಿದ್ದಾರೆ. ಆದರಂತೆ ಪಾಲಿಸುತ್ತಿದ್ದಾರೆ.

೧. ವರ್ಷಕ್ಕೊಮ್ಮೆ ನಡೆಯುವ ದಸರೆಯ ಬನ್ನಿಯಲ್ಲಿ ಎಲ್ಲಾ ಕಡೆಯಿಂದ ಭಕ್ತಾದಿಗಳು ಬರುತ್ತಾರೆ. ಮುಖ್ಯವಾಗಿ ಹಣಸಿನ ಬಡಿಗೆ, ಕೊಡಲಿ, ಮಚ್ಚು ಮುಂತಾದವುಗಳನ್ನು ಹೊತ್ತು ತರುವ ಹೊಸಪೇಟೆ, ಎಳ್ಳಾರ್ಥಿ, ನೆರಣಿಕೆ, ಸುಳುವಾಯಿ, ಬಿಳಿಹಾಳು, ತಾಂಡ ಮುಂತಾದ ಊರುಗಳ ಭಕ್ತರು ಬಡಿಗೆ ಹಿಡಿದು ತಮ್ಮ ತಮ್ಮ ಊರಿನ ಪ್ರತಿಷ್ಠೆಯನ್ನು ಮೆರೆಯುತ್ತಾರೆ. ಮಲ್ಲಯ್ಯ-ಮಾಳಮ್ಮನವರಿಗೆ ಮದುವೆಯ ನಂತರ ದೇವರುಗಳನ್ನು ಬೆಟ್ಟದಿಂದ ಹೊತ್ತು ತರುವ ಸಂದರ್ಭದಲ್ಲಿ ಅನೇಕ ಬಡಿದಾಟಗಳಾಗುತ್ತವೆ. ಆ ಬಡಿದಾಟದಲ್ಲಿ ಕೆಲವರು ಹೆಣವಾದರೆ ಮತ್ತೆ ಕೆಲವರಿಗೆ ರಕ್ತ ಸೋರುವಂತಹ ಗಾಯಗಳಾಗುತ್ತವೆ. ಈ ರೀತಿ ಯಾವುದೇ ಗಾಯಗಳಾದರೂ ಜನಪದರು ಅದರ ಉಪಶಮನಕ್ಕೆ ಸ್ವಾಮಿಯ ಬಂಢಾರವನ್ನೇ ಹಚ್ಚುತ್ತಾರೆ. ಅಂದರೆ ಬಂಢಾರದಿಂದಲೇ ಗಾಯವು ವಾಸಿಯಾಗುತ್ತದೆ ಎನ್ನುವ ನಂಬಿಕೆ ಕೂಡ ಇದೆ.

ವಕ್ತೃವಾದ ಜಾಜಿ ದೇವೇಂದ್ರಪ್ಪನವರು ತಮ್ಮ ತಂದೆ ಶ್ರೀ ಚನ್ನಬಸಪ್ಪನವರಿಗೆ ಆದ ಒಂದು ಘಟನೆಯನ್ನು ಈ ರೀತಿ ವಿವರಿಸುತ್ತಾರೆ; '' ಈಗ್ಗೆ ಸುಮಾರು ೬-೭ ವರ್ಷಗಳ ಕೆಳಗೆ ಬನ್ನಿಯಲ್ಲಿ ಹೆಂಗಾಯ್ತು, ಹೇಗಾಯ್ತೋ ಗೊತ್ತಿಲ್ಲ. ರಾತ್ರಿ ೧೨.೩೦ ರಿಂದ ೧.೦೦ಗಂಟೆಯ ಸುಮಾರಿಗೆ ಯಾರೋ ಗೊತ್ತಿಲ್ಲ ನಮ್ಮಪ್ಪನಿಗೆ ಶಾಟ ಬಡಿಗೆ ಹಾಕಿ ಬಿಟ್ಟಾರ. ಅಲ್ಲೇ ತಲೆಗೆ ಪೂರ್ತಿ ಬಂಢಾರ ಹಾಕಿ ಒತ್ತಿಬಿಟ್ಟಾರ. ಆದಾದ ಮರುದಿನ ನಾವು ನಮ್ಮಪ್ಪನನ್ನು ವೈದ್ಯಕೀಯ ಚಿಕಿತ್ಸೆಗೆ ಕರೆದೊಯ್ಯಲಿಲ್ಲ. ಹೀಗೆ ದಿನಾ ದಿನಾ ಅದು ಚೆನ್ನಾಗಾಯ್ತು'' ಎನ್ನುತ್ತಾರೆ.

ಇನ್ನೂ ದೊಡ್ಡ ಹೊಡೆತ ತಲೆಗೆ ಬಿದ್ದಿದ್ದಾಗ ಅಂತಹ ವ್ಯಕ್ತಿ ಎಚ್ಚರ ತಪ್ಪುತ್ತಾನೆ. ಅಂತಹವರನ್ನು ಆಸ್ಪತ್ರೆಗೆ ಕರೆದೊಯ್ದು ಬ್ಯಾಂಡೇಜ್ ಕಟ್ಟಿಸ್ತಾರೆ. ಆದ್ರೂ ಆ ಬ್ಯಾಂಡೇಜಿನ ಮ್ಯಾಲೆ ಬಂಢಾರ ಹಾಕಿ ಒತ್ತುತ್ತಾರೆ. ಕಾರಣ ಬಂಢಾರ ಗಾಯದ ಮೇಲೆ ಹಾಕಿದರೆ ಗುಣ ಆಗುತ್ತೆ ಎನ್ನುವ ಬಲವಾದ ನಂಬಿಕೆ ಇದೆ. ಈ ರೀತಿ ಯಾವುದೇ ಗಾಯ ಆದ್ರೂ ಸಹ ಮೊದಲಿಗೆ ಬಂಢಾರವನ್ನು ಹಚ್ಚುತ್ತಾರೆ. ಇದರಿಂದ ಗಾಯ ಉಪಶಮನವಾಗುತ್ತೆ ಎನ್ನುವ ನಂಬಿಕೆ ಜನಪದರಿಗಿದೆ.

ವೈದ್ಯಕೀಯ ದೃಷ್ಟಿಯಿಂದ ಬಂಢಾರವನ್ನು ಗಮನಿಸಿದರೆ ಇದರಲ್ಲಿ ರೋಗ ಉಪಶಮನ ಮಾಡುವಂತಹ 'ರೋಗ ನಿರೋಧಕ ಗುಣ' ಇದೆ ಎನಿಸುತ್ತದೆ. ಜೊತೆಗೆ ಅದನ್ನು ಧಾರ್ಮಿಕವಾಗಿ ಪವಿತ್ರವೆಂದು ಭಾವಿಸಲಾಗುತ್ತದೆ. ಮಹಿಮೆಯ ಹಿನ್ನೆಲೆಯಲ್ಲಿ ಬಂಢಾರ ಜನಪದರ ಮನಸ್ಸಿನಲ್ಲಿ ಘಾಡವಾಗಿ ಸಕಲ ರೋಗ ನಿವಾರಕ ಎಂದು ಬೇರೂರಿಬಿಟ್ಟಿದೆ. ಎಷ್ಟೇ ಬೇರೆ ರೀತಿಯ ಚಿಕಿತ್ಸೆಯನ್ನು ಪಡೆದರೂ ಸಹ ಬಂಢಾರವನ್ನು ಲೇಪಿಸುವುದನ್ನು ಬಿಡುವುದಿಲ್ಲ. ಒಂದು ವೇಳೆ ಬಂಢಾರವನ್ನು ಲೇಪಿಸದೇ ಇದ್ದ ಪಕ್ಷದಲ್ಲಿ ಜನಪದರಿಗೆ ನೆಮ್ಮದಿ, ಮನಃಶ್ಯಾಂತಿ ಹೋಗುತ್ತದೆ. ಒಂದು ಅಂಶದ ಪ್ರಕಾರ ರೋಗ ನಿವಾರಣೆಗೆ ನೆಮ್ಮದಿ ಮನಃಶ್ಯಾಂತಿ ಮುಖ್ಯ. ಎಷ್ಟೇ ಚಿಕಿತ್ಸೆ ಪಡೆದರೂ ಸಹ ಬಂಢಾರ ಹಚ್ಚಲಿಲ್ಲ ಎನ್ನುವ ಕೊರಗು ಜನರ ಮನಸ್ಸಿನಲ್ಲಿ ಬಂದುಬಿಟ್ಟರೆ ಮುಗಿಯಿತು. ಬಂದಿರುವ ಖಾಯಿಲೆ, ಗಾಯ ಇತ್ಯಾದಿ ಗುಣಮುಖವಾಗದು. ಅದರ ಬದಲಿಗೆ ಬಂಢಾರವನ್ನು ಹಚ್ಚಿಬಿಟ್ಟರೆ ನಮಗೆ ಶ್ರೀರಕ್ಷೆಯಿದ್ದಂತೆ ಎಂದು ಜನಪದರು ಬಂಢಾರದಲ್ಲಿ ಬಹಳಷ್ಟು ವಿಶ್ವಾಸ, ನಂಬಿಕೆಯನ್ನು ಇಟ್ಟಿರುವುದು ಕಂಡುಬರುತ್ತದೆ.

೨. ಮನೆಯಲ್ಲಿ ಚಿಕ್ಕಮಕ್ಕಳಿಗೆ ಜ್ವರ ಬಂದಿದ್ದರೆ; ಮನೆಯ ಹಿರಿಯರು ಮಕ್ಕಳ ತಲೆಗೆ ಬಂಢಾರವನ್ನು ಉದುರಿಸಿ, ಸವರಿಬಿಟ್ಟರೆ ಜ್ವರ ಹೋಗುತ್ತೆ ಎನ್ನುವ ನಂಬಿಕೆ ಇದೆ.

೩. ಹಾಗೆ ಮನೆಯಲ್ಲಿ ಮಗು ಬಹಳಷ್ಟು ಅಳುತ್ತಿದ್ದರೆ (ಹಠ ಮಾಡುತ್ತಿದ್ದರೆ) ತಾಯಿಯ ಮೊಲೆಯ ಹಾಲನ್ನು ಚಮಚದೊಳಗೆ ಹಾಕಿ ಅದರಲ್ಲಿ ಬಂಢಾರ ಹಾಕಿ ಕಲೆಸ ಕುಡಿಸಿದರೆ ಮಗು ಅಳುವುದನ್ನು ನಿಲ್ಲಿಸುತ್ತೆ ಎನ್ನುವ ಕಲ್ಪನೆ ಇದೆ.

೪. ಕೆಲವರಿಗೆ ನಿಗೂಢವಾದ ಕಾಯಿಲೆಗಳಿರುತ್ತವೆ. ಹೊಟ್ಟೆ ಹಸಿವು ಆಗದೇ ಇರುವುದು, ಏನು ಮಾಡಿದರೂ ಕೈಕಾಲುಗಳು ಹಿಡಿದುಕೊಳ್ಳುವುದು, ಮೈ ಉರಿದಂತೆ ಆಗುವುದು, ಹೊಟ್ಟೆಯಲ್ಲಿ ಉರಿ, ಸಂಕಟ ಆಗುವುದು, ತಲೆಯಲ್ಲಿ ಒಂದೇ ಸಮನೆ ಚುಚ್ಚಿದಂತಾಗುವುದು, ಸುಸ್ತು ಬರುವುದು ಹೀಗೆ ಮನುಷ್ಯನಿಗೆ ಯಾವುದೇ ರೀತಿಯ ತೊಂದರೆಗಳು ಕಾಣಿಸಿಕೊಂಡರೆ ಇದರ ಉಪಶಮನಕ್ಕಾಗಿ ಬಂಢಾರ, ಬಿಸಿನೀರು, ಬಿಲ್ವಪತ್ರೆ, ಕಾಯಿಬಳಗಿನ ಅಂಟನ್ನು ತೆಗೆದುಕೊಂಡು ನೀರಿನೊಳಗೆ ಬೆರೆಸಿ ರೋಗಿಗೆ ಕುಡಿಸಿ ''ದೇವ್ರು ಮಲ್ಲಯ್ಯ ಒಳ್ಳೆಯದು ಮಾಡ್ತಾನೆ ನಡೆಮ್ಮ ಅತ್ಲಾಗೆ ಏನು ಆಗಾದಿಲ್ಲ'' ಅಂತ ಹೇಳಿ ಕಳಿಸುತ್ತಾರೆ. ಈ ರೀತಿ ಮಾಡುವುದರಿಂದ ಅವನಲ್ಲಿರುವ ತೊಂದರೆ ಬೇಗನೆ ಗುಣಮುಖವಾಗುತ್ತದೆ ಎನ್ನುವ ನಂಬಿಕೆ ಜನರಿಗಿದೆ.

ಮೇಲಿನ ಪ್ರತಿಯೊಂದು ಅಂಶವನ್ನು ಗಮನಿಸಿದಾಗ ರೋಗಿಯ ಉಪಶಮನಕ್ಕಾಗಿ ಬಂಢಾರ ಇತ್ಯಾದಿಯನ್ನು ಬಳಸುವುದು ಮುಖವಲ್ಲ. ಅದರ ಬದಲಿಗೆ ನಂಬಿಕೆಯೆ ಮುಖ್ಯವಾಗಿ ಜನಪದರಿಗೆ ಕಂಡು ಬಂದಿದೆ. ಆದ್ದರಿಂದ ಇವತ್ತಿನವರೆಗೂ ಬಂಢಾರ ರೋಗಿಯ ಉಪಶಮನ ಕಾರ್ಯದಲ್ಲಿ ತನ್ನದೇ ಆದ ಮಹತ್ವವನ್ನು ಬೀರಿದೆ.

### ೬.೧.೬.೧. ಪಶು ವೈದ್ಯ :

ಮನೆ ಬಳಕೆಯ ಮತ್ತು ಮನುಷ್ಯನ ಸುತ್ತಮುತ್ತಣ ಇರುವ ಸಾಕು ಪ್ರಾಣಿಗಳನ್ನು ಕೇಂದ್ರವಾಗುಳ್ಳ ನಂಬಿಕೆಗಳು ಹಲವಾರು. ಮನುಷ್ಯ ಹಾಗೂ ಪಶು ಜೀವನಗಳು ಪರಸ್ಪರಾವಲಂಬಿಗಳು. ಅವು ಹಾಸು ಹೊಕ್ಕಾಗಿ ಹೆಣೆದುಕೊಂಡಿವೆಯೆಂದೇ ಹೇಳಬೇಕು. ಪಶುಗಳು ತಮ್ಮ ಬದುಕಿಗೆ ಮನುಷ್ಯನನ್ನು ಅವಲಂಬಿಸಿವೆ ಎನ್ನುವುದಕ್ಕೆ ಬದಲಾಗಿ, ಮನುಷ್ಯ ತನ್ನ ಜೀವನೋಪಾಯಕ್ಕೆ ಪಶುಗಳನ್ನೇ ಹೆಚ್ಚಾಗಿ ಅವಲಂಬಿಸಿದ್ದಾನೆ ಎನ್ನುವುದೇ ಸೂಕ್ತ. ಅಂತೆಯೇ ಜನಪದರು ತಮ್ಮ ಜೀವನಕ್ಕೆ ಕೃಷಿಯನ್ನೇ ಅವಲಂಬಿಸಿದ್ದಾರೆ. ಆದರಲ್ಲಿ ಮುಖ್ಯವಾಗಿ ದನ-ಕರುಗಳನ್ನು, ಕೃಷಿಗೆ ಬೇಕಾದ ಜಾನುವಾರುಗಳನ್ನು ಅತ್ಯಂತ ಕಾಳಜಿಯಿಂದ ಸಾಕುತ್ತಾರೆ. ಜಾನುವಾರುಗಳು ಜೀವನದ ಅವಿಭಾಜ್ಯ ಅಂಗವೆಂದೇ ಅವರು ಭಾವಿಸುತ್ತಾರೆ. ಇಂತಹ ಜಾನುವಾರುಗಳಿಗೆ ಖಾಯಿಲೆಗಳು ಕಾಣುವುದು , ಕಂಡುಬರುವುದು ಸಹಜ. ಆಗ ಜನಪದರು ಬಂಢಾರದಿಂದಲೇ ಉಪಶಮನ ಮಾಡುವುದನ್ನು ಕಂಡುಕೊಂಡಿದ್ದಾರೆ. ಆದರಲ್ಲಿ ನಂಬಿಕೆಯಿಟ್ಟಿದ್ದಾರೆ ಕೂಡ.

೧. ದನಕರುಗಳಿಗೆ ಹೊಟ್ಟೆ ಊದಿದರೆ, ಇಲ್ಲ ಯಾವುದಾದರೂ ಖಾಯಿಲೆಗೆ ಒಳಗಾದರೆ ಭಕ್ತರು ಬಿಸಿನೀರು ಕಾಯಿಸಿ, ಅದರೊಳಗೆ ಬಂಢಾರ ಹಾಕಿ ಬೆರೆಸಿ ಗೊಟ್ಟಗಳಿಂದ ಪಶುಗಳಿಗೆ ಕುಡಿಸಿಬಿಟ್ಟರೆ, ಸುಸ್ತು ಕಡಿಮೆ ಆಗುತ್ತದೆ, ಹೊಟ್ಟೆ ಊದಿರುವುದು ಸಹ ಹೋಗುತ್ತದೆ. ಒಟ್ಟಾರೆ ಯಾವುದೇ ಪಶುವಿಗೆ ಖಾಯಿಲೆ ಬಂದಾಗಲೂ ಸ್ವಾಮಿಯ ಭಂಡಾರ ಹಾಕಿ ಕುಡಿಸಿಬಿಟ್ಟರೆ ರೋಗ ಕಳೆಯುತ್ತದೆ ಎಂಬ ದೃಢವಾದ ನಂಬಿಕೆ ಈ ಕ್ಷೇತ್ರದ ಜನರಲ್ಲಿದೆ.

೨. ಕೆಲವೊಮ್ಮೆ ದನಗಳು ಮೇವನ್ನು ಸರಿಯಾಗಿ ತಿನ್ನದೇ ಹೋದ ಪಕ್ಷದಲ್ಲಿ ಮೇವಿನ ರಾಶಿಯನ್ನು ಬಿಚ್ಚಿ, ಅದಕ್ಕೆ ಬಂಢಾರವನ್ನು ಹಾಕಿ ದನಗಳಿಗೆ ಹಾಕಿ ಬಿಟ್ಟರೆ ಚೆನ್ನಾಗಿ ತಿನ್ನುತ್ತವೆ ಎನ್ನುವಂತಹ ನಂಬಿಕೆ ಕೂಡ ಇದೆ.

ಭಂಡಾರದಿಂದ ಮನುಷ್ಯರಿಗೆ ರೋಗ ನಿವಾರಿಸಲು ಬಳಸುವಂತೆ, ಪಶುಗಳಿಗೂ ಸಹ ಇದನ್ನು (ಭಂಡಾರ) ಬಳಸುವುದರಿಂದ ಉಪಶಮನವನ್ನು ಜನಪದರು ಕಂಡುಕೊಂಡಿದ್ದಾರೆ.

೩. ಸರ್ವೇ ಸಾಮಾನ್ಯವಾಗಿ ಈ ಕ್ಷೇತ್ರದವರು ಅನುಸರಿಸಿಕೊಂಡು ಬಂದಿರುವ ಅಂಶವೆಂದರೆ; ಪಶುಗಳಿಗೆ ಸುಸ್ತು ಇರಲಿ, ಬಿಡಲಿ ಮನೆಯ ಹಿರಿಯರು ಬೆಳಿಗ್ಗೆ ಎದ್ದ ಕೂಡಲೇ ಮುಖ ತೊಳೆದುಕೊಂಡು ವಿಭೂತಿ ಹಚ್ಚಿಕೊಂಡು ಬಂಢಾರದ ಬೊಟ್ಟು ಇಟ್ಟಕೊಂಡು ಮೊದಲು ಗ್ವಾದಲಿಗೆ ಬಂಢಾರವನ್ನು ಹಚ್ಚುತ್ತಾರೆ. ಎತ್ತುಗಳಿಗೆ ಅಥವಾ ಮನೆಯಲ್ಲಿರುವ ಜಾನುವಾರುಗಳ ಹಣೆಗೆ ಬಂಢಾರವನ್ನು ಹಚ್ಚುತ್ತಾರೆ. ಕಾರಣ ಅವುಗಳಿಗೆ ಏನೂ ಆಗುವುದಿಲ್ಲವೆಂಬ ನಂಬಿಕೆ ಇದೆ. ಜಾನುವಾರುಗಳೊಂದಿಗೆ ಹೊಲದಲ್ಲಿ ದುಡಿಯಲು ಹೋಗುವ ಪ್ರತಿಯೊಬ್ಬರೂ ಬಂಢಾರವನ್ನು ಧರಿಸಿಯೇ ಹೊರಗಡೆ ಬರುತ್ತಾರೆ. ಇವತ್ತಿಗೂ ಇದೇ ರೀತಿಯ ಪರಂಪರೆ ಬಹಳಷ್ಟು ಮನೆಗಳಲ್ಲಿ ಪ್ರಚಲಿತದಲ್ಲಿರುವುದನ್ನು ನಾವು ಕಾಣಬಹುದು. ಇವರ

ಒಂದು ಅಚಲವಾದ ನಂಬಿಕೆಯೆಂದರೆ; ಬಂಢಾರ ಹಚ್ಚಿಕೊಂಡು ಹೊಲಗಳಿಗೆ, ಹೊರಗಡೆ ಹೋಗುವುದರಿಂದ ಜಾನುವಾರುಗಳಿಗೆ ಮತ್ತು ನಮಗೆ ಯಾವುದೇ ರೀತಿಯ ದೃಷ್ಟಿದೋಷ, ಕಾಯಿಲೆ ಬರದೇ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಇದೆ.

೪. ಎಮ್ಮೆಗಳು ಹಾಲನ್ನು ಸರಿಯಾಗಿ ಕೊಡದೇ ಇದ್ದ ಪಕ್ಷದಲ್ಲಿ ಕುಡತೆ(ಬಾನಿ)ಯಲ್ಲಿ ಬಂಢಾರ ಹಾಕಿ ಕುಡಿಸುತ್ತಾರೆ. ಈ ರೀತಿ ಮಾಡುವುದರಿಂದ ಎಮ್ಮೆ ಹಾಲು ಚೆನ್ನಾಗಿ ಕೊಡುತ್ತದೆ ಎಂಬುದು ನಂಬಿಕೆ. ಜೊತೆಗೆ ಕೆಚ್ಚಲಿಗೆ ಬಂಢಾರವನ್ನು ಸವರುತ್ತಾರೆ. ಆಗಲೂ ಹಾಲು ಹೆಚ್ಚು ಕೊಡುತ್ತದೆ ಎನ್ನುವಂತಹ ನಂಬಿಕೆ ಜನಪದರಲ್ಲಿದೆ.

೫. ಸಜ್ಜೆಯ ನುಚ್ಚಿನಲ್ಲಿ, ಜ್ವಾಳದ ನುಚ್ಚಿನಲ್ಲಿ ಬಂಢಾರವನ್ನು ಹಾಕಿ ಬೆರೆಸಿ ಎಮ್ಮೆಗಳಿಗೆ ತಿನಿಸಿದರೆ ಒಳ್ಳೆಯ ರೀತಿಯಲ್ಲಿ ಹಾಲು ಕೊಡುತ್ತವೆ ಎನ್ನುವ ಒಂದು ನಂಬಿಕೆ ಇದೆ. ಹಾಲು ಕೊಡದೇ ಇದ್ದ ಪಕ್ಷದಲ್ಲಿ ಈ ಮೇಲಿನ ಎಲ್ಲಾ ವಿಧಾನಗಳನ್ನು ಜನಪದರು ಒಟ್ಟಾಗಿ ಅನುಸರಿಸುತ್ತಾರೆ.

೬. ಈ ಕ್ಷೇತ್ರದ ಜನತೆಯಲ್ಲಿ ಕಂಡುಬರುವ ಮತ್ತೊಂದು ವಿಶೇಷವಾದ ನಂಬಿಕೆಯೆಂದರೆ; ಕರು ಹುಟ್ಟಿ ನಡೆದಾಡೋ ವೇಳೆಗೆ ಬಹುತೇಕವಾಗಿ ಎಲ್ಲರೂ ಒಂದು ಅಡಿ ಚೌಕದ ಹೊಸ ಬಟ್ಟೆಯನ್ನು ಟೈಲರ್‌ರವರ ಹತ್ತಿರ ತೆಗೆದುಕೊಂಡು ಬಂದು ದರ್ಜಿಯವರ ಹತ್ತಿರ ತೆಗೆದುಕೊಂಡು ಬಂದು ಅದರಲ್ಲಿ ಬಂಢಾರ ಹಾಕಿ ಕಟ್ಟಿ, ಅದನ್ನು ಕರುವಿನ ಕೊರಳಿಗೆ ಕಟ್ಟುತ್ತಾರೆ. ಕಾರಣ ಕರು ನೋಡಲು ಬಲು ಮುದ್ದಾಗಿ ಕಾಣ್ತಾಯಿರುತ್ತದೆ. ದೃಷ್ಟಿ ತಾಗಬಾರದು ಅನ್ನೋ ಉದ್ದೇಶದಿಂದ ಜನಪದರು ಈ ರೀತಿ ಮಾಡುತ್ತಾರೆ. ಈ ರೀತಿ ಹೊಸ ಬಟ್ಟೆಯಲ್ಲಿ ಬಂಢಾರ ಹಾಕಿ ಕರುವಿನ ಕೊರಳಿಗೆ ಕಟ್ಟುವುದರಿಂದ ಅದಕ್ಕೆ ಯಾವ ಪೀಡೆ, ದೃಷ್ಠಿತಾಗದು ಎಂದು ಜನಪದರು ನಂಬುತ್ತಾರೆ.

೭. ಎಮ್ಮೆ ಅಥವಾ ಆಕಳುಗಳು ಕರು ಹಾಕಿದಾಗ ಆವಾಗಲೂ ಸಹ ಮೇಲೆ ತಿಳಿಸಿದಂತೆ ಬಿಳಿ ಬಟ್ಟೆಯಲ್ಲಿ ಬಂಢಾರವನ್ನು ಹಾಕಿ, ಅದರೊಳಗೆ ನಿಂಬೆಹಣ್ಣನ್ನು ಹಾಕಿ ಕಟ್ಟಿ ಆಕಳಖು ಅಥವಾ ಎಮ್ಮೆಯ ಕೊರಳಿಗೆ ಕಟ್ಟುತ್ತಾರೆ. ಜೊತೆಗೆ ಅದರಲ್ಲಿ ಕರೆ ಉಣ್ಣೆಯ ದಾರವನ್ನು ಸಹ ಹಾಕಿ ಕಟ್ಟುತ್ತಾರೆ. ಈ ರೀತಿಯಾಗಿ ಕಟ್ಟುವುದರಿಂದ ಇವುಗಳಿಗೆ ದೃಷ್ಠಿ ತಾಗದೇ ದೆವ್ವ ರಾಹು ಇತರೆ ಪೀಡೆಪಿಶಾಚಿಗಳು ಬಡಿದುಕೊಳ್ಳಲಾರವು ಎನ್ನುವಂತಹ ನಂಬಿಕೆ ಇದೆ.

ಒಟ್ಟಾರೆಯಾಗಿ ಜನಪದರು ತಮ್ಮ ಹಾಗೂ ಜಾನುವಾರುಗಳ ಆರೋಗ್ಯದ ದೃಷ್ಟಿಯಿಂದ ಮಲ್ಲಯ್ಯನ ಬಂಢಾರವನ್ನು ನಂಬಿ ಸ್ವೀಕರಿಸುತ್ತಾ ತಮ್ಮ ತೊಂದರೆಗಳನ್ನು ನಿವಾರಿಸಿಕೊಳ್ಳುತ್ತಾ ಇದ್ದಾರೆ. ಇಲ್ಲಿ ಬಂಢಾರವನ್ನೇ ಪ್ರಮುಖ ಆಧಾರವಾಗಿಟ್ಟುಕೊಂಡು, ಸರ್ವ ವಿಧದ ಸಮಸ್ಯೆಗಳಿಗೆ ನಿವಾರಣೋಪಾಯ ಎಂಬಂತೆ ಬಳಸಲಾಗುತ್ತಿದೆ. ಒಟ್ಟಿನಲ್ಲಿ ಜನಪದರ ಆತ್ಮಸಂತೃಪ್ತಿಯ ಸಂಕೇತವಾಗಿ ಇರುವ ಬಂಢಾರವು ಅವರ ನಂಬಿಕೆಯಲ್ಲಿ ಅದು ಸಂಜೀವಿನಿಯಾಗಿದೆ.

## ೬.೧.೬.೨. ಗೊರವಯ್ಯನವರ ವೈದ್ಯ :

ಮಣಿ-ಮಲ್ಲಾಸುರ ಎಂಬ ರಾಕ್ಷಸರರಿಂದ ಜನರಿಗೆ ಮಾರಕವಾಗುತ್ತಿದ್ದಾಗ ಶಿವ ಕಂಬಳಿ ಹೊದ್ದು, ಗೊರವನ ವೇಷ ಧರಿಸಿ, ರಾಕ್ಷಸರನ್ನು ಸಂಹಾರ ಮಾಡಿದ. ಶಿವನ ಅಂದಿನ ರೂಪವೇ ಇಂದು ಗೊರವರಾಗಿ ತೋರುತ್ತಾರೆ. ಅಂದರೆ ಗೊರವ ಎಂದರೆ ಶಿವನ ಒಂದು ರೂಪವೇ ಎಂದು ಜನಪದರು ಭಾವಿಸಿದ್ದಾರೆ. ಗೊಗ್ಗಯ್ಯಗಳಿಗೆ ಗೊರವರೆಂತಲೂ ಕರೆಯುವುದುಂಟು. 'ಗೊರವ' ಎಂದರೆ ಶಿವಭಿಕ್ಷು ಎಂದರ್ಥ. ಡಾ। ಎಂ.ಚಿದಾನಂದಮೂರ್ತಿಯವರ ಅಭಿಪ್ರಾಯದಂತೆ "ಗುರು ಎಂಬ ಸಂಸ್ಕೃತ ಪದದ ಬಹುವಚನದ ರೂಪ ಗುರುವಃ ಎಂಬುದೇ ಗುರುವ, ಗೊರವ ಎಂದಾಗಿ, ಅದಕ್ಕೆ 'ಅಡಿಗಳ' ಎಂಬುದು ಸೇರಿ ಗುರುವಡಿಗಳ ಅಥವಾ ಗೊರವಡಿಗಳ" ಎಂದಾಗುತ್ತದೆ. ಆದರೆ ಜನಪದರು ಶಿವನೇ ಮೈಲಾರನಾಗಿ, ಗೊರವರ ವೇಷದಲ್ಲಿ ಬಂದ ಎಂದು ನಂಬುತ್ತಾರೆ. ಗೊರವಯ್ಯನವರು ಕೊರಳಲ್ಲಿ ಹಾಕಿಕೊಂಡ ಬಂಢಾರ ಚೀಲದಿಂದ ಬಂಢಾರವನ್ನು ಭಕ್ತರ ಹಣೆಗೆ ಇಟ್ಟರೆ ಅದು ಶುಭವಾಗುತ್ತದೆ ಎಂದು ಜನಪದರ ನಂಬಿಗೆ. ಅಂತೆಯೇ ಗೊರವಯ್ಯನವರ ವೈದ್ಯಕ್ಕೆ ಸಂಬಂಧಿಸಿದ ಅಂಶಗಳು ಈ ರೀತಿ ಇವೆ.

೧. ಮನೆಯಲ್ಲಿ ಮಗು ಹುಟ್ಟಿದ ಮೂರು ಇಲ್ಲವೇ ಐದು ವರ್ಷದೊಳಗೆ ಮಲ್ಲಯ್ಯನ ಜಾತ್ರೆಗೆ ಕರೆದುಕೊಂಡು ಬರುತ್ತಾರೆ. ಈ ರೀತಿ ಕರೆದುಕೊಂಡು ಬಂದಾಗ ಮಗುವಿನ ಕೈಯಿಂದ ಗೊರವಯ್ಯನವರ ದೋಣಿಗೆ ಬೆಂಡು, ಬೆತ್ತಾಸು ಮುಂತಾದ ತಿನಿಸುಗಳನ್ನು ಹಾಕಿಸುತ್ತಾರೆ. ಗೊರವಯ್ಯ ದೋಣಿಯೊಳಗೆ ನೀಡಿದ ಆಹಾರವನ್ನು ತಾನು ಸ್ವಲ್ಪ ತಿಂದು ಪ್ರಸಾದವಾಗಿ ಮರಳಿ ಆ ಮಗುವಿಗೆ ಮತ್ತು ಮಗುವಿನ ತಂದೆ-ತಾಯಿಗಳಿಗೆ ನೀಡುತ್ತಾರೆ. ಈ ರೀತಿ ಮಕ್ಕಳಿಂದ ಜಾತ್ರೆಯಲ್ಲಿ ಗೊರವಯ್ಯನವರಿಗೆ ತಿನಿಸುಗಳನ್ನು ಹಾಕಿಸಿದರೆ ಮಕ್ಕಳಿಗೆ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಇದೆ.

೨. ಜಾತ್ರೆಯಲ್ಲಿ ಅಥವಾ ಇತರೆ ದಿನಗಳಲ್ಲಿ ಗೊರವಯ್ಯ ಕರೆ ಕಂಬಳಿಯಿಂದ ಉಣ್ಣೆ (ದಾರ)ವನ್ನು ತೆಗೆದು, ಚಿಕ್ಕ ಮಕ್ಕಳ ಉಡುದಾರಕ್ಕೆ ಕಟ್ಟಿ, ಅವರ ಕಿವಿಯಲ್ಲಿ ಮಲ್ಲಯ್ಯ, ಮಲ್ಲಯ್ಯ ಎಂದು ಹೇಳಿ ಪಿಳ್ಳಂಗೋವಿ ಊದಿ, ಡಮರುಗ ಬಾರಿಸಿ ಬಿಡುತ್ತಾನೆ. ಈ ರೀತಿ ಮಾಡುವುದರಿಂದ ಮಕ್ಕಳಿಗೆ ಜ್ವರ, ಜಡ್ಡು, ಜಾಪತ್ರೆ (ಯಾವುದೇ ಕಾಯಿಲೆ) ಸುಳಿಯಲಾರವು ಎಂಬ ನಂಬಿಕೆ ಇದೆ.

೩. ತಂದೆ ತಾಯಿಗಳು ಮಗುವಿನ ಆರೋಗ್ಯದ ದೃಷ್ಟಿಯಿಂದ ಗೊರವಯ್ಯನನ್ನು ಕರೆದುಕೊಂಡು ಬಂದು, ಇಲ್ಲಾ ತೀರಾ ಅವರಸರವಿದ್ದಾಗ ಗೊರವಯ್ಯನ ಬಳಿಗೆ ಹೋಗಿ, ಮಗುವಿನ ಕಿವಿಯಲ್ಲಿ ಗೊರವಯ್ಯನ ವರಿಂದ ' ಉಫ್' ಎಂದು ಊದಿಸುತ್ತಾರೆ. ಕಾರಣ ಮಗುವಿನ ತಲೆಯಲ್ಲಿರುವ ಯಾವುದೇ ಜಂಜಾಟಗಳು ಒಂದು ಕಿವಿಯಿಂದ ಇನ್ನೊಂದು ಕಿವಿಯ ಮೂಲಕ ' ಉಫ್' ಎಂದು ಊದಿದಾಗ ಹೋಗಿ ಬಿಡುತ್ತವೆ ಎನ್ನುವಂತಹ ಒಂದು ನಂಬಿಕೆ ಇದೆ. ಜಂಜಾಟಗಳೆಂದರೆ ಮಗುವಿಗೆ ಉಂಟಾಗುವ ವೃಥಾ ಹೆದರಿಕೆ, ಭಯ, ಆತಂಕ ಮುಂತಾದ ಭಾವನೆಗಳು. ಈ ರೀತಿ ಮಾಡುವುದರಿಂದ ಮಗುವಿನ ತಲೆಯೊಳಗಿರುವ ಜಂಜಾಟಗಳೆಲ್ಲ ಕಳೆದು ಹೋಗುತ್ತವೆ ಎನ್ನುವ ನಂಬಿಕೆ ಜನಪದರಲ್ಲಿದೆ.

ಗೊರವಯ್ಯನವರನ್ನು ಶಿವನ ಪ್ರತಿರೂಪವೆಂದೇ ಭಾವಿಸಿದ ಜನಪದರು ಗೊರವಯ್ಯನು ನೀಡುವ ವೈದ್ಯವನ್ನು ಜನಪದರು ಅಷ್ಟೇ ಭಕ್ತಿಪೂರ್ವಕವಾಗಿ ನಂಬಿ ಸ್ವೀಕರಿಸುತ್ತಾರೆ. ಗೊರವಯ್ಯನವರು ಅಷ್ಟೇ ಭಕ್ತಿ ಹಾಗೂ ಭರವಸೆಯಿಂದ ಗುಣಮುಖವಾಗುವಂತೆ ತಿಳಿಸುತ್ತಾ ಬಂಢಾರವನ್ನು ಹಚ್ಚುತ್ತಾರೆ. ಒಟ್ಟಾರೆ ಭಕ್ತಿ ಹಾಗೂ ಗೊರವಯ್ಯನ ಭರವಸೆಗಳ ನಂಬಿಕೆಯೇ ರೋಗ ವಿಮೋಚನೆಗೆ ಹಾದಿ ಎಂದು ನಂಬಲಾಗುತ್ತದೆ.

೮. ಭಕ್ತರು ತಮ್ಮ ಮನೆಯ ದೇವರನ್ನು ಬಲವಾಗಿ ನಂಬುತ್ತಾರೆ. ನಂಬಿಕೆಯಲ್ಲಿ ಪ್ರತಿಯೊಂದು ಸಮಸ್ಯೆಯ ಉಪಶಮನ ಇರುತ್ತದೆ. ಪ್ರಸ್ತುತ ಗೊರವಯ್ಯನವರ ವೈದ್ಯಕ್ಕೆ ಸಂಬಂಧಿಸಿ, ವಗ್ಗರು ಹನುಮಂತಪ್ಪನವರನ್ನ ಕೇಳಿದಾಗ ಅವರು ತಮ್ಮ ದೇ ಆದ ಮಾತಿನಲ್ಲಿ ಸ್ಪಷ್ಟಪಡಿಸಿದ್ದಾರೆ. ''ಅರಿಶಿನ ಕೊಂಬು ಅಂದ್ರೆ ಅದು ಸಾರಿಗೆ ಬರುತ್ತದೆ, ಮತ್ತೆ ಇನ್ನೊಂದಕ್ಕೆ ಬರುತ್ತದೆ. ನಾವು ಅದನ್ನ ಅರಿಶಿಣಪುಡಿ-ಅಂತ ಅಂದು ಬಿಡ್ತೀವಿ. ಅದನ್ನೇ ನಾವು ನಂಬಿದರೆ ಬಂಢಾರ ಆಗುತ್ತದೆ. ಏನಾರ ಜಡ್ಡು ಜಾಪತ್ರೆ ಬಂದರೆ ತುಂಬಿದ ಹರಿವೆ ನೀರಿನ್ಯಾಗೆ ಹಾಕಿ ಅವನಿಗೆ ಕುಡಿಸಿಬಿಟ್ರೆ ಅವ್ನು ಪಾರಾಗಿ ಬಿಡ್ತಾನೆ. ಒಂದು ನಂಬಿಕ್ತೆ ಬೇಕು. ಇಲ್ಲಂದ್ರೆ ಬರೀ ಬಂಢಾರಕ್ಕೆ ಸರಪಣಿ ಹೆಂಗ ಹರಿತ್ಯೆತಿ? ಮತ್ತೆ ನಾವು ಕಂಡಿದ್ದು ಅಂಗಡ್ಯಾಗ ತಗಂಬಂದಿರೋ ಬಂಢಾರ ನಮ್ಮ ಚೀಲದಾಗ ಬಿದ್ರೆ ಬದ್ಲಿ ಆಗ್ತೈತಿ ನೋಡು. ನಾವು ಹಿಂಗ ಬೇರೆಯವರಿಗೆ ಹಣೆಗೆ ಹಚ್ಚಿ ಸವರಿಬಿಟ್ರೆ ಆಯ್ತು; ಗುಣ ಆಗಿ ಬಿಡ್ತೈತೆ. ಸುಸ್ತು ಆದೋರು ನಂಬಬೇಕು. ನಂಬಿದರೆ ಪಾರಾಗಿ ಬಿಡ್ತಾರೆ. ಏ ಬೇಸಾಗ್ತಿಯಾ ಬಿಡಪ್ಪ ಅಂದು ಬಿಟ್ರೆ ಆಯ್ತು ಎಲ್ಲಾ ಗುಣ ಆಗ್ತೈತೆ. ಏನೋ ಹಚ್ಯಾನ ಅರಿಶಿಣಪುಡಿ ಅಂತ ಅಂದುಕೊಂಡು ಬಿಟ್ರೆ ಆಯ್ತು ಎಡವಟ್ಟಾಗಿಬಿಡ್ತೈತೆ. ಪರಮಾತ್ಮನದು ಬಿಡಪ ಅಂದ್ರೆ ಪಾರಾಗಿ ಬಿಡ್ತಾರೆ. ಒಟ್ಟಾರೆ ಗಟ್ಟಿಯಾಗಿ ನಂಬಿದಲ್ಲಿ ಐತೆ. ಐತೆ ಅಂತ ಹೇಳ್ತಾರೆ. ಈ ಕ್ಷೇತ್ರದ ಬಹುತೇಕ ಗೊರವಯ್ಯನವರು ಇದೇ ರೀತಿಯ ಅಭಿಪ್ರಾಯ ಹೊಂದಿದ್ದಾರೆ.

### ೬.೧.೭. ವ್ಯವಸಾಯ :

ಬಹುವಾಗಿ ಈ ಕ್ಷೇತ್ರವನ್ನು ನಂಬಿರುವಂತಹವರೆಲ್ಲಾ ಕೂಲಿಕಾರರು ಮತ್ತು ಕೃಷಿ ಅವಲಂಬಿತರು. ಕೃಷಿಕರ ಅಧಿ ದೇವತೆಯಾಗಿ ಮಲ್ಲಯ್ಯ ಒಂದು ರೀತಿಯಲ್ಲಿ ತನ್ನ ಪ್ರಾಬಲ್ಯವನ್ನು ಮೆರೆದಿದ್ದಾನೆ. ಇದಕ್ಕೆ ಅಲ್ಲಿನ ಜನರ ನಂಬಿಕೆಯೇ ಕಾರಣವಾಗಿದೆ. ಇಲ್ಲಿಯ ಜನರು ಯಾವುದೇ ಒಂದು ಕೆಲಸ-ಕಾರ್ಯವನ್ನು ಮಾಡುವಾಗ ಆದಿ ದೇವರಾಗಿ ಮಲ್ಲಯ್ಯನನ್ನು ನೆನೆದು ಮುಂದುವರೆಯುವ ವಾಡಿಕೆ ಇಲ್ಲಿದೆ. ಬಿತ್ತುವಾಗ, ಕುಂಟೆ, ಕೂರ್ಗೆ ಹೊಡೆಯುವಾಗ, ವ್ಯಾಪಾರಕ್ಕೆ ತೆರಳುವಾಗ, ದೂರದ ಊರಿಗೆ ಹೋಗುವಾಗ, ಸಂಬಂಧ ಬೆಳೆಸುವಾಗ, ಜಗಳ ಪರಿಹರಿಸುವಾಗ, ಸಾಂಸ್ಕೃತಿಕ, ಸಂಗೀತ, ಸಾಹಿತ್ಯ ಹೀಗೆ ಇತ್ಯಾದಿ ಕಾರ್ಯಗಳನ್ನು ನೆರವೇರಿಸುವಾಗ ಮಲ್ಲಯ್ಯನನ್ನು ಆರಾಧಿಸುವ ಪದ್ಧತಿ ರೂಢಿಯಿಂದ ಬಂದುದಾಗಿದೆ.

ಕೃಷಿಯ ಕಾರ್ಯಗಳನ್ನು ಆರಂಭಿಸುವಾಗ ಒಂದು ಹಿಡಿಕೆಯಷ್ಟು ಧಾನ್ಯಬಿತ್ತಿ ಅದು ಮಲ್ಲಯ್ಯನಿಗೆ ಮೀಸಲು ಎಂದು ನೇಮಿಸಿ ನಂತರ ಮುಂದಿನ ಚಟುವಟಿಕೆಯಲ್ಲಿ ತೊಡಗುತ್ತಾರೆ. ಒಟ್ಟು ನಾವು ಮಾಡುತ್ತಿರುವಂತಹದು ಎಲ್ಲಾ ಮಲ್ಲಯ್ಯನ ಸೇವೆ. ಬರುವ ಫಸಲು ಆತನು ನೀಡಿದ ಭಿಕ್ಷೆ ಎಂದು ಜನಪದರು ಗಾಢವಾಗಿ ಮಲ್ಲಯ್ಯನನ್ನು ನಂಬಿ ಕಾರ್ಯಕ್ಕೆಗೊಳ್ಳುತ್ತಾರೆ.

''ಮಂದೇನ ಕೊಟ್ಟೀತು ಮನವೇನ ದಣಿದೀತು
ಮುಂಜಾನೆದಾಗ ಗಿರಿಮಲ್ಲಯ್ಯ ಕೊಟ್ಟಾರೆ
ಮನೆ ತುಂಬಿ ನಮ್ಮ ಮನ ತುಂಬಿ''.

ಎನ್ನುವ ಈ ಜನಪದ ಗೀತೆಯನ್ನು ಹಾಡುವುದರ ಮೂಲಕ ಬಿತ್ತನೆಯ ಕಾರ್ಯವನ್ನು ಶುರು ಮಾಡುತ್ತಾರೆ. ಯಾರ ಬಗ್ಗೆ ಕೃಷಿಕರಿಗೆ ಹಂಗಿಲ್ಲ. ಆದರೆ ದೇವರಾದ ಗಿರಿಮಲ್ಲಯ್ಯ ಕೊಟ್ಟರೆ ಮಾತ್ರ ನಮ್ಮ ಮನೆ ತುಂಬುತ್ತದೆ; ಮನವೂ ತುಂಬುತ್ತದೆ ಎನ್ನುವ ಅರ್ಥವಿದೆ. ಇಲ್ಲಿ ಮನಸ್ಸು ಮತ್ತು ಮನೆ ಬೌದ್ಧಿಕ ಮತ್ತು ಭೌತಿಕ ಅಂಶವನ್ನು ಒಳಗೊಂಡಿದೆ. ಹೀಗೆ ಈ ಎರಡು ಅಂಶಗಳ ಹಸಿವನ್ನು ಕೃಷಿಕರು ತುಂಬಿಸಿಕೊಳ್ಳುತ್ತಾರೆ. ಅದು ದೇವರ ಮೂಲಕ. ದೇವರಿಂದ ನಾವು ಸರ್ವವನ್ನು ಪಡೆಯಬಹುದು ಎನ್ನುವ ಗಾಢವಾದ ನಂಬಿಕೆ ಅವರಿಗಿದೆ.

ಅಂತೆಯೇ ಮಲ್ಲಯ್ಯ ಈ ಕ್ಷೇತ್ರದ ರೈತರಿಗೆ ಬೆನ್ನೆಲುಬಾಗಿ ಇರುವಂತಹ ದೇವರು. ಈ ನಿಟ್ಟಿನಲ್ಲಿ ರೈತರಿಗೆ ಮತ್ತೊಂದು ಉಪಯುಕ್ತಕರವಾಗಿರುವ ಅಂಶವೆಂದರೆ ದಸರಾ ಹಬ್ಬದಲ್ಲಿ ಹೇಳುವ ಕಾರಣಿಕ. ಈ ಕಾರಣಿಕದ ಹೇಳಿಕೆಯು ಬಹುಪಾಲು ಕೃಷಿಗೆ ಮತ್ತು ವ್ಯಾಪಾರಕ್ಕೆ ಸಂಬಂಧಿಸಿದುದಾಗಿದೆ. ಕೃಷಿಕರು ಕಾರಣಿಕದ ಹೇಳಿಕೆಗೆ ಅನುಗುಣವಾಗಿ ಬಿತ್ತುವ ಕೆಲಸವನ್ನು ಮಾಡುತ್ತಾರೆ.

೧. ಪ್ರತಿ ವರ್ಷ ಮಲ್ಲಯ್ಯನ ಗುಡ್ಡದಲ್ಲಿ ಬಡಿಗೆ ಆಟ ಕಾರ್ಯಕ್ರಮದ ಕೊನೆಯಲ್ಲಿ ದೇವರುಗಳು ರಾಕ್ಷಸ ಪಡೆಯಿಂದ ಎದುರು ಬಸವಣ್ಣನ ಗುಡಿಗೆ ಬಂದು ಸೇರುತ್ತವೆ. ಅಲ್ಲಿ ಮಲ್ಲಯ್ಯ ಮತ್ತು ಮಾಳಮ್ಮನವರಿಗೆ ಮಂಗಳಾರತಿಯ ಕಾರ್ಯಕ್ರಮ ಮುಗಿದ ನಂತರ ಕಾರಣಿಕವನ್ನು ಹೇಳುವ ಜೀರ್ರು ಈ ಗುಡಿಯ ಮೇಲೆ ಏರುತ್ತಾನೆ. ಗುಡಿಯನ್ನು ಏರಿದ ಕಾರಣಿಕ ಗೊರವಯ್ಯ ಕಾರಣಿಕವನ್ನು ನುಡಿಯುತ್ತಾನೆ. ಈ ಕಾರಣೀಕವು ಶೇ. ೭೦ ಭಾಗದಷ್ಟು ವ್ಯವಸಾಯಕ್ಕೆ ಸಂಬಂಧಪಟ್ಟಿದ್ದು. ಇನ್ನುಳಿದ ೩೦% ಭಾಗದಷ್ಟು ದೇಶದ ಸಮಾಚಾರ, ವ್ಯಾಪಾರ ಮತ್ತು ಜನಜೀವನಕ್ಕೆ ಸಂಬಂಧಿಸಿದವುಗಳಾಗಿರುತ್ತವೆ.

ಕಾರಣಿಕದಲ್ಲಿ ಹೇಳಿರುವ ಅರ್ಥಗರ್ಭಿತವಾಗಿರುವ ವಾಕ್ಯಗಳನ್ನು ಕೃಷಿಕರು, ಜನಪದರು ತಿಳಿದುಕೊಂಡು ಮೊದಲು ತಮ್ಮ ತಮ್ಮ ಊರುಗಳಿಗೆ ಬೇಗನೆ ತೆರಳುತ್ತಾರೆ. ಕಾರಣ ಕಾರಣಿಕವನ್ನು ತಮ್ಮ ಊರಿನಲ್ಲಿ ಮೊದಲು ತಿಳಿಸಬೇಕು ಎನ್ನುವ ಉದ್ದೇಶದಿಂದ ಜನಪದರು ದೇವರ ಹೇಳಿಕೆಗಳನ್ನು ತಮ್ಮದೇ ಆದ ನಿಟ್ಟಿನಲ್ಲಿ ಅವಲೋಕಿಸಿ ಆದರಂತೆ ಒಂದು ವರ್ಷದವರೆಗೆ ಅವುಗಳನ್ನು ಪಾಲಿಸುತ್ತಾ ಬಂದಿದ್ದಾರೆ. ಕಾರಣೀಕದ ಹಿನ್ನೆಲೆಯಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ನಂಬಿಕೆಗಳ ಬಗ್ಗೆ ಗಮನ ಹರಿಸೋಣ;

**ಅ) ಬಹುಫರಾಕ್ ಕೆಂಪು ಎತ್ತು ಎದ್ದೀತು ಬಿಳಿಯ ಎತ್ತು ತಗ್ಗೀತು :**

ಕೆಂಪು ಎತ್ತು ಎಂದರೆ ಕೆಂಪು ಬಣ್ಣಕ್ಕೆ ಸೇರಿದ ಧಾನ್ಯಗಳು ಎಂದರ್ಥ. ಇವು ಈ ವರ್ಷ ಅತಿ ಹೆಚ್ಚಿನ ಬೆಳೆಯಲ್ಲಿ ಇರುತ್ತವೆ. ಹಾಗೇನೆ ಬಿಳಿಯ ಎತ್ತು ಎಂದರೆ ಹತ್ತಿ. ಹತ್ತಿಯ ಬೆಳೆ ಇಳಿಮುಖವಾಗುತ್ತದೆ ಎನ್ನುವುದು ಜನಪದರ ನಂಬಿಕೆ.

ರೈತರು ಈ ಅಂಶವನ್ನೇ ಗಮನದಲ್ಲಿರಿಸಿಕೊಂಡು ದವಸ ಧಾನ್ಯಗಳ ಬೆಳೆಗಳ ಕಡೆ ಹಚ್ಚಿನ ಗಮನವನ್ನು ಹರಿಸುತ್ತಾರೆ. ಕಾರಣ ಅವು ಈ ಬಾರಿ ವಿಪರೀತ ಬೆಲೆ ಇರುತ್ತವೆ ಎಂದು. ಹತ್ತಿಯನ್ನು ಬೆಳೆಯುವ ರೈತರು ಮೊದಲೇ ಹುಷಾರಾಗಿ ನಷ್ಟವಾಗುವ ಗೋಜಿಗೆ ಹೋಗುವುದಿಲ್ಲ. ಒಂದು ಸೋಜಿಗದ ಅಂಶವೆಂದರೆ; ಹೇಳಿಕೆಯ ಅಂಶವನ್ನು ಜನಪದರು ಸಾಧಿಸುತ್ತಾರೆ ಎಂದು ತಿಳಿದರೆ ತಪ್ಪಾಗದು. ಹೇಗೆಂದರೆ; ಈ ಬಾರಿ ಹೇಳಿಕೆಯಲ್ಲಿ ಹತ್ತಿ ತಗ್ಗೀತು ಎಂದರೆ; ರೈತರು ಪರಿಣಾಮವಾಗಿ ಹತ್ತಿ ಈ ವರ್ಷ ಕಡಿಮೆ ಬೆಳೆಯಾಗುತ್ತದೆ. ಇದು ಒಂದು ರೀತಿ ಕಾಕತಾಳಿಯವಿದ್ದಂತೆ.

**ಆ) ಮುತ್ತು ರತ್ನವಾಯಿತು :**

ಮಣ್ಣು ಬಂಗಾರವಾಯ್ತು ಎನ್ನುವ ಅರ್ಥದಲ್ಲಿ ಜನಪದರು ಈ ವಾಕ್ಯವನ್ನು ಕಲ್ಪಿಸುತ್ತಾರೆ. ಹೇಗೆಂದರೆ ಕೃಷಿಕರು ಯಾವುದೇ ಬೀಜವನ್ನು ಬಿತ್ತಿದಾಗ ಸಕಾಲಕ್ಕೆ ಮಳೆ ಬಂದು, ಗೊಬ್ಬರ, ಸತುವು ಇತ್ಯಾದಿಗಳಿಗೆ ಕೊರತೆ ಬರದೆ ಕೊನೆಯ ಕಟಾವಿನ ಹಂತದಲ್ಲಿ ಬೆಳೆ ಯಾವುದೇ ರೋಗಗಳಿಗೆ ತುತ್ತಾಗದೆ ರಾಶಿರಾಶಿಯಾಗಿ ಫಸಲು ಬರುತ್ತದೆ ಎಂದು ಜನರು ನಂಬುತ್ತಾರೆ.

ಈ ರೀತಿ ಕಾರಣಿಕ ನುಡಿದ ವರ್ಷದಲ್ಲಿ ರೈತರು ಒಳ್ಳೆಯ ಚುರುಕಾಗುತ್ತಾರೆ. ತಮಗೆ ಲಾಭದಾಯಕವಾಗಬಲ್ಲ ಬೆಳೆಯನ್ನು ಬೆಳೆಯಲು ಉತ್ಸುಕನಾಗುತ್ತಾನೆ. ಕೃಷಿಗೆ ಸಾಲ ಕೊಡುವವರೂ ಸಹ ಯಾವುದೇ ನಿರ್ಬಂಧನೆಯನ್ನು ಹಾಕದೆ ಕೊಡುತ್ತಾರೆ. ಕೃಷಿಯ ಪ್ರತಿಯೊಂದು ಕಾರ್ಯದಲ್ಲೂ ಧನಾತ್ಮಕವಾದ ಚಲನೆಗಳೇ ಕಾಣುತ್ತವೆ. ಕೊನೆಗೆ ಫಸಲು ಸಹ ಉತ್ತಮವಾಗಿರುತ್ತದೆ.

**ಇ) ಒಂದು ದಂಟಿನಲ್ಲಿ ಮೂರು ಮುತ್ತು :**

ಈ ರೀತಿ ಕಾರಣಿಕ ನುಡಿದಾಗ ಪ್ರತಿ ದಂಟಿಗೂ (ಗಿಡಕ್ಕೂ) ಉತ್ತಮವಾದ ತೆನೆಗಳು ಬಿಟ್ಟು ಕಾಳು ತುಂಬಿದ ತೆನೆಗಳು ಫಲಿಸುತ್ತವೆ ಎಂದು ಜನಪದರು ನಂಬುತ್ತಾರೆ.

ಈ ವಾಕ್ಯವು ಮೇಲೆ ಹೇಳಿದ ೩ನೇ ಅಂಶವನ್ನೇ ಸ್ಪಷ್ಟಪಡಿಸುತ್ತದೆ. ಬೆಳೆ ನೀರಸವಾಗಿರದೆ ಉತ್ತಮ ರೀತಿಯಲ್ಲಿ ಫಲಭರಿತವಾಗಿರುತ್ತದೆ. ಕೃಷಿಕರಿಗೆ ಯಾವುದೇ ಬೆಳೆಯಿಂದಾಗಲಿ ಒಳ್ಳೆಯ ಫಲವೇ ಬರುತ್ತದೆ.

**ಈ) ಬಿಳಿ ಕುದುರೆ ಕುಣಿದಾಡಿತು - ಕೆಂಪು ಕುದುರೆ ಬಿದ್ದು ಹೋಯಿತು :**

ಬಿಳಿ ಕುದುರೆ ಎಂದರೆ; ಹತ್ತಿ. ಹತ್ತಿ ಈ ಬಾರಿ ಉತ್ತಮ ಬೆಳೆಯನ್ನು ಹೊಂದಿರುತ್ತದೆ ಎಂದು ಅರ್ಥವಾಗುತ್ತದೆ. ಕೆಂಪು ಕುದುರೆ ಎಂದರೆ ಕೆಂಪು ಬಣ್ಣದ ಧಾನ್ಯಗಳು. ಇವುಗಳ ಬೆಲೆಗಳು ಈ ಬಾರಿ ಬಹಳ ಕಡಿಮೆಯಾಗಿರುತ್ತದೆ ಎಂದು ಜನಪದರು ನಂಬುತ್ತಾರೆ. ಇದೇ ವಾಕ್ಯದ ಅರ್ಥದ ಹಿನ್ನೆಲೆಯಲ್ಲಿ ''ಮಾಳಮ್ಮ ಮಲ್ಲಿಗೆ ಹೂವಿನ ತೊಟ್ಲ ಕಟ್ಟಿದ್ದಾಳೆ''. ಅಂದರೆ ಈ ಬಾರಿ ಹತ್ತಿಯು ಉತ್ತಮ ಬೆಲೆಯಲ್ಲಿದೆ ಎಂದು ಅರ್ಥವಾಗುತ್ತದೆ. ಕೆಲವು ಬೇಸಾಯಕ್ಕೆ ಸಂಬಂಧಿಸಿದ ಕಾರಣಿಕಗಳು ಈ ರೀತಿಯಾಗಿವೆ;

**ಉ) ಪಾರ್ವತಿ ಪರಮೇಶ್ವರ ಒಂದಾಗಿ ಬಿಳಿ ಜಂಡಾ ಏರಿಸಿದ್ದಾರೆ.**

**ಊ) ಶಿವಲಿಂಗನಂತಹ ಬೆಳೆ**

**ಋ) ಪಾರ್ವತಿ ಮಲ್ಲಿಗೆ ಹೂವಿನ ತೊಟ್ಲ ಹಿಡಿದಿದ್ದಾಳೆ.**

**ೠ) ಮುತ್ತಿನಂಥ ಬೆಳೆ.**

**ಎ) ಬಿಳಿಪು ಮುಂದಾದೀತು ಕಪ್ಪು ಬಿದ್ದೀತು.**

**ಏ) ಹತ್ತಿಯ ಸಾಲಿನಲ್ಲಿ ಅಮ್ಮಗೆ ಚೀಲ ಕಟ್ಟಿದ್ದಾಳೆ.**

**ಐ) ಭೂದೇವಿ ಕುಣಿದಿದ್ದಾಳೆ.**

ಇತ್ಯಾದಿಯಾಗಿ ವ್ಯವಸಾಯಕ್ಕೆ ಸಂಬಂಧಿಸಿದ ಕಾರಣಿಕಗಳನ್ನು ಅವಲೋಕಿಸಿದಾಗ ಜನಪದರ ಬದುಕಿನ ಹಿನ್ನೆಲೆಯಲ್ಲಿಯೇ ಇವು ಹುಟ್ಟಿಕೊಂಡಿರಬೇಕು ಎನ್ನುವ ಅಂಶ ಸ್ಪಷ್ಟವಾಗುತ್ತದೆ.

೨. ಹೊಲಗಳಲ್ಲಿ ಕೂರಿಗೆ ಹೊಡೆಯುವಾಗ ನೆಲದೊಳಗೆ ಕೂರಗಿ ತಾಳಗಳು (ಕಬ್ಬಿಣದ ರಾಡುಗಳು) ಸಿಕ್ಕಿಬೀಳುತ್ತವೆ. ಆಗ ಸ್ವಲ್ಪ ಬಂಢಾರವನ್ನು ಅದರ ಮೇಲೆ ಹಾಕಿ ಎಳೆದಾಗ ಅದು ಮೇಲೆ ಬಂದು ಬಿಡುತ್ತದೆ.

ಎಷ್ಟೇ ಶ್ರಮದಾಯಕವಾದ ಸಂದರ್ಭಗಳು ಬಂದೊದಗಿದರೂ ಸಹ ಬಂಢಾರ ಒಂದರಿಂದಲೇ ಶ್ರಮದಾಯಕವಾದವುಗಳೆಲ್ಲಾ ಹಗುರವಾಗಿಬಿಡುತ್ತವೆ. ನಾನು ಕಂಡಿರುವಂತೆ ಕಳೆದ ವರ್ಷ ನೆರಣಿಕೆಯ ದೇವರಗುಡ್ಡದ ದಸರಾ ಹಬ್ಬದ ರಥೋತ್ಸವ ಕಾರ್ಯಕ್ರಮದಲ್ಲಿ ಸಾಯಂಕಾಲ ರಥ ಚಲಿಸುತ್ತಾ ರಸ್ತೆಯ ಪಕ್ಕಕ್ಕೆ ತಿರುಗಿ ಕೆಸರಿನಲ್ಲಿ ಸಿಕ್ಕಿಬಿದ್ದು, ರಥ ಮುಂದೆ ಚಲಿಸಲಾಗದೆ ಒಂದು ಕಡೆ ವಾಲಿತ್ತು. ಅಂದಿನ ದಿನವೇ ರಾತ್ರಿ ೮.೦೦ರ ಸುಮಾರಿಗೆ ಭಂಡಾರ ತೇರಿನ ಮೇಲೆ ಹಾಕಿ, ಮಲ್ಲಯ್ಯನ ಹೆಸರು ಹೇಳಿ ಬಹುಫರಾಕ್ ಹಾಕಿ ಹುರ್ರೆ, ಹುರ್ರೆ ಎನ್ನುತ್ತಾ ಎಳೆದಾಗ ರಥ ರಸ್ತೆಗೆ ಬಂದಿತು.

೩. ಕೃಷಿಕರು ಬಹಳಷ್ಟು ನಂಬಿಕೊಂಡು ಬಂದಿರುವಂತಹ ಮತ್ತೊಂದು ಅಂಶವೆಂದರೆ; ಕೃಷಿಯ ಯಾವುದೇ ಪ್ರಮುಖ ಕಾರ್ಯಗಳನ್ನು ಮಾಡಬೇಕೆಂದಾಗ (ಬಿತ್ತನೆ, ಕಟಾವು, ಕಣ ಮಾಡುವುದು ಇತ್ಯಾದಿ) ಮಲ್ಲಯ್ಯನ ವಾರವಾದ ಭಾನುವಾರದಂದು ಈ ಕೆಲಸಗಳನ್ನು ಪ್ರಾರಂಭಿಸಿದರೆ ಒಳ್ಳೆಯದು ಎಂದು ನಂಬಿದ್ದಾರೆ. ಆದರಲ್ಲಿ ಮುಖ್ಯವಾಗಿ ಭಾನುವಾರ ಬಿತ್ತನೆ ಕಾರ್ಯ ಕೈಗೊಂಡರೆ ಉತ್ತಮ ಫಸಲು ಬರುತ್ತೆ ಎಂದು ಜನರು ನಂಬಿದ್ದಾರೆ.

೪. ಬಿತ್ತನೆ ಕಾರ್ಯದಲ್ಲಿ ಹತ್ತಿಯ ಕಾಳುಗಳನ್ನು ಬಿತ್ತನೆ ಮಾಡುವ ಒಂದು ದಿನದ ಮುಂಚೆ ರಾತ್ರಿ ಕೆಮ್ಮಣ್ಣಿನ ನೀರಿನಲ್ಲಿ ಬೀಜಗಳನ್ನು ಕಲಿಸಿ ಬೇರೆಡೆ ಇಡುತ್ತಾರೆ. ಕಾರಣ ಹತ್ತಿಯ ಬೀಜಗಳು ಒಂದಕ್ಕೊಂದು ಅಂಟಿಕೊಂಡಿರಬಾರದೆಂದು ಅವುಗಳನ್ನು ಬಿಡಿಸಲೋಸುಗ ಈ ರೀತಿ ಕೆಮ್ಮಣ್ಣಿನಲ್ಲಿ ಕಲೆಸುತ್ತಾರೆ. ಈ ಕೆಮ್ಮಣ್ಣಿನ ಜೊತೆಗೆ ಇಷ್ಟಿಷ್ಟು (ಬೊಗಸೆ ಪ್ರಮಾಣದಲ್ಲಿ) ಬಂಢಾರವನ್ನು ಹಾಕಿ ಕಲಿಸಿ ಇಡುತ್ತಾರೆ. ಈ ರೀತಿ ಕೆಮ್ಮಣ್ಣಿನ ಜೊತೆಗೆ ಬಂಢಾರ ಹಾಕಿ ಕಲಿಸಿ, ಬಿತ್ತಿದರೆ ಬೆಳೆ ಚೆನ್ನಾಗಿ ಬರುತ್ತದೆ ಎನ್ನುವ ನಂಬಿಕೆ ಇದೆ.

೫. ಮಲ್ಲಯ್ಯನ ಭಕ್ತರು ವಿಶೇಷವಾಗಿ ಮಳೆಯನ್ನೇ ಅವಲಂಬಿಸಿದವರಾಗಿದ್ದಾರೆ. ವ್ಯವಸಾಯಕ್ಕೆ ಮಳೆಯನ್ನೇ ಅವಲಂಬಿಸಿದ ಇವರು ಮಹನೀಯರು ಹೇಳಿದ ಮಳೆಯ ವಿಚಾರಗಳನ್ನು ನಂಬುತ್ತಾರೆ. ನೆರಣಿಕೆಯ ಸುಬ್ರಹ್ಮಣ್ಯಶಾಸ್ತ್ರಿಗಳು ತಾವು ಅನುಭವಿಸಿರುವ ಘಟನೆಯನ್ನು ಈ ರೀತಿ ಹೇಳಿರುವರು.

ಒಂದು ಸಾರಿ ಮಳೆ ಇಲ್ಲದೇ ಬಹಳಷ್ಟು ಕಾಡಾಟ ಆಗಿತ್ತು. ಆಗ ಮಹನೀಯರು ಹೇಳಿದ್ರು; ನಾಳೆ ಗುರುವಾರ ಮಳೆ ಬರ್‍ತೈತೆ ಅಂತ. ಅಂದ ಕೂಡ್ಲೆ ಅವತ್ತು ಗುರುವಾರ ಮಳೆ ಬರ್‍ಲಿಲ್ಲ. ಕೊನೆಗೆ ರಾತ್ರಿ ೮ ಆಯ್ತು ೯ ಆಯ್ತು ಮೋಡಗಳು ಎಲ್ಲಿಂದ ಬಂದ್ರೋ... ಏನ್ಕತೆ ವಿಪರೀತವಾದ ಮಳೆ ಆಯ್ತು. ಆಗ ಜನರಿಗೆ ಸಾಕಷ್ಟು ಸಂತೋಷ ಆಯ್ತು.

ಈ ಮೇಲಿನ ಮಾತುಗಳು ಸತ್ಯಕ್ಕೆ ಸ್ವಲ್ಪ ದೂರವಾಗಿದೆ. ಆದರೆ ಜನಪದರ ದೃಷ್ಟಿಯಲ್ಲಿ ಅವು ನಂಬಿಕೆಗಳೆನಿಸಿವೆ. ಒಟ್ಟಾರೆ ಕೃಷಿಕರು ನಂಬಿಕೆಯ ಹಿನ್ನೆಲೆಯಲ್ಲಿ ಉತ್ತುವ, ಬಿತ್ತುವ, ಪ್ರತಿಯೊಂದು ಕ್ರಿಯೆಯನ್ನು ಸಾಗಿಸುತ್ತಾ ಬಂದಿರುವರು. ಹವಾಮಾನದ ಏರಿಳಿತಗಳಿಂದ ಮಳೆಯೇ ಹೆಚ್ಚಾಗಿ ಸುರಿದು ಬೆಳೆಗಳು ನಾಶವಾದಾಗ, ಮಳೆಯೇ ಇಲ್ಲದೇ ಬೆಳೆಗಳು ಭೂತಾಯಿಯ ಮಡಿಲು ಸೇರಿದಾಗ ಮುಂತಾದ ಯಾವುದೇ ಸಾರ್ವತ್ರಿಕ ಅನಾಹುತಗಳು ಘಟಿಸಿದಾಗ ಕ್ಷೇತ್ರದ ಜನರು ಮಲ್ಲಯ್ಯನಿಗೆ ಸರಿಯಾಗಿ ನಡೆದು ಕೊಳ್ಳುತ್ತಿಲ್ಲ. ಕಾರಣವಾಗಿ ಮಲ್ಲಯ್ಯನೇ ಈ ರೀತಿ ಮಾಡಿದ್ದಾನೆಂದು ಬಗೆಯುತ್ತಾರೆ. ಕಾರಣಿಕಕ್ಕೆ ಹೋಲಿಸಿ ನೋಡಿ ಕಾರಣಿಕದಲ್ಲಿ ವಿಫಲವಾದ ಅಂಶಗಳು ಕಂಡುಬಂದರೆ ಕಾರಣಿಕದ ಗೊರವರು ಸರಿಯಾದ ರೀತಿಯಲ್ಲಿ ವ್ರತವನ್ನು ಕೈಗೊಂಡಿಲ್ಲ ಎಂದು ಆತನನ್ನು ದೂರುತ್ತಾರೆ. ಒಟ್ಟಾರೆ ಕೃಷಿಕರು ಭಾವಿಸುವುದೇನೆಂದರೆ; ಯಾವುದೇ ಒಳ್ಳೆಯದಾದರೆ ಅದು ಮಲ್ಲಯ್ಯನೇ ಮಾಡಿರುವನೆನ್ನುತ್ತಾರೆ. ಕೆಟ್ಟದ್ದು ಘಟಿಸಿದರು ಸಹ ಮಲ್ಲಯ್ಯನೇ ನಮ್ಮ ತಪ್ಪಿಗೆ ಶಿಕ್ಷೆ ನೀಡಿದ್ದಾನೆ ಎಂದು ಕೊಳ್ಳುತ್ತಾರೆ.

### ೬.೧.೮. ವ್ಯಾಪಾರ :

ಮೊದಲೇ ತಿಳಿಸಿರುವಂತೆ ಕಾರಣಿಕವು ಬರೀ ಕೃಷಿಗೆ ಮಾತ್ರ ಸಂಬಂಧಿಸಿರದೆ, ವ್ಯಾಪಾರಕ್ಕೂ ಸಹ ಸಂಬಂಧಿಸಿದವುಗಳಾಗಿವೆ. ಕೃಷಿ ಮತ್ತು ವ್ಯಾಪಾರಗಳು ಒಂದಕ್ಕೊಂದು ಪೂರಕವಾಗಿವೆ. ಬೇಸಾಯದಲ್ಲಿ ಉತ್ತಮ ಬೆಳೆ ಬಂದರೆ ವ್ಯಾಪಾರದಲ್ಲಿಯೂ ಸಹ ಅಭಿವೃದ್ಧಿಯ ಮಜಲುಗಳನ್ನು ಕಾಣಬಹುದಾಗಿದೆ. ಕಾರಣೀಕದಲ್ಲಿ ವ್ಯಾಪಾರಕ್ಕೆ ಸಂಬಂಧಪಟ್ಟಂತೆ ಪ್ರತಿವರ್ಷದಲ್ಲೂ ಎರಡು ವಾಕ್ಯಗಳು ತಪ್ಪದೇ ಇರುತ್ತವೆ.

#### ೧) ೨೮೦೦ ನಗಹಳ್ಳ, ೪೬೦ ಜೋಳ :

ಈ ವಾಕ್ಯವು ಪ್ರತ್ಯೇಕವಾಗಿ ಹತ್ತಿ ಹಾಗೂ ಜೋಳದ ಧಾರಣೆಯನ್ನು ಹೇಳುತ್ತದೆ. ಇದರ ಪ್ರಕಾರ ೨೮೦೦ ಹತ್ತಿ, ೪೬೦ ಜೋಳ. ಇವು ಆ ವರ್ಷದ ಪೂರ್ತಿಧಾರಣೆ. ಅದೇ ಮಟ್ಟದಲ್ಲೇ ಇರುತ್ತದೆ. ಹೆಚ್ಚು ಕಡಿಮೆ ಆದರೂ ೫೦ರೂ. ಒಳಗೆ ಬದಲಾಗಬೇಕು ಎಂದು ಕೃಷಿಕರು ಮತ್ತು ವ್ಯಾಪಾರಸ್ಥರು ಅಭಿಪ್ರಾಯ ಪಡುತ್ತಾರೆ. ''ಈ ಮಾರಾಟ ಧಾರಣೆ ಯಾವಾಗ್ಲೂ ಕಾರಣಿಕ ಹೇಳ್ದಂಗೆ ಬಂದೇ ಬರ್ಬೇಕು. ನಾನು ಕಾರಣಿಕವನ್ನ ನಂಬ್ತೀನಿ ಗ್ಯಾರಂಟಿ ಕಾರಣಿಕದ ಹಾಗೆ ಧಾರಣೆ ಇರುತ್ತೆ'' ವ್ಯಾಪಾರಸ್ತ ಮುದ್ದು ಬಸವನಗೌಡ ಅವರು ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ

೨) ೬-೩, ೩-೬ ಆದೀತು :

ಇದು ಪ್ರತಿ ಕಾರಣಿಕದಲ್ಲಿ ಬರುವಂತಹ ಸಾಂಕೇತಿಕ ಗುರುತುಗಳು. ಕೆಲವೊಮ್ಮೆ ೩-೬, ೬-೩ ಇರುತ್ತೆ, ಮತ್ತೆ ಕೆಲವೊಮ್ಮೆ ೬-೩, ೩-೬ಗಳಾಗಿರುತ್ತದೆ. ಇದರ ಅರ್ಥ ಇಷ್ಟೇ ಪ್ರಸ್ತುತ ವರ್ಷದ ಪ್ರಾರಂಭದಲ್ಲಿ, ಕಾರಣಿಕ ಹೇಳಿದ ಮುಂದಿನ ತಿಂಗಳುಗಳಲ್ಲಿ ಅಥವಾ ವರ್ಷದ ಬೆಳೆ ಆರಂಭದಲ್ಲಿ ೬-೩ ಎಂದರೆ ಮೊದಲಿಗೆ ಬೆಳೆಯ ಬೆಲೆಗಳು ಉತ್ತಮ ಬೆಲೆಯಲ್ಲಿದ್ದು, ಅವು ಬರುಬರುತ್ತಾ ಕಡಿಮೆಯಾಗುತ್ತವೆ. ೩-೬ ಎಂದರೆ ಕಡಿಮೆ ಇದ್ದ ಬೆಲೆಗಳು ವರ್ಷದ ಅಂತ್ಯದೊಳಗೆ ಮೊದಲಿನ ಉತ್ತಮ ಬೆಲೆಗೆ ಬರುತ್ತವೆ. ಒಟ್ಟಾರೆ ಇವು ಬೆಲೆಯ ಏರಿಳಿತಗಳನ್ನು ಸೂಚಿಸುವ ಸಂಕೇತಗಳಾಗಿವೆ.

''ನಾನು ಒಬ್ಬ ದಲ್ಲಾಳಿ. ವ್ಯಾಪಾರಸ್ಥ ಪ್ರತಿ ದಸರಾದಾಗ ಕಾರಣಿಕದಲ್ಲಿ ಸಿಗುವ ಬೆಲೆಗಳ ಧಾರಣಿಗಳನ್ನು ನೆನಪಿನಾಗ ಇಟ್ಟುಕೊಂಡು ವ್ಯಾಪಾರ ಮಾಡ್ತೀನಿ. ಹಿಂದರ ಆಗಿರ್ಲಿ, ಈವಾಗ್ಗೆ ಆಗಿರ್ಲಿ ಯಾವತ್ತು ಕಾರಣಿಕದ ಮಾತು ವಿಫಲವಾಗಿಲ್ಲ. ಈ ವರ್ಷ ನಮಿಗೆ (೨೦೦೧) ೬-೩, ೩-೬ ಅಂತ ಹೇಳಿದೆ. ೬-೩ ಆಗಲೇ ಆಗ್ಯೆತೆ ಮಾರುಕಟ್ಟೆಯೆಲ್ಲಾ ಮಂದ ಆಗ್ಬಿಡ್ತು. ಬೆಲೆ ಇಳಿತಾ ಬಂತು. ಇದಕ್ಕೆ ಕಾರಣ ಇದೇ ಸಾರಿ 'ಹತ್ತಿ ಸಾಲಿನಲ್ಲಿ ಅಮ್ಮಣ್ಣಿ ಚೀಲ' ಅಂತ ಹೇಳ್ಯಾನ ಅದುನೂ ಆಯ್ತು. ಒಂದು ಎಕರೆಗೆ ಒಂದು ಕ್ವಿಂಟಲ್ ಆಗವು. ಮೂರ ಕ್ವಿಂಟಲ್ ಆಗ್ಯಾವ. ಈ ಸಾರಿ ಹತ್ತಿ ಬಲೇಟು ಬೆಳ್ದು ಬಿಟ್ಟಾವ. ಹತ್ತಿ ಬರಲ್ಲೇನಪ್ಪ ಅಂತ ಅನ್ಕಂಡಿದ್ವಿ ಆದ್ರೆ ಬಾಳಾ ಹತ್ತಿ ಬಂತು. ಅದಕ್ಕೆ ಧಾರಣಿಗಳೆಲ್ಲಾ ಕುಸಿದು ಆಯ್ತು. ಈಗ ಚೇಂಜ್ ಆಗ್ಬೇಕಲ್ಲ (೩-೬) ಅದು ಬರ್‍ತೈತೆ. ದಸರಾ ಬರುವುದರೊಳಗೆ ರೇಟು ಆಗ್ತೈತೆ. ಅಲ್ಲಿಯವರೆಗೆ ನಮಗೆ ಇನ್ನೂ ನಾಕುವರೆ ತಿಂಗಳ ಟೈಂ ಐತೆ. ಮೊದಲು ೧೫ ಸಾವಿರ ಧಾರಣೆ ಇದ್ದದ್ದು ಈಗ ೧೦ ಸಾವಿರಕ್ಕೆ ಇಳ್ದಿದೆ. ೧೦ ಸಾವಿರ ಇಳಿದದ್ದು ಈಗ ೩-೬ ಆಗ್ಬೇಕಲ್ಲ. ಅದೇ ೧೦ ಸಾವಿರದಿಂದ ೧೫ ಸಾವಿರಕ್ಕೆ ಧಾರಣೆ ಬರ್ಲೇಬೇಕು. ಕಾರಣಿಕದ ಪ್ರಕಾರ ಬಂದೇ ಬರ್‍ತೈತೆ. ಇನ್ನು ದಸರಾ ನಾಲ್ಕುವರೆ ತಿಂಗಳು ಐತೆ ಅಷ್ಟರಾಗೆ ಧಾರಣೆ ೧೫ ಸಾವಿರಕ್ಕೆ ಏರ್‍ತೈತೆ ಎನ್ನುವ ನಂಬಿಕೆ ಇದೆ.''

ಈ ರೀತಿಯಾಗಿ ಒಬ್ಬ ವ್ಯಾಪಾರಿ, ದಲ್ಲಾಳಿ, ಹತ್ತಿ ಗಿರಣಿಯ ಮಾಲೀಕ ಹಾಗೂ ನೆರಣಿಕೆಯ ಶ್ರೀ ಮಳೇ ಮಲ್ಲೇಶ್ವರ ಸ್ವಾಮಿ ದೇವಾಲಯ ಟ್ರಸ್ಟ್‌ನ ಪ್ರಧಾನ ಮುಖಂಡರಾದ ಶ್ರೀ ಮುದ್ದುಬಸವನಗೌಡ ಅವರು ಅಭಿಪ್ರಾಯ ಪಟ್ಟಿದ್ದಾರೆ.

ವ್ಯಾಪಾರಕ್ಕೆ ಸಂಬಂಧಪಟ್ಟ ಕೆಲವು ಕಾರಣಿಕಗಳನ್ನು ಗಮನಿಸೋಣ.

| | | | | | | |
|---|---|---|---|---|---|---|
| ೧) | ೨೦೮೦ - | ನಗಹಳ್ಳಿ | ೪೬೦ | - | ಜೋಳ | ೦೧-೧೦-೧೯೯೮ |
| ೨) | ೧೬೬೦ - | ನಗಹಳ್ಳಿ | ೪೬೦ | - | ಜೋಳ | ೧೯-೧೦-೧೯೯೯ |
| ೩) | ೧೮೮೦ - | ನಗಹಳ್ಳಿ | ೮೬೦ | - | ಜೋಳ | ೦೮-೧೦-೨೦೦೦ |
| ೪) | ೧೮೬೦ - | ನಗಹಳ್ಳಿ | ೩೬೫ | - | ಜೋಳ | ಶ್ರೀಮುಖನಾಮ ಸಂವತ್ಸರ |
| ೫) | ೬೯೦ - | ಹರಳೆ | ೧೮೦ | - | ಜೋಳ | ಕಾಳಯುಕ್ತನಾಮ ಸಂವತ್ಸರ |
| ೬) | ೪೫೦ - | ಹತ್ತಿ | ೧೬೦ | - | ಜೋಳ | ೧೧-೧೦-೧೯೭೮ ಶ್ರೀ ಕಾಳಯುಕ್ತನಾಮ ಸಂವತ್ಸರದ ಆಶ್ವೀಜ ಶುದ್ಧ ದಶಮಿಯ ಬುಧವಾರ. |
| ೭) | ೧೮೦೦ - | ನಗಹಳ್ಳಿ | | | | ಶ್ರೀ ಪ್ರವನಾಮ ಸಂವತ್ಸರ |
| ೮) | ೨೮೦೦ - | ನಗಹಳ್ಳಿ | ೪೬೦ | - | ಜೋಳ | ೨೭-೧೦-೨೦೦೧. |

ವ್ಯಾಪಾರ ಮತ್ತು ವ್ಯವಸಾಯಕ್ಕೆ ಸಂಬಂಧಿಸಿದಂತೆ ಕಾರಣಿಕವು ತನ್ನದೇ ಆದ ಛಾಪವನ್ನು ಮೂಡಿಸಿದೆ. ಇವೆರಡು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಒಂದಕ್ಕೊಂದು ಪರಸ್ಪರ ಪೂರಕವಾಗಿವೆ. ವ್ಯಾಪಾರದಲ್ಲಿಯೂ ಸಹ ಅನೇಕ ವ್ಯಾಪಾರಿಗಳು ಕಾರಣಿಕದ ಧಾರಣಿಗಳನ್ನೇ ಅವಲಂಬಿಸಿರುವುದು ಕಂಡು ಬರುತ್ತದೆ. ಅಂತೆಯೇ ಕಾರಣಿಕವು ವ್ಯಾಪಾರಸ್ತರ ದೃಷ್ಟಿಯಲ್ಲಿ ದಿಕ್ಸೂಚಿಯಂತೆ ಕೆಲಸ ಮಾಡುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು.

## ೬.೧.೯. ರಾಜಕೀಯ :

ಮಲ್ಲಯ್ಯನ ಕಾರಣಿಕ ವಿಚಾರಗಳು ಕೃಷಿ, ವ್ಯಾಪಾರದ ಜೊತೆಗೆ ರಾಜಕೀಯಕ್ಕೂ ಸಂಬಂಧಿಸಿ ರುವುದನ್ನು ಕೆಲವು ಹೇಳಿಕೆಗಳ ಮೂಲಕ ಸ್ಪಷ್ಟವಾಗಿ ತಿಳಿದುಬರುತ್ತದೆ. ದೇಶದ ಆಡಳಿತ ವ್ಯವಸ್ಥೆ, ಪ್ರಮುಖ ರಾಜಕೀಯ ಪಕ್ಷಗಳು ಹಾಗೂ ನಾಯಕರು ಮುಂತಾದವೆಲ್ಲಾ ಜನಪದರಿಗೆ ಸರ್ವೇ ಸಾಮಾನ್ಯವಾಗಿ ಈಗಂತು ತಿಳಿದಿವೆ. ಅದು ಸಮೂಹ ಮಾಧ್ಯಮಗಳ ಮೂಲಕ. ನಮ್ಮ ಜನಪದರು ಕಾರಣಿಕಗಳ ಅರ್ಥವನ್ನು ರಾಜಕೀಯ ಕ್ಷೇತ್ರಕ್ಕೂ ಸಹ ತುಲನೆ ಮಾಡುತ್ತಾರೆ. ಜೊತೆಗೆ ಸಾಮಾಜಿಕ ಜೀವನದ ಭವಿಷ್ಯವನ್ನು ಸಹ ಕಾರಣಿಕಗಳಿಂದ ತಿಳಿದುಕೊಳ್ಳುತ್ತಾರೆ.

### ೧. ಗಗನಕ್ಕೆ ಗುಂಡು ಹಾರಿತು :

ಕಾರಣಿಕ ನುಡಿಯುವಾಗ ಈ ತೆರನಾದ ಹೇಳಿಕೆಗಳು ಬಂದರೆ, ಆ ವರ್ಷ ದೇಶದ ಒಬ್ಬ ಪ್ರಮುಖ ವ್ಯಕ್ತಿ ಕೊಲೆಗೀಡಾಗುತ್ತಾನೆ ಎನ್ನುವ ಅರ್ಥವಿದೆ. ಹೀಗೆ ಗಗನಕ್ಕೆ ಗುಂಡು ಹಾರಿತು ಎಂದಾಗ ಇಂದ್ರಮ್ಮ ಸತ್ಲು, ಇನ್ನೊಂದು ಸಾರಿ ಗಗನಕ್ಕೆ ಗುಂಡು ಹಾರಿತು ಎಂದಾಗ ಮಗ ರಾಜೀವಗಾಂಧಿ ಸತ್ತ. ಹೀಗೆ ಖಾಯಂ ಆಗ್ತೈದಾವ; ಯಾವುದು ಯಾವಾಗಲೂ ಸುಳ್ಳು ಆಗಿಲ್ಲ ಎಂದು ಅಲ್ಲಿಯ ಪ್ರಮುಖ ವ್ಯಕ್ತಿಗಳು ನಿದರ್ಶನಗಳನ್ನು ನೀಡುತ್ತಾರೆ. ಒಟ್ಟಾರೆ ಒಬ್ಬ ರಾಜಕೀಯ ವ್ಯಕ್ತಿ ಸಾಯ್ತಾನೆ ಎನ್ನುವ ಒಂದು ನಂಬಿಕೆ ಇದೆ.

ಸೋಜಿಗವೆಂದರೆ ಗಗನಕ್ಕೆ ಗುಂಡು ಹಾರಿತು ಎನ್ನುವ ಅರ್ಥವನ್ನು ರಾಜಕೀಯದ ದೃಷ್ಟಿಯಿಂದಲೂ ದೇಶಕ್ಕೆ ಅನ್ವಯಿಸುತ್ತಾರೆಯೇ ಹೊರೆತು ಸ್ಥಳೀಯ ಶಾಸಕ, ಸಂಸತ್ ಸದಸ್ಯರ ಅಥವಾ ಮುಂತಾದ ಮುಖಂಡರಿಗೆ ಹೋಲಿಸುವುದಿಲ್ಲ. ಅಂದರೆ ಅವರ ಆಲೋಚನಾ ಲಹರಿ ದೇಶದ ವ್ಯಾಪ್ತಿಯಲ್ಲಿಯೇ ಹರಡಿರಬೇಕು. ಇಲ್ಲ ಸ್ಥಳೀಯ ಗಣ್ಯ ವ್ಯಕ್ತಿಗಳು, ಮಂತ್ರಿಗಳು, ಇದು ದೇಶದ ಸಮಾಚಾರ ಎಂದು ಆಲೋಚನೆ ದಿಕ್ಕನ್ನು ಜನಪದರಲ್ಲಿ ಬದಲಿಸಿರಬೇಕು.

### ೨. ಗಂಗಾದೇವಿ ಹೊಳೆದಂಡೇಲಿ ಬಂದು ನಿಂತಾಳೆ :

ಈ ರೀತಿಯ ವಾಕ್ಯ ಬಂದಾಗ ಆ ವರ್ಷ ದೇಶದಲ್ಲಿ ಹಲವೆಡೆ ದೊಡ್ಡ ದೊಡ್ಡ ತೂಫಾನುಗಳು ಅಂದರೆ ಅತೀವೃಷ್ಟಿಯಾಗಿ ಬೆಳೆ, ಜನ, ಆಸ್ತಿ-ಪಾಸ್ತಿ ಮುಂತಾದವೆಲ್ಲಾ ನಾಶವಾಗುತ್ತವೆ ಎನ್ನುವ ದೇಶದ ಸಾಮಾಜಿಕ ಸಮಾಚಾರವೇ ಈ ವಾಕ್ಯದ ಅರ್ಥದಲ್ಲಿದೆ ಎಂದು ಜನಪದರು ನಂಬುತ್ತಾರೆ. ಜೊತೆಗೆ 'ಪಾರ್ವತಿ ಬಾಯಿ ತೆಗೆದಿದ್ದಾಳೆ' ಎನ್ನುವುದು ಪರಿಸರ ವಿಕೋಪಕ್ಕೆ ಅರ್ಥವ ಹಚ್ಚುತ್ತಾರೆ. ಅದರಂತೆ ಅಂಬಾ ಬಾಯಿ ತೆಗೆದಿದ್ದಾಳೆ ಎನ್ನುವಂತಹದೂ ಸಹ ಇದೇ ಅರ್ಥವನ್ನು ಕೊಡುತ್ತದೆ.

ಕಾರಣಿಕದ ಹೇಳಿಕೆಗಳನ್ನು ಜನಪದರು ತಮ್ಮ ಆಲೋಚನೆಯಿಂದ ದೇಶದ ಸಧ್ಯದ ಪರಿಸ್ಥಿತಿ, ಮುಂದೆ ಕಾರಣಿಕದಂತೆ ಆಗಲಿರುವ ಪರಿಸ್ಥಿತಿಯನ್ನು ತಿಳಿದು ತಮ್ಮ ತಮ್ಮಲ್ಲೇ ಅರ್ಥೈಸಿಕೊಳ್ಳುತ್ತಾರೆ. ಒಟ್ಟಾರೆ ಜನಪದರ ಬರೀ ಗ್ರಾಮ್ಯಕ್ಕೆ ಸೀಮಿತರಾಗದೇ ಸಾಮಾನ್ಯ ಜ್ಞಾನವನ್ನು ಸಹ ತಿಳಿದಿರುವರೆಂದು ಸ್ಪಷ್ಟವಾಗುತ್ತದೆ.

## ೬.೧.೧೦. ಬಸವಿಯರು:

ಇವರು ಸಾಮಾನ್ಯವಾಗಿ ಹರಿಜನರು. ಈ ದೇವಸ್ಥಾನದಲ್ಲಿ ದೀಕ್ಷೆ ವಹಿಸಿ ಸೇವೆ ಸಲ್ಲಿಸುವ ಸ್ತ್ರೀವರ್ಗ ಎಂದರೆ ಇವರು ಮಾತ್ರ. ಇವರಿಗೆ ಗೊರವರು ದೀಕ್ಷೆ ಕೊಡುತ್ತಾರೆ. ಮಲ್ಲಯ್ಯನಿಗೆ ಸಂಬಂಧಿಸಿದ ಎಲ್ಲಾ ಕ್ಷೇತ್ರಗಳನ್ನು ಅವಲೋಕಿಸಿದಾಗ ಮಂಗಸೂಳಿ ಮಲ್ಲಯ್ಯ ಮತ್ತು ಶ್ರೀ ಮೀನಗುಂದಿ ಕ್ಷೇತ್ರಗಳಲ್ಲಿ ಈ

ತೆರನಾದ ಬಸವಿಯರನ್ನು ಬಿಡುವ ಪದ್ಧತಿ ಕಂಡುಬರುತ್ತದೆ. ಮಂಗಸೂಳಿ ಮಲ್ಲಯ್ಯನ ಕ್ಷೇತ್ರದಲ್ಲಿ ಇವರನ್ನು ಮುರಳಿಯರು ಎಂದು ಕರೆಯುತ್ತಾರೆ. ಮೀನಗೊಂದಿಯಲ್ಲಿ ಬಸವಿಯರು ಎಲ್ಲಿದ್ದರೂ ಜಾತ್ರೆಯದಿನ ಬಂದು ಬಸವೇರ ಆಟ ಅಥವಾ ಓಕುಳಿ ಕಾರ್ಯಕ್ರಮದಲ್ಲಿ ಭಾಗವಹಿಸಬೇಕು. ಬಸವಿಯರ ಬಗ್ಗೆ ಇರುವ ನಂಬಿಕೆಗಳ ಬಗ್ಗೆ ಗಮನ ಹರಿಸೋಣ.

೧. ಬಸವಿಯರನ್ನು ಸರ್ವಕಾಲೀಕ ಮುತ್ತೈದೆಯರು ಎಂದು ಕರೆಯಲಾಗುತ್ತದೆ. ಬನ್ನಿಯಾದ ಮಾರನೇ ದಿನ ವಗ್ಗರಾಟ, ಸರಪಣಿ ಪವಾಡ, ಗೊರವರ ಕುಣಿತ ಇತ್ಯಾದಿ ಕಾರ್ಯಕ್ರಮಗಳೆಲ್ಲಾ ಮುಗಿದ ನಂತರ ಕೊನೆಯ ಹಂತದ ಕಾರ್ಯಕ್ರಮವಾಗಿ ಬಸವಿಯರಿಂದ ಓಕುಳಿ ಹಾಕುವ ಆಚರಣೆ ಇರುತ್ತದೆ. ಈ ಓಕುಳಿ ಆಟ ಆಡಿದರೆ ಮಾತ್ರ ಜಾತ್ರೆ ಪರಿಪೂರ್ಣವಾದಂತೆ. ಈ ಓಕುಳಿ ಆಟ ಆಡಿದ ನಂತರ ದೇವರು ಶಿವಸಾನ ಗದ್ದಿಗೆಯಿಂದ ಗಿರಿಗೆ ಸೇರುತ್ತಾನೆ. ಆದ್ದರಿಂದ ಜಾತ್ರೆಯ ಕೊನೆಯ ಹಂತವಾಗಿ ಬಸವಿಯರು ಓಕುಳಿ ಆಟವನ್ನು ಆಡಿದರೆ ಕ್ಷೇತ್ರಕ್ಕೆ ಹಾಗೂ ಇಡೀ ದೇಶಕ್ಕೆ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಇದೆ.

೨. ದೇವದಾಸಿಯರು ಮಲ್ಲಯ್ಯನ ಪರಮ ಸೇವಕಿಯರು. ಆ ದಿನ ಮಲ್ಲಯ್ಯ ಅವರ ಸೇವೆಯಿಂದ ತೃಪ್ತಿಗೊಳ್ಳುತ್ತಾನೆ ಎನ್ನುವ ನಂಬಿಕೆ ಇದೆ. ನಮಗೆ ದೇವರ ಸೇವೆ ಮಾಡೋದ್ರಿಂದ ಒಳ್ಳೆಯದಾಗ್ತೈತೆ ಎಂದು ಬಸವಿ ಸುಶೀಲಮ್ಮ ಹೇಳಿದ್ದಾಳೆ.

ಈ ಬಸವಿಯರ ಕುರಿತು ಹೇಳುವಾಗ ಒಂದು ವಿಪರ್ಯಾಸವೆಂದರೆ; ಬಸವಿಯರೆಂದರೆ ದೇವರ ಮಕ್ಕಳಿದ್ದಂತೆ ಎಂದು ಒಂದು ಕಡೆ ನಂಬುತ್ತಾರೆ. ಅದೇ ಸಾಮಾಜಿಕ ಚೌಕಟ್ಟಿನಲ್ಲಿ ಬಂದರೆ; ಅವರನ್ನು ಬಹಳ ಹೀನಾಯ ಸ್ಥಿತಿಯಲ್ಲಿ ಶೋಷಣೆ ಮಾಡುತ್ತಾರೆ. ಬಸವಿಯರೆಂದರೆ ಕೆಟ್ಟ ಹಾಗೂ ಕೀಳು ದೃಷ್ಟಿಯಿಂದ ನೋಡುತ್ತಾರೆ. ಆದರೆ ಅದೇ ಒಂದು ಕ್ಷೇತ್ರದ ವ್ಯಾಪ್ತಿಯಲ್ಲಿ ಅವರನ್ನು ಗಣನೆಗೆ ತೆಗೆದುಕೊಂಡರೆ ಅವರನ್ನು ದೈವತ್ವಕ್ಕೆ ಏರಿಸುತ್ತಾರೆ.

## ೬.೧.೧೧. ಇತರೆ :

೧. ಭಕ್ತರು ಬಂಢಾರವನ್ನು ಒಂದು ಚೀಟಿಯಲ್ಲಿ ಕಟ್ಟಿಕೊಂಡು ತಮ್ಮ ಯಾವುದೇ ಕೆಲಸಗಳಿಗೆ ಹೋದಾಗ ಹೋದ ಕಾರ್ಯಗಳೆಲ್ಲವೂ ಜಯಪ್ರದವಾಗುತ್ತವೆ ಎನ್ನುವ ನಂಬಿಕೆ ಇದೆ.

೨. ಧರ್ಮ ಗುರುಗಳಾದ ಬಲ್ಲೂರಿನ ಒಡೆಯರು ಶಿವಸಾನ ಕಟ್ಟೆಯಲ್ಲಿ ಕುಳಿತು ಜಾತ್ರೆಗೆ ಬರುವ ಜನರಿಗೆ ಜಾತಿ-ಕೋಮುಗಳನ್ನು ವಿಚಾರಿಸದೇ ದೀಕ್ಷೆ ಕೊಟ್ಟು ಕಳುಹಿಸುತ್ತಾರೆ. ಬೆಳಗಿನ ಆರು ಗಂಟೆಯಿಂದ ಪ್ರಾರಂಭವಾಗಿ ಸಂಜೆ ಸುಮಾರು ೬.೦೦ಗಂಟೆಯತನಕ ಎಡೆಬಿಡದೆ ಭಕ್ತರು ಸ್ವಾಮಿಯ ಪಾದಕ್ಕೆರಗಿ

ಆಶೀರ್ವಾದ ಪಡೆಯುತ್ತಿರುವವರಿಗೆ ಬೇಸರ ನುಡಿಯದೆ ಬಂದ ಭಕ್ತರನ್ನು ಮಂದಹಾಸದಿಂದ ಬರಮಾಡಿಕೊಂಡು ಅವರ ಯೋಗಕ್ಷೇಮ ವಿಚಾರಿಸಿ, ಆಶೀರ್ವದಿಸಿ ಕಳುಹಿಸಿಕೊಡುತ್ತಾರೆ. ಇದು ಅವರ ತಾಳ್ಮೆಗೆ ಸಾಕ್ಷಿಯಾಗಿದೆ. ಜನತೆಯೂ ಅಷ್ಟೇ ಗುಡಿಯಲ್ಲಿರುವ ಮಲ್ಲೇಶ್ವರನಿಗೆ ತೋರುವ ಭಕ್ತಿಗಿಂತ ಒಂದು ತೂಕ ಹೆಚ್ಚಾಗಿ ಈ ಒಡೆಯರಿಗೆ ತೋರುವರಲ್ಲದೆ ಅಷ್ಟೇ ನಂಬಿಕೆ ಶ್ರದ್ಧೆಗಳನ್ನು ಹೊಂದಿದ್ದಾರೆ.

೩. ಸಾವಿರಾರು ಮೈಲುಗಳಿಂದ ಭಕ್ತರು ಸ್ವಾಮಿಯ ಸನ್ನಿಧಿಗೆ ಬಂದು ತಮ್ಮ ಇಷ್ಟಾರ್ಥಗಳನ್ನು ಸಿದ್ಧಿಸಿಕೊಂಡು ಹೋಗುತ್ತಿದ್ದಾರೆ. ಬೇಡಿದ ವರಗಳನ್ನು ಮಲ್ಲಯ್ಯ ತಪ್ಪದೇ ನೀಡುತ್ತಾನೆ ಎನ್ನುವ ನಂಬಿಕೆ ಭಕ್ತರಿಗಿದೆ. ಈ ನಂಬಿಕೆಯಿಂದಲೇ ಭಕ್ತರು ಹಬ್ಬ-ಹರಿದಿನದ, ಅಮವಾಸೆ, ಭಾನುವಾರ ಮುಂತಾದ ದಿನಗಳಲ್ಲಿ ಸ್ವಾಮಿಯ ಕ್ಷೇತ್ರಕ್ಕೆ ಬಂದು ತಮ್ಮ ಮುಡಿಪನ್ನು ಸಲ್ಲಿಸಿ ಹೋಗುತ್ತಿದ್ದಾರೆ.

೪. ಎಷ್ಟೋ ಜನರಿಗೆ ಗಂಡು ಸಂತಾನವಿರಲಿಲ್ಲ, ಅಂಥವರಿಗೆ ಮಲ್ಲಯ್ಯ ಗಂಡು ಸಂತಾನವನ್ನು ಕರುಣಿಸಿದ್ದಾನೆ. ಇಲ್ಲೊಂದು ಜನಾಂಗವಾದ ( ಆದವಾನಿಯಲ್ಲಿ) ಯಾದಗಿರಿಯವರು ಇದ್ದಾರೆ. ಅವರು ವೇಶ್ಯಯರು. ಅವರ ತಂದೆಗೆ ಮಕ್ಕಳಿರಲಿಲ್ಲ, ಅವರು ಸಂತಾನ ಬೇಡಿ ಮಲ್ಲಯ್ಯನಿಗೆ ನಡೆದುಕೊಂಡಿದ್ದಾರೆ. ಆಗ ಅವರಿಗೆ ಗಂಡು ಸಂತಾನವಾಗಿದೆ. ಆದ್ದರಿಂದ ಆ ಮಗುವಿಗೆ ಯಾದಗಿರಿ ಮಲ್ಲಯ್ಯನೆಂದು ಹೆಸರಿಟ್ಟಿದ್ದಾರೆ.

೫. ಆದೇ ರೀತಿ ಆದವಾನಿಯಲ್ಲಿ ರಾಮಯ್ಯ ಎನ್ನುವ ಮಾಜಿ ಶಾಸಕ ಇದ್ದಾರೆ. ಅವರಿಗೆ ಗಂಡು ಸಂತಾನವಿರಲಿಲ್ಲ. ಮೊದಲು ಅವರ ತಮ್ಮನಾದ ಸುಧಾಕರ ಅವರು ಮಲ್ಲಯ್ಯನಿಗೆ ನಡೆದುಕೊಂಡಿದ್ದರಿಂದ ಅವರಿಗೆ ೧೯೭೭ರಲ್ಲಿ ಗಂಡು ಸಂತಾನವಾಯಿತು. ಅದರಂತೆ ರಾಮಯ್ಯನವರು ಮಲ್ಲಯ್ಯನಿಗೆ ನಡೆದು ಕೊಂಡಿದ್ದರಿಂದ ಅವರಿ ೧೯೭೭ರಲ್ಲಿ ಗಂಡು ಸಂತಾನವಾಯಿತು. ಹೀಗೆ ಯಾರಿಗೆ ವಂಶಾಭಿವೃದ್ಧಿ ಇಲ್ಲವೋ ಅಂಥವರಿಗೆ ಸ್ವಾಮಿಯ ಮಹಿಮೆಯಿಂದ ಸಂತಾನಾಭಿವೃದ್ಧಿ ಯಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ.

೬. ಸಕಾಲಕ್ಕೆ ಸ್ವಾಮಿಯ ಮುಡಿಪು ತೀರಿಸದೇ ಇದ್ದರೆ ಕೆಡಕು ಆಗುತ್ತದೆ ಎನ್ನುವಂತಹ ನಂಬಿಕೆ ಜನಪದರಿಗಿದೆ. ಆದಕ್ಕೆ ವಗ್ಗರು ಹನುಮಂತಪಪನವರು ತಿಳಿಸಿರುವ ಉದಾಹರಣೆಯೇ ನಿದರ್ಶನವಾಗಿದೆ.

ಹೀಗೆ ವಿವಿಧ ವ್ಯಕ್ತಿಗಳ ಉದಾಹರಣೆಯಲ್ಲಿ ಆದವಾನಿಯ ಒಬ್ಬ ಭಕ್ತರು ಮಲ್ಲಯ್ಯ ಸ್ವಾಮಿಯನ್ನು ಪ್ರಬಲವಾಗಿ ನಂಬಿದ್ದಾರೆ. ಅವರು ಡ್ರೈವರ್ ಕೆಲಸ ಮಾಡುತ್ತಾರೆ. ಅವರು ದೇವರಲ್ಲಿ ಬೇಡಿಕೊಂಡಂತೆ ನೆರವೇರಿತು. ಆಗ ವಗ್ಗಯ್ಯಗಳಾದ ನಮಗೆ ಏನಾದರೂ ಸಾಮಾನು ಮಾಡಿಸ್ತೀನಿ ಅಂದಾಗ ನಾನು ಒಂದು ಬೆಳ್ಳಿಯ ತ್ರಿಶೂಲ ಮಾಡ್ಸಿಬಿಡ್ರಿ ಎಲ್ಲಾ ಬೆಳ್ಳಿವೆ ಸಾಮಾನು ಆಗ್ಯಾವ (ಡಮರುಗ, ಟೋಪಿ. ಪಿಳ್ಳಂಗೋವಿ ಎಲ್ಲ ಬೆಳ್ಳವೆ) ಅಂದೆ. ಆಯ್ತು ಬೆಳ್ಳಿಯ ತ್ರಿಶೂಲ ಬರುವ ದಸರಾದ ಒಳಗೆ ಮಾಡಿಸ್ತೀನಿ ಅಂದ್ರು. ನಿಮ್ಮಿಷ್ಟ ಭಾರ ಹೊತ್ಕಂಡೀರಿ ಅದನ್ನ ಇಳಿಸೋ ಜವಾಬ್ದಾರಿ ನಿಮ್ಮದು. ಹೀಗೆ ದಿನಾ ಸರದ್ದು, ದಸರಾ ಸಹಿತ ಹೋಯಿತು. ಅವ್ರು ಕಾಣ್ತಿದ್ರು ಸಹ ನನಗೆ ಆದರೆ ಕಾಣಿಕೆಯ ವಿಷಯ ಮಾತ್ರ ಎತ್ತುತ್ತಿರಲಿಲ್ಲ. ಹಿಂಗೆ ಒಂದು ಸಲ ಆತನ

ಹೆಂಡತಿಗೆ ಹುಚ್ಚು ಹಿಡ್ಕಂತು. ಈ ಚಿಂತ್ಯಾಗ ಆತನಿಗೂ ಸಹ ಏನೋ ಕಾಯಿಲೆ ಬಂದು ಡ್ರೈವರ್ ಕೆಲಸ ಬಿಟ್ಟು ಬಿಟ್ಟ. ಬಿಟ್ಟು ಆಯಮ್ಮಗೆ ಡಾಕ್ಟರ್ ಎಲ್ಲಾ ತೋರ್ಸಿದರೂ ಬೇಸಾಗಲಿಲ್ಲ. ಆವಾಗ ಒಬ್ರು ಹೇಳ್ಯಾರ ಇಲ್ಲಿ ಗುಡ್ಡಕ್ಕೆ ಹೋಗಿ ಬಿರ್ರೀ ಅಮಾಸೆ ಬೇರೆ ಬಂದ್ಯೆತೆ ಅಂತ ಅಂದಾರ. ಆಗ ಅವರು ಗುಡ್ಡಕ್ಕೆ ಬಂದು ಗುಡ್ಡನ ಇಳಿಯೋ ತಟಿಗೆ ಸ್ವಲ್ಪ ಆಯಮ್ಮಗ ಗುಣ ಆದಂಗಾಗ್ಯೆತೆ. ಹಾ.. ಆ ಪರಮಾತ್ಮನದೇ ಇದೀಟು ತ್ರಿಶೂಲ ಕೊಡಬೇಕು ಅಂತ ಅದ್ಕಂಡಿದ್ವಿ ನಾವು ಅಂತ ಸ್ವಲ್ಪ ದಿನದೊಳಗೆ ತ್ರಿಶೂಲ (ಬೆಳ್ಳಿಯದು) ರೆಡಿ ಮಾಡ್ಸಿ ನನ್ನನ್ನು ಕರೆಕಳ್ಸಿ ಮುಡಿಪು ನೀಡಿದ್ರು. ಅಷ್ಟರಾಗೆ ಆಯಮ್ಮಗೆ ಹುಚ್ಚುತನ ಗುಣ ಆಗಿಬಿಟ್ಟಿತ್ತು.

೭. ಮನೆ ಕಟ್ಟಿಸುವಾಗ ಗೊರವರ ಕೈಯಿಂದ ಅಡಿಪಾಯ ಇಡಿಸಿದರೆ ಒಳ್ಳೆಯದು.

೮. ದೇವರ ವಾರ ರವಿವಾರವಾದ್ದರಿಂದ ಆ ದಿನ ಹೊಸಬಟ್ಟೆ, ಪಾತ್ರೆ ಮುಂತಾದವುಗಳನ್ನು ಕೊಂಡುಕೊಂಡು ಬಂದರೆ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆಯಿದೆ.

೯. ರವಿವಾರ ಮಲ್ಲಯ್ಯನ ವಾರವಾಗಿರುವುದರಿಂದ ಆ ದಿನ ದೋಣಿ ತುಂಬಿಸುವ ಕಾರ್ಯವನ್ನು ಮಾಡಿಸುವುದರಿಂದ, ಭಕ್ತರು ಉಪವಾಸ ಮಾಡುವುದರಿಂದ, ಜೊತೆಗೆ ದೇವಸ್ಥಾನಕ್ಕೆ ಹೋಗಿ ಬರುವುದರಿಂದ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಇದೆ.

ಒಟ್ಟಾರೆ ಮಲ್ಲಯ್ಯ ಈ ಕ್ಷೇತ್ರದ ಜನಪದರ ಆರಾಧ್ಯ ದೈವವಾಗಿದ್ದು, ಜನರ ಜೀವನದ ಪ್ರತಿ ಹೆಜ್ಜೆ ಹೆಜ್ಜೆಗೂ ತನ್ನದೇ ಆದ ಛಾಪನ್ನು ಮೂಡಿಸಿದ್ದಾನೆ. ವ್ಯವಸಾಯಕ್ಕೆ ಸಂಬಂಧಿಸಿದ ಪ್ರಾಣಿ, ಪಕ್ಷಿ, ನೆಲ, ಜಲ ಇವುಗಳಿಗೆಲ್ಲಾ ಸಂಬಂಧಿಸಿದಂತೆ ದೇವರಿಗೆ ನಡೆದುಕೊಳ್ಳುವಲ್ಲಿ ಜೀವನದ ಪ್ರತಿಯೊಂದು ಸ್ತರಗಳಲ್ಲಿ ಜನಪದರು ನಂಬಿಕೆಗಳನ್ನು ಹುಟ್ಟು ಹಾಕಿದ್ದಾರೆ. ಆ ಮೂಲಕ ಅವರು ಸುಖ ಸಂತೋಷವನ್ನು ಕಾಣುತ್ತಾರೆ. 'ದೇವ್ರೆ ಐದಾನಾ ಬಿಡಪ್ಪಾ ಅಂದು ಬಿಟ್ರೆ, ಅವರ ದುಗುಡಗಳೆಲ್ಲಾ ಕಡಿಮೆ ಆಗ್ತಾವೆ. ನಾನು ಮಾಡಕ ನನ್ನಿಚ್ಛೆ ಅಲ್ಲ. ಅದು ಮಲ್ಲಯ್ಯನ ಇಚ್ಛೆ' ಎಂದು ದೇವರ ಮೇಲೆ ಭಾರವನ್ನು ಹಾಕುತ್ತಾರೆ.

## ೬.೨. ವಿಧಿ-ನಿಷೇಧಗಳು :

ಜನಪದರ ಸಾಮಾಜಿಕ ಬದುಕಿನಲ್ಲಿ ನಂಬಿಕೆ ಅತ್ಯಂತ ಪ್ರಮುಖವಾದದ್ದು. ಒಂದಲ್ಲ ಒಂದು ರೀತಿಯಲ್ಲಿ ಈ ನಂಬಿಕೆಗಳು ಒಟ್ಟು ಮೌಖಿಕ ಸಮುದಾಯದವರ ಅಸ್ತಿತ್ವವನ್ನು ಹೇಳುತ್ತಿರುತ್ತವೆ. ಯಾವುದೋ ಕಾರಣಕ್ಕಾಗಿ ಈ ನಂಬಿಕೆಗಳು ಜೀವನದಲ್ಲಿ ಹಾಸುಕೊಕ್ಕಾಗಿ ಅವರ ದಿನನಿತ್ಯದ ಸಾಂಸಾರಿಕ ಜೀವನವನ್ನು ಮುನ್ನಡೆಸುತ್ತಿರುತ್ತವೆ. ಈ ನಂಬಿಕೆ ವೈಜ್ಞಾನಿಕವೋ, ಅವೈಜ್ಞಾನಿಕವೋ ಅವರಿಗೆ ತಿಳಿಯದು. ಆದರೆ ಅವರು ಅದನ್ನು ನಂಬುತ್ತಾರೆ. ಆ ನಂಬಿಕೆಯ ಹಿಂದೆಯೇ ನಿಷೇಧವೂ ಜೊತೆಗಿರುತ್ತದೆ. ಒಂದು ವಸ್ತು, ಒಂದು ಘಟನೆ , ಒಂದು ಆಚರಣೆಗಳಿಗೆ ಮಾಡಬೇಕು ಎನ್ನು

ವಂತಹುದು ಕೆಲವು ಇದ್ದರೆ,ಕಡ್ಡಾಯವಾಗಿ ಮಾಡಲೇಬಾರದು ಎನ್ನುವಂತಹವು ಕೆಲವಿರುತ್ತದೆ. ಅವೇ ನಿಷೇಧಗಳು. ಈ ನಿಷೇಧಗಳು ಮತ ಸಂಬಂಧಿಯಾಗಿರಬಹುದು ಬೇಟೆ, ಮತ್ತು ಬಲಿ ಸಂಬಂಧಿಯಾಗಿರಬಹುದು. ಅಥವಾ ವೈಯುಕ್ತಿಕ ಕಾರಣಗಳಿಂದಲೂ ಇರಬಹುದು. ಅವು ಆಯಾ ನೆಲೆಯಲ್ಲಿ ತಮ್ಮದೇ ಆದ ಸಂಬಂಧವನ್ನು ಕಟ್ಟಿ ಕೊಡುತ್ತವೆ. ಪ್ರಸ್ತುತ ಅಧ್ಯಯನ ಆಚರಣಾತ್ಮಕ ನೆಲೆಯಲ್ಲಿ ಗುಡ್ಡದ ಮಲ್ಲಯ್ಯನಿಗೆ ಸಂಬಂಧಿಸಿ ಅಲ್ಲಿನ ಪ್ರಾದೇಶಿಕ, ಜನಪದರಲ್ಲಿರುವ ನಿಷೇಧವನ್ನು ವಿವರಿಸುತ್ತದೆ.

೧. ಮೇಲ್ಗಿರಿ ವಾಸಧರನಾದ ಶ್ರೀ ಆದಿಮೀನಗುಂದಿ ಶ್ರೀ ಮಲ್ಲಯ್ಯನ ಕ್ಷೇತ್ರದ ಸ್ವಾಮಿಯ ಆಚರಣೆಯಲ್ಲಿ ಪ್ರಾಣಿ ಬಲಿಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ. ಯಾವುದೇ ರೀತಿಯ ಕುರಿ, ಕೋಳಿ, ಹಸು, ಮುಂತಾದ ಪ್ರಾಣಿಗಳನ್ನು ದೇವರ ಹೆಸರಿನಲ್ಲಿ ಬಲಿ ಕೊಡುವ ಹಾಗೆ ಇಲ್ಲ.

೨. ದಸರಾ ಅಮವಾಸೆ ಶುರು ಆದಂದಿನಿಂದ ಬರುವ ಹುಣ್ಣಿಮೆಯ ತನಕ ದೇವರ ಆಚರಣೆಗಳು ನಡೆಯುತ್ತಿರುವುದರಿಂದ ಈ ನಡುವಿನ ಹದಿನೈದು ದಿನಗಳಲ್ಲಿ ಭಕ್ತರು ತಮ್ಮ ತಮ್ಮ ಮನೆಗಳಲ್ಲಿ ಯಾವುದೇ ರೀತಿಯ ಬೇಟೆಯನ್ನು ತಿನ್ನುವುದು, ಬೇಟೆ ಮಾಡುವುದು ಹಾಗಿರಲಿ ಅದನ್ನು ಮುಟ್ಟುವಂತೆಯೂ ಸಹ ಇಲ್ಲ.

೩. ದಸರಾ ಅಮವಾಸೆಯ ದಿನ ದೇವರುಗಳನ್ನು ನೆರಣಿಕೆ ಗ್ರಾಮದಲ್ಲಿರುವ ದೇವರ ಮನೆಯಿಂದ ಬೆಟ್ಟಕ್ಕೆ ಹೋದಾಗ ಅಲ್ಲಿ ಗೊರವಯ್ಯನವರಿಗೆ ಕಂಕಣವನ್ನು ಕಟ್ಟುತ್ತಾರೆ. ಈ ಕಂಕಣವನ್ನು ಗೊರವರು ಬರುವ ಹುಣ್ಣಿಮೆಯ ತನಕ ಬಿಚ್ಚುವುದನ್ನು ನಿಷೇದಿಸಿದೆ. ಅಥವಾ ಅದು ಹರಿದು ಹೋಗದಂತೆ ಜೋಪಾನವಾಗಿ ಕಾಪಾಡಿಕೊಂಡು ಬರಬೇಕಿದೆ. ಹಾಗೆಯೇ ಈ ಹದಿನೈದು ದಿನಗಳ ವರೆಗೆ ಕಂಕಣವನ್ನು ಕಟ್ಟಿಸಿಕೊಂಡಂತಹವರು ಬೀಡಿ, ಮಾಂಸ, ಕುಡಿತ ಮುಂತಾದವುಗಳನ್ನು ಮುಟ್ಟಲು ನಿಷೇಧಿವಿರುವುದರ ಜೊತೆಗೆ ಸಂಸಾರದಲ್ಲಿ ತನ್ನ ಹೆಂಡತಿಯ ಜೊತೆ ಸಂಭೋಗಿಸುವುದನ್ನು ಸಹ ನಿಷೇಧಿಸಲಾಗಿದೆ.

೪. ಬನ್ನಿಯ ಆಟದಲ್ಲಿ ಕುಡಿದು ಬಡಿಗೆ ಹಿಡಿಯುವುದನ್ನು ನಿಷೇಧಿಸಲಾಗಿದೆ.

೫. ಬೆಟ್ಟದ ಮೇಲಿರುವ ಶ್ರೀ ಮಹಾ ಮಲ್ಲೇಶ್ವರ ಸ್ವಾಮಿಯ ಗುಡಿಯ ಬಳಿಗೆ ಕೆಳಜಾತಿಯವರಾದ ಮಾದಿಗರಿಗೆ ಪ್ರವೇಶವಿಲ್ಲ. ಶತ ಶತಮಾನಗಳಿಂದಲೂ ಈ ಪುರೋಹಿ ವರ್ಗಗಳು ಧರ್ಮದ ಹೆಸರಿನಲ್ಲಿ ಕೆಳಜಾತಿಯವರಾದ ಅಸ್ಪೃಷ್ಯರಿಗೆ ತಮ್ಮ ಮನಸ್ಸಿಗೆ ತೋಚಿದಂತೆ ನಿಯಮಗಳನ್ನು ರೂಪಿಸಿಕೊಂಡಿದ್ದಾರೆ. ಮಾದಿಗರು ಮಲ್ಲಯ್ಯನ ಗುಡಿಯ ಒಳಗೆ ಹೋಗಬಾರದು ಅಂತೆ ನಿಷೇಧವಿದೆ.

ಬದಲಿಗಾಗಿ ಅವರಿಗಾಗಿಯೇ ಒಂದು ಪ್ರತ್ಯೇಕ ಗುಡಿ ಬೆಟ್ಟದಿಂದ ಕೆಳಗೆ ಅರ್ಧ ಕಿ.ಮೀ. ದೂರದಲ್ಲಿ ಒಂದು ಚಿಕ್ಕ ದೇವಸ್ಥಾನವೇ ಇದೆ. ಆದರೆ ಹೆಸರು ''ಮಾದರ ಮಲ್ಲಯ್ಯನ ಗುಡಿ''. ಮಾದಿಗರಿಗಾಗಿಯೇ ಒಂದು ಪ್ರತ್ಯೇಕವಾದಂತಹ ಗುಡಿ ಅದು. ಇವರು ಅಲ್ಲಿಯೇ ತಮ್ಮ ಪೂಜೆ ಪುರಸ್ಕಾರ, ನೈವೇದ್ಯ ಇತ್ಯಾದಿಯನ್ನೆಲ್ಲಾ ಅರ್ಪಿಸುವುದು, ನಡೆದು ಕೊಳ್ಳುವುದು ಕೂಡಾ.

ಕ್ಷೇತ್ರದಲ್ಲಿ ಮಲ್ಲಯ್ಯ ಒಬ್ಬನೇ. ಆದರೆ ಜಾತಿಯತೆಯ ದೃಷ್ಟಿಯಲ್ಲಿ 'ಮಾದರ ಮಲ್ಲಯ್ಯನ ಗುಡಿ' ಅಂತ ಪ್ರತ್ಯೇಕಿಸಿದ್ದಾರೆ. ಮಲ್ಲಯ್ಯ ಅನ್ನುವ ಪದಕ್ಕೆ ಪೂರ್ವದಲ್ಲಿ ,'ಮಾದರ' ಅನ್ನುವ ಪದಕ್ಕೆ ಉಪಸರ್ಗ ಸೇರಿ ಆಗಿದೆ. ಮಾದರ ಮಲ್ಲಯ್ಯ, ಮಾದರ ಮಲ್ಲಯ್ಯ ಅಂಥ ದೈವವನ್ನೇ ಅಸ್ಪೃಶ್ಯತೆಯ ದೃಷ್ಟಿಯಿಂದ ನೋಡುತ್ತಿರುವುದು ವಿಪರ್ಯಾಸವೇ ಸರಿ.

೬. ದಸರಾ ಹಬ್ಬದ ಬನ್ನಿಯಲ್ಲಿ ನಡೆಯುವ ಪ್ರತಿ ಆಟಗಳಾದ ಬಡಿಗೆ ಆಟ, ವಗ್ಗರಾಟ, ಗೊರವರ ಕುಣಿತ, ಕಂಚಾವೀರರ ಶಸ್ತ್ರ ಪವಾಡ, ಸರಪಣಿ ಪವಾಡ, ಮಕ್ಕಳಿಂದ ಕೋಲಾಟ ಮುಂತಾದ ಎಲ್ಲಾ ಆಟಗಳನ್ನು ಆಡಿದ ಮೇಲೆ ಕೊನೆಯದಾಗಿ ಮತ್ತು ಅಷ್ಟೇ ಮುಖ್ಯವಾಗಿ ನಡೆಯುವಂತಹ ಆಚರಣೆಯೆಂದರೆ ಬಸಿವೆಯರು ಆಡುವ ಓಕುಳಿಯಾಟ. ಈ ಓಕುಳಿಯಾಟ ಆಡಿದ ನಂತರ ಹಬ್ಬದ ಕಾರ್ಯಕ್ರಮಗಳೆಲ್ಲ ಮುಕ್ತಾಯವಾಗಿ ದೇವರು ಶಿವಸಾನ ಕಟ್ಟೆಯಿಂದ ಬೆಟ್ಟಕ್ಕೆ ಸೇರುತ್ತಾನೆ. ಈ ರೀತಿ ಓಕುಳಿ ಆಟವನ್ನು ಆಡಿದ ಬಸಿವೆಯರಿಗೆ ಮಲ್ಲಯ್ಯನ ಗುಡಿಯ ಒಳಗೆ ಹೋಗುವುದು ನಿಷೇಧಿಸಿದೆ. ಅವರಿಗಾಗಿಯೇ ಒಂದು ಪ್ರತ್ಯೇಕವಾಗಿ ಗುಡಿಯಿದೆ. (ಬೆಟ್ಟದ ಕೆಳಗೆ) ಅವರು ಅಲ್ಲಿಯೇ ಹೋಗಿ ದೇವರಿಗೆ ನಡೆದುಕೊಳ್ಳುತ್ತಾರೆ.

೭. ಬಸವಿರೆ ನಡೆಸಿ ಕೊಂಡುಬಂದಂತಹ ಓಕುಳಿ ಆಟ ತುಂಬಾ ವಿಶಿಷ್ಟವಾದುದು. ಈ ರೀತಿಯ ಆಚರಣೆ ಮಲ್ಲಯ್ಯನ ಬೇರೆ ಯಾವ ಕ್ಷೇತ್ರದಲ್ಲಿ ಕಾಣಸಿಗದು. ಈ ಓಕುಳಿ ಆಟದಲ್ಲಿ ಬಸವಿಯರು ಜಾತ್ರೆಗೆ ಬಂದ ಭಕ್ತಾದಿಗಳ ಮೇಲೆಲ್ಲಾ ಬಣ್ಣವನ್ನು ಎರಚುತ್ತಾರೆ. ಇವರನ್ನು ಅಗಸರು ತಮ್ಮ ಹೆಗಲ ಮೇಲೆ ಕೂಡಿಸಿಕೊಂಡು ಕುಣಿಯುತ್ತ ಸಂಭ್ರಮವನ್ನು ಆಚರಿಸುತ್ತಾರೆ. ಈ ರೀತಿ ಓಕುಳಿ ಆಡುವ ಬಸವಿಯವರನ್ನು ಅಗಸರೇ ಹೊತ್ತುಕೊಂಡು ಕುಣಿಯಬೇಕು. ಬೇರೆ ಯಾವ ಜಾತಿಯವರು ಇವರನ್ನು ಹೊತ್ತುಕೊಳ್ಳುವುದು ಮತ್ತು ಮುಟ್ಟುವುದನ್ನು ಸಹ ನಿಷೇಧಿಸಿದೆ.

೮. ಜೀರ್ರರು(ಕಾರಣಿಕ ಗೊರವ) ಕಾರಣಿಕವನ್ನು ಹೇಳಿದ ಮೇಲೆ ಬಂಢಾರ ಚೀಲವನ್ನು ಹರಿದು ಆ ಬಂಢಾರವನ್ನು ಭಕ್ತರ ಮೇಲೆ ಎರಚುತ್ತಾನೆ. ಹೀಗೆ ಬಂಢಾರ ಹಾರಿದ ಮೇಲೆ ಬಡಿಗೆ ಎತ್ತುವುದನ್ನು ನಿಷೇಧಿಸಲಾಗಿದೆ.

೯. ಬನ್ನಿಯ ದಿನ ರಾತ್ರಿ ಬೆಟ್ಟದ ಮೇಲಿಂದ ದೇವರು ಪಲ್ಲಕ್ಕಿಯಲ್ಲಿ ಶಿವಸಾನ ಗದ್ದಿಗೆಗೆ ಬಂದು ಅಲ್ಲಿಂದ ಮುಖ್ಯ ಮಾರ್ಗವಾಗಿ ರಕ್ಷಪಡೆಗೆ ಸೇರುತ್ತದೆ. ಈ ರೀತಿ ಪಲ್ಲಕ್ಕಿಯಲ್ಲಿ ಸಾಗಿ ಬರುವಂತಹ ದೇವರನ್ನು ನಿರ್ಧಿಷ್ಟವಾಗಿ ಜೀರ್‍್ರು ಮನೆತನದವರು ಬಿಟ್ಟು ಬೇರೆಯವರು ಪಲ್ಲಕ್ಕಿಯನ್ನು ಹೊರವುದನ್ನು ನಿಷೇಧಿಸಲಾಗಿದೆ.

೧೦. ಜಾತ್ರೆಯಲ್ಲಿ ನಡೆಯುವ ರಥೋತ್ಸವ ಕಾರ್ಯಕ್ರಮದ ಮುಂಚೆ ನಿಗದಿಪಡಿಸಿದ ಗೊಲ್ಲ ಜನಾಂಗದ ಇಬ್ಬರು ವ್ಯಕ್ತಿಗಳು ಬಂದು ಕುಂಬವನ್ನು ಹೋರುತ್ತಾರೆ. ಒಂದು ಮಲ್ಲಯ್ಯನ ಪಡುಗ, ಇನ್ನೊಂದು ಮಾಳಮ್ಮನ ಪಡುಗ ಎಂದು. ಬೇರೆ ಜನಾಂಗದವರು ಈ ರೀತಿ ಕುಂಬ ಹೋರುವುದನ್ನು ನಿಷೇಧಿಸಲಾಗಿದೆ.

೧೧. ನಾಯಿಯೇ ಮಲ್ಲಯ್ಯ ಸಾಕಿದ್ದಾದರೆ ಅದನ್ನು ಹೊಡೆಯ ಕೂಡದು. ಅದಕ್ಕೆ ತಂಗಳು ತಿನ್ನಿಸಕೂಡದು.

೧೨. ಭಕ್ತರು ಕುದುರೆ ಹತ್ತಕೂಡದು.

೧೩. ಭಕ್ತರು ತಮ್ಮ ಮನೆಯಲ್ಲಿ ಆಕಳು ಮಾತ್ರ ಸಾಕಬೇಕು.

೧೪. ಗೊರವರಿಗೆ ಪ್ರಮುಖವಾಗಿರುವ ಪರಿಕರ ದೋಣಿ. ಇದು ಅವರ ಅವಿಭಾಜ್ಯವಾದ ಆಭರಣವೆಂದರೆ ತಪ್ಪಾಗದು. ಗೊರವರು ಭಕ್ತರಿಂದ ಯಾವಾಗ ಪ್ರಸಾದವನ್ನು ನೀಡಿದಾಗ ಅದನ್ನು ದೋಣಿಯ ಮೂಲಕ ತಾವು ತಿಂದು ಪ್ರಸಾದವಾಗಿ ಭಕ್ತರಿಗೆ ನೀಡುತ್ತಾನೆ. ಈ ರೀತಿ ವಿಶೇಷವಾಗಿರುವಂತಹ ದೋಣಿಯನ್ನು ಬೋರಲಾಗಿ ಇಡಕೂಡದು.

೧೫. ಮದುವೆಯ ವಿಷಯಕ್ಕೆ ಬಂದರೆ ಕಾರಹುಣ್ಣಿಮೆಯ ತರುವಾಯ ಭಕ್ತರು ಲಗ್ನವನ್ನು ಮಾಡಿಕೊಳ್ಳಕೂಡದು.

೧೬. ಬದನೆಕಾಯಿ, ಉಳ್ಳಾಗಡ್ಡಿ, ಬೆಳ್ಳೊಳ್ಳಿಗಳನ್ನು ದೇವರಿಗೆ ಅರ್ಪಿಸದೆ ತಿಂದರೆ ದೋಷ ಬರುತ್ತದೆ.

೧೭. ಭಕ್ತರು ಕೊಡೆ ಹಿಡಿದು ದೇವಾಲಯಕ್ಕೆ ಹೋಗಬಾರದು.

೧೮. ಭಕ್ತರು, ಗೊರವರು ಮಲ್ಲಯ್ಯನ ಕುರಿತಾದ ಹಾಡುಗಳನ್ನು ಬರೆದು ಪಾಠ ಮಾಡಿದರೆ ಹಾಡು ಹತ್ತುವುದಿಲ್ಲ.

೧೯. ಊರಲ್ಲಿ ಯಾರಾದರೂ ತೀರಿಕೊಂಡರೆ ಶವಸಂಸ್ಕಾರ ಮುಗಿಯುವವರೆಗೆ ವಗ್ಗಯ್ಯ ಊಟ ಮಾಡುವಂತಿಲ್ಲ.

೨೦. ದೀಕ್ಷೆ ಪಡೆದ ವಗ್ಗಯ್ಯನಿಗೆ ಆಕಸ್ಮಿಕವಾಗಿ ನಾಯಿಯೊಂದು ಕಚ್ಚಿದರೆ ಅವನಿಗೆ ದೋಷ ತಟ್ಟಿ ವಗ್ಗಯ್ಯನಾಗಿ ಮುಂದುವರೆಯಲು ಅನರ್ಹನಾಗುತ್ತಾನೆ. ಮತ್ತೆ ಅವನು ಮುಂಚಿನ ಸ್ಥಾನಕ್ಕೆ ಬರಬೇಕಾದರೆ ಹಿರಿಯರನ್ನು ಕೂಡಿಸಿ ಮತ್ತೆ ದೀಕ್ಷೆಯನ್ನು ಪಡೆದುಕೊಳ್ಳಬೇಕು.

೨೧. ವೈಯಕ್ತಿಕವಾಗಿ ವಗ್ಗಯ್ಯ ಯಾರೊಂದಿಗಾದರೂ ಜಗಳ ಮಾಡುವುದಾಗಲಿ, ಮತ್ತೆ ಬೇರೆ ಯಾರಾದರೂ ಹೊಡೆದಾಡುವಾಗಲೋ ಉದ್ದೇಶ ಪೂರ್ವಕವೇ ಇರಲಿ, ಆಕಸ್ಮಿಕವೇ ಇರಲಿ ಚಪ್ಪಲಿ ತಟ್ಟಿದರೆ ಆಗಲೂ ಅವನಿಗೆ ದೋಷ ತಟ್ಟುತ್ತದೆ. ಆಗಲೂ ಅವನಿಗೆ ದೀಕ್ಷೆ ಕೊಡಬೇಕಾಗುತ್ತದೆ.

೨೨. ಊಟ ಮಾಡುವಾಗ ಆಕಸ್ಮಿಕವಾಗಿ ದೀಪ ಆರಿದರೆ ತಾಟಿನಲ್ಲಿ ಎಷ್ಟು ಇರುತ್ತದೆಯೋ ಅಷ್ಟನ್ನು ಉಂಡು ಮುಗಿಸುವುದು. ಮತ್ತೆ ಮರುದಿನ ಸ್ನಾನ ಮಾಡಿ ಪೂಜೆಯಾದ ಬಳಿಕವೇ ಊಟ.

೨೩. ಗೊರವರು ಭಿಕ್ಷಾಟನೆಗೆ ಕಾಲಲ್ಲಿ ಚಪ್ಪಲಿಯನ್ನೇ ಧರಿಸಿಕೊಂಡು ಹೋಗುವಂತಿಲ್ಲ.

ಮೀನಗೊಂದಿ ಮಲ್ಲಯ್ಯನಿಗೆ ಸಂಬಂಧಿಸಿದ ಹಾಗೆ ಈ ಬಗೆಯ ಅನೇಕ ನಿಷೇಧಗಳು ಸುತ್ತಮುತ್ತಲ ಗ್ರಾಮ ಜೀವನದಲ್ಲಿ ಕಂಡುಬರುತ್ತವೆ. ಈ ನಿಷೇಧಗಳು ಕರ್ನಾಟಕದ ಇತರೆ ದೈವಕ್ಕೆ ಸಂಬಂಧಿಸಿದ ನಿಷೇಧಗಳಿಗಿಂತ ಕೊಂಚ ಭಿನ್ನವೆನಿಸುತ್ತವೆ. ಈ ಭಿನ್ನತೆಯು ಆಯಾ ಭೌಗೋಳಿಕ ಪರಿಸರದ ವ್ಯಾಪ್ತಿಗೆ ಸಹಜವೇ ಆದರೂ ಗೊರವ ಸಂಪ್ರದಾಯದ ಮಲ್ಲಯ್ಯನ ಕುರಿತಾದ ನಂಬಿಕೆಗಳನ್ನೊಳಗೊಂಡಂತೆ ನಿಷೇಧಗಳು ಅಧ್ಯಯನ ಯೋಗ್ಯವೆನಿಸುತ್ತವೆ. ಈ ದೃಷ್ಟಿಯಿಂದ ಇಲ್ಲಿನ ಬಹುತೇಕ ನಿಷೇಧಗಳು ಸಂಸ್ಕೃತಿಯ ಚೌಕಟ್ಟಿನಲ್ಲಿ ವಿಶಿಷ್ಟ ಬಗೆಯ ಆಕರಗಳೆನಿಸಿ, ಜನಪದ ಸಾಮಾಜಿಕ ಜೀವನವನ್ನೊಳಗೊಂಡಂತೆ ಒಟ್ಟು ಒಂದು ಪರಿಸರದ ಮೌಖಿಕ ಪರಂಪರೆಯ ಚಾರಿತ್ರಿಕ ಸಂಗತಿಗಳನ್ನು ಕಟ್ಟಿಕೊಡುತ್ತವೆ ಎನ್ನಬಹುದು.

ನಂಬಿಕೆಗಳಲ್ಲಿ ಯಾವುದನ್ನೇ ಅರ್ಥಹೀನವೆಂದು ತಿರಸ್ಕರಿಸುವುದು ಸರಿಯಲ್ಲ. ಒಂದು ನಂಬಿಕೆ ಯಾವ ಸಂದರ್ಭದಲ್ಲಿ ಹುಟ್ಟಿತು ಎಂಬುದು ನಮಗೆ ತಿಳಿದಿಲ್ಲದಿರಬಹುದು. ಆದರೆ ಆ ಸಂದರ್ಭದ ಅನುಭವ, ನಂಬಿಕೆಯ ಮೂಲಕ ಇಂದಿನವರಿಗೂ ಪ್ರವಹಿಸಿಕೊಂಡು ಬಂದಿದೆ ಎಂಬುದು ಸತ್ಯ. ನಂಬಿಕೆಯ ಹುಟ್ಟಿನ ಮೂಲವನ್ನು ಶೋಧಿಸುತ್ತಾ ಹೋಗುವುದೆಂದರೆ ಮಾನವನ ಸಾಂಸ್ಕೃತಿಕ ವಿಕಾಸದ ಮಜಲುಗಳನ್ನು ಕಂಡು ಹಿಡಿದಂತೆ. ಅಳಿದು ಹೋಗಿರುವ ಸಾಂಸ್ಕೃತಿಕ ಚರಿತ್ರೆಯ ಪುನರ್ರಚನೆಗೆ ಬೇಕಾದ ಅಮೂಲ್ಯ ದಾಖಲೆಗಳನ್ನು ನಂಬಿಕೆಗಳು ಒದಗಿಸುತ್ತವೆ. ನಿಸರ್ಗ, ಕೃಷಿ, ಜೀವನ ಮೊದಲಾದ ಸಂಗತಿಗಳ ಬಗ್ಗೆ ಜನಪದರ ಅನುಭವ ನಂಬಿಕೆಗಳ ರೂಪದಲ್ಲಿ ದಾಖಲಾಗಿರುತ್ತದೆ.

ಸಂಪ್ರದಾಯಗಳು ಒಂದೊಂದು ಜನಾಂಗದ ಪರಂಪರಾಗತ ನಂಬಿಕೆ. ಆಚರಣೆಗಳ ಪಳೆಯುಳಿಕೆಗಳು. ನಾಡಿನ ಸಂಸ್ಕೃತಿಯ ಬದುಕನ್ನು ಅಭ್ಯಾಸ ಮಾಡಲು ಹೊರಟಾಗ ಒಂದೊಂದು ಜನಾಂಗದವರು ಬೆಳೆಯಿಸಿಕೊಂಡು ಬಂದ ನಂಬಿಕೆ ಇಂಥ ಅಭ್ಯಾಸಕ್ಕೆ ಬೆನ್ನೆಲುಬಾಗಿ ನಿಲ್ಲುತ್ತದೆ. ನಂಬಿಕೆಗಳು ಯಾವುದೇ ಕಾರಣಕ್ಕೆ ಹುಟ್ಟಿರಲಿ ಅವು ಮಾನವನ ಅನುಭವ ಸಂಪನ್ನತೆಯ ದ್ಯೋತಕವಾಗಿವೆ. ಜಾನಪದ ಅಧ್ಯಯನದ ದೃಷ್ಟಿಯಿಂದ ಎಲ್ಲಾ ನಂಬಿಕೆಗಳು ಮಾನವನ ಸಾಂಸ್ಕೃತಿಕ ಭೌದ್ಧಿಕ ವಿಕಾಸದ ಮಜಲುಗಳನ್ನು ಗುರುತಿಸಲು ಸಹಾಯ ಮಾಡುತ್ತವೆ. ನಂಬಿಕೆಗಳೆಲ್ಲಾ ಸಾರಾಸಗಟಾಗಿ ಊಹಾತ್ಮಕ, ವಿಚಾರಹೀನ ಹಾಗೂ ಅವಾಸ್ತವವೆಂದು ಬಗೆಯುವಂತಿಲ್ಲ. ದೀರ್ಘಾಲೋಚನೆ ಅನುಭವಗಳ ಫಲವಾಗಿ ಅವು ರೂಪ ಪಡೆದಿರುವುದಂತೂ ಸತ್ಯ.

ಇವತ್ತು ೨೧ನೆಯ ಶತಮಾನದಲ್ಲಿ ಬದುಕುತ್ತಿರುವಂತಹ ನಾವುಗಳು ವೈಜ್ಞಾನಿಕವಾಗಿ ಎಷ್ಟೇ ಮುಂದುವರೆದರೂ ಕೂಡಾ ನಮ್ಮ ಸಂಪ್ರದಾಯವನ್ನು ಮೀರಿ ಹೋಗುವುದಕ್ಕೆ ಆಗ್ತಾಯಿಲ್ಲ ಎನ್ನುವಂತಹ ಸ್ಥಿತಿಯಲ್ಲಿ ಸಮಾಜ ಬದುಕುತ್ತಾ ಇದೆ. ಅದು ಆಯಾ ಪ್ರಾದೇಶಿಕವಾಗಿ ಇಂಥ ಕೆಲವು ಅಧಿದೇವತೆಗಳನ್ನು ನಂಬಿಕೊಂಡು ಬದುಕುವಂತಹ ಒಂದು ಜನ ಸಮೂಹವೇ ಸೃಷ್ಟಿಗೊಂಡಿದೆ. ಪ್ರಸ್ತುತ ಅಧ್ಯಾದಲ್ಲಿ ವಿವಿಧ ಮತ,ಪಂಥ,ಪಂಗಡಗಳವರಿಂದ ಪೂಜಿಸಲ್ಪಡುತ್ತಿರುವದರಿಂದ ಮಲ್ಲಯ್ಯನನ್ನು ಮೇಲು, ಕೀಳು ಎನ್ನದೇ ಎಲ್ಲರೂ ಒಟ್ಟಿಗೆ ಸೇರುವುದು ಒಂದು ಸಮಾನತೆಯ ಸಂಕೇತವಾಗಿದೆ. ಈ ಜನ ಸಮೂಹದ ನಡುವೆ ಬದುಕುವಂತಹವರು ಬಹಳಷ್ಟು ಜನ ಡಾಕ್ಟರ್‌ಗಳ ಹತ್ತಿರ ತೋರಿಸದೆ, ಆಧುನಿಕ ಸೌಲಭ್ಯಗಳನ್ನು ಪಡೆದುಕೊಳ್ಳಲಾರದೇ ತಮ್ಮ ಮನೋರೋಗಗಳನ್ನು ಕಳೆದುಕೊಳ್ಳುವ ಸಲುವಾಗಿ ಇಂತಹ ದೇವರುಗಳಿಗೆ ಮೊರೆ ಹೋಗುತ್ತಾರೆ. ಆ ಮೂಲಕ ಅವರಿಗೆ ಎಲ್ಲೋ ಒಂದು ರೀತಿಯಲ್ಲಿ ಒಳ್ಳೆಯದು ಕೂಡಾ ಆಗಿದೆ. ವಿಜ್ಞಾನ ಮಾಡದೇ ಇರುವ ಕೆಲಸವನ್ನು ದೇವರು ಮಾಡುತ್ತಿದ್ದಾನೆ ಎನ್ನುವ ನಂಬಿಕೆ ಜನರಲ್ಲಿದೆ. ಇಂತಹ ನಂಬಿಕೆಗಳನ್ನು ಯಾವತ್ತು ಕೂಡಾ ಏನೂ ಮಾಡುವುದಕ್ಕೆ ಆಗುವುದಿಲ್ಲ. ಈ ಪರಂಪರೆ ಹೀಗೆ ಸಾಗ್ತಾನೆ ಇರಬೇಕು. ಅದಕ್ಕೆ ಉತ್ತರವೇ ಇಲ್ಲ. ಎಲ್ಲಾ ಸ್ವಾಮಿ ಮಹಿಮೆ. ಕೆಲವರು ಗಿಡ ಮೂಲಿಕೆಗಳ ಮೂಲಕ ದೇವರು ನೀಡಿದ ಪತ್ರ ಅಂತ ಅಂದುಕೊಂಡು ಸೇವಿಸೋ ಮೂಲಕ ಒಳ್ಳೆಯದಾಗುತ್ತದೆ. ಅಥವಾ ಕಲ್ಲು ಸಕ್ಕರೆ ತಗೊಂಡ್ರ ಒಳ್ಳೆಯದಾಗುತ್ತದೆ. ಇವೆಲ್ಲ (ಗಿಡ ಮೂಲಿಕೆ, ಬಿಲ್ವಪತ್ರ, ಕಲ್ಲು ಸಕ್ಕರೆ) ಒಂದು ರೀತಿ ವೈಜ್ಞಾನಿಕ ಪದಾರ್ಥಗಳೇ. ಅವುಗಳನ್ನು ತೆಗೆದುಕೊಂಡರೆ ರೋಗಗಳೆಲ್ಲಾ ಗುಣಮುಖವಾಗುತ್ತವೆ. ಆ ಮೂಲಕ ನಮ್ಮ ಜನತೆ ಕಂಡುಕೊಂಡಂತಹ ಮಾಧ್ಯಮಗಳು ಇವುಗಳಾಗಿವೆ.

ಅಧ್ಯಾಯ - ೭

# ಮಲ್ಲಯ್ಯನ ಕುರಿತ ಸಾಹಿತ್ಯ

೭.೧. ಜನಪದ ಸಾಹಿತ್ಯ

೭.೧.೧. ಮಲ್ಲಯ್ಯನ ಹಾಡುಗಳು

೭.೧.೨. ಮಲ್ಲಯ್ಯನ ಖಡ್ಗಗಳು

೭.೧.೩. ಮಲ್ಲಯ್ಯನ ಕಥೆಗಳು

೭.೧.೪. ಮಲ್ಲಯ್ಯನ ಐತಿಹ್ಯಗಳು

೭.೧.೫. ಮಲ್ಲಯ್ಯನ ಬಯಲಾಟ

೭.೨. ಮಲ್ಲಯ್ಯನ ಶಿಷ್ಟ ಸಾಹಿತ್ಯ

೭.೨.೧. ಕಥೆ

೭.೨.೨. ನಾಟಕ

೭.೨.೩. ಸುಪ್ರಭಾತ ಹಾಗೂ ಭಕ್ತಿಗೀತೆಗಳು

೭.೨.೪. ಹಾಡುಗಳು

ಅಧ್ಯಾಯ - ೭

# ಮಲ್ಲಯ್ಯನ ಕುರಿತ ಸಾಹಿತ್ಯ

ಮಾನವನು ತನ್ನ ಭಾವನೆಯ ಅಭಿವೃದ್ಧಿಗೆ ಭಾಷೆಯನ್ನು ಕರಗತ ಮಾಡಿಕೊಂಡೊಡನೆಯೇ ಅವನ ಜೀವನದ ಸುಖ ದುಃಖಗಳು ಶಬ್ದರೂಪದಲ್ಲಿ ಮೈದೋರತೊಡಗಿವೆ. ಈ ರೀತಿ ಶಾಬ್ದಿಕವಾಗಿ ಹೊರಹೊಮ್ಮಿದ ಸಾಹಿತ್ಯ ಕ್ಷೇತ್ರದಲ್ಲಿ ಮೊದಲು ತಲೆಯೆತ್ತಿದುದು ಜನಪದಸಾಹಿತ್ಯ. ವೈಯುಕ್ತಿಕತೆ ಅಳಿದು ಸಾರ್ವತ್ರಿಕ ಸ್ವರೂಪ ವನ್ನು ತಾಳಿ ಈ ಜನಪದಸಾಹಿತ್ಯವಾಗುತ್ತದೆ. ಅದರ ಕರ್ತೃಸಮಷ್ಟಿಯಲ್ಲಿ ಮರೆತು ಹೋಗಿ ಅದು ಲಿಖಿತ ವಲ್ಲದ ಅಲೇಖಶೂನ್ಯವಾಗಿ ಬದುಕುತ್ತದೆ. ಹೀಗಾಗಿ ಜನತೆಯ ನಾಲಗೆಯೇ ಅದಕ್ಕೆ ತೂಗು ತೊಟ್ಟಿಲಾಗಿ ಬೆಳೆದುಕೊಂಡು ಬರುವುದು ಅನಿವಾರ್ಯವಾಯಿತು. ಕನ್ನಡದಲ್ಲಿ ಶ್ರೀಮಂತವಾದ ಜನಪದ ಸಾಹಿತ್ಯವಿದೆ. ಜಗತ್ತಿನ ಜನಪದ ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಉದಾಹರಣೆ ನೀಡಬಹುದಾದ ಸಾಹಿತ್ಯ ಇರುವುದಷ್ಟೇ ಅಲ್ಲ. ಆ ಪ್ರಕಾರಗಳಿಗೆ ಹೊರತಾದವೂ ಹೊಸ ಪ್ರಕಾರಗಳಿಗೆ ಆಕರವಾಗುವಂಥವೂ ಇವೆ. ಕಳೆದ ಒಂದು ನೂರು ವರ್ಷದಿಂದ ಕನ್ನಡದಲ್ಲಿ ಜನಪದ ಸಾಹಿತ್ಯ ಸಂಗ್ರಹ, ಸಂಪಾದನೆ, ಪ್ರಕಟಣೆ ನಡೆಯುತ್ತಿದೆ.

ಜನಪದ ಸಾಹಿತ್ಯದ ವಿಶ್ಲೇಷಣೆಯಲ್ಲಿ ಪಠ್ಯದ ಸಂದರ್ಭ ಬಹಳ ಮುಖ್ಯವಾದ ಒಂದು ಅಂಗ. ಬಹುಪಾಲು ನಮ್ಮ ವಿದ್ವಾಂಸರು ಪಠ್ಯದ ಅನೇಕ ನೆಲೆಗಳನ್ನು ಪರಿಗಣಿಸಿದಂತೆ ಕಂಡುಬರುವುದಿಲ್ಲ. ಯಾವುದೇ ಒಂದು ಜನಪದ ಸಾಹಿತ್ಯದ ಪ್ರಕಾರ ನಿರ್ಧಿಷ್ಟವಾದ ಒಂದೊಂದು ಸಂದರ್ಭದಿಂದಲೇ ಸೃಷ್ಟಿಗೊಳ್ಳುತ್ತದೆ. ಸಂದರ್ಭವನ್ನು ಬಿಟ್ಟು ಅವು ಸಹಜವಾಗಿ ಸಮರ್ಥವಾಗಿ ಬಿಚ್ಚಿಕೊಳ್ಳಲಾರವು. ಇಡೀ ಸಮುದಾಯವೇ ಜನಪದ ಸಾಹಿತ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತದೆ. ತನ್ನನ್ನೇ ಅದರಲ್ಲಿ ಪ್ರತಿರೂಪಿಸಿಕೊಳ್ಳುತ್ತದೆ. ಹಾಗೆಯೇ ತನ್ನ ಗ್ರಹಿಕೆಗೆ ಕಂಡಂತೆ ತನ್ನ ಬದುಕಿಗೆ ಹೊಂದಿಕೊಂಡತೆ ಆ ಸಾಹಿತ್ಯದ ಭಾಷೆ ನಿರೂಪಣೆ ಪಠ್ಯ ಅದರ ರಚನೆ ಶೈಲಿ ತಂತ್ರ ಮತ್ತು ಆಶಯಗಳು ಸೃಷ್ಟಿಯಾಗುತ್ತವೆ. ಹಾಗಾಗಿ ಜನಪದ ಸಾಹಿತ್ಯ ಎಂದರೆ ಅದು ಕೇವಲ ಬಾಯಿಂದ ಬಾಯಿಗೆ ತಲೆಮಾರಿನಿಂದ ತಲೆಮಾರುಗಳಿಗೆ ಹರಿದುಬಂದ ಜನಪ್ರಿಯ ಪಳಿಯುಳಿಕೆ ಅಲ್ಲ. ಅದು ಒಂದು ಜೀವಂತ ಸಮಾಜದ ನಿರಂತರ ಸೃಜನಶೀಲವಾದ ಪ್ರವೃತ್ತಿ ಸಂಕೇತ. ಆದ್ದರಿಂದಲೇ ಜನಪದ ಸಾಹಿತ್ಯವನ್ನು ಕೇವಲ ರಮ್ಯ ಕಲ್ಪನೆಗಳ ನೆಲೆಯಲ್ಲಿ ನೋಡಲು ಸಾಧ್ಯವಾಗುವುದಿಲ್ಲ. ಅಂತರ್‌ಶಿಸ್ತೀಯ ಅಧ್ಯಯನದ ಅನೇಕ ಪರಿಕರಗಳೊಂದಿಗೆ ಆ ಸಾಹಿತ್ಯದೊಳಕ್ಕೆ ನಾವು ಇಳಿಯಬೇಕಾಗುತ್ತದೆ. ಜನಪದ ಸಾಹಿತ್ಯವನ್ನು ನಮ್ಮದೇ ಆದ ಅಧ್ಯಯನದ ಮಾದರಿಗಳಲ್ಲಿ ನೋಡಬೇಕಾದ ಅನಿವಾರ್ಯತೆಯಲ್ಲಿ ಈಗ ನಾವಿದ್ದೇವೆ. ಇಲ್ಲಿ ಜನಪದ ಸಾಹಿತ್ಯದ ಪಠ್ಯವನ್ನು ಅದರ ಸಾಂಸ್ಕೃತಿಕ

ಸಂದರ್ಭದಲ್ಲಿಟ್ಟು ವಿವೇಚಿಸುವುದಾದರೆ ನಮಗೆ ಜಾನಪದದ ಮತ್ತೊಂದು ಲೋಕ ನಿಸ್ಸಂದೇಹವಾಗಿ ಗೋಚರಿಸುತ್ತದೆ. ಜನಪದ ಸಾಹಿತ್ಯದ ಶಕ್ತಿ ಇರುವುದೇ ಅದನ್ನು ಕೇಳುವುದರಲ್ಲಿ. ಮೌಖಿಕ ಪರಂಪರೆಯೇ ಅದರ ಜೀವಾಳವಾದ್ದರಿಂದ ಮೌನ ಅದಕ್ಕೆ ಸಾಧ್ಯವಾಗುವುದಿಲ್ಲ. ಏಕಾಂತವನ್ನು ಅದು ಖಂಡಿತ ಬಯಸುವುದಿಲ್ಲ. ಅದು ಓದುವ ಸಂಸ್ಕೃತಿಗೆ ಬದ್ಧವಾಗಿರುವುದಿಲ್ಲ. ಜನಪದ ಸಾಹಿತ್ಯದ ನೆಲೆಯೇ ಇಂಥಾದ್ದು.

ನಾಗರೀಕ ಸಮಾಜದಲ್ಲಿ ಹೇಗೆಯೋ ಹಾಗೆ ಜನಪದ ಸಮಾಜದಲ್ಲಿಯೂ ಒಂದು ಬಗೆಯ ಸಂಸ್ಕೃತಿ ಬೆಳೆದು ಬಂದಿದೆ. ಮನಸ್ಸು ಬುದ್ಧಿ ಹೃದಯಗಳಿಂದ ಕೂಡಿದ ಪ್ರತಿಯೊಬ್ಬ ಮಾನವನೂ ಸುಖಃ ಸಮೃದ್ಧಿಯ ಜೀವನವನ್ನು ಬಯಸುವನು. ಗುಂಪು ಗೂಡಿ ಬದುಕಬೇಕಾದುದರಿಂದ ಸಂಜ್ಞೆಗಳನ್ನು, ಧ್ವನಿ ಸಂಕೇತಗಳನ್ನು ನಿರ್ಮಿಸಿಕೊಂಡನು. ಬೇರೆ ಬೇರೆ ಧ್ವನಿ ಸಂಕೇತಗಳು ಒಂದೊಂದು ಬಗೆಯ ಅರ್ಥವನ್ನು ಸೂಚಿಸ ತೊಡಗಿದವು. ಈ ಅರ್ಥವತ್ತಾದ ಧ್ವನಿ ಸಂಕೇತಗಳೇ ಶಬ್ದಗಳಾಗಿ ರೂಪಗೊಂಡವು. ಈ ಶಬ್ಧಗಳ ಸಂಖ್ಯೆ ಬೆಳೆದಂತೆಲ್ಲಾ ಕೆಲವು ವಸ್ತುಸೂಚಕ ಪದಗಳಾದವು, ಕೆಲವು ಭಾವಸೂಚಕ ಪದಗಳೆನಿಸಿದವು, ಮತ್ತೆ ಕೆಲವು ಕ್ರಿಯಾಸೂಚಕ ಪದಗಳಾಗಿ ನಿಂತವು (ಡಾ.ಬೆಟಗೇರಿ ಕೃಷ್ಣಶರ್ಮ; ೧೯೮೮-೫೮). ಈ ಶಬ್ದಗಳನ್ನು ಉಚಿತಾರ್ಥ ಬೋಧೆಯಾಗುವಂತೆ ಹೊಂದಿಸಿ ಹೇಳುವ ಪೂರ್ಣವಾಕ್ಯಗಳು ನಿರ್ಮಾಣವಾಗುವುದಕ್ಕೆ ಅನೇಕ ಕಾಲ ಗತಿಸಿರಬೇಕು. ಪ್ರಾಥಮಿಕಾವಸ್ಥೆಯನ್ನು ದಾಟಿದಾಗ ಮಾನವರ ಗುಂಪು ಮಾತುಗಳಿಂದ ಜೀವನ ವ್ಯವಹಾರ ವನ್ನು ನಡೆಸತೊಡಗಿತು. ಆಗ ಅವರಿಗೆ ಲಿಪಿಯ ಅಗತ್ಯದ ಅರಿವೇ ಇರಲಿಲ್ಲ. ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯ ಧ್ವನಿ ಸಂಕೇತಗಳು ಹುಟ್ಟಿಕೊಂಡುದರಿಂದ, ಬೇರೆ ಬೇರೆ ಜನ ಜಂಗುಳಿಯ ಭಾಷೆ, ಬೇರೆ ಬೇರೆ ಬಗೆಯದಾಯಿತು. ಕನ್ನಡ ಜನಪದ ಭಾಷೆಯು ಕೂಡಾ ಹೀಗೆಯೇ ಹುಟ್ಟಿ ಬೆಳೆಯುತ್ತಾ ಬಂದುದು.

ಆದುದರಿಂದಲೇ ಕನ್ನಡ ಜನಪದದವರಿಗೆ ಲಿಪಿಯ ಅಗತ್ಯ ಕಂಡಿರಲಾರದು. ಎಂತಲೇ ಕನ್ನಡ ಜನಪದ ಸಾಹಿತ್ಯವು ಅನೇಕ ಕಾಲಗಳವರೆಗೆ ಶ್ರವಣ ಎಂದರೆ ಕಿವಿಯಿಂದ ಕಿವಿಗೆ ತಾಗಿಬಂದ ಸಾಹಿತ್ಯವಾಗಿಯೇ ಉಳಿದುಕೊಂಡಿತು. ಬಾಯಿಂದ ಬಾಯಿಗೆ ತಲೆ ತಲಾಂತರದಿಂದಲೂ ನಡೆದುಕೊಂಡು ಬಂದಿರುವ ಈ ಸಾಹಿತ್ಯ ಇಂದು ಮೂಲರೂಪದಲ್ಲಿ ಉಳಿದು ಬಂದಿಲ್ಲವೆಂಬುದು ಎಲ್ಲರಿಗೂ ಕಂಡು ಬರುವ ಮಾತು. ಲಿಖಿತ ಸಾಹಿತ್ಯದಲ್ಲಿ ಕನ್ನಡ ಭಾಷೆಯಲ್ಲಿ ಕಾಲಕಾಲಕ್ಕೆ ಆಗುತ್ತ ಬಂದಿರುವ ಸ್ಥಿತ್ಯಂತರಗಳನ್ನು ನಾವು ಸ್ಪಷ್ಟವಾಗಿ ಗುರುತಿಸಬಲ್ಲೆವು. ಆದರೆ ಜನಪದ ಭಾಷೆಯಲ್ಲಿ ಪ್ರಾದೇಶಿಕ ಬೇಧಗಳನ್ನು ನಾವು ಗುರುತಿಸಬಲ್ಲೆವೇ ಹೊರೆತು ಕಾಲಿಕ ಸ್ಥಿತ್ಯಂತರಗಳನ್ನು ಗುರುತಿಸಲು ಬರುವಂತಿಲ್ಲ. ಏಕೆಂದರೆ; ಜನಪದ ಸಾಹಿತ್ಯವು ಬಾಯಿಂದ ಬಾಯಿಗೆ ಬಂದುದಾದ್ದರಿಂದ ಇಂದು ಬಳಕೆಯಲ್ಲಿರುವ ಈ ಸಾಹಿತ್ಯ ಇಂದಿನವರ ಆಡುನುಡಿಯನ್ನೇ

ಹೊಂದಿಸಿಕೊಂಡುಬಿಟ್ಟಿದೆ. ಮೂಲ ಜನಪದದ ಕನ್ನಡ ಭಾಷೆ ಹೇಗಿರಬಹುದೆಂಬುದನ್ನು ಇಂದು ಎಂತೆಂತಹ ಭಾಷಾ ವಿಜ್ಞಾನಿಗಳು ಕಂಡುಹಿಡಿದು ವಿವರಿಸಲಾರರು. ಜನರ ಆಡುವ ನುಡಿಯು ಮಾರ್ಪಟ್ಟಂತೆಲ್ಲ ಅವರ ಸಾಹಿತ್ಯ ಭಾಷೆ ಮಾರ್ಪಡುತ್ತಾ ಬಂದಿದೆ.

ಜಾನಪದವನ್ನು ಸಾಮಾನ್ಯವಾಗಿ ನಾಲ್ಕು ಪ್ರಮುಖ ವಿಭಾಗಗಳಾದ

೧) ಸಾಹಿತ್ಯಿಕ ಬಗೆ.

೨) ಭಾಷಿಕ ಬಗೆ.

೩) ವೈಜ್ಞಾನಿಕ ಬಗೆ.

೪) ಕ್ರಿಯಾತ್ಮಕ ಬಗೆ.

ಹೀಗೆ ವಿಭಾಗಗಳನ್ನು ಆರ್.ಎಸ್.ಬಾಗ್ಸ್‌ರವರು ಗುರುತಿಸಿದ್ದಾರೆ. ಈ ನಾಲ್ಕು ಅಂಗಗಳಲ್ಲಿ ಮೌಖಿಕ ಮೂಲದಲ್ಲಿ ಬಂದಿರುವ ಸಾಹಿತ್ಯಿಕ ಬಗೆಗಳನ್ನು ಒಂದು ಗುಂಪಾಗಿ ಪರಿಗಣಿಸಲಾಗಿದೆ. ಇದನ್ನು ಕೆಲವೊಮ್ಮೆ ಶಾಬ್ದಿಕ ಜಾನಪದ ಎಂದೂ ಹೆಸರಿಸಲಾಗುತ್ತದೆ. ಬಾಯಿ ಮಾತಿನ ಮೂಲಕ ಅಭಿವ್ಯಕ್ತವಾಗುವ ಕಥೆ, ಗೀತೆ, ಲಾವಣಿ, ಕಾವ್ಯ, ಗಾದೆ, ಒಗಟು, ಒಡಪು, ನುಡಿಗಟ್ಟು, ಅಣಕು ನುಡಿಗಳು, ಕೊಂಕು ನುಡಿಗಳು, ಬೈಗುಳಗಳು ಮೊದಲಾದ ಎಲ್ಲಾ ಶಾಬ್ದಿಕ ರೂಪಗಳನ್ನು ಅಳವಡಿಸಿ ನೋಡಬಹುದಾಗಿದೆ. ಪರಂಪರಾನುಗತ ವಾಗಿ ಜನರ ಬಾಯಲ್ಲಿ ಉಳಿದು ಬಂದ ಈ ಜಾನಪದ ವಾಙ್ಮಯ ವ್ಯಾಪಕವೂ ವೈವಿಧ್ಯ ಪೂರ್ಣವೂ ಆದುದಾಗಿದೆ. ಈ ಎಲ್ಲಾ ರೂಪಗಳಲ್ಲಿಯೂ ಸಾಹಿತ್ಯಕ ಸ್ವಾರಸ್ಯಗಳನ್ನು ಗುರುತಿಸಲು ಸಾಧ್ಯವಾಗದಿದ್ದರೂ ಕಥೆ, ಗೀತೆ, ಲಾವಣಿ, ಕಾವ್ಯ, ಗಾದೆ, ಒಗಟು ಇವುಗಳನ್ನು ಸ್ಪಷ್ಟವಾಗಿ ಪ್ರತ್ಯೇಕಿಸಿಕೊಂಡು ಅವುಗಳ ಸಾಹಿತ್ತಿಕ ಮೌಲ್ಯವನ್ನು ಗುರುತಿಸಬಹುದು. ಉಳಿದ ರೂಪಗಳಲ್ಲಿಯೂ ಈ ಅಂಶ ಇದ್ದೇ ಇರುತ್ತದೆಯಾದರೂ ಇವು ಅತ್ಯಂತ ಪ್ರಖರವಾಗಿ ಎದ್ದು ನಿಲ್ಲುವ ಜಾನಪದದ ಸಾಹಿತ್ತಿಕ ಶಾಖೆಗಳು : ೧) ಹಾಡು, ೨) ಕಥೆ, ೩) ಐತಿಹ್ಯ.

### ೭.೧.೧. ಮಲ್ಲಯ್ಯನ ಹಾಡುಗಳು :

ನಮ್ಮ ಜಾನಪದದಲ್ಲಿ ಲಯಬದ್ಧವಾದ ಕುಣಿತ ಹಾಡುಗಳು ಎಂದಿನಿಂದಲೋ ನಡೆದುಕೊಂಡು ಬಂದಿವೆ. ಜನಪದ ಗೀತೆಗಳೆಲ್ಲ ಹಾಡಬೇಕಾದ ರಚನೆಗಳೇ ಆದುದರಿಂದ ಸಂಗೀತವನ್ನು ಅವುಗಳಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಅದು ಒಂದು ಹಾಡಿನ ಸಾಹಿತ್ಯದಷ್ಟೇ ಪ್ರಮುಖವಾದದ್ದು. ಅವರಿಗೆ ಅಕ್ಷರಗಳ ಇಟ್ಟಿಗೆಗಳೂ ಬೇಕಾಗಲಿಲ್ಲ. ಮಾತ್ರಾಗಣಗಳ ಇಟ್ಟಿಗೆಗಳೂ ಬೇಕಾಗಿಲ್ಲ. ಗೇಯಕ್ಕೆ ಅನುಗುಣವಾದ ಅನಿಯಮಿತ ಮಾತ್ರ, ಅನಿಯಮಿತ ಅಕ್ಷರಗಳಿಂದಲೇ ಕೂಡಿದ ಶಬ್ದದ ಇಟ್ಟಿಗೆಗಳಿಂದ ತಮ್ಮ ಪದ ಸಾಹಿತ್ಯದ ಕಟ್ಟಡವನ್ನು ಕಟ್ಟಿದರು. ಇವರ ಗೇಯ ಗಣಪದ್ಧತಿಯ ಗುಣದ ಅರಿಕೆಯಾದ ಮೇಲೆ ಈ ಜಾನಪದ ಗಣ ಪದ್ಧತಿಯನ್ನು 'ಅಂಶಗಣ' ಎಂದು ಶಾಸ್ತ್ರೀಯವಾದ ಹೆಸರಿಟ್ಟರು.

ಕನ್ನಡದಲ್ಲಿ ಜನಪದಗೀತೆಯನ್ನು ಜನಪದ ಕಾವ್ಯ, ಹಳ್ಳಿಪದ, ಹಳ್ಳಿಹಾಡು, ಲೋಕಗೀತೆ, ಪಾಮರರ ಪದ, ಪಾಮರರ ಹಾಡು ಮೊದಲಾದ ಹೆಸರುಗಳಿಂದ ಕರೆಯುವುದುಂಟು. ಹೆಸರೇ ಸೂಚಿಸುವಂತೆ ಇದು ಶಿಷ್ಟ ಗೀತೆಗಿಂತ ಭಿನ್ನವಾದದ್ದು. ಜನಪದ ಗೀತೆ ಜನಪದ ಸಂಸ್ಕೃತಿಯ ಒಂದು ಅಂಗ. ಜಾನಪದದ ಇತರ ಪ್ರಕಾರಗಳಂತೆ ಇದು ಕೂಡಾ ಮೌಖಿಕ ಪರಂಪರೆಯಿಂದ ಸಾಗಿ ಬಂದಿದೆ. ಕಂಠಸ್ಥ ಪರಂಪರೆಯೇ ಇದರ ಜೀವಾಳ. ನಮ್ಮ ಜನಪದರು ಪ್ರಾಸನಿಯಮದ ಕಟ್ಟಿಗೆ ಒಳಗಾದವರಲ್ಲವಾದರೂ, ಪ್ರಾಸ ಪದ್ಧತಿಯನ್ನು ಕಡೆಗಣಿಸಿದವರಲ್ಲ. ಮಾನವೀಯ ಜೀವನಾನುಭವ, ಲೋಕ ಪರಿಚಯ ಮೊದಲಾದ ನೈಜ ಸಂಗತಿಗಳಿಗೆ ಇವರ ಸಾಹಿತ್ಯದಲ್ಲಿ ಪ್ರಧಾನ ಸ್ಥಾನವಿರುವುದು. ಇವರು ಶ್ರದ್ಧೆಯಿರಿಸಿದ ದೇವ-ದೇವತೆಗಳನ್ನೂ ಕೂಡ ಮಾನವರಂತೆಯೇ ಆಡುವುವು, ಅಳುವುವು, ನಗುವುವು, ತಿನ್ನುವುವು, ಉಣ್ಣುವುವು, ಲೌಕಿಕ ವ್ಯವಹಾರವನ್ನು ನಟಿಸುವುವು. ಶೃಂಗಾರ, ವೀರ, ಕರುಣೆ, ಹಾಸ್ಯರಸಗಳ ಸ್ಥಾಯಿಭಾವಗಳಲ್ಲಿ ಇವರ ಪ್ರೀತಿ ಹೆಚ್ಚು. ಆದರೆ ಇವುಗಳನ್ನು ಅವರು ರಸದ ಕಲ್ಪನೆಯಿಂದ ಬೆಳೆಸುವುದಿಲ್ಲ. ವಾಸ್ತವ ಜೀವನದೊಂದಿಗೆ ತಮ್ಮಿಂದ ತಾವೇ ಅವು ಪೋಷಣೆ ಪಡೆದು ಬೆಳೆಯುತ್ತವೆ. ಇದೇ ನಿಟ್ಟಿನಲ್ಲಿ ಸಾಗಿದ ಜನಪದರಿಗೆ ಅವರದೇ ಆದ ಮಹಾಕಾವ್ಯಗಳಿವೆ. ಶಿಷ್ಟ ಮಹಾಕಾವ್ಯಗಳ ಹಾಸು ಬೀಸು, ವಸ್ತು ವೈವಿಧ್ಯ, ಮಹತ್ತು, ಬೋಧೆ ಇವುಗಳಲ್ಲಿ ಕಂಡುಬರುತ್ತದೆ. ಪ್ರತಿಯೊಂದು ಮಹಾಕಾವ್ಯದಲ್ಲಿ ಒಬ್ಬೊಬ್ಬ ಸಾಂಸ್ಕೃತಿಕ ವೀರ ನಾಯಕನಾಗಿ ಜನಮನವನ್ನು ಆಳಿರುವುದು ಕಂಡು ಬರುತ್ತದೆ. ಕನ್ನಡದಲ್ಲಿ ಶ್ರೀ ಮಲೆಮಾದೇಶ್ವರ ಸ್ವಾಮಿ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪನ ಕಾವ್ಯ, ಮೈಲಾರಲಿಂಗನ ಕಾವ್ಯ ಮೊದಲಾದ ಜನಪದ ಮಹಾಕಾವ್ಯಗಳಿವೆ. ಕರ್ನಾಟಕದ ಗುಡಗಾಡಿನ ಬುಡಕಟ್ಟು ಜನಾಂಗದಲ್ಲೂ ಮಹಾಕಾವ್ಯವಿರುವುದು ಕಂಡು ಬರುತ್ತದೆ. ಕನ್ನಡ ಜನಪದ ಮಹಾಕಾವ್ಯಗಳನ್ನು ಕಂಸಾಳೆಯವರು, ತಂಬೂರಿಯವರು, ಗಣೆಯವರು, ಚೌಡಿಕೆಯವರು, ಗೊರವರು ಮೊದಲಾದ ವೃತ್ತಿ ಗಾಯಕರು ಹಾಡುತ್ತಾ ಉಳಿಸಿಕೊಂಡು ಬಂದಿದ್ದಾರೆ. ಕಾವ್ಯಗಳು ನಿರ್ದಿಷ್ಟ ಪರಂಪರೆಗೆ ಸೇರಿವೆ. ಜನಪದ ಗುಂಪಿನ ಆರಾಧ್ಯ ದೈವ ಕಥಾ ನಾಯಕನಾಗುತ್ತಾನೆ. ಆರಾಧ್ಯ ದೈವದ ಆರಾಧನೆ, ಪ್ರಚಾರ, ಪ್ರಸಾರ , ವೃತ್ತಿಗಾಯಕರ ಉದ್ದೇಶವಾಗಿರುವಂತಿದೆ. ಹಾಡುಗಾರಿಕೆಯಲ್ಲಿ ನಿರ್ದಿಷ್ಟವಾದ ವಾದ್ಯಗಳನ್ನು ಭಕ್ತಿಯಿಂದ ಬಳಸುತ್ತಾರೆ. ಭಕ್ತಿಯಿಂದ ವೃತ್ತಿಗಾಯಕರಿಗೆ ಭಕ್ತಿಯಿಂದ ಕೇಳುವ ಭಕ್ತವರ್ಗವುಂಟು.

ಪ್ರಸ್ತುತ ನನ್ನ ಮಹಾ ಪ್ರಬಂಧದ ಕೇಂದ್ರ ಬಿಂದು ಶ್ರೀ ಮೀನಗುಂದಿ ಮಲ್ಲಯ್ಯ ಅಥವಾ ಗುಡ್ಡದ ಮಲ್ಲಯ್ಯ. ಈ ಕ್ಷೇತ್ರ ನವ ರಾಜ್ಯ ನಿರ್ಮಾಣದ ನಂತರ ಆಂಧ್ರಪ್ರದೇಶಕ್ಕೆ ಸೇರಿದೆ. ಅದಕ್ಕೂ ಮೊದಲು ಇದು ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದುದಾಗಿತ್ತು. ಗೊರವ ಸಂಪ್ರದಾಯಕ್ಕೆ ಸೇರಿದ ಈ ಪರಿಸರದಲ್ಲಿ ಹಲವಾರು ಹಾಡುಗಳು, ಕಥೆಗಳು, ಗಾದೆಗಳು, ಒಡಪುಗಳು, ಐತಿಹ್ಯಗಳು ನಮಗೆ ಲಭ್ಯವಾಗುತ್ತವೆ.

**ಶ್ರೀ ಮೀನಗುಂದಿ ಮಲ್ಲಯ್ಯನ ಹಾಡುಗಳು :**

ಜನಪದರಿಗೆ ಮೊಟ್ಟ ಮೊದಲು ದೇವರ ಕಲ್ಪನೆ ಮಾಡಿದ್ದು ಅದ್ಭುತ ವಿಷಯ. ಅನಿರ್ವಚನೀಯಗಳಿಗೆ ಅಂದಿನ ಆ ಕಲ್ಪನೆ ಶಾಶ್ವತವಾಗಿ ಮನುಕುಲವನ್ನು ಆಕ್ರಮಿಸಿಕೊಂಡು ಅದರಿಂದ ಬಿಡಿಸಿಕೊಳ್ಳಲು ಇಂದಿಗೂ ಸಾಧ್ಯವಾಗಿಲ್ಲ. ಕಾಲ ಸರಿದಂತೆ ದೇವರ ಕಲ್ಪನೆಯೂ, ಆರಾಧನೆಯ ವಿಧಾನ, ಗುಡಿಗೋಪುರ ನಿರ್ಮಾಣ, ಕಟ್ಟುಕಟ್ಟಳೆ ಪ್ರಾರಂಭವಾಗಿದೆ. ಜನರ ದೇವರ ಕಲ್ಪನೆ ವಿಶಿಷ್ಟವಾಗಿದೆ, ವಿಚಿತ್ರವಾಗಿದೆ, ಆತ್ಮೀಯವಾಗಿದೆ. ಜನಪದರ ಬದುಕಿನಲ್ಲಿ ದೇವರ ಅಸ್ತಿತ್ವ ಹಾಸು ಹೊಕ್ಕಾಗಿದೆ. ಜನಪದರು ಆತ್ಮವಿಶ್ವಾಸಕ್ಕೆ, ಬದುಕಿನ ನೆಮ್ಮದಿಗೆ, ಪ್ರಕೃತಿಯ ನಿಗೂಢದ ಅರಿವಿಗೆ, ಮನುಕುಲದ ಏಳಿಗೆಗೆ ದೇವರನ್ನು ನಂಬಿದ್ದಾರೆ. ಈ ಹಿನ್ನೆಲೆಯಲ್ಲಿ ದೇವರ ಹಾಡುಗಳು ಹುಟ್ಟಿಕೊಂಡಿವೆ. ಜನಪದ ಮಹಾಕಾವ್ಯ ಒಬ್ಬ ಸಾಂಸ್ಕೃತಿಕ ವೀರನ ಅಥವಾ ಧಾರ್ಮಿಕ ನಾಯಕನ ಸುತ್ತ ಹೆಣೆದುಕೊಂಡು ತನ್ನ ವಿಸ್ತಾರ ಮತ್ತು ವ್ಯಾಪ್ತಿಗಳಿಂದ ಅನೇಕ ಮಜಲುಗಳಲ್ಲಿ ಸಾಗುವುದನ್ನು ಕಾಣಬಹುದು. ಇದು ಒಂದು ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ನಿಂತು ತನ್ನದೇ ಆದ ಧ್ಯೇಯ-ಧೋರಣೆಗಳಿಂದ ಕೆಲಸ ಮಾಡುತ್ತದೆ. ಇಲ್ಲಿ ಒಬ್ಬ ನಾಯಕನಿದ್ದರೂ ಹತ್ತಾರು ಪ್ರತಿ ನಾಯಕರು ಉದ್ದಕ್ಕೂ ಕಾಣಿಸಿಕೊಂಡು ತಮ್ಮ ಸೋಲನ್ನು ಅನುಭವಿಸುತ್ತಾ ಸಾಗುತ್ತಾರೆ. ಅವರು ನಾಯಕನಿಗೆ ಶರಣಾಗಿ ಅವನ ಅನುಯಾಯಿಗಳಾಗುತ್ತಾರೆ. ಇಲ್ಲವೇ ಸರ್ವನಾಶವನ್ನು ಅನುಭವಿಸುತ್ತಾರೆ. ಆ ಯುಗದ ಜೀವನ ಧರ್ಮ ಸಾಂಸ್ಕೃತಿಕ ಪರಿಸರ ಜನರ ಆಶೋತ್ತರಗಳು ಈ ಕಾವ್ಯಗಳಲ್ಲಿ ಅಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತವೆ. ಕಾವ್ಯದುದ್ದಕ್ಕೂ ಕಥಾನಾಯಕನೊಬ್ಬನೇ ವಿಜೃಂಬಿತನಾಗಿ ಕಂಡುಬರುತ್ತಾನೆ. ಈವರೆಗೆ ಗುರುತಿಸಲ್ಪಟ್ಟಿರುವ ಜನಪದ ಮಹಾಕಾವ್ಯಗಳಲ್ಲಿ ಮೈಲಾರಲಿಂಗನ ಕಾವ್ಯವೂ ಒಂದಾಗಿದೆ.

ಕುರುಬರು ಹೆಚ್ಚಿನ ಸಂಖ್ಯೆಯಲ್ಲಿ ಮೈಲಾರನನ್ನು ತಮ್ಮ ಆರಾಧ್ಯ ದೈವವನ್ನಾಗಿ ಮಾಡಿಕೊಂಡಿರುವರು. ಭಕ್ತರ ಜೀವನದಲ್ಲಿ ಹಾಸು ಹೊಕ್ಕಾಗಿರುವ ಮೈಲಾರ ದೈವದ ಮಹಾಕಾವ್ಯ ತುಂಬಾ ಕುತೂಹಲಕರವಾದುದು. ಮೈಲಾರನ ದುಷ್ಟ ಸಂಹಾರ, ಶಿಷ್ಟ ರಕ್ಷಣೆ, ಮದುವೆಗಳು, ಪವಾಡಗಳು, ಭಕ್ತರನ್ನು ಮಾಡಿಕೊಳ್ಳಲು ಮಾಡುವ ಪ್ರಯತ್ನಗಳು ಹೀಗೆ ಹಲವಾರು ಅಂಶಗಳನ್ನು ಒಳಗೊಂಡಿರುವ ಸುದೀರ್ಘವಾದ ಈ ಕಾವ್ಯ ಕನ್ನಡದ ಮಹಾಕಾವ್ಯಗಳಲ್ಲೊಂದು (ಡಾ.ಮಂಜುನಾಥ ಬೇವಿನಕಟ್ಟಿ;೧೯೯೭:೧). ಅಂತೆಯೇ ನನ್ನ ಸಂಶೋಧನೆಯ ಕ್ಷೇತ್ರವಾದ ಶ್ರೀ ಮೀನ ಗೊಂದಿ ಮಲ್ಲಯ್ಯನಿಗೆ ಸಂಬಂಧಿಸಿದ ಹಾಡುಗಳನ್ನು ಇರ್ದಾಳ ಗ್ರಾಮದ ಗೊರವರ ಗಂಗಣ್ಣ, ನೆರಣಿಕೆ ಗ್ರಾಮದ ಗಿರಿಮಲ್ಲಪ್ಪ ಮತ್ತು ಅವರ ವೃಂದ, ಪತ್ತಿಕೊಂಡದ ಗೊರವರ ಲಕ್ಷ್ಮಣ್ಣ, ಎಳ್ಳಾರ್ಥಿ ಗ್ರಾಮದ ಮದ್ದಲಿಗೊರವ ತಿಪ್ಪಣ್ಣ, ಅದೇ ಗ್ರಾಮದ ಬಸವಿ ಸುಶೀಲಮ್ಮ, ದ್ಯಾವಲಾಪುರದ ಸಂಕಥಕ ವಗ್ಗರು ಹನುಮಂತಪ್ಪ ಸಂಕಥಿಸಿದ ಮೈಲಾರ ಲಿಂಗನ ಕಾವ್ಯ ಇತ್ಯಾದಿಗಳ ಮೂಲ ಆಕರಗಳೊಂದಿಗೆ ಆದಿ ಮೀನಗುಂದಿ ಮಲ್ಲಯ್ಯನ ಕುರಿತಾದ ಹಾಡುಗಳನ್ನು ಪ್ರಸ್ತುತಪಡಿಸುತ್ತಿದ್ದೇನೆ.

## ಮಲ್ಲಯ್ಯನ ಮಹಿಮೆಯ ಪದಗಳು :

### ಹಾಡು - ೧

ಸ್ವಾಮಿ ಮಲ್ಲಯ್ಯನ ನೋಡಿಯ ಸಿವನು
ದೇವ ಗುಡುದಯ್ಯನ ನೋಡಿಯ ಸಿವನು ॥ ಮು॥

ಸ್ವಾಮಿ ಮಲ್ಲಯ್ಯನ ನೋಡಿರೊ ಸಿವನು
ದೇವ ಗುಡುದಯ್ಯನ ನೋಡಿರೋ ಸಿವನು ॥ಹಿ॥

ಕರಿಯ ನೀಲವನೇರಿ ಕರಿಯ ನೀಲವನೇರಿ
ಮಲ್ಲಯ್ಯ ಬರುತಾನ
ಗಂಗಿ ಮಾಳಮ್ಮನ ಗಂಡಾನ ಸಿವನು
ಹರಸಿ ಮಾಳಮ್ಮನ ಬುರುಸಾನ ಸಿವನು ॥ಮು॥

ಕರಿಯ ನೀಲವನೇರಿ ಕರಿಯ ನೀಲವನೇರಿ
ಮಲ್ಲಯ್ಯ ಬರುತಾರೆ
ಗಂಗಿ ಮಾಳಮ್ಮನ ಗಂಡಾನ ಸಿವನು
ಹರಸಿ ಮಾಳಮ್ಮನ ಬುರುಸಾನ ಸಿವನು ॥ಹಿ॥

ದೇಸ ದೇಸವ ತಿರುಗಿ ದೇಸ ದೇಸವ ತಿರುಗಿ
ಬ್ಯಾಸತ್ತು ನಾ ಬಂದೆ
ಕದವನ್ನು ತೆಗಿಯೇ ಶ್ರೀ ಮಾಳ ಗಂಗ
ಕದವನ್ನು ತೆಗಿಯೇ ಶ್ರೀ ಮಾಳದೇವಿ
ಕದವನ್ನು ತೆಗಿಯೇ ಶ್ರೀ ಮಾಳ ಗಂಗ ॥ಮು॥

ದೇಸ ದೇಸವ ತಿರುಗಿ ದೇಸ ದೇಸವ ತಿರುಗಿ
ಬ್ಯಾಸತ್ತು ನಾಬಂದೆ
ಕದವನ್ನು ತೆಗಿಯೇ ಶ್ರೀ ಮಾಳಗಂಗ
ಕದವನ್ನು ತೆಗಿಯೇ ಶ್ರೀ ಮಾಳದೇವಿ
ಕದವನ್ನು ತೆಗಿಯೇ ಶ್ರೀ ಮಾಳಗಂಗ ॥ಹಿ॥

ಕಲ್ಲು ಪಡಿ ಒಳಗಿರುವ ಕಲ್ಲುಪಡಿ ಒಳಗಿರುವ
ಸ್ವಾಮಿ ಮಲ್ಲಯ್ಯಗ
ಎಲ್ಲಿಂದ ಬಂದೆ ಕುರುಬರ ಹೆಣ್ಣು
ಎಲ್ಲಿಂದ ಬಂದೆ ಕುರುಬರ ಮಗಳು ॥ಮು॥

ಕಲ್ಲು ಪಡಿ ಒಳಗಿರುವ ಕಲ್ಲುಪಡಿ ಒಳಗಿರುವ
ಸ್ವಾಮಿ ಮಲ್ಲಯ್ಯಗ
ಎಲ್ಲಿಂದ ಬಂದೆ ಕುರುಬರ ಹೆಣ್ಣು
ಎಲ್ಲಿಂದ ಬಂದೆ ಕುರುಬರ ಮಗಳು ॥ಹಿ॥

ಕುರುಬರ ಹೆಣ್ಣಿಗೆ ಕುರುಬರ ಮಗಳಿಗೆ
ಕಣ್ಣಿದ್ದು ಮಲ್ಲಯ್ಯ
ಗಂಗಿ ಮಾಳಮ್ಮನ ಗಂಡನ ಶಿವನು
ಹರಸಿ ಮಾಳಮ್ಮನ ಪುರುಸಾನ ಶಿವನು ॥ಮು॥

ಕುರುಬರ ಹೆಣ್ಣಿಗೆ ಕುರುಬರ ಮಗಳಿಗೆ
ಕಣ್ಣಿದ್ದು ಮಲ್ಲಯ್ಯ
ಗಂಗಿ ಮಾಳಮ್ಮನ ಗಂಡನ ಶಿವನು
ಹರಸಿ ಮಾಳಮ್ಮನ ಪುರುಸಾನ ಶಿವನು ॥ಹಿ॥

ಶಂಭು ಶಂಕರ ಶಿವನು ಶಂಭು ಶಂಕರ ಶಿವನು
ತುಂಬ ನಂಬಿದ ನಿನ್ನ
ಪಾದಕ ನೆರಳೈನ ನೋಡಿರೆ ಶಿವನು
ದೇವ ಗುಡುದಯ್ಯನ ನೋಡಿರೆ ಶಿವನು ॥ಮು॥

ಶಂಭು ಶಂಕರ ಶಿವನು ಶಂಭು ಶಂಕರ ಶಿವನು
ತುಂಬ ನಂಬಿದ ನಿನ್ನ
ಪಾದಕ ನೆರಳೈನ ನೋಡಿರೆ ಶಿವನು
ದೇವ ಗುಡುದಯ್ಯನ ನೋಡಿರೆ ಶಿವನು ॥ಹಿ॥

ಶರಣವು ಮಾಡಿದಿರಿ ಶರಣವು ಮಾಡಿದಿರಿ
ಮರಣವು ಕಳಿಯಂಥ
ಮೈಲಾರ ಲಿಂಗೈನ ನೋಡಿರ ಶಿವನು
ದೇವ ಗುಡುದಯ್ಯನ ನೋಡಿರೆ ಶಿವನು ॥ಎ॥

ನೀಡ ಭಕ್ತರ ಮನೆಗೆ ನೀಡ ಭಕ್ತರ ಮನೆಗೆ
ಬೇಡಿ ಉಣ್ಣಲಿ ಬಂದ
ಸ್ವಾಮಿ ಮಲ್ಲಯ್ಯನ ನೋಡಿರ ಶಿವನು
ದೇವ ಗುಡುದಯ್ಯನ ನೋಡಿರ ಶಿವನು ॥ಮು॥

ನೀಡ ಭಕ್ತರ ಮನೆಗೆ ನೀಡ ಭಕ್ತರ
ಬೇಡಿ ಉಣ್ಣಲಿ ಬಂದ
ಸ್ವಾಮಿ ಮಲ್ಲಯ್ಯನ ನೋಡಿರ ಶಿವನು
ದೇವ ಗುಡುದಯ್ಯನ ನೋಡಿರ ಶಿವನು ॥ಹಿ॥
ಹಾಽಽ ಸ್ವಾಮಿ ಮಲ್ಲಯ್ಯನ ನೋಡಿರ ಶಿವನು
ದೇವ ಗುಡುದಯ್ಯನ ನೋಡಿರ ಶಿವನು ॥ಮು॥

ಸ್ವಾಮಿ ಮಲ್ಲಯ್ಯನ ನೋಡಿರ ಶಿವನು
ದೇವ ಗುಡುದಯ್ಯನ ನೋಡಿರ ಶಿವನು ॥ಹಿ॥

ಹೇ ಸಾಂಬಶಿವ ಜಗದೀಶ್ವರ
ಗಣ ಗುಡ್ಡದಯ್ಯ (ಶಿವನ ಪ್ರಮಥರ ಸಮುಹದ ಗುಡ್ಡದ ಮಲ್ಲಯ್ಯ)
ಮೈಲಾರಲಿಂಗ
ಮಲ್ಲಿಕಾರ್ಜುನ
ಬಹುಪರಾಕ್
ಏಳುಕೋಟಿ... ಏಳುಕೋಟಿ...

## ಹಾಡು - ೨

ಕಡೆಯ ಶಿವು ಬಾರದ ಒಡೆಯ ಮಲ್ಲಯ್ಯಗೆ
ಕಾಯಿ ಒಡೆದು ಕೈಯ್ಯಾ । ಏ । ಮುಗದೇವೋ
ಲಿಂಗವೇನೋ
ಲಿಂಗವೇನೋ ಶರಣು ಬಂದನೇಳೋ.

ಒಂದೊರುಸಕ್ಕೆ ಬರುವುದು ಮಾರ್ನಮಬ್ಬ
ಕಾಯಿಕೋಲು । ಏ । ಬೆಳಕೀಲೆ ಲಿಂಗವೇನೋss
ಲಿಂಗವೇನೊ ಶರಣು ಬಂದನೇಳೋ

ಬನ್ನಿಯ । ಏ । ಬರುವಾಗ ಮಲ್ಲಯ್ಯ
ಖಂಡುಗ ಬಂಢಾರ । ಏ । ಸುರಿದಾನ ಲಿಂಗವೇನೋss
ಲಿಂಗವೇನೋ ಶರಣು ಬಂದನೇಳೋ.

ವಂಟ ನನ ಸ್ವಾಮಿ ಎಳೆಮೀಸೆ ತಿರುವೂತ ( ಏರು)
ಗಗ್ಗಾರಿ-ಕೋಲೊಂದ । ಏ । ಸುರಿದಾನ ಲಿಂಗವೇನೋss
ಲಿಂಗವೇನೋ ಶರಣು ಬಂದನೇಳೋ.

ವಂಟಾನೆ ನನ ಸ್ವಾಮಿ ಎಳೆ ಮೀಸೆ ತಿರುವೂತ
ಗಗ್ಗಾರಿ ಕೋಲೋ । ಏ । ಕುಣಿಸ್ಯಾನೋ ಲಿಂಗವೇನೋss
ಲಿಂಗವೇನೋ ಶರಣು ಬಂದಾನೇಳೋ.

ಆರು ಮಣದ ಗಾಂಜ ಮೂರು ಬಂಡೆ ಮಾಡಿ
ಒಂದೇ ಉಸಿರಿಲೇ । ಏ । ಎಳೆದಾನೋ ಲಿಂಗವೇನೋss
ಲಿಂಗವೇನೊ ಶರಣ ಬಂದನೇಳೋ.

ಆss ಕಗ್ಗಲ್ಲು ನುಗ್ಯಾಗೆ ಕುಗ್ಗೀಲೆ ಮರ ಮುರಿ(ಳಿ)ದು
ವಗ್ಗರು ಬರುವುದು ಏಳೋ ಹೊತ್ತಕ್ಕೆ ಲಿಂಗವೇನೋss
ಲಿಂಗವೇನೋ ಶರಣು ಬಂದಾನೇಳೋ.

ವಗ್ಗರು ಬರುವುದು ರಭಸಿಂಗೆ ಮಲ್ಲಯ್ಯ
ಕಬ್ಬಿಣ ಹೊರಬಾಣೆ । ಹೇ। ತುಂಡೋ ತುಂಡೋ ಲಿಂಗವೇನೋss
ಲಿಂಗವೇನೋ ಶರಣು ಬಂದನೇಳೋ.

ಆss ಹಾಕಡೆ ನೆರಣಿಕೆ ಈ ಕಡೆ ಸುಳುವಾಯಿ
ನಟ್ಟ ನಡುವೈತೋ ಈ ದೇವರಗುಡ್ಡ ಲಿಂಗವೇನೋss
ಲಿಂಗವೇನೋ ಶರಣು ಬಂದನೇಳೋ.

ಹಾss ನಟ್ಟನಿ ನಡುವೈತೆ ನಮ್ಮ ದೇವರಗುಡ್ಡ
ಈಗ ಬರ್‍ತಾನಲ್ಲ ಈ ಗಿರಿಮ್ಯಾಲೆ ಲಿಂಗವೇನೋss
ಲಿಂಗವೇನೊ ಶರಣು ಬಂದನೇಳೋ.

ಆ ಗಿರಿಯ ಈ ಗಿರಿಯ ಸೂರ್ಯ ಚಂದ್ರರ ಗಿರಿಯ
ಏಳೆಂಟು ಗಿರಿಯ । ಏ । ಮೈಲಾರ ಲಿಂಗವೇನೋss
ಲಿಂಗವೇನೋ ಶರಣು ಬಂದನೇಳೋ.

ರನ್ನದ ಕುದುರಿಗೆ ಚಿನ್ನದ ಮಗರಬ್ಬ (ಮಕರಂಧ)
ಗುಡ್ಡದ ಮಲ್ಲಯ್ಯ ಹೇs ಹೊರವಂಟಾ ಲಿಂಗವೇನೋss
ಲಿಂಗವೇನೊ ಶರಣು ಬಂದಾನೇಳೋ.

ಹತ್ತಿಲಿ ಮರಮಾಡಿ ಕೆತ್ತಿಲಿ ಡೋಣಿ ಮಾಡಿ (ಏರು)
ಹಾಲು ಉಣ್ಣುವ ಡೋಣಿಗೆ ನೀಡಿ ಲಿಂಗವೇನೋss
ಲಿಂಗವೇನೊ ಶರಣು ಬಂದಾನೇಳೋ ॥

ಗಂಗೀಯ ನೀ ಕೇಳೆ ಗಂಗ ಮಲ್ಲಿಗೆ ಕೇಳೆ
ತುಂಗ ಭದ್ರ । ಏ । ಹೊಳೆ ಕೇಳೆ ಲಿಂಗವೇನೋss
ಲಿಂಗವೇನೊ ಶರಣ ಬಂದನೇಳೋ.

ಗುಡ್ಡದ ವಾರೀಲೆ ಗುಲಗುಂಜಧ ಮರಹುಟ್ಟಿ
ಗುದ್ಯಾಡುತಾವೋ । ಏ । ಹುಲಿ ಕರಡಿ ಲಿಂಗವೇನೋ‌ऽऽ
ಲಿಂಗವೇನೊ ಶರಣು ಬಂದನೇಳೋ.

ಗುಡ್ಡದ ವಾರೀಲೆ ಗಂಗೀಲೆ ಮಾಳಮ್ಮ
ಜಿಡ್ಡೆನಾರುತಾಳೆ । ಏ । ಕುರುವುತಗೀ ಲಿಂಗವೇನೋऽऽ
ಲಿಂಗವೇನೊ ಶರಣು ಬಂದನೇಳೋ.

ಹಾ ಕೈಜಿಡ್ಡೆऽऽ ಕುರುವೂತಿ ಮೈ ಜಿಡ್ಡೆ ಕುರವೂತಿ
ಮಣ್ಣೆಲ್ಲಾ ಜಿಡ್ಡು । ಏ । ನಾರುತಾವೋ ಲಿಂಗವೇನೋऽऽ
ಲಿಂಗವೇನೊ ಶರಣು ಬಂದನೇಳೋ.

ಮಂತ್ರಗಾರ ಶಿವನು ಮಂತ್ರಗಾರ
ಗೌಡಿಕಾರ ಮಲ್ಲ ಮೋಡಿಕಾರ ಮಲ್ಲ
ನಾಡ ವಿದ್ಯೆಲಿ । ಏ । ಮುದಿಮಲ್ಲ ಲಿಂಗವೇನೋऽऽ
ಲಿಂಗವೆನೊ ಶರಣು ಬಂದನೇಳೋ.

ನೀಲಯ್ಯ ನಿತ ಸಾತ ಅರಿಯದವರಿಗೆ ಮೋಸ
ಖಂಡೇ ನಡೆದವ್ರಿಗೆ । ಏ । ಕೈಲಾಸ ಲಿಂಗವೇನೋऽऽ
ಲಿಂಗವೇನೊ ಶರಣು ಬಂದನೇಳೋ.

ಹೇऽऽ ಖಂಡೇನೆ ನಡೆದವ್ರಿಗೆ ಕೈಲಾಸಣ್ಣ ಗುರಿಯು
ವಲ್ಲೆನೆಂದವ್ರಿಗೆ । ಏ । ವನವಾಸ ಲಿಂಗವೇನೋऽऽ
ಲಿಂಗವೇನೊ ಶರಣ ಬಂದನೇಳೋ.

ಹಾ ऽऽ ಬಾಳೀಯ ಬಲಕೊತ್ತಿ ನಿಂಬಿಯ ಎಡಕೊತ್ತಿ
ನಟ್ಟ ನಡುವೈತೋ । ಏ । ನಾಗರ ಸಂಪೋ ಲಿಂಗವೇನೋऽऽ
ಲಿಂಗವೇನೊ ಶರಣು ಬಂದನೇಳೋ.

ಹಾss  ನಟ್ಟನೆ ನಡಿವೈತೆ ನಾಗಾರಿ ಸಂಪಂಗಿ
ಅಲ್ಲೈತೋ ನಮ್ಮ । ಏ । ಏರುಮಾನಿ ಲಿಂಗವೇನೋss
ಲಿಂಗವೇನೊ ಶರಣ ಬಂದನೇಳೋ.

ಕೊಟ್ಟು ನೋಡುವನಯ್ಯ ಕೊಡದೆ ನೋಡುವನಯ್ಯ
ಮಾಯವುತಾನಲ್ಲ । ಏ । ಮಲ್ಲಯ್ಯ ಲಿಂಗವೇನೋss
ಲಿಂಗವೇನೊ ಶರಣು ಬಂದನೇಳೋ.

ಬಾವುಳ್ಳ ಭಗತರ್ನ ಬಾಗಾಲಿ ಕಾಯವ್ನು
ಬಗತಿ ನೋಡಗಿವ್ರೋ ಈ ಗುಣ ನೋಡೋ ಲಿಂಗವೇನೋss
ಲಿಂಗವೇನೋ ಶರಣು ಬಂದನೇಳೋ.

ಖಜ್ಜಾರು ಕಾಯಿಕೋಲು ನಡುವೆ  ಮಜ್ಜನಬಾಯಿ
ಸಿದ್ದರೈದಾರ । ಏ । ಸಿಡಿಗಿನಾಳ ಲಿಂಗವೇನೋss
ಲಿಂಗವೇನೊ ಶರಣು ಬಂದನೇಳೋ.

ಸಿದ್ಧಾರು ಹೈದಾರೆ ಸಿಡಿನಾಳು ಬಯಿಲೊಳಗ
ಗಟ್ಟಿಸಿಗುಂಡು । ಏ । ಒಡುದಂಗೋ ಲಿಂಗವೇನೋss
ಲಿಂಗವೇನೊ ಶರಣು ಬಂದನೇಳೋ.

ಕಡಿಯೋಸಿ ಬಾರಾದ ಒಡೆಯ ಮಲ್ಲಯ್ಯಗೆ
ಕಾಯಿ ಒಡೆದು  ಕೈಯ್ಯಾ । ಏ । ಮುಗದೇವ್ರೋ ಲಿಂಗವೇನೋss
ಲಿಂಗವೇನೊ ಶರಣ ಬಂದನೇಳೋ.

ಸಾಂಬಶಿವ ಹೊನ್ನು ಮೈಲಾರ ಲಿಂಗ
ಖಂಡುಗ ಬಂಢಾರದಯ್ಯ
ಕಾರಣಿಕದಯ್ಯ
ಯಾವ ಕಲ್ಲಿಗೆ ಕೊಟ್ರ ದೇವಕಲ್ಲಿಗೆ ಕೊಡೋ
ನೀಡಿದವರಿಗೆ ಘನ ಸಂಪತ್ತು ಕೊಡೋ
ಬೇಡಿದ ಭಾಗ್ಯ ಕೊಡೋ

## ಹಾಡು - ೨

ಇಂದು ನಿಮ್ಮ ನಿಗೆ ಸ್ವಾಮಿ ಬಂದ
ಮೈಲಾರ ಲಿಂಗ
ಇಂದು ನಿಮ್ಮ ನಿಗೆ ಏಳುಕೋಟಿ ಬಂದ ॥ಮು॥

ಇಂದು ನಿಮ್ಮ ನಿಗೆ ಸ್ವಾಮಿ ಬಂದ
ಮೈಲಾರ ಲಿಂಗ
ಇಂದು ನಿಮ್ಮ ನಿಗೆ ಏಳುಕೋಟಿ ಬಂದ ॥ಹಿ॥

ಹಾಽಽ ಮದಿಯ ಕಾಲದಲಿ ಉದ್ದಾನ ಸ್ವಾಮಿ
ಬ್ರಾಂತಿ ಕಾಲದಲಿ ಹೊರಟಾನ ಶಿವನು
ಕರಿಯಾಲಕ್ಕೆ ಹೋಗಿ ಮೂರುತ ಮಾಡಿ
ಬೇಗನೆ ಪಡೆಯಲಿ ಚಂದ್ರಮ ಸೂಡಿ
ಹಾಲು ಹಣ್ಣು ಡೋಣಿಗೆ ನೀಡಿ
ತಿಂದು ನಿಮ್ಮ ನಿಗೆ ಸ್ವಾಮಿ ಬಂದ । ಆಯಿತ್ವಾರದಯ್ಯ
ಇಂದು ನಿಮ್ಮ ನಿಗೆ ಮಲ್ಲಯ್ಯ ಬಂದ ॥ಮು॥

ಹಾಽಽ ಮದಿಯ ಕಾಲದ ಎದ್ದಾನ ಸ್ವಾಮಿ
ಭ್ರಾಂತಿ ಕಾಲದಲಿ ಹೊರಟಾನ ಶಿವನು
ಕರಿಯಾಲಕ್ಕೆ ಹೋಗಿ ಮಾರುತ ಮಾಡಿ
ಬೇಗನೆ ಪಡೆಯಲಿ ಚಂದ್ರಮ ಸೂಡಿ
ಹಾಲು ಹಣ್ಣು ಡೋಣಿಗೆ ನೀಡಿ
ತಿಂದು ನಿಮ್ಮ ನಿಗೆ ಸ್ವಾಮಿ ಬಂದ । ಆಯಿತ್ವಾರದಯ್ಯ
ಇಂದು ನಿಮ್ಮ ನಿಗೆ ಮಲ್ಲಯ್ಯ ಬಂದ ॥ಹಿ॥

ಹೇ ಮುಪ್ಪನು ಮುದುಕಿನ ಬಿಡಲೇಳೆಂದ
ಬಾಗಿದ ಮುದುಕಿನ ತರುತೀನಂದ
ಅಂಗನಾಡಿ ಶಿವ ಕಾಡೇನಂದ
ಅಂಗನಮರಿ ಮಣಿ ಕುಣಿಸೇಯನೆಂದ
ಹಾಽಽ ದೃಢವಾಗಿ ನಮಗೆ ನಡುಕಳ್ಯಂದ
ಬೇಡಿದ ಭಾಗ್ಯವೇ ಕೊಡತೀನಂದ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಮೈಲಾರ ಲಿಂಗ
ಇಂದು ನಿಮ್ಮನಿಗೆ ಮಲ್ಲಯ್ಯ ಬಂದ ।।ಮು।।

ಹೇ ಮುಪ್ಪನು ಮುದುಕಿನ ಬಿಡಲೇಳೆಂದ
ಬಾಗಿದ ಮುದುಕಿನ ತರುತೀನಂದ
ಅಂಗನಾಡಿ ಶಿವ ಕಾಡೇನಂದ
ಅಂಗನಮರಿ ಮಣಿ ಕುಣಿಸೇಯನೆಂದ
ಹಾಽಽ ದೃಢವಾಗಿ ನಮಗೆ ನಡುಕಳ್ಯಂದ
ಬೇಡಿದ ಭಾಗ್ಯವೇ ಕೊಡತೀನಂದ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಮೈಲಾರಲಿಂಗ
ಇಂದು ನಿಮ್ಮನಿಗೆ ಮಲ್ಲಯ್ಯ ಬಂದ ।।ಹಿ।।

ಹೇ ಕಣ್ಣಿಟ್ಟವುಳ ಬಿಡಲೇಳಂದ
ಕಣ್ಣಿಟ್ಟವಳ ತರುತೀನಂದ
ಜಾಟಿ ಬತ್ತಳ ಬರುಸೇನಂದ
ಪೂರ ಗಿರಿನಿಗೆ ಇಳಿಸೇನಂದ
ಅಂಗನಾಡಿ ಶಿವ ಕಾಡೇನಂದ
ಅಂಗನ ಮರಿ ಮಾಡಿ ಕುಣಿಸೇನಂದ
ಎರಡ ಉಳ್ಳಕೆ ಉಳ್ಳಸೇನಂದ
ದುಡಿಯೋ ಮಗನಾ ಕೊಡಲೇನಂದಾ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಮೈಲಾರ ಲಿಂಗ
ಇಂದು ನಿಮ್ಮನಿಗೆ ಗುಡುದಯ್ಯ ಬಂದ ।।ಮು।।

ಹೇ ಕಣ್ಣಿಟ್ಟವುಳ ಬಿಡಲೇಳೆಂದ
ಕಣ್ಣಿಟ್ಟವುಳ ತರುತೀನಂದ
ಜಾಟಿ ಬತ್ತಲ ಬರುಸೇನಂದ
ಪೂರ ಗಿರಿನಿಗೆ ಇಳಿಸೇನಂದ
ಅಂಗನಾಡಿ ಶಿವ ಕಾಡೇನಂದ
ಅಂಗನ ಮರಿ ಮಾಡಿ ಕುಣಿಸೇನಂದ
ಎರಡ ಉಳ್ಳಕೆ ಉಳ್ಳಿಸೇನಂದ
ದುಡಿಯೋ ಮಗುನಾ ಕೊಡಲೇನಂದಾ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಮೈಲಾರ ಲಿಂಗ
ಇಂದು ನಿಮ್ಮನಿಗೆ ಗುಡುದಯ್ಯ ಬಂದ ॥ಹಿ॥

ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಚಂದವಾಗಿ ಅವರ ಇಳೇವ ನೀಡಿ
ಏಲಕ್ಕಿ ಲಾವಂಗ ಜಾಜಿಕಾಯಿ ಸೋಡಿ
ನಾಲರ ಗೊರವರ ಕೂಡಿಸೋಣ ನಡಿ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಆಯಿತ್ವಾರದಯ್ಯ
ಇಂದು ನಿಮ್ಮನಿಗೆ ಏಳುಕೋಟೆ ಬಂದ ॥ಮು॥

ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಚಂದವಾಗಿ ಅವರ ಇಳೇವ ನೀಡಿ
ಏಲಕ್ಕಿ ಲಾವಂಗ ಜಾಜಿಕಾಯಿ ಸೋಡಿ
ನಾಲರ ಗೊರವರ ಕೂಡಿಸೋಣ ನಡಿ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಆಯಿತ್ವಾರದಯ್ಯ
ಇಂದು ನಿಮ್ಮನಿಗೆ ಏಳುಕೋಟಿ ಬಂದ ॥ಹಿ॥

ಹಾಸ್ಯ ಮಾಡಿದವರ್ನ ಕರಿಸೇನಂದ
ಹಾಸ್ಯ ಮಾಡಿದವರ್ನ ನಿಲಿಸೇನಂದ
ಮೀಸೆ ಗಡ್ಡವು ಬೋಳಿಸೇನಂದ
ದಾಸನ ಮಾಡಿ ಸಲುವೇನೆಂದ
ದೃಢವಾಗಿ ನಮಗೆ ನೆಡುಕಳ್ಳಂದ
ದೀಡ ನಮಸ್ಕಾರ ಒಂದಾಚೆನೆಂದ
ಇಂದು ನಿಮ್ಮ ನಿಗೆ ಸ್ವಾಮಿ ಬಂದ । ಮೈಲಾರಲಿಂಗ
ಇಂದು ನಿಮ್ಮ ನಿಗೆ ಮಾದೇವ ಬಂದ ॥ಮು॥

ಹಾಸ್ಯ ಮಾಡಿದವರ್ನ ಕರಿಸೇನಂದ
ಹಾಸ್ಯ ಮಾಡಿದವರ್ನ ನಿಲಿಸೇನಂದ
ಮೀಸೆ ಗಡ್ಡವು ಬೊಳಿಸೇನಂದ
ದಾಸನ ಮಾಡಿ ಸಲುವೇನೆಂದ
ದೃಢವಾಗಿ ನಮಗೆ ನೆಡುಕಳ್ಳೆಂದ
ದೀಡನಮಸ್ಕಾರ ಒಂದಾಚೆನೆಂದ
ಇಂದು ನಿಮ್ಮ ನಿಗೆ ಸ್ವಾಮಿ ಬಂದ । ಮೈಲಾರಲಿಂಗ
ಇಂದು ನಿಮ್ಮ ನಿಗೆ ಮಾದೇವ ಬಂದ ॥ಹಿ॥

ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಚಂದವಾಗಿ ತಂದಿಳಿವ್ಯಾರ ಬಿಲ್ಲು
ಚಂದವಾಗಿ ತಂದಿಟ್ಟರ ಬಿಲ್ಲು
ಆರೈಕಾಂತಿ ಮೇಲಿದ ಬಿಲ್ಲು
ಹೂವಿನ ಬಾಣ ಬಿಟ್ಟರಲ್ಲಿ ಜನ
ಕೇಳಿರಿ ಸೊಲ್ಲೇss
ಇಂದು ನಿಮ್ಮ ನಿಗೆ ಸ್ವಾಮಿ ಬಂದ । ಆನಂದ ದಿಂದ
ಇಂದು ನಿಮ್ಮ ನಿಗೆ ಗುಡುದಯ್ಯ ಬಂದ ॥ಮು॥

ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಸೂರಿಯಂಥ ಪ್ರಾಣಿಯಂಥ ನಾರಿಯರ ಕೂಡಿ
ಚಂದವಾಗಿ ತಂದಿಳಿವ್ಯಾರ ಬಿಲ್ಲು
ಅರೈಕಾಂತಿ ಮೇಲಿದ ಬಿಲ್ಲು
ಹೂವಿನ ಬಾಣ ಬಿಟ್ಟರಲ್ಲಿ ಜನ
ಕೇಳಿರಿ ಸೊಲ್ಲೇ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಆನಂದದಿಂದ
ಇಂದು ನಿಮ್ಮನಿಗೆ ಗುಡುದಯ್ಯ ಬಂದ ॥ಹಿ॥

ಹಾಲಗಿರಿಯು ಮೇಲಾದ ಗಿರಿಯು
ನೀಲಗಿರಿಯು ಆಲಾದ ಗಿರಿಯು
ಒದ್ದಳಾಟಕ ಲತುಕಳ ಗಿರಿಯು
ಬಲಕ ನೋಡಿದರೆ ಬಂಗಾರ ಗಿರಿಯು
ನೀನೆ ನೋಡು ಸಣ್ಮುಖ ಸಿವನೇ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಮೈಲಾರ ಲಿಂಗ
ಇಂದು ನಿಮ್ಮನಿಗೆ ಏಳುಕೋಟಿ ಬಂದ ॥ಹಿ॥.

ಹಾಲಗಿರಿಯು ಮೇಲಾದ ಗಿರಿಯು
ನೀಲಗಿರಿಯು ಆಲಾದ ಗಿರಿಯು
ಒದ್ದಳಾಟಕ ಲತುಕಳ ಗಿರಿಯು
ಬಲಕ ನೋಡಿದರೆ ಬಂಗಾರ ಗಿರಿಯು
ನೀನೆ ನೋಡು ಸಣ್ಮುಖ ಸಿವನೇ
ಇಂದು ನಿಮ್ಮನಿಗೆ ಸ್ವಾಮಿ ಬಂದ । ಮೈಲಾರ ಲಿಂಗ
ಇಂದು ನಿಮ್ಮನಿಗೆ ಏಳುಕೋಟಿ ಬಂದ ॥ಮು॥.

## ಹಾಡು - ೪

ಅಡವಿಗೆ ದೊಡ್ಡ ಗುಡ್ಡದು ರಾಯನ
ಸೆಡೆಗರ ನೋಡು ಮೇಲ್ ಮನಪುರ
ಶ್ರೀ ಸೆಡೆಗರ ನೋಡು ಮೇಲ್ ಮನಪುರ
ಮರಣಿ ಪಂಥಮಾ ಪ್ರೀತಿಗಾರನವ
ಮುದಿಯ ಮಲ್ಲ ಮೈಲರುನೇ ॥ಮು॥

ಅಡವಿಗೆ ದೊಡ್ಡ ಗುಡ್ಡದು ರಾಯನ
ಸೆಡೆಗರ ನೋಡು ಮೇಲ್ ಮನಪುರ
ಶ್ರೀ ಸೆಡಗರ ನೋಡು ಮೇಲ್ ಮನಪುರ
ಮರಗೆ ಪಂಥಮಾ ಪ್ರೀತಿಗಾರನವ
ಮುದಿಯ ಮಲ್ಲ ಮೈಲರುನೇ ॥ಹಿ॥

ಹೇ ಒಂದಕ್ಕೊಂದು ನೆಗಳ ತೆಕ್ಕುಲಾಡುತವೆ
ಲೆಕ್ಕವಿಲ್ಲದೆ ಬಲ್ ಹರೋ ಹರೋ ॥
ಕಣ್ಣಿಗೆ ಕಾಣುತ ಕರಗುತಲೈತೆಯ
ಗುಡ್ಡದು ಮಲ್ಲನ ಜಾತರಿ ॥ಮು॥

ಒಂದಕ್ಕೊಂದು ನೆಗಳ ತೆಕ್ಕುಲಾಡುತವೆ
ಲೆಕ್ಕವಿಲ್ಲದೆ ಬಲ್ ಹರೋ ಹರೋ ॥
ಕಣ್ಣಿಗೆ ಕಾಣುತ ಕರಗುತಲೈತೆಯ
ಗುಡ್ಡದು ಮಲ್ಲನ ಜಾತರಿ ॥ಹಿ॥
ಮರೆತು ತಂದೀನವ್ವ ದೂರಂಗಿ ಬಾಲೆನ
ಗಂಗಿ ಮಾಳವ್ವನ ಸರೀ ಸರೀ
ನೋಡೆಯಿವ್ನ ಬಲ್ಲಿಯಾ ಎಂಥವ್ನಮಲ್ಲಯ್ಯ
ಯಾರಿಗೂ ಸಿಗಲಿಲ್ಲ ಇವ್ನ ನೆಲೆಯ ॥ಮು॥

ಮರೆತು ತಂದೀನವ್ವ ದೂರಂಗಿ ಬಾಲಿನ
ಗಂಗಿ ಮಾಳವ್ವನ ಸರೀ ಸರೀ
ನೋಡೆಯಿವ್ನ ಮಲ್ಲಯ್ಯ ಎಂಥವ್ನ ಮಲ್ಲಯ್ಯ
ಯಾರಿಗೂ ಸಿಗಲಿಲ್ಲ ಇವ್ನ ನೆಲೆಯಾ ॥ಹಿ॥

ಹೇss ಹತ್ಯಾನ ಕುದುರಿ ತಿರಿಗ್ಯಾನ ಶ್ರೀಹರಿ
ಟಂಕಣ ಮೆಲುಡಿಯ ಮೆರಿ ಮೆರಿ
ಶಿವಾನ ಕುದುರಿ ತಿರಿಗ್ಯಾನ ಶ್ರೀಹರಿ
ಟಂಕಣ ಮೆಲುಡಿಯ ಮೆರಿ ಮೆರಿ
ನಮ್ಮ ಶಿವಾನ ಕುದುರಿ ಬೆದರೀತಯ್ಯ
ಗಗನಕ್ಕೆ ಕಾಲ್ ಕೆದರೆ ॥ ಮು॥

ಹತ್ಯನ ಕುದುರಿ ತಿರಿಗ್ಯಾನ ಶ್ರೀಹರಿ
ಟಂಕಣ ಮೆಲ್ ಮೆಲ್ ಮೆರಿ ಮೆರಿ
ನಮ್ಮ ಶಿವಾನ ಕುದುರಿ ತಿರಿವ್ಯಾನ ಶ್ರೀಹರಿ
ಟಂಕಣ ಮೆಲ್ ಮೆಲ್ ಮೆರಿ ಮೆರಿ
ನಮ್ಮ ಶಿವಾನ ಕುದುರಿ ಬೆದರೀತಯ್ಯ
ಗಗನಕ್ಕೆ ಕಾಲು ಕೆದರಿ ॥ ॥ಹಿ॥

ಹೇ ದಪ್ಪಣ ಸರಪಣಿ ಕೈವಳಗಿಡಕೊಂಡು
ತುಂಡು ಮಾಡುವರು ಗರೂ ಹರೂ ॥
ಯಾವ ಗೊರವರು ಎಷ್ಟು ಹೇಳಲಿ
ಗುಡ್ಡದು ಮಲ್ಲನ ಗವುತಾರೆ॥ ॥ಮು॥
ಕಬ್ಬಿಣ ಸರಪಣಿ ಕೈವಳಗಿಡಕೊಂಡು
ತುಂಡು ಮಾಡುವರು ಗರೂ ಹರೂ ॥
ಯಾವ ಗೊರವರು ಎಷ್ಟು ಹೇಳಲಿ
ಗುಡ್ಡದು ಮಲ್ಲನ ಹವುತಾರ ॥ ॥ಹಿ॥

ಹೇಽಽ ಕುಚಲಿನ ಹಂಗಿ ಕುಚಲಿನ ಟೊಪ್ಪಿಗಿ
ನಡುವು ಕಟ್ಟುಗಳ ಬಿಗಿ ಬಿಗಿ ॥
ಯಾವ ಗೊರವರು ಎಷ್ಟು ಹೇಳಲಿ
ಗುಡ್ಡದು ಮಲ್ಲನ ಜಾತ್ರೆಯ ಒಳಗೆ ॥ಮು॥

ಕುಚಲಿನ ಹಂಗಿ ಕುಚಲಿನ ಟೊಪ್ಪಿಗೆ
ನಡುವು ಕಟ್ಟುಗಳ ಬಿಗಿ ಬಿಗಿ॥
ಯಾವ ಗೊರವರು ಎಷ್ಟು ಹೇಳಲಿ
ಗುಡ್ಡದು ಮಲ್ಲನ ಜಾತ್ರೆಯ ಒಳಗೆ ॥ ॥ಹಿ॥

ಹೇಽಽ ಭಜನಿಯ ಕೂಟಕೆ ಕಾಲ್ವಳು ಒಡುಕಿಯ
ರಸೆ ಕಡಗ ಬಾಳ ಹರೂ ಹರೂ .
ಹಾಸನ ಕೂಟಕೆ ಕಾಲ್ವಳ ಬಡಿಕಿಯ
ರಸೆ ಕಡಗಳ ಬಾಳ ಹರೂ ಹರೂ
ಮೀನಗಂಡಿಯೊಳ ಮಿಡಿಯ ಪೂಣಿಸಿ
ಎಳೆಯುತನವ್ ಸರ್ ಹರೂ ಹರ ॥ ॥ಮು॥

ಭಜನಿಯ ಕೂಟಕೆ ಕಾಲ್ವಳು ಬಡಿಕೆಗೆ
ರಸೆ ಕಡಗ ಬಾಳ ಹರೂ ಹರೂ
ಹಾಸನ ಕೂಟಕೆ ಕಾಲ್ವಳು ಬಡಿಕೆಗೆ
ರಸೆ ಕಡಗ ಬಾಳ ಹರೂ ಹರೂ
ಮೀನಗಂಡಿಯೊಳ ಮಿಡಿಯ ಪೂಣಿಸಿ
ಎಳೆಯುತನವ್ ಸರ್ ಹರೂ ಹರ॥ ॥ಹಿ॥

ಹೇಽಽ ಅಡವಿಗೆ ದೊಡ್ಡ ಗುಡ್ಡದು ರಾಯನ
ಸೆಡಗರ ನೋಡು ಮೆಲು ಮನಪುರ
ಸಯ್ ಸೆಡುಗರ ನೋಡು ಮೆಲು ಮನಪುರ
ಮರಣಿ ಪಂಥಮಾ ಪ್ರೀತಿಗಾರನವ
ಮುದಿಯ ಮಲ್ಲ ಮೈಲರುನೇ ॥ಮು॥

ಆಡವಿಗೆ ದೊಡ್ಡ ಗುಡ್ಡದು ರಾಯನ
ಸೆಡುಗರ ನೋಡು ಮಲ್ ಮನಪುರ
ಸೈ ಸೆಡುಗರ ನೋಡು ಮೆಲ್ ಮನಪುರ
ಮರಣಿ ಪಂಥಮಾ ಪ್ರೀತಿಗಾರನವ
ಮುದಿಯ ಮಲ್ಲ ಮೈಲಾರನೇ ॥ಹಿ॥

## ಹಾಡು - ೫

ಹಾ ದೂರಿತ್ತವೀಯ ದೂರವು ಮಾಡಯ್ಯ
ಭಂಡಾರ ದೇವಾsss
ದೂರಿತ್ತವೀಯ ದೂರವು ಮಾಡಯ್ಯ ॥ಮು॥

ದೂರಿತ್ತವೀಯ ದೂರವು ಮಾಡಯ್ಯ
ಭಂಡಾರ ದೇವಾsss
ದೂರಿತ್ತವೀಯ ದೂರವು ಮಾಡಯ್ಯ ॥ಹಿ॥

ಹಾsss ಬಂದ ದುರಿತವು ಬಂದ ದುರಿತವು
ಹಿಂದುಳಿ ಕಳಿಯೊ ಮನೆಯಲಿ ಬಂದು
ನೀನೇ ಮೆರಿಯೊsss
ಸರ್ವ ಜೀವಕ ನೀನೊಬ್ಬ ದೊರಿಯು
ದೂರಿತ್ತವೀಯ ದೂರವು ಮಾಡಯ್ಯ । ಆಯಿತ್ವಾರದಯ್ಯಾsss
ದೂರಿತ್ತವೀಯ ದೂರವು ಮಾಡಯ್ಯ ॥ಮು॥

ಬಂದ ದೂರಿತವೆ ಬಂದ ದೂರಿತವೆ
ಹಿಂದುಳಿ ಕಳೆದು ಮನಿಯಲಿ ಬಂದು
ನೀನೇ ಮೆರಿದೆಯೋss
ಸರ್ವ ಜೀವಕ್ಕ ನೀನೊಬ್ಬ ದೊರಿಯು
ದೂರಿತ್ತವೀಯ ದೂರವು ಮಾಡಯ್ಯ
ಆಯಿತ್ವಾರದಯ್ಯಾsss
ದೂರಿತ್ತವೀಯ ದೂರವು ಮಾಡಯ್ಯ ॥ಹಿ॥

ಹಾss ಏನು ಹೇಳಲಿ ನಿನ ಬಿರುದುsss
ನೋಡಲಂದರದು ಸುತಲ ಜಾತೀಯ ಮೆರೆಸಿರಿಯಾ
ಸೊಗಸು ಮಾಡಿದಿಯಾ ಗಂಡ ಹೆಂಡರುನ ಕುಣಿಸಿದೆಯಾss
ಉತ್ತಿಗೆ ಮೆರೆಸಿದಿಯಾ । ಬಿಸಿಯ ಪಾವಡಾ ಹೊದ್ದು ಮದುರಿನ
ಮುತ್ತಿನ ಗದ್ದಿಗೆ ಮುಂದನಂದಚ್ಚಳು
ಹತ್ತು ಮುತ್ತೈದೆರು ಆರುತಿ ಬೆಳಗುತ
ನಿಜವೈ ಗಣನ ಜೈ ಜೈ ಎನುತ
ದೂರಿತ್ತವೀಯ ದೂರವು ಮಾಡಯ್ಯ
ಭಂಡಾರ ದೇವಾsss
ದೂರಿತ್ತವೀಯ ದೂರವು ಮಾಡಯ್ಯ ॥ಮು॥

ಹಾss ಏನು ಹೇಳಲಿ ನಿನ ಬಿರುದುsss
ನೋಡಲಂದರದು ಸುತಲ ಜಾತೀsಯ ಮೆರೆಸಿದಿಯಾ
ಸೊಗಸು ಮಾಡಿದಿಯಾ ಗಂಡ ಹೆಂಡಿರುನ ಕುಣಿಸಿದೆಯಾsss
ಉತ್ತಿ ಮೆರೆಸಿದಿಯಾ । ಬಿಸಿಯ ಪಾವಡಾ ಹೊದ್ದು ಮದುರಿನ
ಮುತ್ತಿನ ಗದ್ದಿಗೆ ಮುಂದನಂದಚ್ಚಳು
ಹತ್ತು ಮುತ್ತೈದೆರು ಆರುತಿ ಬೆಳಗುತ
ನಿಜವೈ ಗಣನ ಜೈ ಜೈ ಎನುತ
ದೂರಿತ್ತವೀಯ ದೂರವು ಮಾಡಯ್ಯ
ಭಂಡಾರ ದೇವಾsss
ದೂರಿತ್ತವೀಯ ದೂರವು ಮಾಡಯ್ಯ ॥ಹಿ॥

ಹಾss ಎಡಬಲದಲ್ಲಿಬ್ಬರು ಸತಿಯವರುsss
ನಡುವೆ ಕುಳಿತಿರಲು ಗಂಧ ಕಸ್ತೂರಿಯ ಧರಿಸುವರು
ಹಾಸಿಗೆ ಹಾಸುವರು । ಲೇಸಾದ ಪುಷ್ಪ ಮುಡಿಸುವರು
ಸೋಬಾನ ಪಾಡುವರು ಮಂಗಳಾರುತಿಯ ಎತ್ತುವರು
ಮೇಲ್ಗಿರಿ ವಾಸಗೆ ಇಳೇವ ನೀಡಿರೇss
ದೈತ್ಯುರನೆಲ್ಲ ಸೀಳಿದನಲ್ಲ

ಭಕ್ತರನೆಲ್ಲ ಸಲಹಿದನಲ್ಲ
ಗಾಯಕ ಮಲ್ಲ ಘನ ಮುದಿಮಲ್ಲ
ದೂರಿತ್ತವೀಯ ದೂರವು ಮಾಡಯ್ಯ
ಆಯಿತ್ವಾರದಯ್ಯಾsss
ದೂರಿತ್ತವೀಯ ದೂರವು ಮಾಡಯ್ಯ ॥ಮು॥

ಎಡಬಲದಲ್ಲಿಬ್ಬರು ಸತಿಯವರು
ನಡುವೆ ಕುಳಿತಿರಲು ಗಂಧ ಕಸ್ತೂರಿಯ ಧರಿಸುವರು
ಹಾಸಿಗೆ ಹಾಸುವರು । ಲೇಸಾದ ಪುಷ್ಪ ಮುಡಿಸುವರು
ಸೋಬಾನ ಪಾಡುವರು ಮಂಗಳಾರುತಿಯ ಎತ್ತುವರು
ಮೇಲ್ಗಿರಿ ವಾಸಗೆ ಇಳೇವ ನೀಡಿರೆss
ದೈತ್ಯರನೆಲ್ಲ ಸೀಳಿದನಲ್ಲ
ಭಕ್ತರನೆಲ್ಲ ಸಲಹಿದನಲ್ಲ
ಗಾಯಕಮಲ್ಲ ದೂರವು ಮಾಡಯ್ಯ
ಆಯಿತ್ವಾರದಯ್ಯಾsss
ದೂರಿತ್ತವೀಯ ದೂರವು ಮಾಡಯ್ಯ ॥ಹಿ॥

ಹಾss ಬಂದೇವು ನಿನ್ನ ಜಾತ್ರೆಗೆsss
ಮಾರ್ಲಮಿ ನಿಂತು ನೋಡಿದೆನು
ಲಕ್ಷ ದೀಟಿಯು ಆಯಿತ್ವಾರದ ಉದಯ ವೇಳೆದಲಿ
(ಎಲ್ಲರೂ) ಒರಟನು ಜಡಿಯ ಕುದುರಿಯ ಕುಣಿಸುತ
ವನವಣಿಗೋಗುತ ಪನ್ನಂಗ ದೊರನೇ ಪಾವಡಮಲ್ಲ ॥ ಎ॥
ದೂರಿತ್ತವೀಯ ದೂರವು ಮಾಡಯ್ಯ
ಕರಿಯಾಲದಯ್ಯ
ದೂರಿತವೀಯ ದೂರವು ಮಾಡಯ್ಯ ॥ಮು॥ + ॥ಹಿ॥

ಹಾss ಚಿಡುಗೊಳಾಡುತ ಚಿಡುಗೋಳಾಡುತ
ಭಂಡಾರ ಚೆಲ್ಲುತ ಬಡಿಯನು ಪಾದವು
ಬೇಡಿಕೊಂಡಾಡುತss
ನಿನ್ನ ನೆನೆದವರು ಒಂದೊಂದು ಒಂದು ಊರು
ಒಂದ್ಹೊತ್ತು ಬಿಡುವರು
(ಎಲ್ಲರೂ) ಚಿನ್ನದ ಕಳಸ ಶ್ರೀ ಮೀನಗುಂದಿ
ಕಂಟಕವ ಪರಿಹರಿಸೋ
ಕರಿಯಾಲದಯ್ಯಾ
ಭಕ್ತರನ ರಕ್ಷಿಸಯ್ಯಾ ಭಂಡಾರ ದೇವ ॥ ಎ॥
ದೂರಿತ್ತವೀಯ ದೂರವು ಮಾಡಯ್ಯ
ಆಯಿತ್ವಾರಯ್ಯ
ದೂರಿತ್ತವೀಯ ದೂರವು ಮಾಡಯ್ಯ ॥ಮು॥ + ॥ಹಿ॥

## ಹಾಡು - ೬

ಸೋಬಾನೆ ಎನ್ನಿರೆss
ಸೋಬಾನೆ ಎನ್ನಿರೆ
ಸೋಬಾನವೆನ್ನಿ ಶಿವನೆನ್ನಿss
ಸೋಬಾನವೇ
ಸೋಬಾನವೆನ್ನಿ ಶಿವನೆನ್ನಿ
ಸೋಬಾನವೇ ॥ ಮು+ ಹಿ॥

ಆss ವರ್ಷಕ್ಕೆ ಬರುವುದು
ದಸರಿ ಮಾನವಮಿ ಹಬ್ಬ
ಬನ್ನಿ ಮುಡಿಯಾಕೆ ಬರುತಾರೆs
ಸೋಬಾನವೇ
ಬನ್ನಿ ಮುಡಿಯಾಕೆ ಬರುತಾರೆ
ಸೋಬಾನವೇ ॥ಮು, ಹಿ॥

ಆ ಬನ್ನಿಯ ಮುಡಿಯಾಕೆ
ಬರುತಾರೋ ನೇಣಿಕೇರು
ಡೊಳ್ಳಿನ ಬಂಡೆಗೆ ಕುಂತಾರಲ್ಲ
ಸೋಬಾನವೇSS
ಡೊಳ್ಳಿನ ಬಂಡೆಗೆ ಕುಂತಾರಲ್ಲ
ಸೋಬಾನವೇ
ಡೊಳ್ಳಿನ ಬಂಡೆಗೆ ಕುಂತಾರಲ್ಲ
ಸೋಬಾನವೇ ||ಮು, ಹಿ||

ಆ ಡೊಳ್ಳಿನ ಬಂಡೆಗೆ
ಕುಂತಾರೋ ಅವರೆಲ್ಲಾ
ಹಾಲು ಬಾಸೆಗಳೂ ತಗೊಂಡಾರೆ
ಸೋಬಾನವೇ
ಹಾಲು ಬಾಸೆಗಳು ತಗೊಂಡಾರೆ
ಸೋಬಾನವೇ ||ಮು, ಹಿ||

ಏ ಹಾಲಿನ ಭಾಸೆಗಳು
ತಗೊಂಡು ಅವರಿನ್ನು
ಐದು ಅವುಟಗಳು ಹಾರಿಸಾರೆ
ಸೋಬಾನವೇ
ಗಗನಕ್ಕೆ ಅವರು ಹಾರಿಸ್ಯಾರೆ
ಸೋಬಾನವೇ ||ಮು, ಹಿ||

ಆSS ಐದೇಳು ಅವುಟಗಳು
ಹಾರಿಸಿ ಅವರಿನ್ನು
ಕಾಯ್ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ
ಬಡಿಗೆಗಳು ತಾವು ಎದ್ದ್ಯಾರಲ್ಲ
ಸೋಬಾನವೇ ||ಮು, ಹಿ||

ಆss ಬಡಿಗೆಗಳು ಮೇಲಕ್ಕೆ
ಎತ್ಯಾರೋ ಅವರಿನ್ನು
ಭಂಡಾರ ತಾವು ಹಾರಿಸ್ಯಾರೆ
ಸೋಽಬಾನವೆss
ಗಕ್ಕಾನ ಬೆಟ್ಟ ಹತ್ಯಾರಲ್ಲ
ಸೋಽಬಾನವೇss ||ಮು, ಹಿ||

ಆ ಗಕ್ಕನೆ |ಈ| ಬೆಟ್ಟss
ಹತ್ಯಾರೆ ಅವರಿನ್ನು
ಮಲ್ಲಯ್ಯ ಮಾಳಮ್ಮಗ ಲಗ್ನವೀಗ
ಸೋಽಬಾನವೆss
ಮಲ್ಲಯ್ಯ ಮಾಳಮ್ಮಗ ಲಗ್ನವೀಗ
ಸೋಽಬಾನವೇ ||ಮು, ಹಿ||

ಆss ಸೂರ್ಯ ಲೋಽಕಾದಿಂದ
ಸೂರಪ್ಪ ನಮ್ಮಪ್ಪ
ಮಲ್ಲಯ್ಯನ ಮದುವಿಗೆ ಬರಬೇಕು
ಸೋಽಬಾನವೇss
ಮಾಳಮ್ಮನ ಲಗ್ನಕ್ಕೆ ಬರಬೇಕು
ಸೋಽಬಾನವೇss||ಮು, ಹಿ||

ಆ ಚಂದ್ರಲೋಽಕದಿಂದ
ಚಂದ್ರಪ್ಪ ನಮ್ಮಪ್ಪ
ಮಲ್ಲಯ್ಯನ ಲಗ್ನಕ್ಕೆ ಬರಬೇಕು
ಸೋಽಬಾನವೇss
ಮಾಳಮ್ಮನ ಲಗ್ನಕ್ಕೆ ಬರಬೇಕು
ಸೋಽಬಾನವೇ ||ಮು, ಹಿ||

ಏss ಭೂಮಿ ಲೋಕದಿಂದ
ಭೂಮಮ್ಮ ನಮ್ಮ ತಾಯಿ
ಮಲ್ಲಯ್ಯನ ಮದುವಿಗೆ ಬರಬೇಕು
ಸೋಬಾನವೇss
ಮಾಳಮ್ಮನ ಲಗ್ನಕ್ಕೆ ಬರಬೇಕು
ಸೋಬಾನವೇ ॥ಮು, ಹಿ॥

ಏ ಅಪ್ಪಾಜಿ ಈರಣ್ಣ
ಒಪ್ಪದಿಂದಲಿ ಕೇಳೋ
ಮಲ್ಲಯ್ಯಗ ಬಾಸಿಂಗ ಕಳವೀಗ
ಸೋಬಾನವೇss
ಮಲ್ಲಯ್ಯಗ ಹಾರವತಾರವೀಗ
ಸೋಬಾನವೇ ॥ಮು, ಹಿ॥

ಆss ಅಪ್ಪಾಜಿ ಈರಣ್ಣ
ಒಪ್ಪದಿಂದಲಿ ಕೇಳೋ
ಮಾಳವ್ವಗ ಮನಸೋಗ ತಾಳವೀಗ
ಸೋಬಾನವೇss
ಮಾಳಮ್ಮ ಬರತಾಳವೀಗ
ಸೋಬಾನವೇss ॥ಮು, ಹಿ॥

ಆss ನಾಗಲೋಕದಿಂದ
ನಾಗ ಕನ್ಯೆಯರು ಬಂದು
ಐದೇ ನೀರುತಳು ತಂದ್ಯಾರಲ್ಲ
ಸೋಬಾನವೇ
ಐದೇ ನೀರುಗಳು ತಂದಾರಲ್ಲ
ಸೋಬಾನವೇss ॥ಮು, ಹಿ॥

ಬ್ರಹ್ಮ ಲೋಕದಿಂದ
ಬ್ರಹ್ಮ ಆಚೆಗೆ ಬಂದು
ಭ್ರಮಿಸಿ ಹಾಕ್ಯಾನ ಬ್ರಹ್ಮಗಂಟು
ಸೋಬಾನವೇ
ಭ್ರಮಿಸಿ ಹಾಕ್ಯಾನ ಬ್ರಹ್ಮಗಂಟು
ಸೋಬಾನವೇ ||ಮು, ಹಿ||

ಮಲ್ಲಯ್ಯಗ ಮಾಳಮ್ಮಗ
ಲಗ್ನವ ಮಾಡ್ಯಾರೋವ್ವ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲೆ
ಸೋಬಾನವೇऽऽ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲೆ
ಸೋಬಾನವೇ ||ಮು, ಹಿ||

ಆऽऽ ಅಪ್ಪ ಸುರದಾಯಣ್ಣ
ಒಪ್ಪದಿಂದಲಿ ಕೇಳೂ
ಸಿಳ್ಳು ಬಂದೂಕು ಹಾರಿಸ್ಯಾನೆ
ಸೋಬಾನವೇऽऽ
ಸುಳ್ಳು ಬಂದೂಕು ಹಾರಿಸ್ಯಾನೆ
ಸೋಬಾನವೇऽऽ||ಮು, ಹಿ||

ಏ ಮಲ್ಲಯ್ಯಗ ಮಾಳಮ್ಮಗ
ಲಗ್ನವೂ ಮಾಡ್ಯಾರವ್ವ
ಮೇಲಕ್ಕೆ ಅವರನು ಹೊತ್ತಾರಲ್ಲ
ಸೋಬಾನವೇऽऽ
ಕಟ್ಟಾಣ ಬೆಟ್ಟ ಇಳುದಾನ
ಸೋಬಾನವೇऽऽ ||ಮು, ಹಿ||

ಆSS ಕಟ್ಟಾಣ ಈ ಬೆಟ್ಟ
ಇಳಿದಾರೋ ಅವರೆಲ್ಲ
ಪಿಂಜಾರಗಸಿಗೆ ನೆಲೆಯ ನಿಂತ
ಸೋಬಾನವೇSS
ಪಿಂಜಾರಗಸಿಗೆ ನೆಲೆನಿಂತ
ಸೋಬಾನವೇSS ॥ಮು, ಹಿ॥

ಆ ಪಿಂಜಾರ ಆಸಿಗೆ
ನೆಲೆನೆಂತ ಮಲ್ಲಯ್ಯ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇSS
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ॥ಮು, ಹಿ॥

ಕಾಯ್ ಒಡೆದು ಮಂಗಳಾರುತಿ
ಮಾಡ್ಯಾರ ಮ್ಲಲಯ್ಯಗ
ಶಿವಸನ ಗದ್ದಿಗೆ ಬಂದಾರಲ್ಲ
ಸೋಬಾನವೇSS
ಶಿವಸನ ಗದ್ದಿಗೆ ಬಂದಾರಲ್ಲ
ಸೋಬಾನವೇSS ॥ಮು, ಹಿ॥

ಶಿವಸನ ಗದ್ದಿಗೆ
ನೆಲೆನಿಂತನು ಮಲ್ಲಯ್ಯ
ಹೂವಿನ ಪಾದ ಕೊಡುತಾನ
ಸೋಬಾನವೇSS
ಕಾಯ್ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇSS ॥ ಮು, ಹಿ॥

ಬ್ರಹ್ಮ ಲೋಕದಿಂದ
ಬ್ರಹ್ಮ ಆಚೆಗೆ ಬಂದು
ಭ್ರಮಿಸಿ ಹಾಕ್ಯಾನ ಬ್ರಹ್ಮ ಗಂಟು
ಸೋಬಾನವೇ
ಭ್ರಮಿಸಿ ಹಾಕ್ಯಾನ ಬ್ರಹ್ಮ ಗಂಟು
ಸೋಬಾನವೇ ||ಮು, ಹಿ||

ಮಲ್ಲಯ್ಯಗ ಮಾಳಮ್ಮಗ
ಲಗ್ನವ ಮಾಡ್ಯಾರೋವ್ವ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲೆ
ಸೋಬಾನವೇss
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲೆ
ಸೋಬಾನವೇ ||ಮು, ಹಿ||

ಆss ಅಪ್ಪ ಸುರದಾಯಣ್ಣ
ಒಪ್ಪದಿಂದಲಿ ಕೇಳೂ
ಸಿಳ್ಳು ಬಂದೂಕು ಹಾರಿಸ್ಯಾನೆ
ಸೋಬಾನವೇss
ಸುಳ್ಳು ಬಂದೂಕು ಹಾರಿಸ್ಯಾನೆ
ಸೋಬಾನವೇss||ಮು, ಹಿ||

ಏ ಮಲ್ಲಯ್ಯಗ ಮಾಳಮ್ಮಗ
ಲಗ್ನವೂ ಮಾಡ್ಯಾರವ್ವ
ಮೇಲಕ್ಕೆ ಅವರನು ಹೊತ್ತಾರಲ್ಲ
ಸೋಬಾನವೇss
ಕಟ್ಟಾಣ ಬೆಟ್ಟ ಇಳುದಾನ
ಸೋಬಾನವೇss ||ಮು, ಹಿ||

ಏss ಭೂಮಿ ಲೋಕದಿಂದ
ಭೂಮಮ್ಮ ನಮ್ಮ ತಾಯಿ
ಮಲ್ಲಯ್ಯನ ಮದುವಿಗೆ ಬರಬೇಕು
ಸೋಬಾನವೇss
ಮಾಳಮ್ಮನ ಲಗ್ನಕ್ಕೆ ಬರಬೇಕು
ಸೋಬಾನವೇ ।।ಮು, ಹಿ।।

ಏ ಅಪ್ಪಾಜಿ ಈರಣ್ಣ
ಒಪ್ಪದಿಂದಲಿ ಕೇಳೋ
ಮಲ್ಲಯ್ಯಗ ಬಾಸಿಂಗ ಕಳವೀಗ
ಸೋಬಾನವೇss
ಮಲ್ಲಯ್ಯಗ ಹಾರವತಾರವೀಗ
ಸೋಬಾನವೇ ।।ಮು, ಹಿ।।

ಅss ಅಪ್ಪಾಜಿ ಈರಣ್ಣ
ಒಪ್ಪದಿಂದಲಿ ಕೇಳೋ
ಮಾಳವ್ವಗ ಮನಸೋಗ ತಾಳವೀಗ
ಸೋಬಾನವೇss
ಮಾಳಮ್ಮ ಬರತಾಳವೀಗ
ಸೋಬಾನವೇss ।।ಮು, ಹಿ।।

ಅss ನಾಗಲೋಕದಿಂದ
ನಾಗ ಕನ್ಯೆಯರು ಬಂದು
ಐದೇ ನೀರುತಳು ತಂದ್ವಾರಲ್ಲ
ಸೋಬಾನವೇ
ಐದೇ ನೀರುಗಳು ತಂದಾರಲ್ಲ
ಸೋಬಾನವೇss ।।ಮು, ಹಿ।।

ಆss ಬಡಿಗೆಗಳು ಮೇಲಕ್ಕೆ
ಎತ್ಯಾರೋ ಅವರಿನ್ನು
ಭಂಡಾರ ತಾವು ಹಾರಿಸ್ಯಾರೆ
ಸೋಬಾನವೆss
ಗಕ್ಕಾನ ಬೆಟ್ಟ ಹತ್ಯಾರಲ್ಲ
ಸೋಬಾನವೇss ॥ಮು, ಹಿ॥

ಆ ಗಕ್ಕನೆ ।ಈ। ಬೆಟ್ಟss
ಹತ್ಯಾರೆ ಅವರಿನ್ನು
ಮಲ್ಲಯ್ಯ ಮಾಳಮ್ಮಗ ಲಗ್ನವೀಗ
ಸೋಬಾನವೆss
ಮಲ್ಲಯ್ಯ ಮಾಳಮ್ಮಗ ಲಗ್ನವೀಗ
ಸೋಬಾನವೇ ॥ಮು, ಹಿ॥

ಆss ಸೂರ್ಯ ಲೋಕಾದಿಂದ
ಸೂರಪ್ಪ ನಮ್ಮಪ್ಪ
ಮಲ್ಲಯ್ಯನ ಮದುವಿಗೆ ಬರಬೇಕು
ಸೋಬಾನವೇss
ಮಾಳಮ್ಮನ ಲಗ್ನಕ್ಕೆ ಬರಬೇಕು
ಸೋಬಾನವೇss॥ಮು, ಹಿ॥

ಆ ಚಂದ್ರಲೋಕದಿಂದ
ಚಂದ್ರಪ್ಪ ನಮ್ಮಪ್ಪ
ಮಲ್ಲಯ್ಯನ ಲಗ್ನಕ್ಕೆ ಬರಬೇಕು
ಸೋಬಾನವೇss
ಮಾಳಮ್ಮನ ಲಗ್ನಕ್ಕೆ ಬರಬೇಕು
ಸೋಬಾನವೇ ॥ಮು, ಹಿ॥

ಆ ಬನ್ನಿ ಯ ಮುಡಿಯಾಕೆ
ಬರುತಾರೋ ನೇಣಿಕೇರು
ಡೊಳ್ಳಿನ ಬಂಡೆಗೆ ಕುಂತಾರಲ್ಲ
ಸೋಬಾನವೇss
ಡೊಳ್ಳಿನ ಬಂಡೆಗೆ ಕುಂತಾರಲ್ಲ
ಸೋಬಾನವೇ
ಡೊಳ್ಳಿನ ಬಂಡೆಗೆ ಕುಂತಾರಲ್ಲ
ಸೋಬಾನವೇ ॥ಮು, ಹಿ॥

ಆ ಡೊಳ್ಳಿನ ಬಂಡೆಗೆ
ಕುಂತಾರೋ ಅವರೆಲ್ಲಾ
ಹಾಲು ಬಾಸೆಗಳೂ ತಗೊಂಡಾರೆ
ಸೋಬಾನವೇ
ಹಾಲು ಬಾಸೆಗಳು ತಗೊಂಡಾರೆ
ಸೋಬಾನವೇ ॥ಮು, ಹಿ॥

ಏ ಹಾಲಿನ ಭಾಸೆಗಳು
ತಗೊಂಡು ಅವರಿನ್ನು
ಐದು ಅವುಟಗಳು ಹಾರಿಸಾರೆ
ಸೋಬಾನವೇ
ಗಗನಕ್ಕೆ ಅವರು ಹಾರಿಸ್ಯಾರೆ
ಸೋಬಾನವೇ ॥ಮು, ಹಿ॥

ಆss ಐದೇಳು ಅವುಟಗಳು
ಹಾರಿಸಿ ಅವರಿನ್ನು
ಕಾಯ್ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ
ಬಡಿಗೆಗಳು ತಾವು ಎದ್ದ್ಯಾರಲ್ಲ
ಸೋಬಾನವೇ ॥ಮು, ಹಿ॥

ಹಾss ಚೆಡುಗೊಳಾಡುತ ಚೆಡುಗೋಳಾಡುತ
ಭಂಡಾರ ಚೆಲ್ಲುತ ಬಡಿಯನು ಪಾದವು
ಬೇಡಿಕೊಂಡಾಡುತss
ನಿನ್ನ ನೆನೆದವರು ಒಂದೊಂದು ಒಂದು ಊರು
ಒಂದ್ಹೊತ್ತು ಬಿಡುವರು
(ಎಲ್ಲರೂ) ಚಿನ್ನದ ಕಳಸ ಶ್ರೀ ಮೀನಗುಂದಿ
ಕಂಟಕವ ಪರಿಹರಿಸೋ
ಕರಿಯಾಲದಯ್ಯಾ
ಭಕ್ತರನ ರಕ್ಷಿಸಯ್ಯಾ ಭಂಡಾರ ದೇವ ॥ ಎ॥
ದೂರಿತ್ತವೀಯ ದೂರವು ಮಾಡ್ಯಯ್ಯ
ಆಯಿತ್ವಾರಯ್ಯ
ದೂರಿತ್ತವೀಯ ದೂರವು ಮಾಡಯ್ಯ ॥ಮು॥ + ॥ಹಿ॥

## ಹಾಡು - ೬

ಸೋಬಾನೆ ಎನ್ನಿರೆss
ಸೋಬಾನೆ ಎನ್ನಿರೆ
ಸೋಬಾನವೆನ್ನಿ ಶಿವನೆನ್ನಿss
ಸೋಬಾನವೇ
ಸೋಬಾನವೆನ್ನಿ ಶಿವನೆನ್ನಿ
ಸೋಬಾನವೇ ॥ ಮು+ ಹಿ॥

ಆss ವರ್ಷಕ್ಕೆ ಬರುವುದು
ದಸರಿ ಮಾನವಮಿ ಹಬ್ಬ
ಬನ್ನಿ ಮುಡಿಯಾಕೆ ಬರುತಾರೆs
ಸೋಬಾನವೇ
ಬನ್ನಿ ಮುಡಿಯಾಕೆ ಬರುತಾರೆ
ಸೋಬಾನವೇ ॥ಮು, ಹಿ॥

ಅss ಕಟ್ವಾಣ ಈ ಬೆಟ್ಟ
ಇಳಿದಾರೋ ಅವರೆಲ್ಲ
ಪಿಂಜಾರಗಸಿಗೆ ನೆಲೆಯ ನಿಂತ
ಸೋಬಾನವೇss
ಪಿಂಜಾರಗಸಿಗೆ ನೆಲೆನಿಂತ
ಸೋಬಾನವೇss ||ಮು, ಹಿ||

ಆ ಪಿಂಜಾರ ಆಸಿಗೆ
ನೆಲೆನಿಂತ ಮಲ್ಲಯ್ಯ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇss
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ||ಮು, ಹಿ||

ಕಾಯ್ ಒಡೆದು ಮಂಗಳಾರುತಿ
ಮಾಡ್ಯಾರ ಮ್ಲಲಯ್ಯಗ
ಶಿವಸನ ಗದ್ದಿಗೆ ಬಂದಾರಲ್ಲ
ಸೋಬಾನವೇss
ಶಿವಸನ ಗದ್ದಿಗೆ ಬಂದಾರಲ್ಲ
ಸೋಬಾನವೇss ||ಮು, ಹಿ||

ಶಿವಸನ ಗದ್ದಿಗೆ
ನೆಲೆನಿಂತನು ಮಲ್ಲಯ್ಯ
ಹೂವಿನ ಪಾದ ಕೊಡುತಾನ
ಸೋಬಾನವೇss
ಕಾಯ್ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇss || ಮು, ಹಿ||

ಆss ಕಾಯ್ ಒಡೆದು ಮಂಗಳಾರುತಿ
ಮಾಡ್ಯಾರೋ ಮನದಯ್ಯಗೆ
ಗುರಿವಿನ ನೀರು ಸುಮಕುಸಾರೆ
ಸೋಬಾನವೇss
ಮಲ್ಲಯ್ಯಗ ಪಾದದ ನೀರು ಸುಮಕುಸಾರೆ
ಸೋಬಾನವೇss ।।ಮು, ಹಿ।।

ಆss ಮಲ್ಲಯ್ಯಗೆ ಮಾಳಮ್ಮಗ
ಕಾಯಿ ಒಡೆದು ಮಂಗಳಾರುತಿ
ಮಾಡ್ಯಾರೋ ನಿನ ಭಕ್ತರು
ಸೋಬಾನವೇss
ಮಾಡ್ಯಾರೋ ಭಕ್ತರು ಈಗ
ಸೋಬಾನವೇss ।।ಮು, ಹಿ।।

ಕಾಯ್ ಒಡೆದು ಮಂಗಳಾರುತಿ
ಮಾಡ್ಯಾರೊ ಮಲ್ಲಯ್ಯಗೆ
ಬಾಜಾರನಿಡದ ಬರುತಾನೆ
ಸೋಬಾನವೇss
ಕಲಕ ಮಲಕಗಳೆ ಮಾಡುತಾನ
ಸೋಬಾನವೇss ।।ಮು, ಹಿ।।

ಆss ಕಲಿಕೇನ ಮಲಕಗಳು
ಮಾಡ್ಯಾನ ಮಲ್ಲಯ್ಯ
ಪಾದುಗಟ್ಟೆಗೆ ಬಂದಾನಲ್ಲ
ಸೋಬಾನವೇss
ಪಾದುಗಟ್ಟಿಗೆ ನೆಲೆಯ ನಿಂತಾನೆ
ಸೋಬಾನವೇss ।।ಮು, ಹಿ।।

ಆss ಪಾದೇನೆ ಗಟ್ಟಿಗೆ
ನೆಲೆ ನಿಂತನು ಮಲ್ಲಯ್ಯಗ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇss
ಮುಳ್ಳಿನ ಬಂಡಿಗೆ ಬಂದಾನಲ್ಲ
ಸೋಬಾನವೇss ||ಮು, ಹಿ||

ಆss ಮುಳ್ಳಿನ ಬಂಡಿಗೆ
ನೆಲೆನಿಂತನು  ಮಲ್ಲಯ್ಯ
ಮುಳ್ಳಿನ ಪವಾಡ ಮಾಡಿಸ್ಯಾನ
ಸೋಬಾನವೇss
ಕಾಯಿ  ಒಡೆದು ಮಂಗಳಾರುತಿ ಮಾಡ್ಯಾರೆಲ್ಲ
ಸೋಬಾನವೇss ||ಮು, ಹಿ||

ಆss ಮುಳ್ಳಿನ ಪವಾಡ
ಮಾಡಿಸ್ಯಾನೋ ಮಲ್ಲಯ್ಯಗೆ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರೆಲ್ಲ
ಸೋಬಾನವೇss
ರಕ್ಷಿ ಪಡಿಗೆ ನೆಲೆಯ ನಿಂತನಲ್ಲ
ಸೋಬಾನವೇss ||ಮು, ಹಿ||

ಆss ರಕ್ಷಿಯ ಬಾಳಿಗೆ
ನೆಲೆ ನಿಂತ ಮಲ್ಲಯ್ಯ
ಶಸ್ತ್ರ ಪವಾಡ ಮಾಡಿಸ್ಯಾನ
ಸೋಬಾನವೇss
ಶಸ್ತ್ರ ಪವಾಡ ಹಾಕ್ಯಾನಲ್ಲ
ಸೋಬಾನವೇss ||ಮು, ಹಿ||

ಆSS ಭಕ್ತಿಯ ಹೋಕುಳಿಗೆ
ನೆಲೆ ನಿಂತ ಮಲ್ಲಯ್ಯ
ಶಸ್ತ್ರ ಪವಾಡ ಹಾಕುತಾನ
ಸೋಬಾನವೇSS
ಶಸ್ತ್ರ ಪವಾಡ ಹಾಕ್ಯಾನಲ್ಲ
ಸೋಬಾನವೇSS ||ಮು, ಹಿ||

ಆSS ಶಸ್ತ್ರನೇ ಪವಾಡ
ಆಕ್ಯಾನೋ ಮಲ್ಲಯ್ಯ
ಐದು ಬಗಸೇ ರಕ್ತ ಕೊಟ್ಟಾನಲ್ಲ
ಸೋಬಾನವೇ
ಐದು ಬಗಸೆ ರಕ್ತ ಕೊಟ್ಟಾನಲ್ಲ
ಸೋಬಾನವೇSS ||ಮು, ಹಿ||

ಐದು ಬಗಸೆ ರಕ್ತವೂ
ಕೊಟ್ಟಾನು ಮಲ್ಲೈಗೇ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇSS
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇSS ||ಮು, ಹಿ||

ಆSS ಕಾಯ್ ಒಡೆದು ಮಂಗಳಾರುತಿ
ಮಾಡ್ಯಾರೋ ಮಲ್ಲೈಗೆ
ಬನ್ನಿ ಕಟ್ಟಿಗೆ ಬಂದಾನS
ಸೋಬಾನವೇSS
ಬನ್ನಿ ಕಟ್ಟಿಗೆ ನೆಲೆಯ ನಿಂತಾನS
ಸೋಬಾನವೇSS ||ಮು, ಹಿ||

ಆss ಬನ್ನಿಯ ಕಟ್ಟಿಗೆ
ನೆಲೆ ನಿಂತ ಮಲ್ಲಯ್ಯ
ಬನ್ನಿಯ ತಾನ ಮಾಡದಾsನ
ಸೋಬಾನವೇss
ಬನ್ನಿಯ ತಾನಾ ಮುಡುದಾನ
ಸೋಬಾನವೇss ||ಮು, ಹಿ||

ಆs ಬನ್ನಿಯ ಈತನೂ
ಮುಡುದಾನ ಮಲ್ಲೈಗೆ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇss
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇss ||ಮು, ಹಿ||

ಆss ಕಾಯ್ ಒಡೆದು ಮಂಗಳಾರುತಿ
ಮಾಡ್ಯಾರೋ ಮಲ್ಲೈಗೆ
ಹೊನ್ನಿಕೆರೆಗೆ ಬಂದಾನಲ್ಲ
ಸೋಬಾನವೇss
ಹೊನ್ನಿಕೆರೆಗೆ ಬಂದಾನಲ್ಲ
ಸೋಬಾನವೇss ||ಮು, ಹಿ||

ಆss ಹೊನ್ನಿನ |ಏ| ಕೇರಿಗೆ
ಬಂದಾನೋ ಮಲ್ಲಯ್ಯ
ಕಲಕಿ ಮಲಕಗಳು ಮಾಡುತಾನ
ಸೋಬಾನವೇss
ಕಲಕ ಮಲಕಗಳು ಮಾಡುತಾನ
ಸೋಬಾನವೇss ||ಮು, ಹಿ||

ಕಲಿಕೀ ।ನಿ। ಮಲಿಕೆಗಳೂ
ಮಾಡ್ಯೋದು ಮಲ್ಲಯ್ಯ
ಪಂಚಲಿಂಗನ ಗುಡಿಗೆ ಬಂದಾನಲ್ಲ
ಸೋಬಾನವೇ ss
ಪಂಚಲಿಂಗನ ಗುಡಿಗೆ ಬಂದಾನಲ್ಲ
ಸೋಬಾನವೇ ss ।।ಮು, ಹಿ।।

ಪಂಚಲಿಂಗನ ನೀ ಗುಡಿಗೆ ss
ನೆಲೆನಿಂತಾನ ಮಲ್ಲಯ್ಯಗೆ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ss
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ss ।।ಮು, ಹಿ।।

ಆ ಕಾಯಿ ಒಡೆದು ಮಂಗಳಾರುತಿ
ಮಾಡ್ಯಾರೋ ಮಲ್ಲೈಗೆ
ಬಸವಣ್ಣನ ಗುಡಿಗೆ ಬಂದಾನಲ್ಲ
ಸೋಬಾನವೇ ss
ಬಸವಣ್ಣನ ಗುಡಿಗೆ ಬಂದಾನಲ್ಲ
ಸೋಬಾನವೇ ss ।।ಮು, ಹಿ।।

ಬಸವಣ್ಣನ ।ನೀ। ಗುಡಿಗೆ
ಬರುತಾನೆ ಮಲ್ಲಯ್ಯ
ಮೂರೇ ಔಟುಗಳು ಹಾರಿಸ್ಯಾನೋ
ಸೋಬಾನವೇ ss
ಮೂರೇ ಔಟುಗಳು ಹಾರಿಸ್ಯಾನೋ
ಸೋಬಾನವೇ ss ।।ಮು, ಹಿ।।

ಮೂರನೇ ಔಟುಗಳು
ಗಗನಕ್ಕೆ ಹಾರಿಸ್ಯಾನೋ
ಬಸವಣ್ಣನ ಗುಡಿಯ ಏರ್ಯಾನಲ್ಲ
ಸೋಬಾನವೇ ss
ಮೂರೇ ಮಾತುಗಳು ಹೇಳ್ಯಾನಲ್ಲ
ಸೋಬಾನವೇ ss ||ಮು, ಹಿ||

ಆ ss ಮೂರನೇ ಮಾತುಗಳು
ಹೇಳ್ಯಾನೋ ಮಲ್ಲಯ್ಯ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ss
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ss ||ಮು, ಹಿ||

ಕಾಯಿ ಒಡೆದು ಮಂಗಳಾರುತಿ
ಮಾಡ್ಯಾರೋ ಮಲ್ಲಯ್ಯಗೆ
ಬಾಜಾರ ಹಿಡಿದು ಬರಿತಾನ
ಸೋಬಾನವೇ ss
ಬಾಜಾರು ಹಿಡಿದು ಬರುತಾನ
ಸೋಬಾನವೇ ss ||ಮು, ಹಿ||

ಬಜಾರು |ನಿ| ಹಿಡಿದು
ಬರುತಾನೋ ಮಲ್ಲಯ್ಯ
ಕಲಕ ಮಲಕುಗಳು ಮಾಡುತಾನ
ಸೋಬಾನವೇ ss
ಕಲಕ ಮಲಕಗಳು ಮಾಡುತಾನ
ಸೋಬಾನವೇ ss ||ಮು, ಹಿ||

ಕಲಕ ।ನಿ। ಮಲಕುಗಳೇ
ಮುಡುದೊಳೆ ಮಾಳಮ್ಮ
ಭೂಮಿಗೆ ತಾನೆ ಬಂದಾರಲ್ಲ
ಸೋಬಾನವೇ ss
ಶಿವಸಾನ ಗದ್ದಿಗೆ ಕುಂತಾರ
ಸೋಬಾನವೇ ss ॥ಮು, ಹಿ॥

ಶಿವಸಾನ ಗದ್ದಿಗೆ
ಕುಂತಾರ ಅವರಿನ್ನೂ
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ss
ಕಾಯಿ ಒಡೆದು ಮಂಗಳಾರುತಿ ಮಾಡ್ಯಾರಲ್ಲ
ಸೋಬಾನವೇ ss ॥ಮು, ಹಿ॥

## ಗಂಗಿ ಮಾಳಮ್ಮನ ಸಂಧಿ

### ಹಾಡು -೧

ಶರಣಂದೀಯ ಗಂಗವ್ವಗೇ
ಶರಣಂದೀಯ ಲಿಂಗಯ್ಯಗೆ
ಶರಣಂದೆ ನನ್ನ ।ಏ। ಗುರವಿಗೆ
ಬಾ ನನ್ನ ಮಾ ಗುರುವೆ ॥ಮು॥

ಶರಣಂದೀಯ ಗಂಗವ್ವಗೇ
ಶರಣಂದೀಯ ಲಿಂಗಯ್ಯಗೆ
ಶರಣಂದೆ ನನ್ನ ।ಏ। ಗುರವಿಗೆ
ಬಾ ನನ್ನ ಮಾ ಗುರುವೆ ॥ಹಿ॥

ಹೇ ss ಬಲಗೊಂಡೀಯ ಬಲಗೊಂಡೀಯ
ಮಧ್ಯದಾನ ಬಲಗೊಂಡೀಯ
ಏಳೇಳು ಲೋಕ ।ಏ। ಸಲಹೋಕೆ
ಬಾ ನನ್ನ ಮಾ ಗುರುವೆ ॥ಮು॥

ಬಲಗೊಡೀಯ ಬಲಗೊಂಡೀಯ
ಮಧ್ಯದಾನ ಬಲಗೊಂಡೀಯ
ಏಳೇಳು ಲೋಕ ।ಏ। ಸಲಹೋಕೆ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಏಳೇಳು ಲೋಕವಾ
ಸಲವ ಭೂಮ್ಯಮ್ಮ ತಾಯಿಗೆ
ಒಪ್ಪದಿಂದಲಿಯೇ ।ಏ। ಬಲಗೊಂಡೆವು
ಬಾ ನನ್ನ ಮಾ ಗುರುವೆ ॥ಮು॥

ಹಾ ssಏಳೇಳು ಲೋಕವಾ
ಸಲವಾ ಭೂಮ್ಯಮ್ಮನ
ಒಪ್ಪದಿಂದಲಿಯೇ ।ಏ। ಬಲಗೊಂಡೆವು
ಬಾ ನನ್ನ ಮಾ ಗುರುವೆ ॥ಹಿ॥

ಆ ss ಸತಿಕೊಡೋ ಸಹದೇವ ಮತಿಕೊಡೋ ಮಾದೇವ
ಇದ್ದೇವ ಕೊಡೋ ।ಏ। ಮುಡಿಮಲ್ಲ
ಬಾ ನನ್ನ ಮಾ ಗುರುವೆ ॥ಮು॥

ಸತಿಕೊಡೋ ಸಹದೇವ ಮತಿಕೊಡೋ ಮಾದೇವ
ಇದ್ದೇವ ಕೊಡೋ ।ಏ। ಮುದಿಮಲ್ಲ
ಬಾ ನನ್ನ ಮಾ ಗುರುವೆ ॥ಹಿ॥

ಹಾ ssರನ್ನದ ಕುದುರಿಗೆ ಚಿನ್ನದೂವ ಮಕರಂಧ
ಸ್ವಾಮಿ ಮಲ್ಲಯ್ಯ ।ಏ। ಹೊರ ವಂಟಾನು
ಬಾ ನನ್ನ ಮಾ ಗುರುವೆ ॥ಮು॥

ಹಾ ssರನ್ನದ ಕುದುರಿಗೆ ಚಿನ್ನದ ಮಕರಂಧ
ಸ್ವಾಮಿ ಮಲಯ್ಯ ।ಏ। ಹೊರ ವಂಟಾನು
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಸ್ವಾಮಿನೇ ಮಲ್ಲಯ್ಯ ಹೊರವಂಟಾನು ಈಗಿನ್ನು
ಏಳಮೀಸೆ ತಾನೂ ।ಏ। ತಿರವೂತ
ಬಾ ನನ್ನ ಮಾ ಗುರುವೆ ॥ಮು॥

ಹಾ ss ಸ್ವಾಮಿನೇ ಮಲ್ಲಯ್ಯ ಹೊರವಂಟಾನು ಈಗಿನ್ನು
ಎಳೆಮೀಸೆ ತಾನೂ ।ಏ। ತಿರವೂತ
ಬಾ ನನ್ನ ಮಾ ಗುರುವೆ ॥ಹಿ॥

ಹಾ ssಎಳೆಮೀಸೆ ।ಏ। ತಾನೂ ತಿವೂತ ಮಲ್ಲಯ್ಯ
ಗಗ್ಗಾರಿ ಕಾಲು ।ಏ। ಕುಣಿಸುತ
ಬಾ ನನ್ನ ಮಾ ಗುರುವೆ ॥ಮು॥

ಎಳೆಮೀಸೆ ।ಏ। ತಾನೂ ತಿರವೂತ ಮಲ್ಲಯ್ಯ
ಗಗ್ಗಾರಿ ಕಾಲು ।ಏ। ತಿರವೂತ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಹತ್ತಿಯಾಲದು ಮರ ಕೆತ್ತಿ ಡೋಣಿಯ ಮಾಡಿ
ಹಾಲು ಸಕ್ಕರಿ ।ಏ। ಎಡೆಮಾಡಿ
ಬಾ ನನ್ನ ಮಾಗುರುವೆ ॥ಮು॥

ಹಾ ss ಹತ್ತಿಯಾಲದು ಮರ ಕೆತ್ತಿ ಡೋಣಿಯ ಮಾಡಿ
ಹಾಲು ಸಕ್ಕರಿ ।ಏ। ಎಡೆಮಾಡಿ
ಬಾ ನನ್ನ ಮಾಗುರುವೆ ॥ಹಿ॥

ಹೇ ss ಹಾಲಿಗೆ ಸಕ್ಕರಿಯ ಎಡೆಮಾಡಿ ಗೊರವರು
ಕಚ್ಚಿ ಉಂಡಾರು ।ಏ। ಡೋಣಿ ಒಳಗೆ
ಬಾ ನನ್ನ ಮಾಗುರುವೆ ॥ಮು॥

ಹಾಲಿಗೆ ಸಕ್ಕರಿಯ ಎಡೆಮಾಡಿ ಗೊರವರು
ಕಚ್ಚಿ ಉಂಡಾರು ।ಏ। ಡೋಣಿ ಒಳಗೆ
ಬಾ ನನ್ನ ಮಾಗುರುವೆ ॥ಹಿ॥

ಹಾ ss ವರುಸಕ್ಕೆ ಬರುವುದು ಮಾರ್ಲಮೀಯ ಹಬ್ಬವು
ಮತ್ತೆ ನೋಡಲು ಬನ್ನಿ ।ಏ। ಸೆಡುಗರವು
ಬಾ ನನ್ನ ಮಾಗುರುವೆ ॥ಮು॥

ವರುಸಕ್ಕೆ ಬರುವುದು ದಸುರಿ ಮಾರ್ಲಮಿ ಹಬ್ಬ
ಬನ್ನಿ ಮುಡಿಯಾಕೆ ।ಏ। ಬರುತಾರೋ
ಬಾ ನನ್ನ ಮಾಗುರುವೆ ॥ಹಿ॥

ಆ ss ಬನ್ನಿಯ ಮುಡಿಯಾಕೆ ಬರುತಾರೋ ನೆಣಿಕೇರು
ಮತ್ತೆ ನೋಡಲು ಬನ್ನಿ ।ಏ। ಸೆಡುಗರವೂ
ಬಾ ನನ್ನ ಮಾಗುರುವೆ ॥ಮು॥

ಬನ್ನಿಯ ಮುಡಿಯಾಕೆ ಬರುತಾರೋ ನೆಣಿಕೇರು
ಮತ್ತೆ ನೋಡಲು ಬನ್ನಿ ।ಏ। ಸೆಡುಗರವೂ
ಬಾ ನನ್ನ ಮಾಗುರುವೆ ॥ಹಿ॥

ಹಾ ss ಮತ್ತೆ ನೋಡಲು ಬನ್ನಿ ಸೆಡಗರ ಕೈಯವವಳೆಯ
ಕಾಲು ಕಾಯಿ ಕೋಲು ।ಏ। ಬೆಳಗೀಲೆ
ಬಾ ನನ್ನ ಮಾ ಗುರುವೆ ॥ಮು॥

ಮತ್ತೆ ನೋಡಲು ಬನ್ನಿ ಸೆಡಗರ ಕಾಯವಯ್ಯ
ಕಾಲು ಕಾಯಿಕೋಲು ।ಏ। ಬೆಳಗೀಲೆ
ಬಾ ನನ್ನ ಮಾ ಗುರುವೆ ॥ಹಿ॥

ಬಾವುಳ್ಳ ಭಕ್ತರನ ಬಾವ ನೋಡಲು ಬಂದ
ಬಾವ ನೋಡದನ ।ಏ। ಗುಣ ನೋಡಿ
ಬಾ ನನ್ನ ಮಾ ಗುರುವೆ ॥ಮು॥

ಬಾವುಳ್ಳ ಭಕ್ತರನ ಬಾವ ನೋಡಲಿ ಬಂದ
ಬಾವ ನೋಡದನ ।ಏ। ಗುಣನೋಡಿ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ದೃಢವುಳ್ಳ ಭಕ್ತರನಲ ದೃಢವ ನೋಡಲಿ ಬಂದ
ದೇವರು ಮನಿವಳಗೇ ನೆಲೆನಿಂತ
ಬಾ ನನ್ನ ಮಾ ಗುರುವೆ ॥ಮು॥

ದೃಢವುಳ್ಳ ಭಕ್ತರನ ದೃಢವ ನೋಡಲಿ ಬಂದ
ದೇವರು ಮನಿವಳಗೇ ನೆಲೆ ನಿಂತನು
ಬಾ ನನ್ನ ಮಾ ಗುರುವೆ ॥ಹಿ॥

ಹಾ ದೇವರುವ ಮನಿವಳಗೆ ನೆಲೆನಿಂತ ಮಲ್ಲಯ್ಯ
ಬೇಡಿದ ಭಾಗ್ಯವ ।ಏ। ಕೊಡುತಾನೆ
ಬಾ ನನ್ನ ಮಾ ಗುರುವೆ ॥ಮು॥

ದೇವರುವ ಮನಿವಳಗೆ ನೆಲೆನಿಂತಾನು ಮಲ್ಲಯ್ಯ
ಬೇಡಿದ ಭಾಗ್ಯವ ।ಏ। ಕೊಡತಾನೆ
ಬಾ ನನ್ನ ಮಾ ಗುರುವೆ ॥ಹಿ॥

ಆss ಬಿದುರುಳ್ಳ ಮ್ಯಾಗಳ ಬಾ ಚತುರ ಮಾಳಿನ ಕೇಳಿ
ಎದುರತ್ತಿ ಇಳೇವ ।ಏ। ಕೊಡುಬಾರೆ
ಬಾ ನನ್ನ ಮಾಗುರುವೆ ॥ಮು॥

ಬಿದುರು ಳ್ಳಿ ಮ್ಯಾಗಳ ಬಾ ಚತುರ ಮಾಳಿನ ಕೇಳಿ
ಎದುರತ್ತಿ ಇಳೇವ ।ಏ। ಕೊಡುಬಾರೆ
ಬಾ ನನ್ನ ಮಾ ಗುರುವೆ ॥ಹಿ॥

ಹಾss ಎದುರತ್ತೀಯ ಇಳೆಹೂವ ಕೊಡುಬಾರೆ ಎಲೆಹೆಣ್ಣೆ
ಯಾಲಕ್ಕಿ ಇಲ್ಲಲ್ಲೆ ।ಏ। ಎಲೆ ಒಳಗ
ಬಾ ನನ್ನ ಮಾಗುರುವೆ ॥ಮು॥

ಎದುರತ್ತೀಯ ಇಳೆಹೂವ ಕೊಡುಬಾರೆ ಎಲೆಹೆಣ್ಣೆ
ಯಾಲಕ್ಕಿ ಇಲ್ಲಲ್ಲೇ ।ಏ। ಎಲೆ ಒಳಗ
ಬಾ ನನ್ನ ಮಾ ಗುರುವೆ ॥ಹಿ॥

ಹಾ ಯಾಲಕ್ಕೀಯ ಇಲ್ಲಲ್ಲೇ ಎಲೆ ಒಳಗೆ ಎಲೆ ಹೆಣ್ಣೆ
ಯಾರನ್ನ ನೋಡಿ ।ಏ। ಮರತೇಳೆ
ಬಾ ನನ್ನ ಮಾ ಗುರುವೆ ॥ಮು॥

ಯಾಲಕ್ಕೀಯ ಇಲ್ಲಲ್ಲೇ ಎಲೆ ಒಳಗ ಎಲೆ ಹೆಣ್ಣೆ
ಯಾರನ್ನ ನೋಡಿ ।ಏ। ಮರೆತೀದಿ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಯಾರನ್ನ ನೋಡಿಲ್ಲ ಯಾವಲ್ಲೀಯ ಕುಂತಿಲ್ಲ
ಪಲ್ಲಕ್ಕಿ ಒಳಗ ।ಏ। ನಿಮ್ಮ ಧ್ಯಾನ
ಬಾ ನನ್ನ ಮಾ ಗುರುವೆ ॥ಮು॥

ಯಾರನ್ನ ನೋಡಿಲ್ಲ ಯಾವಲ್ಲೀಯ ಕುಂತಿಲ್ಲ
ಪಲ್ಲಕ್ಕಿ ಒಳಗ ।ಏ। ನಿಮ್ಮ ಧ್ಯಾನವು
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಬ್ಯಾಸಿಗೆ ಬಿಸಿಲಯ್ಯ ಕೂಸಿಗೆ ತಾಯಾದೆ
ಬ್ಯಾಸತ್ಯಾಲಕ್ಕಿಯ ।ಏ। ಮರತೇನು
ಬಾ ನನ್ನ ಮಾಗುರುವೆ ॥ಮು॥

ಬ್ಯಾಸಿಗೆ ಬಿಸಿಲಯ್ಯ ಕೂಸಿಗೆ ತಾಯಾದೆ
ಬ್ಯಾಸತ್ಯಾಲಕ್ಕಿಯ ।ಏ। ಮರತೇನು
ಬಾ ನನ್ನ ಮಾಗುರುವೆ ॥ಹಿ॥

ಹಾ ss ದಾಸವ್ವ ಕೆಣೆಸಿತವ್ವ ದಡದೆ ಉಂಟಾದಾರಿ
ಡೋಣಿ ಇಳೇವು ।ಏ। ನಡಿದ್ಯಾನೆ
ಬಾ ನನ್ನ ಮಾ ಗುರುವೆ ॥ಮು॥

ದಾಸವ್ವ ಕೆಣೆಸಿತವ್ವ ದಡದೆ ಉಂಡಾದಾರಿ
ಡೋಣಿ ಇಳೇವು ।ಏ। ಬಡುಸ್ತಾನೆ
ಬಾ ನನ್ನ ಮಾಗುರುವೆ ॥ಹಿ॥

ಹಾ ss ಅಂಗಿ ತೋಳ್ವರಗಂಡ ಸುಂಗೂ ಬೀಡು ಒರುಗಂಡಾ
ಗಂಡಂದ್ರೆ ಗಂಡ ।ಏ। ಜಗತುಂಡ
ಬಾ ನನ್ನ ಮಾ ಗುರುವೆ ॥ಮು॥

ಅಂಗಿ ತೋಳ್ವರಗಂಡ ಸುಂಗೂ ಬೀಡು ಒರುಗಂಡಾ
ಗಂಡಂದ್ರೆ ಗಂಡ ।ಏ। ಜಗತುಂಡ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಗಂಡು ವಹಾ ಅಂದರೆ ಗಂಡ ಜಗತುಂಡ ಮಲ್ಲಯ್ಯ
ಡಂಗುರ ಒಡಿಸ್ಯಾನೆ ।ಏ। ಗಿರಿ ಒಳಗೇ
ಬಾ ನನ್ನ ಮಾ ಗುರುವೆ ॥ಮು॥

ಗಂಡು ವಹಾ ಅಂದರೆ ಗಂಡ ಜಗತುಂಡ ಮಲ್ಲಯ್ಯ
ಡಂಗುರ ಒಡಿಸ್ಯಾನೆ ।ಏ। ಗಿರಿ ಒಳಗೇ
ಬಾ ನನ್ನ ಮಾಗುರುವೆ ॥ಹಿ॥

ಹಾ ss ಹಾ ಕಡೆ ನೆರಣಿಕೆ ಈ ಕಡೀಯ ಸುಳುವಾಯಿ
ಮಧ್ಯದಲ್ಯೆದನು ।ಏ। ಮೈಲಾರ
ಬಾ ನನ್ನ ಮಾ ಗುರುವೆ ॥ಮು॥

ಹಾ ss ಕಡೆ ನೆರಣಿಕೆ ಈ ಕಡೀಯ ಸುಳುವಾಯಿ
ಮಧ್ಯದಲ್ಯೆದನು ।ಏ। ಮೈಲಾರ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಮಧ್ಯದಲ್ಲೇ ಹೈದಾನ ಮಲ್ಲರವ್ವ ಬದೀಳಗ
ಎದ್ದು ಹೋಗಿಲ್ಲ ।ಏ। ಶರಣರು
ಬಾ ನನ್ನ ಮಾ ಗುರುವೆ ॥ಮು॥

ಮಧ್ಯದಲ್ಲೇ ಹೈದಾನು ಮಲ್ಲಯ್ಯ ಬದಿಯಾಗೆ
ಎದ್ದು ಹೋಗಿಲ್ಲ ।ಏ। ಶರಣರು
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಎಲ್ಲಿಗೆ ಹೋಗಿದ್ದಿ ಮಲ್ಲಿಗೂವಿನ ದೇವ
ಮಲ್ನಾಡನೆಲ್ಲ ।ಏ। ಹುಡಿಕ್ಯಾಡಿ
ಬಾ ನನ್ನ ಮಾ ಗುರುವೆ ॥ಮು॥

ಎಲ್ಲಿಗೆ ಹೋಗಿದ್ದಿ ಮಲ್ಲಿಗೂವಿನ ದೇವ
ಮಲ್ನಾಡನೆಲ್ಲ ।ಏ। ಹುಡಿಕ್ಯಾಡಿ
ಬಾ ನನ್ನ ಮಾ ಗುರುವೆ ॥ಹಿ॥

ಹಾ ಮಲ್ನಾಡೆಲ್ಲಾನೆಲ್ಲ ಹಡಿಕ್ಯಾಡೀಯ ನಮಶಿವನೇ
ಕಲ್ಲಾದ ಮ್ಯಾಲೆ ಯಾಕುಸುಗಾಯ
ಬಾ ನನ್ನ ಮಾ ಗುರುವೆ ॥ಮು॥

ಮಲ್ನಾಡೆಲ್ಲಾನೆಲ್ಲ ಹುಡುಕ್ಯಾಡೀಯ ನಮಶಿವನೇ
ಎಲ್ಲಾರು ಮ್ಯಾಲ್ಯಾಕೆ ।ಏ। ಒಸುಗಾಯ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಎಲ್ಲಿಗೆ ಹೊಗಲಿಲ್ಲ ಯಾವ ಕಡೆ ಹೊಗಲಿಲ್ಲ
ಕಲ್ಲು ಬಾಯ ಒಳಗ ।ಏ। ಜಳುಕಾಗಿ
ಬಾ ನನ್ನ ಮಾ ಗುರುವೆ ॥ಮು॥

ಎಲ್ಲಿಗೆ ಹೊಗಲಿಲ್ಲ ಯಾವ ಕಡೆ ಹೋಗಲಿಲ್ಲ
ಕಲ್ಲು ಬಾಯ ಒಳಗೆ ।ಏ। ತೆರುದಾವ
ಬಾ ನನ್ನ ಮಾ ಗುರುವೆ ॥ಹಿ॥

ಹಾ ss ಕಲ್ಲಿಗೆ ಬಾಯಿ ಒಳಗಾ ಜಳಕ ಮಾಡಲುವಾಗ
ಮಲ್ಲಿಗೆ ಮಗ್ಗೀ ।ಏ। ತೆರುದಾವ
ಬಾ ನನ್ನ ಮಾ ಗುರುವೆ ॥ಮು॥

ಕಲ್ಲಿಗೆ ಬಾಯಿ ಒಳಗಾ ಜಳಕ ಮಾಡಲುವಾಗ
ಮಲ್ಲಿಗೆ ಮಗ್ಗೀ ।ಏ। ತೆರುದಾವ
ಬಾ ನನ್ನ ಮಾ ಗುರುವೆ ॥ಹಿ॥

ಹಾ ಮಲ್ಲಿ ಗೀಯ ಮುಳ್ಳುಂಟವ್ವ ಬಾಳಿಗೀಯ ಕೆಚ್ಚುಂಟು
ಮಲ್ಲಯ್ಯ ನಿನ ಮಾತು ಬಲು ನಿಜವುಂಟು
ಬಾ ನನ್ನ ಮಾ ಗುರುವೆ ॥ಮು॥

ಮಲ್ಲಿ ಗೀಯ ಮುಳ್ಳುಂಟವ್ವ ಬಾಳಿಗೀಯ ಕೆಚ್ಚುಂಟು
ಮಲ್ಲಯ್ಯನಿನ ಮಾತು ಬಲು ನಿಜವುಂಟು
ಬಾ ನನ್ನ ಮಾ ಗುರುವೆ ॥ಹಿ॥

ಮಲ್ಲಯ್ಯ ನಿನ ಮಾತುವು ನಿಜವುಂಟು ಮಲ್ಲಡುವ
ನಾರಿ ಚೆಲ್ಲೆಗಳು ।ಏ। ತೊಗುಲ್ಯಾವೆ
ಬಾ ನನ್ನ ಮಾ ಗುರುವೆ ॥ಮು॥

ಮಲ್ಲಯ್ಯ ನಿನ ಮಾತುವು ನಿಜವುಂಟು ಮಲ್ಲಡುವ
ನಾರಿ ಚೆಲ್ಲೆಗಳು ।ಏ। ತಗಲ್ಯಾವೆ
ಬಾ ನನ್ನ ಮಾ ಗುರುವೆ ॥ಹಿ॥

ಹೇ ಮಾಳಿ ನಿನ್ನ ಮ್ಯಾಲೆ ನಾನೊಬ್ಬಳಾ ತರಲಿದ್ದೆರೆ
ಕೋರಂಗಿ ನಾನು ।ಏ। ತೊಡಲಿಲ್ಲ
ಬಾ ನನ್ನ ಮಾ ಗುರುವೆ ॥ಮು॥

ಮಾಳಿ ನಿನ್ನ ಮ್ಯಾಲೆ ನಾಳೊಬ್ಬಳಾ ತರಲಿದ್ದೆರೆ
ಕೋರಂಗಿ ನಾನು ।ಏ। ತೊಡಲಿಲ್ಲ
ಬಾ ನನ್ನ ಮಾ ಗುರುವೆ ॥ಹಿ॥

ತಂದಾಕಿ ತರುವುದು ಒಂದು ಆಡಲಿಬ್ಯಾಡ
ಮುಂದಿನ ಮಾತು ।ಏ। ನುಡುದೆಲ್ಲೋ
ಬಾ ನನ್ನ ಮಾ ಗುರುವೆ ।।ಮು।।

ತಂದಾಕಿ ತರುವುದು ಅಂದು ಆಡಲಿಬ್ಯಾಡ
ಮುಂದಿನ ಮಾತು ।ಏ। ನುಡಿದೆಲ್ಲೋ
ಬಾ ನನ್ನ ಮಾ ಗುರುವೆ ।।ಹಿ।।

ಮುಂದಿನ ।ಏ। ಮಾತುವು ನುಡಿದೆಲ್ಲ ಮಲ್ಲಯ್ಯ
ಕುರಿಯಟ್ಟಿ ಗೊಬ್ಬರ ।ಏ। ಬಳಿಯೋಗೋ
ಬಾ ನನ್ನ ಮಾ ಗುರುವೆ ।।ಮು।।

ಮುಂದಿನ ।ಏ। ಮಾತುವು ನುಡಿದೆಲ್ಲ ಮಲ್ಲಯ್ಯ
ಕುರಿಯಟ್ಟೆ ಗೊಬ್ಬರ ।ಏ। ಬಳಿಯೋಗೋ
ಬಾ ನನ್ನ ಮಾ ಗುರುವೆ ।।ಹಿ।।

ಕುರಿಯಟ್ಟೆಯ ಗೊಬ್ಬರ ಬಳಿಹೋಗೋ ಮಲ್ಲಯ್ಯ
ಸಂಬಳದಳಾಗಿ ।ಏ। ದುಡಿಯೋಗೋ
ಬಾ ನನ್ನ ಮಾ ಗುರುವೆ ।।ಮು।।

ಕುರಿಹಟ್ಟೆಯ ಗೊಬ್ಬರ ಬಳೀಹೋಗೋ ಮಲ್ಲಯ್ಯ
ಸಂಬಳದಳಾಗಿ ।ಏ। ದುಡಿಯೋಗೋ
ಬಾ ನನ್ನ ಮಾಗುರುವೆ ।।ಹಿ।।

ಗುಡ್ಡಾದಾ ವಾರ್‍ಯಾಗ ಗೊಬ್ಬರ ಬಳಿಯುವಳು
ಜೆಡ್ಡಿನಾರಾವಳೆ ।ಏ। ಕುರುಬತಿ
ಬಾ ನನ್ನ ಮಾಗುರುವೆ ।।ಮು।।

ಗುಡ್ಡದಾ ವಾರ್‍ಯಾಗ ಗೊಬ್ಬರ ಬಳಿಯುವಳು
ಜಿಡ್ಡಿನಾರಾವಳೆ ।ಏ। ಕುರುಬತಿ
ಬಾ ನನ್ನ ಮಾ ಗುರುವೆ ।।ಹಿ।।

ಆ ಕೈ ಜಿಡ್ಡು ಕುರುಬತಿ ಮೈ ಜಿಡ್ಡು ಕುರುಬತಿ
ಮೈಯಲ್ಲ ಜಿಡ್ಡು ।ಏ। ಪರಿಮಳ
ಬಾ ನನ್ನ ಮಾ ಗುರುವೆ ।।ಮು।।

ಕೈ ಜಿಡ್ಡು ಕುರುಬತಿ ಮೈ ಜಿಡ್ಡು ಕುರುಬತಿ
ಮೈಯಲ್ಲ ಜಿಡ್ಡು ।ಏ। ಪರಿಮಳ
ಬಾ ನನ್ನ ಮಾ ಗುರುವೆ ।।ಹಿ।।

ಹಾದ್ಯಾಗಾ ಮುಗವಳೇ ಬಿದ್ಯಾಗಾಡುಂಬವಳೇ
ಕೂದಾಲು ಮೈನವಳೇ ಕುರಬತಿ
ಬಾ ನನ್ನ ಮಾ ಗುರುವೆ ।।ಮು।।

ಹಾದ್ಯಾಗಾ ಮಗವಳೇ ಬಿದ್ಯಾಗಾಡುಂಬವಳೇ
ಕೂದಾಲು ಮೈಯವಳೇ ಕುರಬತಿ
ಬಾ ನನ್ನ ಮಾ ಗುರುವೆ ।।ಹಿ।।

ಕೂದಾಲ ಮೈಯವಳೇ ಕುರುಬರ ಮಾಳಮ್ಮ ಗೆ
ಗುಡ್ಡದ ಮಲ್ಲಯ್ಯ ।ಏ। ಮನಸೋತನು
ಬಾ ನನ್ನ ಮಾ ಗುರುವೆ ।।ಮು।।

ಕೂದಾಲ ಮೈಯವಳೇ ಕುರುಬರ ಮಾಳಮ್ಮ ಗೆ
ಗುಡ್ಡದ ಮಲ್ಲಯ್ಯ ।ಏ। ಮನಸೋತನು
ಬಾ ನನ್ನ ಮಾ ಗುರುವೆ ।।ಹಿ।।

ಹಪ್ಪಯ್ಯ ನಿನ ಮಾತು ಕತ್ತೀಲೆ ಕೊರೆದಾಂಗ
ಹುತ್ತಿಗೆ ಸರಪ ।ಏ। ನೆಡುದಂಗ
ಬಾ ನನ್ನ ಮಾ ಗುರುವೆ ॥ಮು॥

ಹಪ್ಪಯ್ಯ ನಿನ ಮಾತು ಕತ್ತೀಲೆ ಕೊರೆದಾಂಗ
ಹುತ್ತಿಗೆ ಸರಪ ।ಏ। ನೆಡುದಂಗ
ಬಾ ನನ್ನ ಮಾ ಗುರುವೆ ॥ಹಿ॥

ಹುತ್ತಿಗೆ ।ಏ। ಸರುಪ ನಡೆದಂಗ ದೇವರ ಗುಡ್ಡ
ಉಚ್ಚೇಳದ ಮಾತು ।ಏ। ಹುಸಿಯಿಲ್ಲ
ಬಾ ನನ್ನ ಮಾ ಗುರುವೆ ॥ಮು॥

ಹುತ್ತಿಗೆ ।ಏ। ಸರಪ ನಡೆದಂಗೆ ದೇವರಗುಡ್ಡ
ಉಚ್ಚೇಳಿದ ಮಾತು ।ಏ। ಹುಸಿಯಿಲ್ಲ
ಬಾ ನನ್ನ ಮಾ ಗುರುವೆ ॥ಹಿ॥

ಆ ಶಿವಗಂಗಿ ಮಾಳಮ್ಮ ಶಿವ ಭೋಜನ ಮಾಡಿ
ಎಡೆಮಾಡಿ ಶಿವಗ ।ಏ। ಕರುದಾಳ
ಬಾ ನನ್ನ ಮಾ ಗುರುವೆ ॥ಮು॥

ಶಿವಗಂಗಿ ಮಾಳಮ್ಮ ಶಿವಗ ಭೋಜನ ಮಾಡಿ
ಎಡೆಮಾಡಿ ಶಿವಗ ।ಏ। ಕರುದಾಳ
ಬಾ ನನ್ನ ಮಾ ಗುರುವೆ ॥ಹಿ॥

ಆಽಽ ಎಡೆಮಾಡಿ ಶಿವನನ್ನು ಕರುದಾಳೆ ಮಲ್ಲಯ್ಯ
ಗಂಗಿ ಭಂಡಾರ ।ಏ। ತೋರಂದಾ
ಬಾ ನನ್ನ ಮಾ ಗುರುವೆ ॥ಮು॥

ಹೇ ಪಂಥವೇ ಬಂದಾಗ ಎಂಥರುನ ಬಿಡಲಿಲ್ಲ
ಟೊಂಕ ಬಾಗೀನ ।ಏ। ಮುದುಕೀನ
ಬಾ ನನ್ನ ಮಾ ಗುರುವೆ ।।ಮು, ಹಿ।।

ಹೇss ಟೊಂಕಿಲೇ ಬಾಗೀದ ಮುದುಕೀನ ಇಡಕರಿಸಿ
ಭಂಡಾರ ಚೀಲ ।ಏ। ಒರಿಸ್ಯಾನ
ಬಾ ನನ್ನ ಮಾ ಗುರುವೆ ।।ಮು, ಹಿ।।

ಏss ಹಟ್ಯಾಗರೆಂದು ಮೆಟ್ಟೋಡಿ ಬಾಳೆಂದು
ಮಾಡಿಂಡುವರನ ।ಏ। ಕುರುಬರನ
ಬಾ ನನ್ನ ಮಾ ಗುರುವೆ ।।ಮು, ಹಿ।।

ಏ ಮಾಡೇವುಂಡವರೆಗೆ ಕುರುಬರ ಮಗಳಿಗೆ
ಮೂಲವಾಗ್ಯಾನೆ ।ಏ। ಮುದಿಗೊರವ
ಬಾ ನನ್ನ ಮಾ ಗುರುವೆ ।।ಮು, ಹಿ।।

ಅಟ್ಟದಾಗೆ ಇರುವ ಸರೆಬಡಿಗೆ ತಾಗೊಂಡು
ಕುಟ್ಟೆ ಕೊಮಾಲಿ ।ಏ। ಗೊರವಯ್ಯ
ಬಾ ನನ್ನ ಮಾ ಗುರುವೆ ।।ಮು, ಹಿ।।

ಹರಕು ಬಾಯಿ ಶೀಲವನೇ ಮುರುಕದಾ ತಾಳವನೇ
ಒಡಕು ಡೋಣಿಯವನೇ ।ಏ। ಮುದಿಮಲ್ಲ
ಬಾ ನನ್ನ ಮಾ ಗುರುವೆ ।।ಮು, ಹಿ।।

ಹಾ ಬಡಕೀನೇ ಡೋಣ್ಯವನೇ ಮುದಿಮಲ್ಲನು ಮಾಡುವುದು
ಮುದ್ದಿ (ಬುದ್ದಿ)? ಒಬ್ಬರಿಗೆ ।ಏ। ಸಿಗವಲ್ಲದು
ಬಾ ನನ್ನ ಮಾ ಗುರುವೆ ।।ಮು, ಹಿ।।

ಆsss ಸ್ವಾಮೀಯ ಕರ್ತೂರ್ಕ ಕೇಳಿದಂಥ ಭಕ್ತರಿಗೆ
ಮಾಡಿದ ಪಾದ ।ಏ। ಪರಿಹಾರ
ಬಾ ನನ್ನ ಮಾ ಗುರುವೆ ॥ಮು, ಹಿ॥

ಸಂದಿ ಮುಗುದಾ ಮ್ಯಾಲೆ ತಂದಾರೊಂದೀಳೆವು
ಗಂಡು ಸಂತಾನ ।ಏ। ಪಡಿಯವರೆ
ಬಾ ನನ್ನ ಮಾ ಗುರುವೆ ॥ಮು, ಹಿ॥

ಆ ಗಂಡು ಮಗನ ಕೊಡು ದಾನ ಭಾಗ್ಯವ ಕೊಡು
ಹಿಂಡೆಮ್ಮಿ ಕೊಡು ।ಏ। ಮನಿವೊಳಗೆ
ಬಾ ನನ್ನ ಮಾ ಗುರುವೆ ॥ಮು, ಹಿ॥

ಹಿಂಡೆಮ್ಮಿ ಕೊಡುವಯ್ಯ ಮದ್ದಾಲಿ ಗೊರವಯ್ಯ
ಅಂಬಾಲಿ ಮ್ಯಾಲಿ ।ಏ। ಶಿವಧ್ಯಾನ
ಬಾ ನನ್ನ ಮಾ ಗುರುವೆ ॥ಮು, ಹಿ॥

ಅಂಬುವಾಲಿಯ ಮ್ಯಾಲೆ ಶಿವಧ್ಯಾನ ಕೊಟ್ಟರೆ
ತಿಂಗಳ ನಿನ ಗಿರಿಗೆ ।ಏ। ಬರುತಾರೊ
ಬಾ ನನ್ನ ಮಾ ಗುರುವೆ ॥ಮು, ಹಿ॥

ಆsss ತಿಂಗಳು ನಿನಗಿರಿಗೆ ಬರುತಾರೋ ಭಕ್ತರು
ಬಂದ ಕಷ್ಟಗಳನ್ನು ।ಏ। ಪರಿಹರಿಸೋ
ಬಾ ನನ್ನ ಮಾ ಗುರುವೆ ॥ಮು, ಹಿ॥

ಶಿವನೇ ಸಾಂಬಾ ಶಿವಲಿಂಗೇಶ್ವರ
ಕಲಬುರಗದಯ್ಯ ಮೈಲಾರಲಿಂಗ
ಮಲ್ಲಿಕಾರ್ಜುನ
ಬಹುಫರಾಕ್ ಏಳುಕೋಟಿ..... ಏಳುಕೋಟೆ ॥ಮು, ಹಿ॥

ಹಾಡು - ೨

ಹಾ ಬಿಳಿಯ ತೇಜಿನ ಏರಿದ ಮಲ್ಲ
ಚೋಳ ರಾಯರ ಕಾಲದಲ್ಲಿ ॥ಮು॥ ॥ಪ॥

ಬಿಳಿಯ ತೇಜಿನ ಏರಿದ ಮಲ್ಲ
ಚೋಳ ರಾಯರ ಕಾಲದಲ್ಲಿ ॥ಹಿ॥

ಬಿಳಿಯ ತೇಜಿನ ಏರಿದ ಮಲ್ಲ
ಚೋಳ ರಾಯರ ಕಾಲದಲ್ಲಿ ॥ಮು॥

ಬಿಳಿಯ ತೇಜಿನ ಏರಿದ ಮಲ್ಲ
ಚೋಳ ರಾಯರ ಕಾಲದಲ್ಲಿ ॥ಹಿ॥

ಬೇಟೆಯ ನಾಡುತ ಬಂದಾನೊ
ಬೇತಾಳನ ಬೆನ್ಹತ್ತಿ ॥ಮು॥

ಬೇಟೆಯನಾಡುತ ಬಂದಾನೊ
ಬೇತಾಳ ಬೆನ್ಹತ್ತಿ ॥ಹಿ॥

ಕಾಲೆಲ್ಲ ಕೆಂದೂಳವಯ್ಯ
ಮುಖವೆಲ್ಲ ಬೆಳು ಉಗುರಿನ ಗಾಯ ॥ಮು॥

ಕಾಲೆಲ್ಲ ಕೆಂದೂಳವಯ್ಯ
ಮುಖವೆಲ್ಲ ಬೆಳು ಉಗರಿನ ಗಾಯ ॥ಹಿ॥

ಕಾಲೆಲ್ಲ ಕೆಂದೂಳವಯ್ಯ
ಮುಖವೆಲ್ಲ ಬೆಳು ಉಗಿರಿನ ಗಾಯ ॥ಮು॥

ಎಲ್ಲಿ ಆಡಿ ಬಂದ್ಯೋ ಎನ್ನ
ಸಾಟಿಗಾರ ಮಲ್ಲ ॥ ಎಲ್ಲರೂ॥
ಎಲ್ಲಿ ಆಡಿ ಬಂದ್ಯೋ ನನ್ನ
ಮೋಡಿಕಾರ ಮಲ್ಲ ॥ಹಿ॥

ಹಾ ss ಟೆಂಕಣ ಸೀಮಿಗೆ ಹೋಗಿದ್ದೆ ಮಾಳ
ಸುಂಕದ ಬದುಕು ಮಾಡಲಿಕ್ಕೆ ॥ಮು॥
ಟೆಂಕಣ ಸೀಮಿಗೆ ಹೋಗಿದ್ದೆ ಮಾಳಿ
ಸುಂಕದ ಬದುಕು ಮಾಡಲಿಕ್ಕೆ ॥ಹಿ॥
ಟೆಂಕಣ ಸೀಮೆಗೆ ಹೋಗಿದ್ದೆ ಮಾಳಿ
ಸುಂಕದ ಬದುಕು ಮಾಡಲಿಕ್ಕೆ ॥ಮು॥
ಕುಂಕುಮ ಬೇಣೆ (ದೇವಿ)? ಕೆಳೆಯಾಕೆ ಬಿದ್ದು
ಉರುಳಿತೇನು ಮಾಳ ॥ ಎಲ್ಲರು॥
ಹಾ ss ಬಿದ್ದರೇನು ಆದಿತು ಮಲ್ಲ
ಹುಬ್ಬಿಗೆ ನಸುಲೊಂದೊಡೆಯವಲಿಲ್ಲ ॥ಮು॥
ಬಿದ್ದರೇನು ಆದಿತು ಮಲ್ಲ
ಹುಬ್ಬಿಗೆ ನಸುಲೊಂದೊಡೆಯವಲಿಲ್ಲ ॥ಹಿ॥
ಬಿದ್ದರೇನು ಆದಿತು ಮಲ್ಲ
ಹುಬ್ಬಿಗೆ ನಸುಲೊಂದೊಡೆಯವಲಿಲ್ಲ ॥ಮು॥
ಶೃಂಗಾರಾಗಿ ನಾಲಕು ಕಲ್ಲಾ
ಕಳಸ ಬೀಳಲಿಲ್ಲ
ಶೃಂಗಾರಾಗಿ ನಾಲಕು ಕಲ್ಲು
ಉರುಳು ತೇಳಲಿಲ್ಲ ॥ ಎ॥

ಏ ss ಆರರು ಮಕ್ಕಳು ಇಲ್ಲೆಳು ಮಲ್ಲ
ಆರುಪಿಗೆ ಮಕ್ಕಳು ಇಲ್ಲೇನು ಮಲ್ಲ ॥ಮು, ಹಿ॥
ಆರರು ಮಕ್ಕಳು ಇಲ್ಲೇಳು ಮಲ್ಲ
ಆರುಪಿಗೆ ಮಕ್ಕಳು ಇಲ್ಲೇನು ಮಲ್ಲ ॥ಮು॥

ಶೀಲವಂತ ಶಿವಭಕ್ತರು ಮಕ್ಕಳಿಲ್ಲವೇನು ಮಲ್ಲ ॥ ಎ ॥

ಆರರು ಮಕ್ಕಳು ಇಲ್ಲಲೆ ಮಾಳಿ
ಆರುಪಿಗೆ ಮಕ್ಕಳು ಇಲ್ಲಲೆ ಮಾಳಿ ॥ಮು. ಹಿ॥
ಆರರು ಮಕ್ಕಳು ಇಲ್ಲಲೆ ಮಾಳಿ
ಆರುಪಿಗೆ ಮಕ್ಕಳು ಇಲ್ಲಲೆ ಮಾಳಿ ॥ಮು, ಹಿ॥
ಶೀಲವಂತ ಶಿವಭಕ್ತರು ಮಕ್ಕಳೆಲ್ಲ ಕಾಸೇ ಮಾಳಿ ॥ಎ॥
ಹಡ್ಡ ಗಂಬಳಿ ಹೊದಿಯಲು ಬೇಕು
ದೊಡ್ಡ ಬಡಿಗೊಂದು ಹಿಡಿಯಲು ಬೇಕು ॥ಮು, ಹಿ॥
ಹಡ್ಡ ಗಂಬಳಿ ಹೊದಿಯಲು ಬೇಕು
ರೊಡ್ಡ ಬಡಿಗೊಂದು ಹಿಡಿಯಲು ಬೇಕು ॥ಮು॥
ಗುಡ್ಡಾದ ಅಂಚೀಲಿ ಕುರಿಯ
ಕಾಯಬೇಕು ಮಲ್ಲ
ಗುಡ್ಡಾದ ಅಂಚೀಲಿ ಮರಿಯ
ಮೇಸುಬೇಕು ಮಲ್ಲ ॥ ಎ ॥

ಹೇss ಹಡ್ಡ ಗಂಬಳಿ ಹೊದಿಯಲುತೀನಿ
ರೊಡ್ಡ ಬಡಗೊಂದು ಹಿಡಿಯತೀನಿ ॥ಮು. ಹಿ॥

ಹಡ್ಡ ಗಂಬಳಿ ಹೊದಿಯಲುತೀನಿ
ರೊಡ್ಡ ಬಡಿಗೊಂದು ಹಿಡಿಯತೀನಿ ॥ಮು, ಹಿ॥
ಗುಡ್ಡಾsದ ಅಂಚೀಲಿ ಕುರಿಯು
ಕಾಯುತೀನಿ ಮಾಳಿ
ಗುಡ್ಡಾದ ಅಂಚೀಲಿ ಮರಿಯು
ಮೇಸುತೀನಿ ಮಾಳಿ ॥ ಎ ॥

ಕೈಯ್ಯ ಜಿಡ್ಡೆ ಕಾಲು ಜಿಡ್ಡೆ
ಮುಖವೊ ವೊಂಕಳ ಜಿಡ್ಡೆ ॥ಮು. ಹಿ॥

ಕೈಯ್ಯ ಜಿಡ್ಡೆ ಕಾಲು ಜಿಡ್ಡೆ
ಮುಖವೋ ವೊಂಕಳ ಜಿಡ್ಡೆ ॥ಮು॥
ಅಡ್ಡ ಬಂದಾರಿಗಾವದ ಜಿಡ್ಡೆ ನಾಳುತಾವೆ
ಅಡ್ಡ ಬಂದಾರಿಗಾವದ ಜಿಡ್ಡೆನಾರುತಾಳೆ ॥ ಎ ॥

ಕೈಯ ಜಿಡ್ಡೆ ಕಸ್ತೂರಿ
ಮೈಯ ಜಿಡ್ಡೆ ಮಾಣಿಕ್ಯ ॥ಮು. ಹಿ॥
ಕೈಯ ಜಿಡ್ಡೆ ಕಸ್ತೂರಿ
ಮೈಯ ಜಿಡ್ಡೆ ಮಾಣಿಕ್ಯ ॥ಮು॥
ಮೈಯೆಲ್ಲ ಜಿಡ್ಡೆ ಮಾಳಿ
ಮುಳುಗು ಮಲ್ಲಿಗೆಂದ
ಮೈಯೆಲ್ಲ ಜಿಡ್ಡೆ ಮಾಳಿ
ಮುರುಗು ಮಲ್ಲಿಗೆಂದ ॥ ಎ॥

ಕುರುಬರ ಕನ್ಯೆನ ಕೂಡಿದರೆ
ಕುರಿಗೊಳಾದರೆ ಮೇಸಲು ಬೇಕು ॥ಮು. ಹಿ॥
ಕುರುಬರು ಕನ್ಯೆನ ಕೂಡಿದರೆ
ಕುರಿಗೊಳಾದರು ಮೇಸಲು ಬೇಕು ॥ಮು॥
ಮರಿಗೆ ಮೇವು ತಂದು ನೀನು
ಹಾಕಬೇಕು ಮಲ್ಲ
ಮರಿಗೆ ಮೇವು ತಂದು ನೀನು
ಮೇಸುಬೇಕು ಮಲ್ಲ ॥ ಎ ॥

ಕುರುಬರ ಕನ್ಯೆನ ಕೂಡತೀನಿ
ಕುರಿಗೊಳಾದರೆ ಮೇಸತೀನಿ ॥ಮು. ಹಿ॥
ಕುರುಬರ ಕನ್ಯೆನ ಕೂಡತೀನ
ಕುರಿಗೊಳಾದರೆ ಮೇಸತೀನಿ
ಮರಿಗೆ ಮೇವು ತಂದು ನಾನು

ಹಾಕುತೀನಿ ಮಾಳಿ
ಮರಿಗೆ ಮೇವು ತಂದು ನಾನು
ಮೇಸುತೀನಿ ಮಾಳಿ ॥ ಎ ॥

ಬಿಳಿಯ ತೇಜಿನ ವೇರಿದ ಮಲ್ಲ
ಚೋಳರಾಯರ ಕಾಲದಲ್ಲಿ ॥ಮು. ಹಿ॥
ಬಿಳಿಯ ತೇಜಿನ ವೇರಿದ ಮಲ್ಲ
ಚೋಳರಾಯರ ಕಾಲದಲ್ಲಿ ॥ಮು॥
ಬೇಟೆಯನಾಡುತ ಬಂದಾನೋ
ಬೇತಾಳನ ಬೆನ್ಹತ್ತಿ ॥ ಎಲ್ಲರೂ ॥

**ಹಾಡು - ೩**

ಅSS ಮಾಯಿಕಾರ
ಭೂಚಕ್ರ ಗುಡುಗು ಎತ್ತ್ಯಾನಲ್ಲೋ
ದೇವಾರ ದೇವ ॥ಮು॥

ಅSS ಮಾಯಕಾರ
ಭೂಚಕ್ರ ಗುಡುಗು ಎತ್ತ್ಯಾನಲ್ಲೋ
ದೇವಾರದೇವ ॥ಹಿ॥

ಆ ಮೈಲಾರಲಿಂಗ
ಭೂಚಕ್ರ ಗುಡುಗು ಎತ್ತ್ಯಾನಲ್ಲೋ
ದೇವಾರು ದೇವೋ ॥ಮು. ಹಿ॥

ಭೂಚಕ್ರ ಗುಡುಗ ಎತ್ತ ತೊಟ್ಟಿಗೆSS
ಕೆರೆಯ ಹೊಳೆಯ ಮಾಳಮ್ಮ ಗೆ ಕೇಳಿಸ್ಯೆತೋSS ॥ಮು॥
ಆ ಮಾಳಮ್ಮ ಗ ಕೇಳಿಸ್ಯೆತೋSS
ಈಗ ಇನ್ನು ಅಲ್ಲಿಗೆ ಬಂದಳಲ್ಲೆ ॥ಮು॥

ಮಾಳಮ್ಮಗೆ ಕೇಳಿಸಿತ್ತೈತೋ
ಈಗ ಇನ್ನು ಅಲ್ಲಿಗೆ ಬಂದsಳಲ್ಲೇ ॥ಹಿ॥

ಏss ಅಲ್ಲಿಗೆ ಬಂದಾಳಲ್ಲೆ ಮಾಳಮ್ಮ ದೇವಿ
ಗೊರವಯ್ಯನ ಕೇಳುತಾಳೆ ॥ಮು. ಹಿ॥

ಏss ಮಾಯಕಾರ
ಎಲ್ಲಿಗೆ ನೀನು ಹೋಗುತಿಯೋ
ದೇವಾರು ದೇವಾ ॥ಮು. ಹಿ॥

ಏss ಮಾಳಲ ದೇವಿಯ
ಹೋಗಂತ ಸಮಯದೊಳಗೆ ತಕರಾರು ಮಾಡಬೇಡ
ದೇವಾರ ದೇವಾ ॥ಮು. ಹಿ॥

ಇವತ್ತು ಹೋಗುತೀನಿ। ಮಾಳಲದೇವಿ
ನಾಳೇಗೆ ಬರುತೀನಿ ॥ಮು. ಹಿ॥

ಕೊಟ್ಟೂರು ಸೀಮೆಯಲ್ಲಿ। ಭಕ್ತರು
ಎತ್ತು ಕೊಡುತ್ತೀನಿ ಅಂದಾರೆss ॥ಮು, ಹಿ॥

ಆss ಮುಂದೆತ್ತಿಗೋಗುಕಿನ್ನ । ಎನ್ನ ಸ್ವಾಮಿ
ಹಿಂದೆತ್ತಿಗೇನು ಕಡಿಮೆ ॥ಮು. ಹಿ॥

ಆss ಹಿಂದೆತ್ತಿಗೇನು ಕಡಿಮೆ । ಮಾಯಾಗಾರ
ಗುಡ್ಡಕ್ಕೆ ಬರುತಾರೆ ॥ಮು. ಹಿ॥

ಆss ಮೂಡಲ ಸೀಮೆಯಲ್ಲಿ । ಭಕ್ತರು
ಹೋರಿ ಕೊಡುತೀನೆಂದರು ॥ಮು. ಹಿ॥

ಆ ಬಂದ್ಹೋರಿಗೋಗದರೆನ್ನು । ಎನ್ನಸ್ವಾಮಿ
ಹಿಂಡ್ಹೋರಿಗೇನು ಕಡಿಮೆ ॥ಮು. ಹಿ॥

ಆ ಹಿಂಡ್ಹೋರಿಗೇನು ಕಡಿಮೆ । ಮಾಯಕಾರ
ಗುಡ್ಡಕ್ಕೆ ಬರುತಾವೋ ॥ಮು. ಹಿ॥

ಏsss ಮಾಳಮ್ಮ ದೇವಿ
ನನ್ನ ಬೆನ್ನಗಳ ಹತ್ಯಾಳಲ್ಲ
ದೇವಾರು ದೇವ ॥ಮು. ಹಿ. ॥

ಈಗ ನಾನು ಜಾವಲಿ ಸಂಗ್ಯಾನ
ಕರಸನ ಕರಸಬೇಕು
ದೇವಾರು ದೇವ ॥ಮು. ಹಿ॥

ಆ ಮಾಯಿಕಾರನ
ಜಾವಲಿ ಸಂಗ್ಯಾನ ಕರಿಸ್ಯಾನ
ದೇವಾರು ದೇವ ॥ಮು. ಹಿ॥

ಸಿಕ್ಕೇನಾ ಜಾವಲ ಬನ್ಹತ್ತಿ ಬರುತಾವೆ
ತಿರುಗೊಮ್ಮೆ ನೋಡೆ ದೊರಿ ಗಂಗಾ
ದೇವಾರು ದೇವಾ ॥ಮು. ಹಿ॥

ಆ ಮಾಳಮ್ಮ ತಿರುಗಿಯ ನೋಡೊತ್ತಿಗ್ಸ ।
ಕರಿಯ ಹೊಳಿಯ
ಮಲ್ಲಯ್ಯ ಮಾಯಾ ಆಗೋದಾ ॥ಮು. ಹಿ॥

ಆ ಮಾಳಮ್ಮ ತಿರುಗೀ ನೋಡೊತ್ತಿಗೆ
ಕರಿಯ ಹೊಳಿಯ
ಮಲ್ಲಯ್ಯ ಮಾಯಾ ಆಗ್ಹೋದ ॥ಮು. ಹಿ॥

ದುಃಖಗಳು ಮಾಡುತಾಳೆ ಮಾಳಮ್ಮ
ಕಣ್ಣೀರು ಚೆಲ್ಲುತಾಳೆ ॥ಮು.ಹಿ॥

ಪುರುಷರಿಲ್ಲದ ಜೀವಾss ಶಿವಾ ಶಿವಾ
ಬೀಳ ಮಂಚವಾಗೈತೇ ॥ಮು.ಹಿ॥

ಗಂಡರಿಲ್ಲದ ಜೀವಾ ಶಿವಾ ಶಿವಾ
ಬೀಳ ಮಂಚವಾಗೈತೇ ॥ಮು.ಹಿ॥

ಈss ಮಾಳಲ ದೇವಿ
ಸಿಟ್ಟಿಗೆ ತಾನೆ ಬಂದಾಳಲ್ಲss
ದೇವಾರ ದೇವ ॥ಮು.ಹಿ॥

ಈ ಮಾಳಲ ದೇವಿ
ಮಲ್ಲಯ್ಯಗ ಶಾಪಾವ ಕೊಡುತಾಳೆ
ದೇವಾರ ದೇವ ॥ಮು.ಹಿ॥

ಈ ಮಾಳಲ ದೇವಿ
ಉಗ್ರವತಾರ ತಾಳ್ಯಾಳಲ್ಲss
ದೇವಾರು ದೇವ ॥ಮು,ಹಿ॥

ಹೋಗಂತ ಗೊರವೈಗೆss ಹಡದಮ್ಮ
ಹಾವಾದರ ಕಚ್ಚಲೇಳೆ ॥ಮು.ಹಿ॥

ಹುಲಿ ಆದರೆ ನುಂಗಲೇಳೆss ಹಡೆದಮ್ಮ
ಚೋಳಾದರೂ ಕಚ್ಚಲೇಳೆ ॥ಮು.ಹಿ॥

ಏss ಮಾಳಮ್ಮ ಸಾಪುಸದss ಊರಾಮುಂದಲಾ
ಹನುಮಪ್ಪ ಕೇಳನಲ್ಲೇ ॥ಮು.ಹಿ॥

ಹನುಮಪ್ಪ ಕೇಳನಲ್ಲೇSS ಈಗ ಇನ್ನ
ಅಲ್ಲಿಗೆ ಬಂದನಲ್ಲೇ SS ||ಮು. ಹಿ||

ಅಲ್ಲಿಗೆ ಬಂದನಲ್ಲೇSS। ಹನುಮಪ್ಪ
ಮಾಳಮ್ಮನ ಕೇಳುತಾನೆ ||ಮು. ಹಿ||

ಯಾಕಮ್ಮ ಗೌರಿಗಂಗSS ಈಗ ನಿನ್ನ
ಮಾರಿ ಕಿನ್ನೂರ‍್ಯಾಗ್ಯಾವೆSS ||ಮು. ಹಿ||

ಮಾರ‍್ಯಾಕಿನ್ನೂರ‍್ಯಾಗ್ಯಾವೇ ಗುಡ್ಡದಾ
ಮಲ್ಲ ಎಲ್ಲಿಗೆ ಹೋಗ್ಯಾವನೇ ||ಮು. ಹಿ||

ಇದ್ದು ಮಾತು ಇದ್ದಂಗ
ಹೇಳಿದರೆ ಹನುಮಣ್ಣ
ಬಾಲಕ ಬಂಗಾರ ಬಿಗಿಸ್ತಿನೋ
ದೇವಾರು ದೇವ ||ಮು. ಹಿ||

ಏSS ಹನುಮಣ್ಣ
ಕಂಡುಗದೆ ಕೋರುವಣ್ಣ ನೀಡುಸ್ಥಿನೋ
ದೇವಾರು ದೇವಾ ||ಮು. ಹಿ||

ಏSS ಹನುಮಪ್ಪಾ
ಮುತ್ತಿನ ತುರಾಯಿ ಮಾಡಿಸ್ಥಿನೋ
ದೇವಾರು ದೇವ ||ಮು. ಹಿ||

ಇದ್ದ ಮಾತು ಇದ್ದಂಗ
ಹೇಳತಿನಿ ನನ್ನ ತಂಗಿ
ಸಿಟ್ಬಾಗ ಬ್ಯಾಡ ನನ ಮ್ಯಾಲೆSS
ದೇವಾರು ದೇವ ||ಮು. ಹಿ||

ಇದ್ದ ಮಾತು ಇದ್ದಂಗ
ಹೇಳಿದರೆ ನನ್ನ ಅಣ್ಣ
ಸಿಟ್ಯಾಗೋದಿಲ್ಲ ನಿನ್ನ ಮ್ಯಾಲೆss
ದೇವಾರು ದೇವ ॥ಮು, ಹಿ॥

ಹಿಂದೆ ಆರು ತಿಂಗಾಳೂss
ಮುಂದೆ ಆರು ತಿಂಗಾಳೂ
ನುಚ್ಚು ನೂರು ಪಟ್ಟಣಕೆ
ನೆಲೆಯ ನಿಂತಾನು
ದೇವಾರು ದೇವ ॥ಮು. ಹಿ॥

ಆ ಮಾಯಿಕಾರ ನಿನಗೆ
ವೈರಿನಾ ತರಲು ಹೋಗ್ಯಾನ
ದೇವಾರು ದೇವಾ ॥ಮು. ಹಿ॥

ಆss ಮಾಯಿಕಾರss ನಿನ ಮೇಲೆ
ಸವತಿನ ತರಲು ಹೋಗ್ಯಾನ
ದೇವಾರು ದೇವ ॥ಮು. ಹಿ॥

ಏss ಹನುಮಪ್ಪ
ಎಂತಾ ಮಾತುಗಳು ಹೇಳಿದಲ್ಲೋ
ದೇವಾರು ದೇವ ॥ಮು. ಹಿ॥

ಅಣ್ಣಣ್ಣ ಅಂತೆಂದೂ
ನಾ ಬಾಳಾ ನಂಬಿದ್ದೇ
ಅಣ್ಣಲ್ಲಾ ಹೋಗೋ ದುಸುಮಾನ
ದೇವಾರು ದೇವ ॥ಮು. ಹಿ॥

ಏಽಽ ಹನುಮಪ್ಪ
ನಮ್ಮ ಅಂಗಳಕ ಬರಬ್ಯಾಡೋ
ದೇವಾರು ದೇವ ॥ಮು.ಹಿ॥

ಏ ಹನುಮಪ್ಪ
ನಮ್ಮ ಹೊಸ್ತುಲಿಯ ದಾಟುಬ್ಯಾಡೋ
ದೇವಾರು ದೇವ ॥ಮು.ಹಿ॥

ಆ ಹನುಮಪ್ಪ
ಗುಡಿ ನಡುದಾನ ಕುಂತುಗೊಂಡಾ
ದೇವಾರು ದೇವ ॥ಮು.ಹಿ॥

ಆ ಹನುಮಪ್ಪ
ಗುಡಿ ನಡುದಾನ ಕುಂತುಗೊಂಡಾ
ದೇವಾರು ದೇವ ॥ಮು.ಹಿ॥

ಈ ಮಾಳಲದೇವಿ
ಗುಡಿಯೊಳಗೆ ತಾನೆ ಕುಂತಾಳಲ್ಲ
ದೇವಾರು ದೇವ ॥ಮು.ಹಿ॥

ಆ ಮಾಯಾಕಾರ
ನುತು ನೂರು ಪಟ್ಟಣಕ ನೆಲೆಯ ನಿಂತ
ದೇವಾರು ದೇವ ॥ಮು.ಹಿ॥

## ಹಾಡು - ೪

ಆss ಕೋರಿ ಅಂಗಿ ತೊಡುವನಂತೆ
ಕೋರಿ ಅಂಗಿ ತೊಡುವನಂತೆ
ಕೈಯಾಗ ಜಲುಮ ಒರಸುವನಂತೆ
ಭಕ್ತರ ಮನೆಗೆ ಹೋಗುವನಂತೆ
ಹೊರ ಹೊರಗ ತಿರುಗಾಡುವನಂತೆ
ಎತ್ತಲೋದss
ಎತ್ತಲೋದ ನಮ್ಮ ದೇವರೋss ಮೈಲಾರಲಿಂಗ
ಚಿತ್ತದೊಳಗ ನೆನಿಯನೆಂದಿರೆ ॥ಮು. ಹಿ॥
ಏss ಹನ್ನೆರಡಾಳು ಸೇದೋ ಬಾವಿ
ಹನ್ನೆರಡಾಳು ಸೇದೋ ಬಾವಿ
ಕುಂತು ಜಪ ಮಾಡುವರಂತೆ
ನಿಂತು ಜಪ ಮಾಡುವರಂತೆ
ಏss ಅಂಗೈ ಮ್ಯಾಗಳ ಲಿಂಗವ ಹೋಗಿ
ಗಂಗೆ ಸ್ಥಳಗೊಂದಾಡುತ್ತಿತ್ತು
ಎತ್ತಲೋದss
ಎತ್ತಲೋದ ನಮ್ಮ ದೇವರು । ಮೈಲಾರ ಲಿಂಗ
ನೆನೆದರೆ ಮನದೊಳಗದಿಯ ನನ್ನಿರೆ ॥ಮು. ಹಿ॥

ಏss ಬಾಳಿಯ ತೋಟಕೋಗುವನಂತೆ
ಏ ಬಾಳಿಯ ತೋಟಕೋಗುವನಂತೆ
ಬಾಗಿ ಭಿಕ್ಷೆ ಬೇಡುವನಂತ
ಆss ಹೋಗಿ ಭಿಕ್ಷ ಬೇಡುವನಂತ

ಆss ಭಿಕ್ಷ ಹಾಕೊಂದಾರುನೂರು
ಲಕ್ಷ ಜನರನು ಸಲಹುನಂತೆ
ಎತ್ತಲೋದss
ಎತ್ತಲೋದ ನಮ್ಮ ದೇವರು । ಮೈಲಾರಲಿಂಗ
ಡಿಂಬದೊಳಗದಿಯನನ್ನಿ ॥ಮು. ಹಿ॥

ಆss ಅಡಕಿಯ ತೋಟಕ್ಹೋಗುವನಂತೆ
ಅಡಕಿಯ ತೋಟಕ್ಹೋಗುವನಂತೆ
ಅಡಿಕೆ ಭಿಕ್ಷೆ ಬೇಡುವನಂತೆ
ಕುಂತು ಭಿಕ್ಷೆ ಬೇಡುವನಂತೆ
ಆss ಕಾಟಿಗರೆಲ್ಲ ಕೂಡಿಕೊಂಡು
ಕೀಟಲೆ ತಾನವ ಮಾಡುವರಂತೆ
ಎತ್ತಲೋದss
ಎತ್ತಲೋದ ನಮ್ಮ ದೇವರು । ಮೈಲಾರಲಿಂಗ
ನೆನೆದರೆ ಮನದೊಳಗದಿಯ ನೆನ್ನಿರೇss ॥ಮು. ಹಿ॥

ಆss ಕುರುಬರ ಮಗಳು ತರುವನಂತೆ
ಕುರುಬರ ಮಗಳು ತರುವನಂತೆ
ಜಂಭುದ್ವೀಪ ತೋರುವನಂತೆ
ಆss ಮುಕ್ಕಣ್ಣ ವೇಷ ವೀರ
ಮುದಿಮಲ್ಲ ದೇವರಂತೆ
ಎತ್ತಲೋದs
ಎತ್ತಲೋದ ನಮ್ಮ ದೇವರು । ಮೈಲಾರಲಿಂಗ
ಶರೀರದೊಳಗೊಂದದಿಯ ನನ್ನೀರೇss ॥ಮು. ಹಿ॥

ಮೈಲಾರಲಿಂಗ ಚಿತ್ತದೊಳಗೊಂದದಿಯ ನನ್ನೀರೇ ss॥ಮು॥
ಮೈಲಾರಲಿಂಗ ಚಿತ್ತದೊಳಗೊಂದದಿಯ ನನ್ನೀರೇ ss॥ಹಿ॥

ಮೈಲಾರಲಿಂಗ ಬಿಂಬದೊಳಗೊಂದದಿಯ ನನ್ನೀರೇ ss॥ಮು॥
ಮೈಲಾರಲಿಂಗ ಬಿಂಬದೊಳಗೊಂದದಿಯ ನನ್ನೀರೇ ss॥ಹಿ॥

ಮೈಲಾರಲಿಂಗ ಶರೀರದೊಳಗೊಂದದಿಯ ನನ್ನಿರೇss ॥ಮು॥
ಮೈಲಾರಲಿಂಗ ಶರೀರದೊಳಗೊಂದದಿಯ ನನ್ನಿರೇ ss॥ಹಿ॥

ಮೈಲಾರಲಿಂಗ ನೆನೆದರೆ ಮನದೊಳಗೊಂದದಿಯ ನನ್ನೀರೇss ॥ಮು॥
ಮೈಲಾರಲಿಂಗ ನೆನೆದರೆ ಮನದೊಳಗೊಂದದಿಯ ನನ್ನೀರೇ ss॥ಹಿ॥

ಕಂಡು ಕರಗಳ ಪಿಡಿದ। ಕಾಳಗದಿಂದ
ಗೊರವ ರೂಪವ ತಾಳಿದ
ಆ ಮನದಿಂದ
ವಗ್ಗ ರೂಪವ ತಾಳಿದೋ
ಸ್ವಾಮಿ ಕರುದರೋ ಓ ಎಂಬ ಕರಿಯಾಲದೊಳಿರುವ
ಗಿರಿಗೆ(ಜೆ) ಮಲ್ಲಯ್ಯ ಬಂದಾನಯ್ಯೋss ।।ಮು. ಹಿ।।

ಇಷ್ಟ ಹೋಮ ಪೂಸಿದ । ಮೈಲಾರಲಿಂಗ
ತೊಟ್ಟಂತ ಭೂಷಣಯ್ಯ
ನನ್ನ ಮೈಲಾರಲಿಂಗ ಉಟ್ಟಂತ ಭೂಷಣಯ್ಯೋss
ಸ್ವಾಮಿ ನಟ್ಟನಡುವೊಬ್ಬ ಶಿಶುವೇ ಜನ್ಮಿಸಿದಂತೆ
ಪಟ್ಟದ ದೊರೆ ಬಂದನಯ್ಯಾ ss।।ಮು. ಹಿ।।
ಪಟ್ಟದ ದೊರೆ ಬಂದನಯ್ಯಾ
ಸ್ವಾಮಿ ನಟ್ಟ ನಡುವೊಬ್ಬ ಶಿಶುವೇ ಜನ್ಮಿಸಿದಂತೆ
ಪಟ್ಟದ ದೊರೆ ಬಂದಾನಯ್ಯ ss ।।ಹಿ।।

ಈತಾನು ಗುರುರಾಯನ ಬಂಢಾರಕ್ಕೆ
ಈತನು ಕಲಿರಾಯನು ಬಂಢಾರಕ್ಕೆ
ಈತನು ಧರ್ಮಕರ್ತನು
ಸ್ವಾಮಿ ಗೋಮುನಿ ಕರಣದಲಿ
ಜನ್ಮಿಸಿ ಬರುವಂತ
ಗೋಮುನಿರಾಯ ಬಂದನಯ್ಯ ।।ಮು. ಹಿ।।

ಪೊಡವಿಗೆ ಮಿಗಿಲಾದನೋ। ಮೀನಗುಂದಿ
ಪಡಿಯಲ್ಲಿ ನೆನೆದಂತನೋ ಮೈಲಾರಲಿಂಗ
ಸ್ಥಳದಲ್ಲಿ ಇದ್ದಂತನನೋ
ಸ್ವಾಮಿ ಬಡವ ಪಾಲಿಪ ನಮ್ಮ
ದಿಡವ ಜಜ್ಜಿದ ಮೇಲೆ
ಕೊಡುವರಂತೆ ದೇವರಾರ್ರಯ್ಯೋ ।।ಮು. ಹಿ।।

ಹೋಗಿ ನೋಡಲು ಬನ್ನಿರೆ ಮಲ್ಲಯ್ಯನ
ವರವ ಬೇಡಾನು ಬನ್ನಿರೇ
ಮಲ್ಲಯ್ಯನ ಜಾತಿರಿ ನೋಡೋನು ಬನ್ನಿರೈ
ಸ್ವಾಮಿ ವನದೊಳಗಿರುವಂತ ಘನ ಮಹಾಂತೇಶನ
ಪೂಜೆಗೊಳ್ಳೋಣ ಬನ್ನಿರೆ ॥ಮು. ಹಿ॥

ಹಸ್ತಿ ನೋಡೋಣ ಬನ್ನಿರೆ
ಗುಡ್ಡದಯ್ಯನ। ಸುತ್ತೇಳು ಇಹ ಲೋಕವು
ನೀಲಂದಾನು। ನಿಧಿಯೋಳ ಇಹ ಲೋಕವು
ಸ್ವಾಮಿ ಮುತ್ತಿನಾರುತಿಯ ಎತ್ತಿ
ಮುಕುತಾಗ ದುಡಿಯಿವರು ಸತ್ಯುಳ್ಳ ಶರಣಯ್ಯ ॥ಮು॥

ಸ್ವಾಮಿ ಮುತ್ತಿನಾರುತಿ ಎತ್ತಿ
ಮುಕುತ್ಯಾಗ ದುಡಿಯುವರು
ಸತ್ಯುಳ್ಳ ಶರಣಯ್ಯ ॥ಮು. ಹಿ.॥

ಹಸ್ತಿ ನೋಡೋಣ ಬನ್ನಿರೆ
ಗುಡ್ಡದಯ್ಯನ। ಸುತ್ತೇಳು ಇಹಲೋಕವು
ನೀಲಂದಾನು। ನಿಧಿಯೋಳು ಇಹಲೋಕವು
ಸ್ವಾಮಿ ಮುತ್ತಿನಾರುತಿಯ ಎತ್ತಿ
ಮುಕುತಾಗ ದುಡಿಯುವರು
ಸತ್ಯುಳ್ಳ ಶರಣಯ್ಯ ॥ಮು॥
ಸ್ವಾಮಿ ಮುತ್ತಿನಾರುತಿ ಎತ್ತಿ
ಮುಕುತ್ಯಾಗ ದುಡಿಯುವರು
ಸತ್ಯುಳ್ಳ ಶರಣಯ್ಯ ॥ಮು. ಹಿ॥

ಎಂಥಾ ದೇವ ನೋಡು। ಮೈಲಾರಲಿಂಗ
ಎಂತಹ ಮಹಾತ್ಮ ನೋಡೋ
ಸ್ವಾಮಿ ಕಂತುದಾರಣ ಕೇಳೋ
ಕರುಣ ಮೈಲಾರಲಿಂಗ
ಎಂತದುಂಟೇನಯ್ಯಾ ॥ಮು. ಹಿ॥

೭.೧.೨. **ಮಲ್ಲಯ್ಯನ ಖಡ್ಗಗಳು :**

**ಖಡ್ಗ :೧**

ಆಹಾಽ, ಹಾಽ, ಹಾಽ, ದೇವಾ ॥ಮು॥
ನಮಃ ಶಿವ ॥ಹಿ॥

ಆಹಾ, ಹಾ, ಹಾ, ದೇವಾ ॥ಮು॥
ನಮಃ ಶಿವ ॥ಹಿ॥

ಆಹಾ, ಹಾ, ಹಾ, ದೇವಾ ॥ಮು॥
ನಮಃ ಶಿವ ॥ಹಿ॥

ಜಲೆ ಜಲೆ ಬೆವರುಗಳನ್ನು ಸುಲಿದು
ಈತನಗೆ ಒಡೆದು ವೀರಭದ್ರನ ಸನ್ನಿಧಿಗೆ ಸೇರಿ ॥ಮು॥
ನಮಃ ಶಿವ ॥ಹಿ॥

ಮಚ್ಚಿಗೇರಿಯಲ್ಲಿ ಮಲೆ ಹೆಬ್ಬುಲಿಯಂತೆ ನೆತ್ತಿಗೆಯಲ್ಲಿ ದುಂಡು
ಮಣಿಹ ಹಾಲುಮತದ ಕುಲವಂತೆ ॥ಮು॥
ನಮಃ ಶಿವ ॥ಹಿ॥

ಹಾಲುಮತದ ಕುಲವಂತೆ ॥ಮು॥
ನಮಃ ಶಿವ ॥ಹಿ॥

ಸೆರೆವ ಶಾಗಿರದೊಳಂತೆ ಜಂಬುಲಿಂಗೇಶ್ವರನ ಮೂರೊಂದು
ವರ್ಷದ ಕಾರ್ಣೀಕದಂತೆ ॥ಮು॥
ನಮಃ ಶಿವ ॥ಹಿ॥

ಕಪಲಿ ಮುನೇಶ್ವರ, ಅಡ್ಡಗುಡ್ಡರ ಮಲ್ಲ
ಮಹೋಗುಡ್ಡರ ಮಲ್ಲ ॥ಮು॥
ನಮಃ ಶಿವ ॥ಹಿ॥

ಹಾಲಿನ ಆರವಿಯ ಮೇಲೆ
ಆಡುತ ಬರುವನು ಮಲ್ಲ ॥ಮು॥
ನಮಃ ಶಿವ ॥ಹಿ॥

ತುಪ್ಪದ ಆರವಿಯ ಮೇಲೆ
ತುಳುಕುತ ಬರುವನು ಮಲ್ಲ ॥ಮು॥
ನಮಃ ಶಿವ ॥ಹಿ॥

ಮುಸಕಿನ ಆರವಿಯ ಮೇಲೆ
ಮರುಗುತ ಬರುವನು ಮಲ್ಲ ॥ಮು॥
ನಮಃ ಶಿವ ॥ಹಿ॥

ಬೂದಿ ಮುಚ್ಚಿದ ಕೆಂಡ
ಮೂಲೋಕದ ಪ್ರಚಂಡ ॥ಮು॥
ನಮಃ ಶಿವ ॥ಹಿ॥
ಕೆಂಡ ಕೆದರಿ ಬತ್ತಿದನಂತೆ
ಭೂ ಮಂಡಲವಾಗದಂತೆ ॥ಮು॥
ನಮಃ ಶಿವ ॥ಹಿ॥

ಆಕಾಶಕ್ಕೆ ಒಂದು ಕಾಲು
ಭೂಮಿಗೆ ಒಂದು ಕಾಲು॥ಮು॥
ನಮಃ ಶಿವ ॥ಹಿ॥
ನೆಲವಿಲ್ಲದಂತೆ ನಾಟ್ಯ ಮಾಡಿದ ॥ಮು॥
ನಮಃ ಶಿವ ॥ಹಿ॥

ಈ ಮೀನುಗುಂದಿ ಮಲ್ಲ ಫರಾಕೂ ॥ಮು॥
ನಮಃ ಶಿವ ॥ಹಿ॥

ಜಲ್ಲ ಜಲ್ಲೆ ಬೆವರುಗಳನು ಸುರಿದು
ಈಜಲಿಗೆ ಒಡೆದು ॥ಮು॥
ನಮಃ ಶಿವ ॥ಹಿ॥

ವೀರಭದ್ರನನ್ನು ಜಲಗ್ಗಿ ||ಮು||
ನಮಃ ಶಿವ ||ಹಿ||

ವಿಭೂತಿ ರುದ್ರಾಕ್ಷಿಯೊಳು ಹುಟ್ಟಿದುದು
ಈ ಶಿವಲಿಂಗ ||ಮು||
ನಮಃ ಶಿವ ||ಹಿ||
ಆರು ಖಂಡುಗ ಬಂಢಾರವನ್ನ
ಅಡ್ಡಬಡ್ಡವನ್ನಿಟ್ಟು ||ಮು||
ನಮಃ ಶಿವ ||ಹಿ||

ಮೂರು ಬಂಡುಗ ಬಂಢಾರವನ್ನ
ಚುಕ್ಕೆ ಬಟ್ಟವನಿಟ್ಟು ||ಮು||
ನಮಃ ಶಿವ ||ಹಿ||

ಮಾಯಾದ ಕುದುರೆಯನ್ನೇರಿ ||ಮು||
ನಮಃ ಶಿವ ||ಹಿ||

ಸಪ್ತನದಿಗಳ ದಾಟಿ ||ಮು||
ನಮಃ ಶಿವ ||ಹಿ||

ಮಣಿಮಲ್ಲಾಸುರವೆಂಬ ಸುರರ ಮಂದಿರ ||ಮು||
ನಮಃ ಶಿವ ||ಹಿ||

ಈ ಮಲ್ಲೇಶ್ವರನು ||ಮು||
ನಮಃ ಶಿವ ||ಹಿ||

ಏನು ಇರುತಿದ್ದನಯ್ಯ ||ಮು||
ನಮಃ ಶಿವ ||ಹಿ||

ಬಹು ಫರಾಕು ।।ಮು।।
ನಮಃ ಶಿವ ।।ಹಿ।।

ಏಳು ಕೋಟಿ ।।ಮು।।
ನಮಃ ಶಿವ ।।ಹಿ।।
ಏಳು ಕೋಟಿ ।।ಮು।।
ನಮಃ ಶಿವ ।।ಹಿ।।

## ಖಡ್ಗ - ೨

ಮಹಾದೇವ ।।ಮು।।
ನಮಃ ಶಿವ ।।ಹಿ।।

ಈತನೆ ಹರನು ।।ಮು।।
ನಮಃ ಶಿವ ।।ಹಿ।।

ಈತನೇ ಶಿವನು ।।ಮು।।
ನಮಃ ಶಿವ ।।ಹಿ।।

ಇವನು ಶಿವನು ಅಲ್ಲಂಬುವರಿಲ್ಲ ।।ಮು।।
ನಮಃ ಶಿವ ।।ಹಿ।।

ಸಹಸ್ರಾರು ಶಿವನ ಮಲ್ಲನಿವನು ।।ಮು।।
ನಮಃ ಶಿವ ।।ಹಿ।।

ಮಹನಿಯರಗ್ಗತ್ತಗಂಬಳವನ್ನು ಮರ್ತಕ್ಕೆ ಬರುವಾಗೇ ।।ಮು।।
ನಮಃ ಶಿವ ।।ಹಿ।।

ಭಕ್ತಿಯಿಂದ ಒಲಿವುತಾನ ಶಿವ ನೋಡಿರಯ್ಯ ।।ಮು।।
ನಮಃ ಶಿವ ।।ಹಿ।।

ಭಕ್ತಿಯಿಂದ ಪಾರ್ವತಿದೇವಿ ಮಾಳಮ್ಮನಾಗಿ ಬಂದಳಯ್ಯ ।।ಮು।।
ನಮಃ ಶಿವ ।।ಹಿ।।

ಇಬ್ಬರ ದೇವಿಯರು ಬಂದರು ದೇವರು ||ಮು||
ನಮಃ ಶಿವ ||ಓ||

ಕಪಟತನದಲ್ಲಿ ದ್ವಾರಪಾಲಕರೆಲ್ಲ ಒಕ್ಕಲಾದರಯ್ಯ ||ಮು||
ನಮಃ ಶಿವ ||ಓ||

ಓಂಡಿಗಾಂಡೆಯ ಕಡಿದು ||ಮು||
ನಮಃ ಶಿವ ||ಓ||

ಏಕಮೂರ್ತಿ ಶಿವನೇ ತಾನು ||ಮು||
ನಮಃ ಶಿವ ||ಓ||

ಉಗ್ರ ಚರ್ಮವನ್ನುಟ್ಟುಕೊಂಡು ಬಂದನಯ್ಯ ||ಮು||
ನಮಃ ಶಿವ ||ಓ||

ಇಹದ ಕೇಳದೆ ಕೊಂಬುಕೆತ್ತಿ ||ಮು||
ನಮಃ ಶಿವ ||ಓ||

ಭಾರದ ಬಿಲ್ವಾಂಡ ಧರಿಸಿ ||ಮು||
ನಮಃ ಶಿವ ||ಓ||
ಮೂರು ಲೋಕದ ಪರಮಾತ್ಮ ನೆನ್ನ ಬಹುದೆ ||ಮು||
ನಮಃ ಶಿವ ||ಓ||

ಓರಿಯ ಮೇಲಗುಂದಿ ಗುಡ್ಡ ದ ಮೇಲೆ ||ಮು||
ನಮಃ ಶಿವ ||ಓ||

ಸಪ್ತ ಗಿರಿಯ ವರವ ಕೊಡುತಾನು ಮಲ್ಲಯ್ಯ ||ಮು||
ನಮಃ ಶಿವ ||ಓ||

ತೊಡೆಯಲ್ಲಿ ಪಾರ್ವತಿ ದೇವಿಯ ||ಮು||
ನಮಃ ಶಿವ ||ಓ||

ಜಡೆಯಲ್ಲಿ ಗಂಗಾಬಿಕೆಯು ॥ಮು॥
ನಮಃ ಶಿವ ॥ಹಿ॥

ಸಡಗರದಿಂದ ಬರುವ ॥ಮು॥
ನಮಃ ಶಿವ ॥ಹಿ॥

ಹುಮ್ಮಸ್ಸಿನಲ್ಲಿ ॥ಮು॥
ನಮಃ ಶಿವ ॥ಹಿ॥

## ಖಡ್ಗ - ೩

ಆ಼ ಹಾ಼ ಹಾ಼ ಹಾ಼ ದೇವ ॥ಮು॥
ನಮಃ ಶಿವ ॥ಹಿ॥

ಆ಼ ಹಾ಼ ಹಾ಼ ಹಾ಼ ದೇವ ॥ಮು॥
ನಮಃ ಶಿವ ॥ಹಿ॥

ಶಿವನೇ ನಿನ್ನ ನಂಬಿದವರಿಗೆ ॥ಮು॥
ನಮಃ ಶಿವ ॥ಹಿ॥
ಅನ್ಯರ ಭಯವುಂಟೆ ॥ಮು॥
ನಮಃ ಶಿವ ॥ಹಿ॥

ಆ಼ ಹಾ಼ ಹಾ಼ ಹಾ಼ ದೇವ ॥ಮು॥
ನಮಃ ಶಿವ ॥ಹಿ॥

ಈಶ ಜಗದೀಶ ಕೈಲಾಸವಾಸ ಪಾರ್ವತೀಶ ಗಿರಿಜಾ ನಿವಾಸ
ಶ್ರೀಶೈಲವಾಸ ಪಂಪಾ ಮಹೇಶ ॥ಮು॥
ನಮಃ ಶಿವ ॥ಹಿ॥

ಆ಼ ಹಾ಼ ಹಾ಼ ದೇವ ॥ಮು॥
ನಮಃ ಶಿವ ॥ಹಿ॥

ಛತ್ತೀಸಕೋಟಿ ದೇವತೆಗಳ ದೇವರಗಂಡ
ಆಸ್ತೆಯಿಂದ ನಿನ್ನ ನಿಜಾಸುದ್ಧಿಯನ್ನು ಭಜಿಸಿದವರಿಗೆ ॥ಮು॥
ನಮಃ ಶಿವ ॥ಹಿ॥

ಕ್ಷಣಕಾಲ ಭಯವುಂಟೇ ॥ಮು॥
ನಮಃ ಶಿವ ॥ಹಿ॥

ವಿಸ್ತಾರವಾಗಿ ಈ ಸಡೆಯೊಳಗೆ ನೆಲೆಗೊಳಿಸಿದ ॥ಮು॥
ನಮಃ ಶಿವ ॥ಹಿ॥

ನಮ್ಮ ಕರ್ತ ಮೀನ್‌ಗುಂದಿ ಮಲ್ಲಯ್ಯ ॥ಮು॥
ನಮಃ ಶಿವ ॥ಹಿ॥

ಆಸ್ತೆಯಿಂದ ಭಗವತಿಯನು ಎತ್ತಿಹರನ ಜನ್ಮವನ್ನು ಹೊತ್ತು॥ಮು॥
ನಮಃ ಶಿವ ॥ಹಿ॥

ಸುರರ ಮುನ್ನೂರು ಮೂವತ್ತುಕೋಟಿ ದೇವತೆಗಳು ಪೂಜ್ಯ
ಪೂಜ್ಯ ಪೂಜ್ಯನಲ್ಲೊ ॥ಮು॥
ನಮಃ ಶಿವ ॥ಹಿ॥

ಆರುನೂರು ಅರವತ್ತು ಕೋಟಿ ರಾಕ್ಷಸರನ್ನು ನಾಶಮಾಡಿ ॥ಮು॥
ನಮಃ ಶಿವ ॥ಹಿ॥

ಮಣಿಕಾಸುರ ಮಲ್ಲಾಸುರರನ್ನು ಧ್ವಂಸಮಾಡಿ ॥ಮು॥
ನಮಃ ಶಿವ ॥ಹಿ॥

ಸಪ್ತನದಿಗಳನ್ನು ದಾಟಿ ॥ಮು॥
ನಮಃ ಶಿವ ॥ಹಿ॥

ಮಣಿಮಲ್ಲಾಸುರೆಂಬ ನಾಮ ಹೊಂದಿದ್ದ ॥ಮು॥
ನಮಃ ಶಿವ ॥ಹಿ॥

ಈ ಮಲ್ಲೇಶ್ವರನು ||ಮು||
ನಮಃ ಶಿವ ||ಹಿ||

ಹೇಗೆ ಇರ್ತಿದ್ದನಯ್ಯ ||ಮು||
ನಮಃ ಶಿವ ||ಹಿ||

ಬಹು ಫರಾಕು ||ಮು||
ನಮಃ ಶಿವ ||ಹಿ||

ಏಳುಕೋಟಿ ||ಮು||
ನಮಃ ಶಿವ ||ಹಿ||

## ಖಡ್ಗ - ೪

ಮಹಾದೇವ ||ಮು||
ನಮಃ ಶಿವ ||ಹಿ||

ಸಿರಿಯದ ಆಯಿತವಾರ ||ಮು||
ನಮಃ ಶಿವ ||ಹಿ||

ಉಡುವರಿಯ ಮೈಲಾರ ||ಮು||
ನಮಃ ಶಿವ ||ಹಿ||

ದಕ್ಷಿಣಕ್ಕೆ ಸೋಮರ ||ಮು||
ನಮಃ ಶಿವ ||ಹಿ||

ಸ್ವಾಮಿಯೇರುವ ತೇದಿ ||ಮು||
ನಮಃ ಶಿವ ||ಹಿ||

ಸಣ್ಣ ಮಲ್ಲಿಂಗನ ಪೂಜೆ ||ಮು||
ನಮಃ ಶಿವ ||ಹಿ||

ಬಂತಯ್ಯ ದಸರಿ ಹಬ್ಬ ||ಮು||
ನಮಃ ಶಿವ ||ಹಿ||

ಓದೋ ಮುಡಿಲಿಕ್ಕೆ ದೇವರ ಹೊರಟಾನಾ ||ಮು||
ನಮಃ ಶಿವ ||ಹಿ||

ಆರಾರ ಮನೆಯ ಕಂಡು ||ಮು||
ನಮಃ ಶಿವ ||ಹಿ||

ಲಕ್ಷ್ಯ ಬಂಢಾರ ಬೇಡಿದ ನಮ್ಮ ಯ್ಯ ||ಮು||
ನಮಃ ಶಿವ ||ಹಿ||
ತುರುಕರ ಮನೆಯ ಕಂಡು ||ಮು||
ನಮಃ ಶಿವ ||ಹಿ||

ದೊಡ್ಡ ದೊಂದು ಬಿಲ್ಲು ಬಾಣ ಹಿಡಿದು ನಿಂತಾನಯ್ಯ ||ಮು||
ನಮಃ ಶಿವ ||ಹಿ||

ಹೋಗು ಹೋಗು ಹುಚ್ಚ ಗೊರವಯ್ಯ ||ಮು||
ನಮಃ ಶಿವ ||ಹಿ||

ನಾವು ಮುಸಲ್‌ಮಾನರು ||ಮು||
ನಮಃ ಶಿವ ||ಹಿ||

ಅಕ್ಕಿ ಮೀಸಲು, ತುಪ್ಪ ತಂದು ನಿಮಗೆ ಅರ್ಪಿಸುವವರು ||ಮು||
ನಮಃ ಶಿವ ||ಹಿ||

ಗಾಜಿನ ಕಂಬ ಕಣಿಲ್ಲು ಕಣಿಲ್ಲು ಅನ್ನುತಯ್ಯ ||ಮು||
ನಮಃ ಶಿವ ||ಹಿ||

ಉಕ್ಕಿನ ಕಂಬ ಛಟಲ್ ಪಿಟಲ್ ಅನ್ನುತಯ್ಯ ||ಮು||
ನಮಃ ಶಿವ ||ಹಿ||

ಭೂದೇವಿಯ ಗಧಗಧನೇ ನಡುಗಿದಳು ||ಮು||
ನಮಃ ಶಿವ ||ಹಿ||

ಆಕಾಶದೇವಿ ಗಧಗಧನೇ ನಡುಗಿದಳು ॥ಮು॥

ನಮಃ ಶಿವ ॥ಹಿ॥

ಮುಂದೆ ಒಕ್ಕಳದ ಘಂಟೆ ॥ಮು॥

ನಮಃ ಶಿವ ॥ಹಿ॥

ಹಿಂದೆ ಹನುಮನ ಬಾಲ ॥ಮು॥

ನಮಃ ಶಿವ ॥ಹಿ॥

ಬಸವಣ್ಣನು ಮುಸಮುಸ ನಗುತನಯ್ಯ ॥ಮು॥

ನಮಃ ಶಿವ ॥ಹಿ॥

ಈಶ್ವರನು ಬೆರಗಾಗಿ ನಿಂತನಯ್ಯ ॥ಮು॥

ನಮಃ ಶಿವ ॥ಹಿ॥

ತೊಡೆಯಲ್ಲಿ ಪಾರ್ವತಿ ದೇವಿಯೂ ॥ಮು॥

ನಮಃ ಶಿವ ॥ಹಿ॥

ಜಡೆಯಲ್ಲಿ ಗಂಗಾಬಿಕೆಯೂ ॥ಮು॥

ನಮಃ ಶಿವ ॥ಹಿ॥

ಸಡಗರದಿಂದ ಬರುವ ॥ಮು॥

ನಮಃ ಶಿವ ॥ಹಿ॥

ಸಾಂಬಾ ಶಿವನೆ ॥ಮು॥

ನಮಃ ಶಿವ ॥ಹಿ॥

ಕರಿಯಾಲದಯ್ಯ ॥ಮು॥

ನಮಃ ಶಿವ ॥ಹಿ॥

ಬಹುಘರಾಕೂ ಏಳುಕೋಟಿ ಏಳುಕೋಟಿಗೋ....... ॥ಮು॥

ನಮಃ ಶಿವ ॥ಹಿ॥

## ಖಡ್ಗ - ೫

ಆಹಾಹಾ..ಸ್ವಾಮಿ ||ಮು||
ನಮಃ ಶಿವಾ ||ಹಿ||

ಹುಲಿಚರ್ಮವ ಇಟ್ಟು ಗಜ ಚರ್ಮವನ್ನ ಹೊದ್ದು
ನಮಃ ಶಿವಾ
ಈತನೇ ಇನ್ನು ಶಿವನು
ನಮಃ ಶಿವಾ
ಶಿವನು ಶಿವನು ಎಲ್ಲ ಎಂಬೋ
ನೀಚ ದಾನವರ ಗಂಡ - ನಮಃ ಶಿವಾ
ಸಾಕ್ಷಾತ್ ಶಿವನು ಇನ್ನು ಮಲ್ಲಯ್ಯ ಕಾಣಿರೋ । ನಮಃ ಶಿವಾ
ಆಹಾಹಾ.... ಸ್ವಾಮಿ । ನಮಃ ಶಿವಾ
ಸಾಕ್ಷಾತ್ ಶಿವನು ಇನ್ನು
ಮಲ್ಲಯ್ಯ ಕಾಣಿರೋ । ನಮಃ ಶಿವಾ

ಶೌರ್ಯದಿಂದ ನಾರಾಯಣ ಮೂರ್ತಿ ಹೆಗ್ಗಡೆಯಾಗಿದ್ದನು । ನಮಃ ಶಿವಾ
ಅಪರಂತ ತುರಂಗಬಾಲೆ ಗಂಗಿಯಾಗಿ ಬಂದಿದ್ದಳು । ನಮಃ ಶಿವಾ
ಆಹಾಹಾ...ಸ್ವಾಮಿ। ನಮಃ ಶಿವಾ
ಚಪಲತನದಲಿ ದ್ವಾರಪಾಲಕರಿನ್ನು ವಗ್ಗರಾಗಿದ್ದರು । ನಮಃ ಶಿವಾ
ಚತುರ್ಮುಖಿ ವೀರಬ್ರಹ್ಮನು
ಕಪಿಲ ಮುನಿಯಾಗಿ ಬಂದಿದ್ದನು । ನಮಃ ಶಿವಾ
ವೀರಭದ್ರನು ಕಂಚಾವೀರನೇ ಆಗಿದ್ದನು। ನಮಃ ಶಿವಾ
ಹುಲಿ ಚರ್ಮವ ಇದ್ದು
ಗಜ ಚರ್ಮವ ಹೊದ್ದು
ಬಂದಂತಹ ಮಲ್ಲಿಕಾರ್ಜುನ ಸ್ವಾಮಿ ನೀನು ಬಹುಘರಾಕ್.

## ಖಡ್ಗ - ೬

ಅಹಹಾ...ದೇವಾ। ನಮಃ ಶಿವಾ
ಅಂಡಪಿಂಡ ಬ್ರಹ್ಮಾಂಡ ಗಿರಿಯ ಮ್ಯಾಲೆ
ಕಟ್ಟಿದಾರೆ ನೋಡು ನಮ್ಮ
ಮಲ್ಲಿಕಾರ್ಜುನನ ಗುಡಿ । ನಮಃ ಶಿವಾ
ನಾಲ್ಕು ಬಾಗಿಲಯ್ಯ । ನಮಃ ಶಿವಾ
ಒಂದೊಂದು ಬಾಗಿಲಿಗೆ । ನಮಃ ಶಿವಾ
ಒಂದು ದೇವರೇ ಕಾವಲಿ । ನಮಃ ಶಿವಾ
ಅಹಹಾ.. ದೇವಾ । ನಮಃ ಶಿವಾ
ಈ ತೂರ್ಪು ದಿಕ್ ಬಾಗಿಲಿಗೆ । ನಮಃ ಶಿವಾ
ಸೂರ್ಯ ದೇವನೇ ಕಾವಲಿ । ನಮಃ ಶಿವಾ
ಈ ಪಡಮರ ದಿಕ್ ಬಾಗಿಲಿಗೆ । ನಮಃ ಶಿವಾ
ಚಂದ್ರ ದೇವರೇ ಕಾವಲಿ । ನಮಃ ಶಿವಾ
ಅಹಾಹಾ... ದೇವಾ । ನಮಃ ಶಿವಾ
ಈ ಎತ್ತರ ದಿಗ್ಬಾಗಿಲಿಗೆ । ನಮಃ ಶಿವಾ
ರೇವಣ ಸಿದ್ದೇಶ್ವರನೇ ಕಾವಲಿ । ನಮಃ ಶಿವಾ
ಈ ದಕ್ಷಿಣ ದಿಗ್ಬಾಗಿಲಿಗೆ । ನಮಃ ಶಿವಾ
ತಮ್ಮ ತಂಗಿಯಾದ ಚೌಡೇಶ್ವರಿಯೇ ಕಾವಲಿ । ನಮಃ ಶಿವಾ
ನಮ್ಮ ಮಲ್ಲಿಕಾರ್ಜುನನ ಗುಡಿಯ ಮುಂದೆ । ನಮಃ ಶಿವಾ
ವಜ್ರಸ್ತಂಭ ಹುಟ್ಟಿರುವುದು ನೋಡು । ನಮಃ ಶಿವಾ
ಆ ಸ್ತಂಭಕ್ಕೆ । ನಮಃ ಶಿವಾ
ಥಣ ಥಣ ಏಣಿ(ಮಣಿ) ಮೆರೆದಿರುವುದು ನೋಡು । ನಮಃ ಶಿವಾ
ಆ ಸ್ತಂಭಕ್ಕೆ । ನಮಃ ಶಿವಾ
ಸರ್ಪಣಿಯಂಬಿಟ್ಟಿದ್ದ । ನಮಃ ಶಿವಾ
ಆ ಸರ್ಪಣಿ ಮಿಣಿಗಂಡು
ಈ ಗೊರವರೇ ಖಂಡ ತುಂಡ
ಮಾಡಿದರು ಗಿರಿಮಲ್ಲ ಬಹುಪರಾಕ್.

## ಖಡ್ಗ - ೭

( ಈ ಕೆಳಗಿನ ಒಡಪು ತೆಗಲು ಭಾಷೆಯಲ್ಲಿ ಪ್ರಚಲಿತದಲ್ಲಿದೆ)

ಭೂಮಿ ಗಡಗಡ ತಿರುಗಿ
ಭೂತಾಲ ಚಲರೇಗಿ
ಅಡವಿ ಸಿಂಹಮು ಕದಲಿ
ಕದಲಿ ರಾವೇಮಯ್ಯ ಕೈಲಾಸವಾಸ । ನಮಃ ಶಿವಾ
ಕದಲಿ ರಾವೇಮಯ್ಯ ವೈಕುಂಠವಾಸ । ನಮಃ ಶಿವಾ
ಅಹಾಹಾ.. ದೇವಾ । ನಮಃ ಶಿವಾ
ಭುಜಮುನ ಭೂಚಕ್ರ ಗುಡುಗುಲು । ನಮಃ ಶಿವಾ

ಬೊಡ್ಡುನ ಚಿಂತಾಮಣಿ । ನಮಃ ಶಿವಾ
ಕೋಟಿ ನಾಗಪಾಮಂಬುಲನಿ
ಪೈ ಭೂಷಣಂಬುಲು । ನಮಃ ಶಿವಾ
ಅಹಹಾ... ದೇವಾ । ನಮಃ ಶಿವಾ
ನೇಲಕು ನಕ್ಷತ್ರಿಂಬು । ನಮಃ ಶಿವಾ
ಅರಿಕಾಲ ದೋಮರಂಬು । ನಮಃ ಶಿವಾ
ಇನ್ನಿ ನಾಮ ದೇವಲು ಕಲವಾಲಿ ( ಡಿವಿ)
ಕದವೇಮಯ್ಯ ಶ್ರೀ ಮಲ್ಲಿಕಾರ್ಜುನ । ನಮಃ ಶಿವಾ
ಅಹಾಹಾ.. ದೇವಾ । ನಮಃ ಶಿವಾ
ಪರಮಟ ದಿಕ್ಕುನ ಪಾತಾಳ ಗಂಗೆಕಿ । ನಮಃ ಶಿವಾ
ಪ್ರತ್ಯಕ್ಷ ದೈವಮು । ನಮಃ ಶಿವಾ

ಗೊರವ ಜಗದೀಶ್ವರ । ನಮಃ ಶಿವಾ
ನೀ ಭಕ್ತುಲಕು ಬಂಢಾರ
ಇಯ್ಯವೇ ಗೊರವ ಜಗದೀಶ್ವರ । ನಮಃ ಶಿವಾ

ಅಹಾಹಾ... ದೇವಾ
ಹರಗಿರಿ ಮಂದಾರ ಗಿರಿ । ನಮಃ ಶಿವಾ
ವೇಟ ಮಾರ್ಗಂಬುಲಲ್ಲಿ । ನಮಃ ಶಿವಾ
ಇಸಿಕ ತಿನ್ನಿಲಮೀದ ಗೊಲ್ಮ ತೀರಿ । ನಮಃ ಶಿವಾ
ಆ ಪಾರ್ವತಿ ದೇವಿನಿ ಪಾರು ದೋಚಿತಿವಾ । ನಮಃ ಶಿವಾ
ಪಾತಾಳ ಗಂಗಲೋ ಸ್ನಾನಂಬು ಚೇಸಿ । ನಮಃ ಶಿವಾ
ಗಂಗನಿ ಜಡಲೋ ದಾಜಿನ
ಶಿವುಡು ನುವ್ವು । ನಮಃ ಶಿವಾ
ಅಹಾಹಾ.. ದೇವಾ । ನಮಃ ಶಿವಾ
ಮುಕ್ಕಂಟಿ ಈಶ್ವರ ಮೂಡು ಕನ್ನುಲಗಲವಾಡಾ । ನಮಃ ಶಿವಾ
ಮೂಡು ಲೋಕಮುನಲಕೇ ವೇಲುಗೈನವಾಡು ನುವು । ನಮಃ ಶಿವಾ
ಅಹಹಾ.. ದೇವಾ
ತ್ರಿಶೂಲಂಬು ಭೂಮಿಕೇ ನಾಟಿ । ನಮಃ ಶಿವಾ
ಢಮರುಗನು ಢಮಢಮ ಆಗಿ
ವಾದ್ಯಂಬುಲನು ಇಚ್ಚಿ । ನಮಃ ಶಿವಾ
ಅಡವಿಲೋ ಕೂರ್ಚೋನಿ ಮೇಟಿ ಭೂತಾಲೆಲ್ಲ । ನಮಃ ಶಿವಾ
ನಾಟ್ಯಮುಲನು ಆಡಿಂಚಿನ ಶಿವುಡು ನುವ್ವು । ನಮಃ ಶಿವಾ
ಗಿರಿಮಲ್ಲ ಬಹು ಪರಾಕ್.

## ಖಡ್ಗ - ೮

ಅಹಾಹಾ.. ಸ್ವಾಮಿ
ಮಾಯಿಯನ್ನ ಗೆದ್ದನು ಕೋಲಾಹಲ(ರ)। ನಮಃ ಶಿವಾ
ಮುಂಗೈಯನ್ನು ಹುರಿ ಕಂಕಣ । ನಮಃ ಶಿವಾ
ಕಿವಿಗಿನ್ನು ಚಿವುಕಲಾ ಎನ್ನು ಮುತ್ತು । ನಮಃ ಶಿವಾ
ಕೊರಳಿಗೆ ಯಿನ್ನು ಶಿವದಾರ । ನಮಃ ಶಿವಾ
ಸೊಲ್ಲಾಪುರವನ್ನು ಬಿಟ್ಟು
ಕೊಲ್ಲಾಪುರ ಮಾಯಿ ಮನೆಗೆ
ಭಿಕ್ಷೆ ಬೇಡಲಿಕ್ಕೆ ಬಂದಂತಹ । ನಮಃ ಶಿವಾ

ನಮ್ಮ ಕಾಡ ಸಿದ್ದೇಶ್ವರನು । ನಮಃ ಶಿವಾ
ಅಹಾಹಾ..ಸಾಮಿ । ನಮಃ ಶಿವಾ
ಆ ಮಾಯಿಯು ಏನೇನು ಇಸ್ತಾರದಲ್ಲಿ ಇದ್ದಳೆಂದರೆ । ನಮಃ ಶಿವಾ
ಉಕ್ಕಿನಾಯಿನ್ನು ಮಂಚ । ನಮಃ ಶಿವಾ
ಹಾವಿನಾಯಿನ್ನು ಹಾಸಿಗೆಯನ್ನು ಹಾಸಿಕೊಂಡು । ನಮಃ ಶಿವಾ
ಚೇಳು ಕೊಂಡಿನೇ ಇನ್ನು ತಲೆದಿಂಬನೇ ಮಾಡಿಕೊಂಡು । ನಮಃ ಶಿವಾ
ಅಹಾಹಾ...ಸಾಮಿ । ನಮಃ ಶಿವಾ
ಆರು ತಿಂಗಳಿಂದ ನಿದ್ರೆಯನ್ನು ಮಾಡುತ್ತಿದ್ದಳಯ್ಯ । ನಮಃ ಶಿವಾ
ನಮ್ಮ ಕಾಡ ಸಿದ್ಧೇಶ್ವರನು
ಭಿಕ್ಷೆ ಬೇಡಲಿಕ್ಕೆಯಿನ್ನ ಬಂದನಯ್ಯ । ನಮಃ ಶಿವಾ
ಆ ಮಾಯಿಯು ದಿಗ್ಗನೇ ಎಂದೆದ್ದು । ನಮಃ ಶಿವಾ
ಅಹಾಹಾ.. ಸಾಮಿ । ನಮಃ ಶಿವಾ
ಮೂರು ಖಂಡುಗ ವಿಷವಾ ತುಂಬಿ। ನಮಃ ಶಿವಾ
ನೀಡುವುದಲಿಕ್ಕೆಯಿನ್ನು ಬಂದಿದ್ದಳಯ್ಯ । ನಮಃ ಶಿವಾ
ಅಂತಪ್ಪ ಮಾಯಿಯನ್ನು। ನಮಃ ಶಿವಾ
ನಮ್ಮ ಕಾಡ ಸಿದ್ದೇಶ್ವರನು। ನಮಃ ಶಿವಾ
ಉರಿಗಣ್ಣನೇಯಿನ್ನು ಬಿಟ್ಟ ತಕ್ಷಣ । ನಮಃ ಶಿವಾ
ಅಂತಪ್ಪ ಮಾಯಿಯನ್ನು
ಇಡಿ( ಇಲ್ಲಿಗೆ) ತರಿಸಿ । ನಮಃ ಶಿವಾ
ತಲೆಯನ್ನು ಬೋಳಿಸಿ । ನಮಃ ಶಿವಾ
ಸುಣ್ಣದಾಯಿನ್ನು ಪಟ್ಟಿಗಳನ್ನು ಬರೆದು । ನಮಃ ಶಿವಾ
ಮೂಗನ್ನು ಕೊಯ್ದು । ನಮಃ ಶಿವಾ
ಅಹಾಹಾ.. ಸಾಮಿ
ಕೊರನನ್ನೇ ಕೊಯ್ದು । ನಮಃ ಶಿವಾ
ಗಂಡ ಗೊಪ್ಪರನೆಯನ್ನು ಮಾಡಿ । ನಮಃ ಶಿವಾ
ಹದಿನಾರನೆಯ ಹಲ್ಲನೆಯನ್ನು ಕಿತ್ತಿ । ನಮಃ ಶಿವಾ
ಕಿನ್ನರಿ ಕಾಯಿಯ ಬೆಟ್ಟ (ಬೊಟ್ಟು)ನೆಯನ್ನು ಮಾಡಿ । ನಮಃ ಶಿವಾ
ಅಹಾಹಾ...ಸಾಮಿ

ಉರಿಗಣ್ಣು ಮೂರ್ತಿ । ನಮಃ ಶಿವಾ
ಅಯ್ಯ ಮಹಾ ಮಲ್ಲೇಶ್ವರನೇ । ನಮಃ ಶಿವಾ
ಹರಿವ ಗಂಗಿಗೆ ಹೋಗಿ । ನಮಃ ಶಿವಾ
ಮರವ ಮಜ್ಜನವ ಮಾಡಿ । ನಮಃ ಶಿವಾ
ನಾಗಮಲ್ಲಿಗೆ । ನಮಃ ಶಿವಾ
ದೀಪಮಲ್ಲಿಗೆ । ನಮಃ ಶಿವಾ
ಮಲ್ಲಯ್ಯನ ಪೂಜೆಗೆ । ನಮಃ ಶಿವಾ
ಮಲ್ಲಿಗೂವ ತಂದಿಟ್ಟು । ನಮಃ ಶಿವಾ
ಹರುಷದಲಿ ಬಂಢಾರ । ನಮಃ ಶಿವಾ
ದುರ್ಗದಂತಕ್ಕಾರ । ನಮಃ ಶಿವಾ
ದುರ್ಗ ದೇವರ ಗಂಡ । ನಮಃ ಶಿವಾ
ಶರಣೋ ಶಸ್ತರೂ । ನಮಃ ಶಿವಾ
ದೇಶ ಒಂಭತ್ತು ಕೋಟಿ । ನಮಃ ಶಿವಾ
ಆಧಿಪತಿ ಹಾಲಗಿರಿ । ನಮಃ ಶಿವಾ
ಪದ್ಮಾ ಚಂದ್ರಗಿರಿ । ನಮಃ ಶಿವಾ
ಇದೇ ಪುರಕ್ಕೆ ಕದಲಿ ಬಂದನಯ್ಯ
ಬಹು ಘರಾಕ.

## ಖಡ್ಗ - ೧೧

ಅಹಾಹಾ...ದೇವ । ನಮಃ ಶಿವಾ
ಈತನೇ ಶಿವನು ಈತನೇ ಹರನು । ನಮಃ ಶಿವಾ
ಈತನು ಶಿವನು ಶಿವನಲ್ಲವೆಂಬೋ । ನಮಃ ಶಿವಾ
ನೀಚ ದಾನವರ ಗಂಡ । ನಮಃ ಶಿವಾ
ಕತ್ತು ಕಂಬಳಿ । ನಮಃ ಶಿವಾ
ಮರ್ತಕ್ಕೆ ಬರುವಾಗ । ನಮಃ ಶಿವಾ
ಅರ್ತಿಯಿಂದಲೇ । ನಮಃ ಶಿವಾ
ಬರ್‍ವಾತನು । ನಮಃ ಶಿವಾ

ಅಶ್ವನಾದನಯ್ಯ । ನಮಃ ಶಿವಾ
ಚಪಲತನದಲಿ ದ್ವಾರಪಾಲಕರಿಷ್ಟು । ನಮಃ ಶಿವಾ
ವಗ್ಗರಾದರಯ್ಯ । ನಮಃ ಶಿವಾ
ಹಿಂಡು ರಾಕ್ಷರ ಚಂಡನಾಡಿದ । ನಮಃ ಶಿವಾ
ಶಿವನು ಮಲ್ಲಯ್ಯ ಕಾಣಿರೋ । ನಮಃ ಶಿವಾ
ಕರ್ತು ಕಂಬಳಿ.... । ನಮಃ ಶಿವಾ
ಮರ್ತಕ್ಕೆ ಬರುವಾಗ । ನಮಃ ಶಿವಾ
ದೂರ್ತದಿಂದ ಪಾರ್ವತಿ ದೇವಿ
ಗಂಗಿ ಮಾಳಮ್ಮನಾದಳು । ನಮಃ ಶಿವಾ
ಚಪಲತನದಲಿ ದ್ವಾರಪಾಲಕರಿಷ್ಟು । ನಮಃ ಶಿವಾ
ವಗ್ಗರಾದರು ಬಹುಫರಾಕ್.

## ಖಡ್ಗ - ೧೨

ಅಹಾಹಾ...ದೇವಾ । ನಮಃ ಶಿವಾ
ಉದಯದ ಆಯಿತವಾರ । ನಮಃ ಶಿವಾ
ಉತ್ತಮರಿಗೆ ಮೈಲಾರ । ನಮಃ ಶಿವಾ
ಮೈಲಾರದ ವಿಸ್ತಾರ ಆದೆಂತೆಂದೊಡೆ । ನಮಃ ಶಿವಾ
ಗಾಜಿನಲಿ ಗಟ್ಟಿಗಳು । ನಮಃ ಶಿವಾ
ಭುವನದಲಿ ಬಂಢಾರ । ನಮಃ ಶಿವಾ
ರುದ್ರಾಕ್ಷಿ ತಲೆಗಳು । ನಮಃ ಶಿವಾ
ಕವಡೆ ಕೋಟೆಗಳು । ನಮಃ ಶಿವಾ
ಅಂತಂಬ ಕೋಟೆಯಲಿ । ನಮಃ ಶಿವಾ
ನಮ್ಮ ಮಣಿಗಿರಿ ಮಲ್ಲಯ್ಯನೇ ಕಾವಲಯ ಬಹುಫರಾಕ್.

# ಖಡ್ಗ - ೧೩

ಅಹಾಹಾ.. ದೇವಾ । ನಮಃ ಶಿವಾ
ದಕ್ಷಿಣ ಒಳನಾಡಿನಲ್ಲಿ ಶ್ರೀಗಿರಿಯೆಂಬ ಪರ್ವತವಿತ್ತು । ನಮಃ ಶಿವಾ
ಆ ಪರ್ವತದಲ್ಲಿ ಕಪಿಲಮುನಿ,
ಪರುಷಮುನಿ, ಜೌಕುಮುನಿ ಇನ್ನು
ಅನಂತ ಋಷಿಗಳಿಂದ ಕೂಡಿತ್ತು । ನಮಃ ಶಿವಾ
ಆ ಪರ್ವತದಲ್ಲಿ ಯಜ್ಞಯಾಗಾದಿಗಳು
ನಡೆಯುತ್ತಿದ್ದು । ನಮಃ ಶಿವಾ
ಟಂಕಣ ದೇಶದಿಂದ । ನಮಃ ಶಿವಾ
ಮಣಿ-ಮಲ್ಲಾಸುರರೆಂದ ಅಸುರ ರಾಕ್ಷಸರು ಬಂದು । ನಮಃ ಶಿವಾ
ಯಾಗ ಯಜ್ಞಾದಿಗಳನ್ನು
ಭಂಗಪಡಿಸುತ್ತಿದ್ದರು । ನಮಃ ಶಿವಾ
ಆ ಕಷ್ಟಕ್ಕೆ ತಾಳಲಾರದೆ । ನಮಃ ಶಿವಾ
ಶಿವ ಓಂ ಶಿವ ಓಂ ಎಂದು
ದೇವತೆಗಳು ಶಿವನನ್ನು ನೆನೆಯಲು । ನಮಃ ಶಿವಾ
ತಕ್ಷಣವೇ ಶಿವನು ಪ್ರತ್ಯಕ್ಷನಾಗಿ । ನಮಃ ಶಿವಾ
ನಿಮ್ಮ ಕಷ್ಟವೇನೆಂದು ಕೇಳಲು । ನಮಃ ಶಿವಾ
ಮಣಿ-ಮಲ್ಲಾಸುರರೆಂಬ ರಾಕ್ಷಸರು ಬಂದು
ನಮಃ ಶಿವಾ
ಈ ಪರ್ವತಕ್ಕೆ ದಾಳಿಯನ್ನು ಇಟ್ಟರೆಂದು ಹೇಳಲು । ನಮಃ ಶಿವಾ
ತಕ್ಷಣವೇ ಮಣಿ ಮಲ್ಲಾಸುರರೆಂಬ
ರಾಕ್ಷಸರನ್ನು ಹಿಡಿದು ತಂದು । ನಮಃ ಶಿವಾ
ತ್ರಿಶೂಲಕ್ಕೆ ಆಹುತಿ ಮಾಡಿದ
ಮಲ್ಲೇಶ್ವರನು ಹೀ (ಹೇ) ಗಿರುತ್ತಿದ್ದನಯ್ಯಾ ಬಹುಫರಾಕ್.

## ೭.೧.೩. ಮಲ್ಲಯ್ಯನ ಕಥೆಗಳು :

### ಕಥೆ - ೧
### ಮಡಿವಾಳಪ್ಪನ ಕಥೆ

ಒಮ್ಮೆ ಮಲ್ಲೇಶ್ವರ ಗೊರವಯ್ಯನ ವೇಷಧರಿಸಿ ಮಡಿವಾಳಪ್ಪನ ಮನೆಗೆ ಬರುತ್ತಾನೆ. ಭಿಕ್ಷೆಯಾಗಿ ಮಡಿವಾಳಪ್ಪ ಹೊನ್ನು, ವರ, ವಜ್ರ, ವೈಢೂರ್ಯಗಳನ್ನೆಲ್ಲಾ ಮೊರದಲ್ಲಿ ಹಾಕಿಕೊಂಡು ಭಿಕ್ಷೆ ನೀಡಲು ಮುಂದಾಗುತ್ತಾನೆ. ಆಗ ಗೊರವಯ್ಯ ಇಂಥ ಭಿಕ್ಷೆ ನನ್ನಲ್ಲಿ ಬಹಳ ಇದೆ. ನಾನು ಭಿಕ್ಷೆಗಾಗಿ ಬಂದಿಲ್ಲ; ನನ್ನ ಕೋರಿ ಅಂಗಿಯನ್ನು ಒಗೆದು ಇಸ್ತ್ರಿ ಮಾಡಿಕೊಡಬೇಕು ಎನ್ನುತ್ತಾನೆ. ಆಗ ಮಡಿವಾಳಪ್ಪ ಒಪ್ಪುವನು. ಆದರೆ ಆತನ ಮಾತನ್ನು ನಂಬದ ಗೊರವಯ್ಯ ಆತನಿಂದ ವಚನವನ್ನು ಪಡೆದುಕೊಂಡು (ಪ್ರಮಾಣ) ನೋಡು ಈ ಕೋರಿ ಅಂಗಿ ತಂದು ಆರು ತಿಂಗಳು, ತೊಟ್ಟು ಆರು ತಿಂಗಳು ನೀನು ಇದನ್ನ ನೀರಿನಾಗ ಅದ್ದಬ್ಯಾಡ, ಬಂಡೆಗೆ ಹಾಕಿ ಒಗಿಬ್ಯಾಡ, ಸೌಳು ಅಥವಾ ಸುಣ್ಣ ಹಾಕಿ ಕುಚ್ಚಬ್ಯಾಡ, ಅಂಗೇನೆ ಒಗೆದು ಇಸ್ತ್ರಿ ಮಾಡಿಕೊಡಬೇಕು ಎಂದು ಹೇಳಿ ಹೊರಡುತ್ತಾನೆ.ಮಡಿವಾಳಪ್ಪನಿಗೆ ಏನು ಮಾಡುವುದೆಂದು ತೋಚದೆ, ಚಿಂತೆಗೆ ಒಳಗಾಗುತ್ತಾನೆ. ನಡೆದ ವಿಷಯವನ್ನು ಹೆಂಡತಿಗೆ ತಿಳಿಸಿದ. ಸ್ವಾಮಿ ನಾವು ಮಡಿವಾಳರು. ಈ ಕೆಲಸನ ಮಾಡದಿದ್ರೆ ಇನ್ಯಾರು ಮಾಡ್ತಾರೆ, ಭಾಷೆ ತಗೊಂಡ ಮ್ಯಾಲೆ ಮಾಡಲೇಬೇಕು ಎನ್ನುತ್ತಾಳೆ. ಆದರೆ ಈ ಕೆಲಸ ಆಕೆ ಅಂದುಕೊಂಡಷ್ಟು ಸುಲಭವೇನಲ್ಲ. ಮರುದಿನ ಗಂಡ ಹೆಂಡತಿ ಇಬ್ಬರೂ ಬಟ್ಟೆಗಳನ್ನು ಹೇರಿಕೊಂಡು ಹೊಳಿಗೆ ತೆರಳುವಾಗ ಹೆಂಡತಿ ಮಲ್ಲಿಗೆ ದೇವಿ ಕಳಸದಲ್ಲಿ ಗೊರವಯ್ಯನ ಅಂಗಿ ಮತ್ತು ಚಂದ್ರಾಯುಧವನ್ನು ಇಟ್ಟುಕೊಂಡು ಹೊರಡುತ್ತಾಳೆ. ಹೊಳೆಗೆ ಬಂದು ಊರಿನವರ ಬಟ್ಟೆಗಳನ್ನೆಲ್ಲಾ ಒಗೆಯುತ್ತಾರೆ. ಉಳಿದದ್ದು ಆ ಗೊರವಯ್ಯನ ಅಂಗಿ. ಆದನ್ನ ನನ್ನಿಂದ ಒಗೆಯಲು ಆಗದು ಎಂದು ಮಡಿವಾಳಪ್ಪ ತನ್ನ ಹೆಂಡತಿಗೆ ಹೇಳುತ್ತಾನೆ. ಸ್ವಾಮಿ ಮಾತು ಕೊಟ್ಟೀವಿ ಅಂದ ಮೇಲೆ ಆ ಕೆಲಸ ಮಾಡ್ಲೇಬೇಕು. ಎಂದು ಹೆಂಡತಿ ಎಷ್ಟು ಒತ್ತಾಯಿಸಿದರೂ ಇಲ್ಲ ಇಲ್ಲ ನನ್ನಿಂದ ಈ ಕೆಲಸ ಆಗಾಕಿಲ್ಲ ಇದನ್ನ ತಗೊಂಡು ಹೋಗಿ ವಾಪಾಸು ಆ ಗೊರವಯ್ಯನಿಗೆ ಕೊಡ್ತೀನಿ. ''ತಿರುಕಂಡು ತಿಂಬೋ ಗೊರವಯ್ಯ ಮಾಡು ಅಂದ್ರೆ ನಾನೆಲ್ಲಿಂದ ಅಂತ ಮಾಡ್ಲಿ ನನ್ನ ಕೈಯಾಗ ಹುಟ್ಟೋ ಬದುಕಾದ್ರೆ ನಾನು ಮಾಡ್ತೀನಿ.'' ಸ್ವಾಮಿ ನಾನು ಹೇಳಿದಂಗೆ ಮಾಡ್ರಿ. ಎಲ್ಲ ಸರಿಹೋಗ್ಯೈತೆ ಅಂತ ಅಂದು ಚಂದ್ರಾಯುಧವನ್ನು ಆತನ ಕೈಗೆ ಕೊಟ್ಟಳು. ನೀವು ನನ್ನ ಕುತ್ತಿಗೆ ಕೊಯ್ದರೆ ರಕ್ತ ಹೋಗಿ ಬಿಸಿಲು ಆಗ್ಯೈತೆ, ಕಣ್ಣೀರು ಸಮುದ್ರ ಆಗ್ಯೈತೆ, ಡಕ್ಕೆಮಿಕೆ (ಪಕ್ಕೆಲಬು) ಗಡಿಗೆ ಆಗ್ಯೈತೆ, ಕೈಕಾಲು ಕಟ್ಟಿಗೆ ಆಗ್ಯೈತೆ. ಅಂತ ಹೇಳಿದ್ಲು. ಮಲ್ಲಿಗೆ ದೇವಿ ನನ್ನನ್ನು ಒಬ್ಬಂಟಿಗನನ್ನಾಗಿ ಮಾಡಬೇಡ. ಇಂಥ ಕೆಲಸ (ಹೆಂಡತಿಯನ್ನು ಸಾಯಿಸುವಂಥ ) ನಾನು ಮಾಡಲಾರೆ ಎಂದು ಪರಿಪರಿಯಾಗಿ ಹೆಂಡತಿಗೆ ಕೇಳಿಕೊಂಡರೂ, ಸ್ವಾಮಿ ದೇವರು ಇಟ್ಟಂಗೆ ಆಗ್ಯೈತೆ ನೀವು ನಾನು ಹೇಳಿದಂಗೆ ಮಾಡ್ರಿ ಅಂದಾಗ, ಮಾಡಿವಾಳಪ್ಪ ಹೆಂಡತಿಯ ಒತ್ತಾಯಕ್ಕೆ

ಮಣಿದು ಚಂದ್ರಾಯುಧದಿಂದ ಆಕೆಯ ಶಿರವನ್ನು ತುಂಡರಿಸುತ್ತಾನೆ. ಆಗ ಹೆಂಡತಿ ಹೇಳಿದಂತೆ ಸಮುದ್ರ, ಒಲೆಗುಂಡು, ಕಟ್ಟಿಗೆ, ಬಂಡೆ ಹೀಗೆ ಎಲ್ಲವೂ ನಿರ್ಮಾಣವಾಗಿ ಮಡಿವಾಳಪ್ಪ ಗೊರವಯ್ಯನ ಅಂಗಿಯನ್ನು ಒಗೆದು ಎಲ್ಲಾ ಬಟ್ಟೆಗಳನ್ನು ಕತ್ತೆಗೆ ಹೇರಿಕೊಂಡು ಮನೆಗೆ ಬರುತ್ತಾನೆ. ದಾರಿಯಲ್ಲಿ ಗೊರವಯ್ಯ ಮುಪ್ಪಾದ ಮುದುಕನ ವೇಷಧರಿಸಿ ಅಲ್ಲ ಮಡಿವಾಳಪ್ಪ ಹೋಗುವಾಗ ನಿನ್ನ ಹೆಂಡತಿಯ ಜೊತೆಗೆ ನಕ್ಕಾಂತ ಹೋಗಿ ಈಗ ನೀನು ಒಬ್ಬನೇ ಬರ್ತಿದೀಯಲ್ಲ ಅಂದಾಗ, ಇಲ್ಲ ಆಕೆ ನನಗೆ ಸಿಟ್ಟು ಬರಂಗ ಏನೋ ಅಂದ್ಲು, ಬೈದದ್ದಕ್ಕೆ ತವರಿಗೆ ಹೋದ್ಲು ಎಂದು ಸುಳ್ಳು ಹೇಳಿ ಮನೆಗೆ ಬಂದವನೇ ಕೋರಿ ಅಂಗಿಯನ್ನು ಜಗುಲಿಯ ಮೇಲಿಟ್ಟು ತನ್ನ ಸತಿಯನ್ನು ನೆನೆದು ಓ...ಎಂದು ಅಳತೊಡಗಿದ.

ಅದೇ ಸಮಯಕ್ಕೆ ಗೊರವಯ್ಯ ಬಂದು ಮಡಿವಾಳಪ್ಪ ಮಲ್ಲಯ್ಯನ ಜಾತ್ರೆ ಹತ್ರ ಬಂತು. ನನ್ನ ಕೋರಿ ಅಂಗಿ ಕೊಡಪ್ಪಾ ಅನ್ನುತ್ತಾನೆ. ಆಗ ಮಡಿವಾಳಪ್ಪ ಮೊರದಲ್ಲಿ ವಜ್ರ ವೈಢೂರ್ಯಗಳ ಜೊತೆ ಕೋರಿ ಅಂಗಿಯನ್ನು ಇಟ್ಟು ನೀಡಲು ಬರುವನು. ನೋಡಪ್ಪ ಸತಿ-ಪತಿ ಸಮೇತ ಕೊಟ್ಟರೆ ನಾನು ತಗೊಂತೀನಿ ಇಲ್ಲ ಅಂದ್ರೆ ಇಲ್ಲ ಅಂತ ಹೇಳಿದ. ಈ ಮಾತಿಗೆ ಮಡಿವಾಳಪ್ಪ ಗೊರವಯ್ಯನ ಕೂಡ ತಕರಾರು ತೆಗೆಯುತ್ತಾನೆ. ನೀನು ಕೋರಿ ಅಂಗಿ ಕೊಡುವಾಗ ನನ್ನ ಹೆಂಡ್ತಿ ಇದ್ಲೇನು ? ನಾನೊಬ್ಬನೇ ಇದ್ದದ್ದು. ಅಂಗೇ ನಾನೇ ಕೊಡ್ತೀನಿ ತಗೋ ಅಂದಾಗ ಆ ಗೊರವಯ್ಯ ಕೇಳುವುದಿಲ್ಲ. ಆಗ ಸ್ವಾಮಿ ನನ್ನ ಹೆಂಡತಿ ತವರಿಗೆ ಹೋಗ್ಯಾಳ ನಾಳೆ ಬರ್ತಾಳ ನೀನು ತಗೋ ಅಂದಾಗ ಆಯ್ತು ನಿನ್ನ ಹೆಂಡತಿ ನಾಳೆ ಬರಲಿ ನಾನು ನಾಳೆ ಬಂದು ತಗಂಡು ಹೋಗ್ತೀನಿ ಅಂತ ಹೇಳಿ ಹೊರಡುತ್ತಾನೆ.

ಮಾರನೆಯ ದಿನ ಗೊರವಯ್ಯ ಮಡಿವಾಳನ ಮನೆಗೆ ಬರುತ್ತಾನೆ. ಬಂದು ಬಂದ್ಲೇನಪ್ಪ ನಿನ್ನ ಹೆಂಡತಿ ಅಂತ ಕೇಳಿದ. ಇಲ್ಲ ಸ್ವಾಮಿ ಬಂದಿಲ್ಲ ಅನ್ನುತ್ತಾನೆ. ನೋಡು ಮಡಿವಾಳಪ್ಪ ನೀನು ಇದ್ದ ಮಾತು ಇದ್ದಂಗೆ ಹೇಳು (ಸತ್ಯ ಹೇಳು) ಅಂಗಾದ್ರೆ ನಿನ್ನ ಹೆಂಡತಿ ಬರ್ತಾಳೆ ಅಂತ ಹೇಳಿದ. ಆಗ ಮಡಿವಾಳಪ್ಪ ಸ್ವಾಮಿ ನನ್ಹೆಂಡ್ತಿ ಬಟ್ಟೆ ಒಗಿವ್ಯಾಗ ಕಾಲು ಜಾರಿ ಬಿದ್ದು ಹೊಳೆ ಪಾಲಾಗಿ ಹೋದ್ಲು ಅಂತ ಸುಳ್ಳು ಹೇಳಿದ. ಆಯ್ತಪ್ಪ ನೀನು ದೇವರ ಕೋಣೆ ಬಾಗಿಲು ತೆರೆದು ಕರಿಯಪ್ಪ ನಿನ್ನ ಹೆಂಡತಿ ಬರ್ತಾಳೆ ಅಂತ ಹೇಳಿದ. ಅದರಂತೆ ಮಡಿವಾಳಪ್ಪ ಕರೆದಾಗ ಆಕೆ ಬರಲಿಲ್ಲ, ಆಗ ಗೊರವಯ್ಯನನ್ನು ಮಡಿವಾಳಪ್ಪ ಹಂಗಿಸುತ್ತಾನೆ. ಇಲ್ಲ ಮಡಿವಾಳಪ್ಪ ನೀನು ಸುಳ್ಳು ಹೇಳಿರುವೆ ನಿಜವಾದ ಮಾತು ಹೇಳು ಇಲ್ಲ ಅಂದ್ರೆ ಗೌಡ ಕುಲಕರ್ಣಿಯವರಿಗೆ ಹೇಳ್ತೀನಿ ನೋಡು ಅಂದಾಗ ಈತ ಊರು ಮಂದಿಗೆಲ್ಲ ಹೇಳಿ ಬಿಡ್ತಾನೆ ಅಂತ ಭಯಬಿದ್ದು ಸ್ವಾಮಿ ನಾನು ಇದ್ದ ಮಾತು ಇದ್ದಂಗೆ ಹೇಳ್ತೀನಿ ನನ್ನ ಹೆಂಡತಿ ಬರ್ತಾಳೆಯೇ ಎಂದು ಕೇಳಿದಾಗ ನೀನು ಹೇಳಪ್ಪ ಆಕೆ ತಪ್ಪದೇ ಬರ್ತಾಳೆ ಅಂತ ಗೊರವಯ್ಯ ಹೇಳಿದ. ಆಗ ಮಡಿವಾಳಪ್ಪ ನಡೆದುದೆಲ್ಲವನ್ನು ಹೇಳುತ್ತಾನೆ. ಆಯ್ತು ನೀನು ದೇವರ ಕೋಣೆಗೆ ಹೋಗಿ ಕರಿಯಪ್ಪ ನಿನ್ನ ಹೆಂಡತಿ ಬರ್ತಾಳೆ ಅಂದಾಗ ಮಡಿವಾಳಪ್ಪ ಹಾಗೇ ಮಾಡಿದ. ಆಗ ದೇವರ

ಕೋಣೆಯಲ್ಲಿ ಹೆಂಡತಿ ಗಂಜಿ ಸೀರೆ ಉಟ್ಟುಗೊಂಡು, ಗಂಧದ ಬೊಟ್ಟು ಇಟ್ಟುಕೊಂಡು, ಕಂಚಿನ ಕಳಸ ಹಿಡಿದು ನಿಂತಿದ್ದಳು. ಆಗ ಸತಿ ಪತಿಯರು ಇದು ಪವಾಡವೆಂದೇ ತಿಳಿದು ಇಬ್ಬರು ಗೊರವಯ್ಯನ ಪಾದದ ಬಳಿ ಬಂದೆರಗುತ್ತಾರೆ. ಆಗ ಮಲ್ಲಯ್ಯ ಪ್ರತ್ಯಕ್ಷನಾಗಿ ನಿಮಗೆ ಬೇಕಾದ ವರವನ್ನು ಬೇಡಿ ನೀಡುತ್ತೇನೆಂದು ಹೇಳಿದ. ತಪ್ಪದೇ ಕೊಡುವುದಾದರೆ ನಾವು ಕೇಳುವುದಾಗಿ ಮಲ್ಲಿಗೆದೇವಿ ತಿಳಿಸುತ್ತಾಳೆ. ಆಯ್ತು ಎಂದಾಗ ''ಸ್ವಾಮಿ ಮೊಣಕಾಲು ಮಟ್ಟ ನೀರು ಕೊಡು, ಊರ ಉದ್ಯೋಗ ಕೊಡು, ಮಕ್ಕಳ ಕೊಡು ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆಕೊಡು, ಅದು ಬಿಟ್ಟು ನಮಗೆ ಬಂಗಾರ, ಬೆಳ್ಳಿ ಏನು ಬೇಕಿಲ್ಲ ಎನ್ನುತ್ತಾಳೆ'' ತಥಾಸ್ತು ಮಗಳೇ ಎಂದು ವರ ನೀಡಿ ಮಲ್ಲಯ್ಯ ಗುಡ್ಡ ಸೇರಿಕೊಳ್ಳುತ್ತಾನೆ.

**ಕಥೆ - ೨**

ಒಂದು ದಿನ ಪಾರ್ವತಿ - ಪರಮೇಶ್ವರರ ದರ್ಶನಕ್ಕೆ ನಾರದ ಮುನಿಗಳು ಶಿವನ ಒಡ್ಡೋಲಗಕ್ಕೆ ಬರುತ್ತಾರೆ. ನಾರದ ಮುನಿಗಳು ಗಡ್ಡ ಮೀಸೆಗಳನ್ನು ಬಿಟ್ಟು ವಿಚಿತ್ರವಾಗಿರುತ್ತಾರೆ. ಶಿವನ ಜಡೆಯಲ್ಲಿರುವ ಗಂಗೆ ನಾರದರನ್ನು ನೋಡಿ ನಗುತ್ತಾಳೆ. ಆಗ ನಾರದ ಓಹೋ ಗಂಗೆ ನನ್ನ ನೋಡಿ ನೀನು ನಕ್ಕಿರುವೆಯಲ್ಲ, ನಿನ್ನ ನೋಡಿ ಜಗತ್ತೇ ನಗುವ ಹಾಗೆ ಮಾಡ್ತೀನಿ ಅಂತ ಹೇಳಿ ಅಲ್ಲಿಂದ ಹೋಗುತ್ತಾನೆ. ಮುಂದೆ ಮಣಿ-ಮಲ್ಲಾಸುರರನ್ನು ಸಂಹಾರ ಮಾಡುವಾಗ ಶಿವ ಮಲ್ಲೇಶ್ವರನಾಗುತ್ತಾನೆ. ಗಂಗಿಗೆ ಮಾಳಮ್ಮನ ಅವತಾರ ಎತ್ತುವುದಕ್ಕೆ ಆಗುವುದಿಲ್ಲ. ಆಗ ಜನ ನಕ್ಕು ಬಿಡುತ್ತಾರೆ. ಗಂಗಿಗೆ ನಾಚಿಕೆ ಮತ್ತು ಅವಮಾನಗಳಾಗಿ ಪಾತಾಳಕ್ಕೆ ಇಳಿದು ಹೋಗುತ್ತಾಳೆ. ಅಲ್ಲಿ ನತನೂರು ಎಂಬ ಗ್ರಾಮಕ್ಕೆ ಹೋಗಿ ಹಲಸಿನ ಹಣ್ಣಿನಲ್ಲಿ ಹುಟ್ಟುತ್ತಾಳೆ. ಅಲ್ಲಿ ಕುರಿ ಕಾಯುವ ಯಜಮಾನ ತನ್ನ ಕುರಿಗಳ ಮಂದೆಯನ್ನು ನೋಡಲು ಹೊಲಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ನೀರಡಿಕೆಯಾಗುತ್ತದೆ. ಆಗ ಯಜಮಾನ ಚಿಲುಮೆಯ ಬಳಿ ಹೋಗಿ ನೀರು ಕುಡಿಯುತ್ತಿರುವಾಗ ಹಲಸಿನ ಗಿಡದಲ್ಲಿ ಘಲ್ ಘಲ್ ಎಂಬ ಶಬ್ದ ಅಂತ ಬರುತ್ತೆ. ಅಲ್ಲಿ ಗಿಡದಾಗ ಮಾಗಿದ ಹಣ್ಣು ಒಂದು ಇರುತ್ತೆ. ಅದನ್ನ ಕಿತ್ತಿ ತನ್ನ ಕಿರಿಯ ಮಗನಿಗೆ ಕೊಟ್ಟು ಮನೆಗೆ ಕಳುಹಿಸುತ್ತಾನೆ.

ಆ ಯಜಮಾನನಿಗೆ ಹೆಣ್ಣು ಮಕ್ಕಳೇ ಇರದೇ ಐದು ಮಂದಿ ಗಂಡು ಮಕ್ಕಳೇ ಇರುತ್ತಾರೆ. ಕಿರಿ ಮಗ ಆ ಹಣ್ಣನ್ನು ತೆಗೆದುಕೊಂಡು ಮನೆಗೆ ಬರುತ್ತಾನೆ. ಆಗ ಅವರ ತಾಯಿಗೆ 'ಯಮ್ಮ ಯಮ್ಮ ಹೆಣ್ಣು ತಂದೀನಿ ಕ್ಯಾ '(ತೆಗೆದುಕೊ) ಅನ್ನುತ್ತಾನೆ. ಆ ಹುಡುಗ ಹಣ್ಣು ಅನ್ನುವುದಕ್ಕೆ ಈ ರೀತಿ ಹೆಣ್ಣು ಅಂತ ಕರೆದ. ಈ ಮಾತನ್ನು ಕೇಳಿದ ಆ ತಾಯಿ ಸಂತೋಷದಿಂದ ತನ್ನ ಸೆರಗು ಒಡ್ಡುತ್ತಾಳೆ. ಸೆರಗಿನೊಳಗೆ ಆ ಹುಡುಗ ಹಣ್ಣು ಹಾಕುತ್ತಾನೆ. ಆ ತಾಯಿ ಆ ಹಣ್ಣನ್ನು ತೆಗೆದುಕೊಂಡು ದೇವರ ಜಗುಲಿಯ ಮೇಲಿಡುತ್ತಾಳೆ. ಮಾರನೆಯ ದಿನ ಬೆಳಗ್ಗೆ ಆ ತಾಯಿ ಕಸ ಹೊಡೆಯುತ್ತ ದೇವರ ಜಗುಲಿಯ ಬಳಿ ಬಂದಾಗ ಆ ಹಣ್ಣು ಸೀಳಿ ಥಳ ಥಳ ಅಂತ ಹೊಳೆತಿರುತ್ತೆ. ನಂತರ ಅವರು ಅಕ್ಕಸಾಲಿಗನನ್ನು ತರೆತಂದು ಹಲಸಿನ ಹಣ್ಣಿನ ಸಿಪ್ಪೆಯನ್ನು ಸುಲಿದು ಆ

ಹೆಣ್ಣನ್ನು ಹೊರ ತೆಗೆಯುತ್ತಾರೆ. ಆಕೆ ಏಳು ಮಲ್ಲಿಗೆ ಹೂವಿನ ತೂಕದಷ್ಟು ಇರುತ್ತಾಳೆ. ಅಂದಿನಿಂದ ಆ ಗಂಗಿ ಅವರ ಮನೆಯಲ್ಲಿಯೇ ಬೆಳೆಯುತ್ತಾಳೆ. ಮಲ್ಲಯ್ಯ ಇವಳನ್ನು ಮದುವೆಯಾಗುವ ಸಲುವಾಗಿ ಕುರಿ ಕಾಯುವ ಕೆಲಸ ಮಾಡಿ ಕೊನೆಗೆ ಮದುವೆಯಾಗುತ್ತಾನೆ.

ಬಹುತೇಕ ಜನಪದರು ಕಥೆಗಳನ್ನು ಕಟ್ಟುವಾಗ ತಮ್ಮ ಸುತ್ತಲಿನ ಜನ ಜೀವನ, ಕಾಯಕ ಮುಂತಾದ ಅಂಶಗಳನ್ನು ಎತ್ತಿಕೊಂಡು ಪಾತ್ರಗಳನ್ನು ಕಾಲ್ಪನಿಕವಾಗಿ ತಮಗೆ ಬೇಕಾದ ರೀತಿಯಲ್ಲಿ ಹೊಸೆದು ಕೊಂಡಿದ್ದಾರೆ. ಉದಾಹರಣೆಗೆ ಈ ಕಥೆಯಲ್ಲಿ ನಾರದ ಮುನಿಗಳು ಗಡ್ಡ, ಮೀಸೆ, ಬಿಡುವುದು, ಅದು ದುಃಖ ಬೇಸರ ಕಷ್ಟದ ಸನ್ನಿವೇಶ. ಯಾವುದೇ ಪ್ರಸಂಗದಲ್ಲಿ ಒಬ್ಬರಿಗೆ ಅವಮಾನವಾದರೆ, ವಿಚಿತ್ರವಾಗಿ ಕಂಡರೆ ಹೆಣ್ಣು ನಗುವುದು ಸಹಜ ಕ್ರಿಯೆ ಅನ್ನುವುದನ್ನು ಗಂಗಿಯ ಪಾತ್ರದಲ್ಲಿ ತಿಳಿಸಿದ್ದಾರೆ. ಅದರಂತೆ ನಾರದರ ಸೇಡಿನ ಪ್ರತಿರೂಪವಾಗಿ ಅಲ್ಲಿಂದ ಕಥೆ ಬೇರೆ ತಿರುವಿಗೆ ಸಾಗಿ ಗಂಗಿ ಹಲಸಿನ ಹಣ್ಣಿನಲ್ಲಿ ಹುಟ್ಟಿ ಕುರುಬರ ಮನೆಯಲ್ಲಿ ಬೆಳೆಯುತ್ತಾಳೆ. ಇಲ್ಲಿ ಜನನವನ್ನು ಜನಪದರು ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲೂ ಕಂಡು ಕೊಂಡಿರುವುದು ತುಂಬಾ ವಿಶೇಷವಾಗಿದೆ.

## ಕಥೆ - ೩

ಈಗ್ಗೆ ಈ ಕ್ಷೇತ್ರದಲ್ಲಿ ಮಣಿಕಾಸುರರು ಮಲ್ಲಾಸುರರು ಜನರಿಗೆ ವಿಪರೀತ ಕಾಟ ಕೊಡುತ್ತಿದ್ದರಂತೆ. ಇವರನ್ನು ಸಂಹರಿಸಲು ಮಲ್ಲೇಶ್ವರ ಮಾಳಮ್ಮನವರು (ಪಾರ್ವತಿ-ಪರಮೇಶ್ವರ) ಕುರಿ ಕಾಯುವವರ ರೂಪತಾಳಿ ಕುರಿಗಳನ್ನು ಹೊಡೆದುಕೊಂಡು ಈ ಬೆಟ್ಟದ (ಮೀನಗೊಂದಿಯ ಬೆಟ್ಟ) ಒಳಗೆ ಪ್ರವೇಶ ಮಾಡಿದರು. ಮಣಿ-ಮಲ್ಲಾಸುರರನ್ನು ಸಂಹಾರ ಮಾಡಿದವರಿಗೆ ಕುಷ್ಠರೋಗ ಪ್ರಾಪ್ತಿ ಅಂತ ಅವರಿಗೊಂದು ಹುಟ್ಟು ನಕ್ಷತ್ರ. ಈ ಮಲ್ಲೇಶ್ವರ ಮಾಳಮ್ಮ ಬಂದು ಮಣಿ-ಮಲ್ಲಾಸುರರನ್ನು ವಿಜಯ ದಶಮಿಯಂದು ಸಂಹಾರ ಮಾಡಿದ ಮೇಲೆ ಆ ಕುಷ್ಠರೋಗ ಮಲ್ಲೇಶ್ವರನಿಗೆ ಪ್ರಾಪ್ತಿಯಾಯಿತು. ಬರ್‍ತಾ ಹೋಗ್ತಾ ಇರುವ ಜನರಿಗೆ ಇವರು ಯಾರು ಅಂಬೋದೇ ಗೊತ್ತಿರಲಿಲ್ಲ. ಆದರೆ ಕುಷ್ಠಿರೋಗಿ ಈತನನ್ನು ನೋಡಿ ಯಾರು ಹತ್ತಿರಕ್ಕೆ ಬರುತ್ತಿರಲಿಲ್ಲ. ಮೈತುಂಬ ನೊಣಗಳು ಇದ್ದದ್ದರಿಂದ ಮಾಳಮ್ಮ ಸಹಿತವಾಗಿ ನೀರು ಕೊಡಾಕ ಅಸಹ್ಯ ಮಾಡ್ತಿದ್ಲು. ಆ ವೇಳೆಗಾಗಲೇ ನಮ್ಮ ಋಷಿಗಳಾದ ಕಪಿಲಮುನಿ ಸ್ವಾಮಿಗಳು ಈ ಬೆಟ್ಟದ ಮೇಲೆ ಒಂದು ಗುಹೆಯಲ್ಲಿ ತಪಸ್ಸು ಮಾಡುತ್ತಿದ್ದರು. ಇವರಿಗೆ ಮನೆ ಅಂದ್ರೆ ಅದೇ, ಆಶ್ರಮ ಅಂದ್ರೆ ಅದೆ, ಎಲ್ಲಾ ಅದೇ ಆಗಿತ್ತು. ಇವರೇ ನಮ್ಮ ಸಂಸ್ಥಾನದ ಪೂರ್ವಿಕರು.

ಇವರ ಬಳಿಗೆ ಮಾಳಾ ಮಲ್ಲೇಶ್ವರರು ಬಂದು "ಸ್ವಾಮಿ ನಾವು ಮಣಿ-ಮಲ್ಲಾಸುರರನ್ನು ಸಂಹರಿಸಿದ ಮೇಲೆ ನಮಗೆ ಕುಷ್ಠರೋಗ ಪ್ರಾಪ್ತಿಯಾಗೈತೆ. ನೀವು ಇದನ್ನು ಪರಿಹಾರ ಮಾಡಬೇಕು." ಅಂತ ಕೇಳಿದರು. ಆಗ ಕಪಿಲ ಮುನಿಗಳು ಗಿಡ ಮೂಲಿಕೆಗಳಿಂದ ಔಷಧಿಯನ್ನು ತಯಾರಿಸಿ ಅದನ್ನ ಮಲ್ಲೇಶ್ವರನ ಮೈಗೆಲ್ಲಾ ಸವರಿದರು. ಏನಪ್ಪ ಇದರಂತೆ ೨ ದಿನಕ್ಕೆ ಒಂದು ಬಾರಿಯಂತೆ ಬಂದು ಮೂರು ಸಾರಿ ಹಿಂಗೆ ಬಂದು ಮಾಡಿಸಿಕೊಂಡು ಹೋಗಿ ಬಿಟ್ರೆ ನಿನಗೆ ಈ ರೋಗ ನಿವಾರಣೆಯಾಗೈತೆ ಅಂತ ಹೇಳಿದರು.

ಆವಾಗ ಅವರಿಗೆ ರೋಗ ಎಲ್ಲಾ ನಿವಾರಣೆಯಾಗಿ ಬಿಡ್ತು. ಮೊದಲು ಹೆಂಗ ಇದ್ರೋ ಅದೇ ಪ್ರಕಾರವೇ ಆಗಿಬಿಟ್ರು. ಒಟ್ಟು ನಮ್ಮ ಸ್ವಾಮಿಗಳ ಕೈಯಿಂದ ಅವರಿಗೆ ರೋಗ ನಿವಾರಣೆಯಾಯ್ತು. ಅವಾಗ ಇಲ್ಲಪ್ಪ ಪಾರ್ವತಿ - ಪರಮೇಶ್ವರರೇ ನಾವು, ಏನಂದ್ರೆ ಖುದ್ದು ನಾವು ಪಾರ್ವತಿ - ಪರಮೇಶ್ವರ ಅಂತ ಹೇಳಿಕೊಳ್ಳದೆ ನಾವು ಕುರುಬರಂತ್ಹೇಳಿ ಕುರಿಗಳನ್ನು ಹೊಡಕೊಂಡು ಇಂಗ ಬಂದು ಈ ರೀತಿ ಮಣಿ-ಮಲ್ಲಾಸುರರನ್ನು ಸಂಹಾರ ಮಾಡೀವಿ. ಇನ್ನು ನಮ್ಮ ಕಾರ್ಯ ಮುಗೀತು. ಆದರೆ ನೀವು ನನ್ನ ರೋಗ ನಿವಾರಣೆ ಮಾಡಿದ ಕಾರಣಕ್ಕಾಗಿ ನೀವೇ ಗುರುವು ನಾನೇ ಶಿಷ್ಯ ಅಂತ ಅಂದು ಅವತ್ತಿಗೆ ಬಂದು ವಾಗ್ದಾನ ಮಾಡಿ ಹೋಗಿ ಬಿಟ್ಟಿದ್ದಾರೆ. ಗುರುಗಳಾದ ನಿಮ್ಮ ಪೂಜೆಯೇ ಮುಂದು, ನನ್ನ ಪೂಜೆ ಹಿಂದು. ನಿಮಗೆ ವಗ್ಗಯ್ಯ, ಗೊರವಯ್ಯನವರ ರೂಪ ಧರಿಸಿಯಾಗಲೀ ನಾನು ಸದಾ ಕಾಲಕ್ಕೂ ಪೂಜೆ ನಡೆಸಿ ಕೊಡ್ತೀವಿ ಅಂತ ಹೇಳಿದ್ದಾನೆ.

ಈ ಮೂರು ಕಥೆಗಳನ್ನು ಅವಲೋಕಿಸಿದಾಗ ಮಡಿವಾಳಪ್ಪನ ಕಥೆಯಲ್ಲಿ ಸ್ವಾಮಿ ಮಲ್ಲಯ್ಯನು ಮಡಿವಾಳರಿಗೆ ಅಸಾಧ್ಯವಾದ ಕೆಲಸವನ್ನು ನೀಡಿ ಅವರನ್ನು ಇಕ್ಕಟ್ಟಿಗೆ ಸಿಲುಕಿಸುತ್ತಾನೆ. ಆದರೂ ಧೈರ್ಯಕೆಡದ ಮಲ್ಲಿಗೆದೇವಿ ಕಾಯಕ ನಿಷ್ಠೆಯಲ್ಲಿ ತನ್ನ ಪ್ರಾಣವನ್ನು ನೀಡಿ ಸ್ವಾಮಿಯ ಕೋರಿ ಅಂಗಿಯನ್ನು ಒಗೆಯಲು ಅನುವು ಮಾಡಿಕೊಡುತ್ತಾಳೆ. ಈ ಕಥೆಯಲ್ಲಿ ಬರುವ ಸಮುದ್ರ, ಒಲೆ, ಬಂಡೆ, ಕಟ್ಟಿಗೆ ಮುಂತಾದವು ಮನುಷ್ಯನ ಶರೀರದೊಂದಿಗೆ ಹೋಲಿಸುವ ರೀತಿ ತುಂಬಾ ಮನೋಜ್ಞವಾಗಿದೆ. ಮಡಿವಾಳಪ್ಪ ನಿಜವನ್ನು ಹೇಳದೆ ತನ್ನ ಹೆಂಡತಿ ಸತ್ತ ವಿಷಯವನ್ನು ಮುಚ್ಚಿಡಲು ಯತ್ನಿಸುತ್ತಾನೆ. ಸತ್ಯ ಯಾರಿಂದಲೂ ಮುಚ್ಚಿಡಲು ಆಗದು. ಕೊನೆಗೆ ಮಡಿವಾಳಪ್ಪ ಸತ್ಯವನ್ನು ಹೇಳಿದಾಗ ಹೆಂಡತಿ ಪ್ರತ್ಯಕ್ಷಳಾಗುತ್ತಾಳೆ. ಸತ್ಯಕ್ಕೆ ಬೆಲೆ ಇದ್ದೇ ಇದೆ ಎಂಬುದನ್ನು ಮಡಿವಾಳಪ್ಪನ ಪಾತ್ರ ಬಿಂಬಿಸುತ್ತದೆ.

ಎರಡನೆಯ ಕಥೆ ಕಾಲ್ಪನಿಕ ಬೆನ್ನಲ್ಲೇ ಸಾಗಿದೆ. ಹಲಸಿನ ಹಣ್ಣಿನಲ್ಲಿ ಗಂಗಿ ಮಾಳಮ್ಮ ಹುಟ್ಟುವುದು, ಅದು ಕುರುಬರಿಗೆ ಸಿಗುವುದು, ಕುರುಬರ ಹಟ್ಟಿಯಲ್ಲಿ ಆಕೆ ಬೆಳೆಯುತ್ತಿರಲು ಗೊರವ ಬಂದು ಆಕೆಯನ್ನು ವರಿಸುವುದು ಇವೆಲ್ಲ ಮಾನವನು ಸಹಜವಾಗಿ ಹರೆಯದಲ್ಲಿ ಹೆಣ್ಣಿಗಾಗಿ ಪಡುವ ಏನೆಲ್ಲ ಪ್ರಯತ್ನಗಳಾಗಿವೆ.

ಕೊನೆಗೆ ಆಕೆ ಮಲ್ಲಯ್ಯನನ್ನು ಮದುವೆಯಾಗುವುದು ಸುಖಾಂತವೇ ಆಗಿದೆ. ಮೂರನೆಯ ಕಥೆ ಒಡೆಯರು ಮಲ್ಲಯ್ಯನಿಗೆ ಗುರು ಆದ ಹಿನ್ನೆಲೆಯ ಬಗ್ಗೆ ತಿಳಿಸುತ್ತದೆ. ಇನ್ನೂ ಮಣಿ ಮಲ್ಲಾಸುರರನ್ನು ಸಂಹರಿಸುವ ಕಥೆ, ಕಥೆಗಳಲ್ಲಿ, ನಾಟಕಗಳಲ್ಲಿ, ಹಾಡುಗಳಲ್ಲಿ, ಒಡಪುಗಳಲ್ಲಿ, ಬಯಲಾಟಗಳಲ್ಲಿ ಬಳಕೆಯಾಗಿದ್ದು ಜೊತೆಗೆ ಹಲವಾರು ಬಾಯಲ್ಲಿ ಈ ಕಥೆಯ ತಿರುಳು ಹರಿದಾಡಿದೆ. ಕಥಾಂಶ ಒಂದೇ ಆಗಿದ್ದರೂ ಬಾಯಿಂದ ಬಾಯಿಗೆ ಹರಿದಾಡುವಾಗ ಅವು ಕೆಲವು ಪ್ರತ್ಯೇಕ ರೂಪಗಳನ್ನೇ ಪಡೆದುಕೊಂಡಿವೆ. ಇದು ಸಹಜವೇ ಆಗಿದೆ.

### ೭.೧.೪ : ಮಲ್ಲಯ್ಯನ ಐತಿಹ್ಯಗಳು :

#### ಮೀನಗೊಂದಿ ಕ್ಷೇತ್ರಕ್ಕೆ ಸಂಬಂಧಿಸಿದ ಐತಿಹ್ಯಗಳು :

ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ, ಘಟನೆ, ಚರಿತ್ರೆ, ಸಮಾಜ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಯೇ ಐತಿಹ್ಯ. ಐತಿಹ್ಯದಲ್ಲಿರುವ ಕಥೆಯನ್ನು ಜನ ನಿಜವಾಗಿ ನಡೆದಿದೆ ಎಂದು ನಂಬುತ್ತಾರೆ. ಐತಿಹ್ಯಗಳಲ್ಲಿ ಕಥೆಗೆ ಕಾರಣವಾದ ವಸ್ತು ಮೊದಲೇ ವಾಸ್ತವ ಪ್ರಪಂಚದಲ್ಲಿ ನಡೆದಿರುತ್ತವೆ. ಅಥವಾ ಹಾಗೆಯೇ ಜನ ಭಾವಿಸುತ್ತಾರೆ. ಯಾವುದೇ ಒಂದು ನಿರ್ದಕ್ಷತೆಗೆ ಇಡೀ ಕಥೆ ಬದ್ಧವಾಗಿರುತ್ತದೆ. ಐತಿಹ್ಯಗಳನ್ನು ಮೂರು ಪ್ರಕಾರಗಳಾಗಿ ವಿಂಗಡಿಸುತ್ತಾರೆ.

೧. ವಿವರಣಾತ್ಮಕ ಐತಿಹ್ಯ.
೨. ಅತಿಮಾನುಷ ಜೀವಿಗಳನ್ನು ಕುರಿತ ಐತಿಹ್ಯ.
೩. ಚಾರಿತ್ರಿಕ ಅಥವಾ ಹೊಸ ಚಾರಿತ್ರಿಕ ವ್ಯಕ್ತಿ ಮತ್ತು ಘಟನೆಗಳನ್ನು ಕುರಿತ ಐತಿಹ್ಯ.

ಈ ಮೂರು ರೀತಿಯ ಐತಿಹ್ಯಗಳು ಆಯಾ ಸಂದರ್ಭಕ್ಕೆ ತಕ್ಕಂತೆ ಕಥೆಯನ್ನು ಮೈಗೂಡಿಸಿಕೊಳ್ಳುತ್ತವೆ. ಸ್ಥಳನಾಮಗಳ ಹುಟ್ಟನ್ನು ವಿವರಿಸುವ ವಿವರಣಾತ್ಮಕ ಕತೆಗಳು ಸಾಕಷ್ಟಿವೆ. ಇಂಥ ಐತಿಹ್ಯಗಳು ಮೀನಗುಂದಿ ಕ್ಷೇತ್ರದಲ್ಲಿ ಸಾಕಷ್ಟಿವೆ. ಅಂತಹ ಕೆಲವು ಮಾದರಿಗಳನ್ನು ಇಲ್ಲಿ ನೋಡಬಹುದು.

#### ಪಾದಾಲಗಟ್ಟಿ :

ಇದೊಂದು ನಿರ್ವಸತಿ ಸ್ಥಳನಾಮ. ಇದಕ್ಕೆ ಸಂಬಂಧಿಸಿದಂತೆ ಪುರಾಣಾತ್ಮಕ ಐತಿಹ್ಯ ಒಂದು ಹೀಗಿದೆ. ದೇವರಗುಡ್ಡದ ಒಡೆಯ ಶ್ರೀ ಮಲ್ಲೇಶ್ವರ ಒಂದು ದಿನ ಆ ಅರಣ್ಯದಲ್ಲಿ ತನ್ನ ದೇವಾಲಯದಿಂದ ಮನುಷ್ಯ ರೂಪದಲ್ಲಿ ಎದ್ದು ವಿಹಾರಕ್ಕೆಂದು ಹೊರಟನು. ದಾರಿಯಲ್ಲಿ ಒಬ್ಬ ಭಕ್ತ ಎದುರಾದ ಆಶ್ಚರ್ಯವಾದ ಭಕ್ತನಿಗೆ ಮಲ್ಲೇಶ್ವರನು ''ಮಗು ಮುದುಕನಾದ ನನ್ನನ್ನು ಕೈ ಹಿಡಿದು ಓಡಾಡಿತು ಇಲ್ಲವಾದರೆ ಜೋಲಿಯೂ

ಬರುತ್ತದೆ'' ಎಂದನು. ಭಕ್ತನು ಕೈಹಿಡಿದು ವಿಹಾರಕ್ಕೆ ಕರೆದೊಯ್ದ. ಒಂದು ವಿಶಾಲವಾದ ಬಂಡೆಯ ಮೇಲೆ ವಿಶ್ರಾಂತಿಗೆ ಕರೆದೊಯ್ದ. ಆಗ ಆ ಮುದುಕ ವೇಷದ ಮಲ್ಲಯ್ಯದೇವರಿಗೆ ಜೋಲಿ ಬಂದು ಪಾದವನ್ನು ಜೋರಾಗಿ ಬಂಡೆಗೆ ಒತ್ತಿದ. ಇದರಿಂದ ಬಂಡೆಯು ಮೂರು ಹೆಜ್ಜೆ ಮಾಡಿ ಗುಳಿಯಾಯಿತು. ಆಶ್ಚರ್ಯದಿಂದ ಭಕ್ತ ನೋಡುವುದರೊಳಗೆ ಮಲ್ಲಯ್ಯ ಮಾಯವಾಗಿದ್ದ. ಇಂದಿಗೂ ಆ ಪಾದಗಳನ್ನು ಜನರು ಭಕ್ತಿಯಿಂದ ಪೂಜಿಸುತ್ತಾರೆ. ಇದನ್ನು ಪಾದಾಲಗಟ್ಟಿ ಎಂದು ಕರೆಯುತ್ತಾರೆ.

**ರಾಕ್ಷಸಪಡೆ ಅಥವಾ ರಕ್ತಪಡೆ :**

ರಕ್ತಪಡೆ ಅಥವಾ ರಾಕ್ಷಸಪಡೆ ಎಂದು ಆಡು ಮಾತಿನಲ್ಲಿ ಕರೆಯಲ್ಪಡುವ ಈ ಸ್ಥಳ ಪುರಾಣಾತ್ಮಕ ಐತಿಹ್ಯವೊಂದನ್ನು ತನ್ನಲ್ಲಡಗಿಸಿಕೊಂಡಿದೆ. ಪೂರ್ವಕಾಲದಲ್ಲಿ ಮಾಳಾಸಹಿಯ ಮಲ್ಲೇಶ್ವರ ದೇಶಕ್ಕೆ ಕಲ್ಯಾಣಮಾಡುತ್ತಾ ಕುಳಿತಿರಲು ಮೀನಗೊಂದಿ ಕ್ಷೇತ್ರಕ್ಕೆ ಕಾಲಿಟ್ಟ ಮಣಿ-ಮಲ್ಲಾಸುರ ಎಂಬ ರಾಕ್ಷಸರು ಆ ಊರಿಗೆ ಉಪದ್ರವವನ್ನು ಕೊಟ್ಟರು. ಈ ಉಪಟಳವನ್ನು ತಾಳದೆ ಜನರು ಮಲ್ಲಯ್ಯನನ್ನು ಪ್ರಾರ್ಥಿಸಲು ಶ್ರೀ ಮಲ್ಲೇಶ್ವರ ಅಶ್ವರೂಢನಾಗಿ ತನ್ನ ಗೊರವಯ್ಯಗಳನ್ನೇ ಬೇಟೆಯ ನಾಯಿಗಳನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೊರಟನು. ಇಂದಿನ ರಕ್ತಪಡೆಯೆಂದು ಕರೆಯಲ್ಪಡುವ ಸ್ಥಳದಲ್ಲಿ ಘೋರ ಯುದ್ಧವನ್ನು ಮಾಡಿ ರಾಕ್ಷಸರನ್ನು ಸಂಹರಿಸಿದನು ಅಂದಿನಿಂದ ಜನರು ಸುಖವಾಗಿದ್ದರು. ಮಲ್ಲಯ್ಯನಿಂದ ವರ ಪಡೆದಂತೆ ಆ ಇಬ್ಬರು ರಾಕ್ಷಸರಿಗೆ ಇಂದಿಗೂ ವರ್ಷಕ್ಕೆ ಒಂದು ಸಾರಿ ಉತ್ಸವದಲ್ಲಿ ಸಾಂಕೇತಿಕವಾಗಿ ೫ ಹನಿ ರಕ್ತವನ್ನು ಕಾಲಿನ ಮೀನಗಂಡದಿಂದ ತೆಗೆದು ಕೊಡುತ್ತಾರೆ. ಇದನ್ನು ಜನರೆಲ್ಲ ರಕ್ತಪಡೆ, ರಾಕ್ಷಸ ಪಡೆ ಎಂದು ಕರೆಯುತ್ತಾರೆ. ಇಂದಿಗೂ ರಾಕ್ಷಸಪಡೆ ಎನ್ನುವ ಸ್ಥಳದಲ್ಲಿ ಒಂದು ಬೃಹತ್ ಬಂಡೆಯ ಮೇಲೆ ರಾಕ್ಷಸನ ಕೆಂಪು ವರ್ಣದ ಚಿತ್ರವಿದ್ದು ಕೆಳಗಡೆ ಗವಿಯಿದೆ. ಆ ಗವಿಯಲ್ಲಿ ಮಣಿ-ಮಲ್ಲಾಸುರರು ವಾಸಿಸುತ್ತಾರೆ ಎಂದು ಇಲ್ಲಿಯ ಜನಪದ ನಂಬಿಕೆ.

**ಹೊನ್ನಿಕೆರೆ :**

ಮೀನಗೊಂದಿ ಕ್ಷೇತ್ರದ ಪೂರ್ವಕ್ಕೆ ಒಂದು ಸುಂದರವಾದ ಕೆರೆಯಿದೆ ಇದು 'ಹೊನ್ನಿಕೆರೆ' ಒಣಿಕೇರಿ, ಒಣಕೇರ ಕಟ್ಟೆ, ಎಂಬ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತದೆ. ವಾಸ್ತವವಾಗಿ ಇದು ಹೊನ್ನಿಕೆರೆ. ಹೊನ್ನಿ ಎಂಬಾಕೆ ಒಂದು ಕೆರೆಯನ್ನು ಕಟ್ಟಿಸಿ ತನ್ನ ಜನ್ಮವನ್ನು ಸಾರ್ಥಕ ಪಡಿಸಿಕೊಂಡಳು ಎಂದು ಸುತ್ತಮುತ್ತಲಿನ ಹಳ್ಳಿಗಳ ಜನರು ನಂಬುತ್ತಾರೆ. ಇದಕ್ಕೆ ಸಂಬಂಧಿಸಿದ ಯಾವುದೇ ಚಾರಿತ್ರಿಕ ದಾಖಲೆಗಳಿಲ್ಲ. ಈ ಕ್ಷೇತ್ರದಲ್ಲಿ ನಡೆಯುವ ವಿಶೇಷವಾದ ಬಡಿಗೆಯಾಟದ ನಿರ್ಣಾಯಕ ಬಡಿದಾಟ ಈ ಕಟ್ಟೆಯ ಮೇಲೆ ನಡೆಯುತ್ತದೆ. ಈ ಕಾರಣದಿಂದ ಇದನ್ನು ಒಣಗೆರೆ, ಒಣಿಕೇರೆ, ವೆಣಿಕೇರ ಕಟ್ಟೆ ಎಂದು ಕೂಡಾ ಕರೆಯುತ್ತಾರೆ.

**ಆನೆಬಾವಿ :**

ಮೀನಗೊಂದಿಯ ಪೂರ್ವಕ್ಕಿರುವ ಒಂದು ಸುಂದರವಾದ ಬಾವಿಇದು. ಬಾವಿಯ ಆರಂಭಕ್ಕೆ ಎರಡು ಬೃಹತ್ ಕಲ್ಲಿನ ಆನೆಗಳನ್ನು ಇಕ್ಕೆಲಗಳಲ್ಲಿ ನಿಲ್ಲಿಸಲಾಗಿದೆ. ವಾಸ್ತುಶಾಸ್ತ್ರದ ದೃಷ್ಟಿಯಿಂದ ಬಹು ಆಕರ್ಷಕವಾದ ಕಟ್ಟಡವನ್ನು ಈ ಬಾವಿ ಹೊಂದಿದೆ. ಬಾವಿಯ ಅಂತರಂಗದಲ್ಲಿ ಅಲ್ಲಲ್ಲಿ ಬಂಡೆಗಳಿವೆ. ಉಲ್ಬ ಶಿಲ್ಪಗಳಿವೆ. ಬಾವಿಯಲ್ಲಿ ಒಂದು ಶಾಸನವೂ ಇದೆಯಂದು ಹೇಳುತ್ತಾರೆ. ಅದು ಈಗ ನೀರಿನಿಂದ ಆವೃತವಾಗಿದೆ. ಈ ಬಾವಿಗೆ ಒಂದು ಐತಿಹ್ಯ ಹೀಗಿದೆ. ನವಾಬರ ಕಾಲದಲ್ಲಿ ಆದವಾನಿಯ ನವಾಬರು ಆನೆಯ ಮೇಲೆ ವಿಹಾರಕ್ಕೆಂದು ಬರುತ್ತಿದ್ದರಂತೆ ಒಮ್ಮೆ ಆನೆಗಳು ಬಾವಿಯಲ್ಲಿ ನೀರು ಕುಡಿಯುವಾಗ ನವಾಬನು ಮಲ್ಲಯ್ಯನನ್ನು ನಿಂದಿಸಿದನಂತೆ. ತಿರುಗಿ ನೋಡುವುದರಲ್ಲಿ ಆನೆಗಳೆರಡು ಶಿಲೆಯಾಗಿ ನಿಂತಿದ್ದವು ಈ ಕಾರಣದಿಂದ ಈ ಬಾವಿಯನ್ನು ಆನೆ ಬಾವಿ ಎಂದು ಕರೆಯುತ್ತಾರೆ.

**ಸಿಂಹಾಸನ ಕಟ್ಟೆ :**

ಮಲ್ಲಯ್ಯನ ದೇವಾಲಯದ ಗುಡ್ಡದ ಕೆಳಗಡೆ ಇರುವ ಒಂದು ದೇವಾಲಯವಿದ್ದು ಈ ದೇವಾಲಯದಲ್ಲಿ ಒಂದು ಸಮಾದಿಯ ರೂಪದ ಕಟ್ಟೆಯಿದೆ. ಇದನ್ನು ಜನರು 'ಶಿವಸಾನ ಕಟ್ಟೆ' ಎಂದು ಕರೆಯುತ್ತಾರೆ. ಶ್ರೀ ಮಲ್ಲೇಶ್ವರನು ಗಿರಿಯ ಮೇಲಿಂದ ವಿಹಾರಾರ್ಥವಾಗಿ ಬಂದು ಈ ಕಟ್ಟೆಯ ಮೇಲೆ ಕುಳಿತು ವಿರಾಮಿಸುತ್ತಿದ್ದನಂತೆ. ಇದರಿಂದ ಇದನ್ನು ಶಿವಸ್ಥಾನಕಕಟ್ಟೆ, ಮತ್ತು ಸಿಂಹಾಸನ ಕಟ್ಟೆ ಎಂದು ಕರೆಯುತ್ತಾರೆ. ಇಂದಿಗೂ ವರ್ಷಕ್ಕೊಮ್ಮೆ ನಡೆಯುವ ದಸರಾ ಉತ್ಸವದಲ್ಲಿ ಗಿರಿಯ ಮೇಲಿಂದ ಸ್ವಾಮಿಯ ಉತ್ಸವ ಮೂರ್ತಿಯನ್ನು ತಂದು ಈ ಸಿಂಹಾಸನ ಕಟ್ಟೆಯ ಮೇಲೆ ಕೂಡಿಸುತ್ತಾರೆ. ಇಂದಿಗೂ ರಾತ್ರಿಯ ಸಮಯದಲ್ಲಿ ಗಿರಿಮಲ್ಲಯ್ಯನು ಬಂದು ಅಲ್ಲಿ ವಿಶ್ರಾಂತಿ ಪಡೆಯುತ್ತಾನೆ ಎಂಬುದಾಗಿ ಜನರು ನಂಬುತ್ತಾರೆ.

## ೭.೧.೫. ಬಯಲಾಟ :

**ಶ್ರೀ ಮಾಳಾ ಮಲ್ಲೇಶ್ವರರ ಮಹಾತ್ಮೆ :**

ಆಲೂರು ತಾಲೂಕಿನ ಲಿಂಗದಹಳ್ಳಿ ಗ್ರಾಮದಲ್ಲಿರುವ ಶ್ರೀ ಆಗಸರ ತಿಕ್ಕ ಹನುಮಂತಪ್ಪನವರು 'ಶ್ರೀ ಮಾಳಾ ಮಲ್ಲೇಶ್ವರ ಮಹಾತ್ಮೆ' ಅರ್ಥಾಥ್ 'ಮಣಿಮಲ್ಲಾಸುರರ ವಧೆ' ಎನ್ನುವಂತಹ ಬಯಲಾಟವನ್ನು ಬರೆದಿದ್ದಾರೆ. ಇವರು ಜಾತಿಯಿಂದ ಆಗಸರಾಗಿದ್ದು, ತಮ್ಮ ಕುಲ ಕಸುಬಿನ ಜೊತೆಗೆ ಹವ್ಯಾಸಕ್ಕೆ ಮಲ್ಲಯ್ಯನಿಗೆ ಸಂಬಂಧಿಸಿದ ಹಾಡುಗಳನ್ನು ಸಂಗ್ರಹಿಸಿ ಬಯಲಾಟವನ್ನು ರಚಿಸಿದ್ದಾರೆ. ತಾವು ಬರೆದ ಹಾಡುಗಳಿಗೆ ಸ್ವತಃ ರಾಗ ಸಂಯೋಜಿಸಿ ಗೊರವರಿಗೆ, ಮತ್ತಿತರ ಭಕ್ತರಿಗೆ ಕಲಿಸಿದ್ದಾರೆ. ಇವತ್ತಿಗೂ ಕೆಲ ಗೊರವರು ಇವರು ರಚಿಸಿ ರಾಗ ಸಂಯೋಜಿಸಿದ ಹಾಡುಗಳನ್ನು ಹಾಡುತ್ತಿರುತ್ತಾರೆ. ಇನ್ನು ಬಯಲಾಟದ ವಿಷಯಕ್ಕೆ ಬಂದರೆ;

ಹನುಮಂತಪ್ಪನವರ ತಂದೆಯವರವರು ಒಳ್ಳೆಯ ಕಥೆಗಾರರು. ಅವರು ಹೇಳುವ ಕಥೆ ಬಾಲಕ ಹನುಮಂತಪ್ಪನವರ ಮೇಲೆ ಹೆಚ್ಚಿನ ಪ್ರಭಾವ ಬೀರಿ ಬಯಲಾಟವನ್ನು ಬರೆಯಲು ದಾರಿ ಮಾಡಿಕೊಟ್ಟಿತು. ಹನುಮಂತಪ್ಪನವರ ಮಲ್ಲಯ್ಯನ ಕಥೆಯನ್ನು ಬಯಲಾಟವಾಗಿರುವುದು ತುಂಬಾ ವಿಶೇಷ. ಕಾರಣ ಇವರು ತಮ್ಮ ಕುಲವೃತ್ತಿಯಲ್ಲಿ ತೊಡಗಿದ್ದರೂ ಸಹ ಪ್ರವೃತ್ತಿಯಲ್ಲಿ ಬಯಲಾಟಗಳಲ್ಲಿ ಸಾರಥಿ ಪಾತ್ರವನ್ನು ಮಾಡುತ್ತಾ ಬಯಲಾಟದ ಸಾರಥಿ ಎಂದೇ ಗುರುತಿಸಿಕೊಂಡವರು. ಈ ಕ್ಷೇತ್ರದಲ್ಲಿ ಎಲ್ಲೇ ಬಯಲಾಟ ನಡೆಯಲಿ ಇವರನ್ನೇ ಕರೆಸುವಷ್ಟು ಅವರ ಖ್ಯಾತಿ ಹಬ್ಬಿದೆ. ಸಾರಥಿಯ ಮಾತನ್ನು ಹೇಳಲೇಬೇಕು ಎಂಬ ನನ್ನ ಒತ್ತಾಯಕ್ಕೆ ಮಣಿದು ಸಾರಥಿಯ ನಾಮಾಂಕಿತದ ಮಾತನ್ನು ಹೀಗೆ ಹೇಳಿದ್ದಾರೆ.

‘‘ ಓ...ಓ...ಓ...ದೇವಾ
ನಾನು ದಾರೆಂದರೆ;
ಅದಿಲ್ಲದೆ ಆಗಂಗಿಲ್ಲ, ಬೆದ್ಧಿಲ್ಲದೆ ಬಿತ್ತೋದಿಲ್ಲ
ಹಸುರಿದ್ರೆ ಕೊಯ್ಯೋದಿಲ್ಲ, ದೀಪಕ್ಕೆ ಕುಲವಿಲ್ಲ
ಸುಡುಗಾಡಿಗೆ ಬೇಧವಿಲ್ಲ, ರಟ್ಟಿಗೆ ಮುಖವಿಲ್ಲ
ಕಟುಗನಿಗೆ ಎದುರಿಲ್ಲ, ಆಕಾಶಕ್ಕೆ ಸ್ತಂಭವಿಲ್ಲ
ಮಳೆಯಿಲ್ಲದ ಬೆಳೆ ಬೆಳೆಯುವದಲ್ಲ
ಒಂದು ದಿನಕ್ಕೆ ನೂರು ಗಾವುದ ಸುದ್ಧಿ ಮುಟ್ಟುವುದಲ್ಲ
ಸುದ್ಧಿಯನ್ನು ಕೇಳಿ ಇದ್ದು ಕೆಲಸವ ಬಿಟ್ಟು
ಇವತ್ತು ನಾನಿಲ್ಲಿಗೆ ಬಂದೆನಲ್ಲ
ಹದಿನೆಂಟು ವರ್ಷ ರಂಡ ಮುಂಡೆ ರಾಜ್ಯವಾಳಿದಳಲ್ಲ
ಅಲ್ಲದೆ ರಾಜ್ಯವ ಮಗನ ಕೈಗೆ ಕೊಟ್ಟು ಹೋದಳಲ್ಲ
ಮಗನಂ ಗುಂಡು ಹಾಕಿ ಕೊಂದರಲ್ಲ
ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ಸುಖವಿಲ್ಲ
ನಿತ್ಯ ಭೋಜನ ಬಡವರಿಗಿಲ್ಲ.
ಅಟ್ಟದೊಳಗೆ ಎಷ್ಟು ಮಂದಿ ನಿಂತಿರುವರಲ್ಲ.
ನೋಡಾಕ ಬಂದಿರುವವರು ಎಷ್ಟು ಗಲಾಟೆ ಮಾಡುತ್ತಿರುವರಲ್ಲ.
ಇವರೆಲ್ಲರಿಗೆ ಅದಿರಿಕೊಂಡು ದೇವರು
ಗುಡಿಯೊಳಗೆ ಕಲ್ಲಾದನಲ್ಲ, ಎಲ್ಲ

ಬಲ್ಲಿದರ ಕೂಡ ಮಾತನಾಡಿ ಬಂದು
ನಿಮ್ಮ ಮುಂದೆ ನಿಂತು ಮಾತನಾಡಿಸುವ
ಬಲ್ಲಿದ ಲಿಂಗದಹಳ್ಳಿ ಸಾರಥಿ ಎಂದು ಕರೆಯುತ್ತಾರೆ
ದೇವಾ ಈಗ್ಹೇಳು ನಿಮ್ಮ ನಾಮಾಂಕಿತವ''.

ಈ ರೀತಿ ಸಾರಥಿಯ ನಾಮಾಂಕಿತದ ಮಾತು ಪ್ರತಿ ಪಾತ್ರಗಳು ಬಂದಾಗಲೂ ಬೇರೆ ಬೇರೆ ತೆರನಾಗಿರುತ್ತದೆ. ಬಯಲಾಟದ ಗೀಳೇ 'ಮಣಿಮಲ್ಲಾಸುರ ವಧೆ' ಎನ್ನುವ ನಾಟಕ ಬರೆಯಲು ಸಾಧ್ಯವಾಯಿತು ಎನ್ನುತ್ತಾರೆ ರಚನೆಕಾರರು. ಹಾಗೆ ನೋಡಿದರೆ ಇವರು ಓದಿದ್ದು ೩ನೇ ತರಗತಿ ಮಾತ್ರ. ಈ ನಾಟಕವನ್ನು ಬರೆದು ಈಗಾಗಲೇ ಸುಮಾರು ೮-೧೦ ವರ್ಷಗಳಾಗಿವೆ.

**ಕಥಾ ಸಾರಾಂಶ :-**

ಮಲ್ಲೇಶ್ವರ ಮಾಳಮ್ಮ ಇವರು ಈ ಮೊದಲು ಪಾರ್ವತಿ-ಪರಮೇಶ್ವರ ಎನ್ನುವ ರೂಪ ಅವರದ್ದು. ಮಣಿ-ಮಲ್ಲಾಸುರ ಎನ್ನುವ ರಾಕ್ಷಸರ ಉಪಟಳವನ್ನು ತಾಳದೆ ಮುಕ್ಕೋಟಿ ದೇವತೆಗಳು ಶಿವನ ಮೊರೆ ಹೋಗಿ ಸ್ವಾಮಿ-ಮಣಿಮಲ್ಲಾಸುರ ಎನ್ನುವಂತಹ ರಾಕ್ಷಸರು ನಮಗೆ ತುಂಬಾ ಕಾಟವನ್ನು ಕೊಡುತ್ತಿದ್ದಾರೆ. ಅವರಿಂದ ನಮಗೆ ಉಳಿಗಾಲವಿಲ್ಲ. ಆ ರಾಕ್ಷಸರನ್ನು ಸಂಹರಿಸುವ ಶಕ್ತಿ ನಿಮಗೆ ಬಿಟ್ಟು ಬೇರೆ ಯಾರಿಗೂ ಇಲ್ಲ. ಆದ್ದರಿಂದ ದಯಮಾಡಿ ನಮ್ಮನ್ನು ರಕ್ಷಿಸು ಎಂದು ಮುಕ್ಕೋಟಿ ದೇವತೆಗಳು ಸೆರಗೊಡ್ಡಿ ಬೇಡಿದಾಗ ಶಿವ ಮಾರ್ತಾಂಡ ಭೈರವ ರೂಪ ತಾಳಿ (ಕೂರ್ಮದ ಅವತಾರದಿಂದ ಬೆಟ್ಟದಲ್ಲಿ ಒಡಮೂಡಿ) ರಾಕ್ಷಸರನ್ನು ಸಂಹರಿಸುವುದೇ ಈ ನಾಟಕದ ಮುಖ್ಯ ಸಾರಾಂಶ. ಈ ಬಯಲಾಟದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ, ನಾರದ, ದೇವೇಂದ್ರ, ಮಣಿಕಾಸುರ, ಮಲ್ಲಾಸುರ, ಅಗ್ನಿವರ್ಣ, ಚಿಕ್ಕಯ್ಯ, ದೊಡ್ಡಯ್ಯ, ಮೈಲಾರಲಿಂಗ, ಪರಮೇಶ್ವರ, ಗಂಗಿ ಮಾಳಮ್ಮ, ಘೃತಮಾರಿ, ರಬೆ, ತಿಲೋತ್ತಮೆ, ಪಾರ್ವತಿ, ಲಕ್ಷ್ಮಿ ಮುಂತಾದ ಪಾತ್ರಗಳಿವೆ.

ಲೇಖಕರು ಈ ನಾಟಕವನ್ನು ತಮ್ಮ ಕಲ್ಪನಾ ಶಕ್ತಿಯಿಂದ ಪ್ರತಿ ಪಾತ್ರಗಳನ್ನು ದುಡಿಸಿಕೊಂಡಿದ್ದಾರೆ. ಈ ನಾಟಕ ಇನ್ನೂ ಒಂದು ಬಾರಿಯೂ ಪ್ರದರ್ಶನ ಕಂಡಿಲ್ಲ. ಇವರಿಗಿಂತ ಪೂರ್ವದಲ್ಲಿ ತಾಳೂರಿನ ರಾಮರಾಜ ಅವರ ತಂದೆಯಾದ 'ಶ್ರೀ ಕೇಶವರಾಜ' ಇವರು ಸಹ 'ಮಲ್ಲಾಸುರನ ವಧೆ' ಎನ್ನುವಂತಹ ಬಯಲಾಟವನ್ನು ಬರೆದಿದ್ದಾರೆ. ಇವರು ಬರೆದ ಬಯಲಾಟದ ಸಾರಾಂಶ ಮೇಲಿನ ಕಥಾ ಸಾರಾಂಶದಂತೆ ಒಂದೇ ಆಗಿದ್ದರೂ ಪಾತ್ರಗಳಲ್ಲಿ ಕೊಂಚ ವ್ಯತ್ಯಾಸವನ್ನು ಕಾಣುತ್ತೇವೆ. ಕೇಶವರಾಜರು ಬರೆದ ಈ ಬಯಲಾಟವೂ ಸಹ ಪ್ರದರ್ಶನ ಕಂಡಿಲ್ಲ. ಕಾರಣ ಇಷ್ಟೇ. ಸ್ವಾಮಿ ಮಲ್ಲಯ್ಯನ ಅವತಾರದ ಪಾತ್ರವನ್ನು ಮಾಡಲು ಯಾರೂ ಮುಂದೆ ಬರುತ್ತಿಲ್ಲ. ಆ ಪಾತ್ರ ಅಂತಿಂತಹದಲ್ಲ ಆ ಪಾತ್ರವನ್ನು ನಿಭಾಯಿಸುವ ಶಕ್ತಿ

ನಮ್ಮಲ್ಲಿಲ್ಲ ಎನ್ನುವ ಮನೋಭಾವನೆ ಅವರದು. ಜೊತೆಗೆ ಈ ನಾಟಕ ಪ್ರಥಮ ಬಾರಿಗೆ ಪ್ರದರ್ಶನವಾಗಬೇಕಾದರೆ ರಾಕ್ಷಸರ ಪಾತ್ರವಾಗಲೀ, ಇಲ್ಲ ಹಾರವಾಗಿ ಯಾವುದೇ ಪಾತ್ರ ಸಾವನ್ನಪ್ಪುವ (ಕೆಟ್ಟದಾಗುವ) ಸಾಧ್ಯತೆಯಿದೆ ಎನ್ನುವ ಭಾವನೆ ಜನರಲ್ಲಿ ಗಾಢವಾಗಿ ಬೇರೂರಿದೆ. ಆ ಕಾರಣದಿಂದ ಈ ಕ್ಷೇತ್ರದಲ್ಲಿ ರಚನೆಯಾದ ಈ ಎರಡೂ ಬಯಲಾಟಗಳೂ ಇನ್ನೂ ಪ್ರದರ್ಶನ ಕಾಣದೇ ಮನೆಯ ಮೂಲೆಯಲ್ಲಿಯೇ ಸೇರಿವೆ.

## ೭.೨. ಮಲ್ಲಯ್ಯನ ಶಿಷ್ಟಸಾಹಿತ್ಯ

- ೭.೨.೧. ಕಥೆ
- ೭.೨.೨. ನಾಟಕ
- ೭.೨.೩. ಸುಪ್ರಭಾತ ಹಾಗೂ ಭಕ್ತಿಗೀತೆಗಳು.
- ೭.೨.೪. ಹಾಡುಗಳು

### ೭.೨.೧. ಕಥೆ :

**ಮಲ್ಲೇಶ್ವರ ಪ್ರಸನ್ನ :**

ಬಳ್ಳಾರಿ ತಾಲೂಕಿಗೆ ಸೇರಿದ ತಾಳೂರು ಗ್ರಾಮದ ಗಣಾಚಾರಿ ಮಲ್ಲಯ್ಯ ಇವರು 'ಶ್ರೀಮಲ್ಲೇಶ್ವರ ಪ್ರಸನ್ನ' ಅನ್ನುವಂತಹ ಕಥೆಯನ್ನು ೧೯೮೬ ರಲ್ಲಿ ಬರೆದಿದ್ದಾರೆ. ಇವರು ಓದಿದ್ದು ೮ ನೇ ತರಗತಿಯವರೆಗೆ ಆದರೂ ತಮ್ಮ ತಾತನವರ ಪ್ರಭಾವಕ್ಕೆ ಒಳಗಾಗಿ ಅವರಿಂದ ಮಲ್ಲಯ್ಯನ ಹಾಡು, ಕಥೆ, ಒಡಪು, ಇತ್ಯಾದಿಗಳನ್ನು ತರಗತ ಮಾಡಿಕೊಂಡಿದ್ದಾರೆ. ಅವರ ತಾತನವರು ಹೇಳಿರುವ ಕಥೆಯನ್ನು ಬರವಣಿಗೆಯ ರೂಪದಲ್ಲಿ ಅದನ್ನು ದಾಖಲಿಸಿದ್ದಾರೆ. ಇದು ೨೦೦ ಪುಟಗಳ ಚಿಕ್ಕ ನೋಟುಪುಸ್ತಕದಲ್ಲಿ ಬರೆದಿಟ್ಟ ಒಂದು ಅಪ್ರಕಟಿತ ಕಥೆಯಾಗಿದೆ.

**ಸಾರಾಂಶ :**

ದ್ವಿತಿ - ವಿಧುತಿ ಎಂಬ ಒಂದೇ ಹೊಟ್ಟೆಯಲ್ಲಿ ಹುಟ್ಟಿ ಬಂದ ಅಕ್ಕ ತಂಗಿಯರು ಇದ್ದರು. ದ್ವಿತಿಯ ಮಕ್ಕಳು ದೇವತೆಗಳು. ವಿಧುತಿಯ ಮಕ್ಕಳು ರಾಕ್ಷಸರು. ಹೀಗಿರುವಾಗ ರಾಕ್ಷಸರಿಂದ ದೇವತೆಗಳಿಗೆ ತುಂಬಾ ತೊಂದರೆಯಾಗಿ ದೇವತೆಗಳು ಆದಿಶೇಷನ ಬಳಿ ಹೋಗಿ ಕೇಳಿಕೊಂಡರು. ಸಮುದ್ರದಲ್ಲಿ ಸ್ತಂಭ ಊರಿ ದೇವತೆಗಳು ಮತ್ತು ರಕ್ಷಸರು ಮೊಸರನ್ನ ಕಡೆದು ಮಜ್ಜಿಗೆ ಮಾಡ್ತಾಯಿದ್ರು, ಆಗ ದೇವತೆಗಳೆಲ್ಲ ಸೇರಿ ನನ್ನ

ಮಕ್ಕಳನ್ನೆಲ್ಲಾ ಸಂಹಾರ ಮಾಡಿಬಿಟ್ಟರು. ಹೆಂಗರ ಮಾಡಿ ಇವರನ್ನೆಲ್ಲ ಗೆಲ್ಲುವಂಥ ಒಬ್ಬನೇ ಮಗನನ್ನು ವರವನ್ನು ಪಡೆಯಬೇಕೆಂದು ತಪಸ್ಸಿಗೆ ಕುಳಿತಳು. ಹನ್ನೆರಡು ವರ್ಷ ಘೋರ ತಪಸ್ಸನ್ನು ಮಾಡಿದಳು. ಆಗ ಶಿವ ಪ್ರತ್ಯಕ್ಷನಾಗಿ ಮಗಳೇ ನಿನ್ನ ತಪಸ್ಸಿಗೆ ಫಲ (ವರ) ಕೊಡುವೆನು. ಎದ್ದು ಬಾ ಎಂದಾಗ ಇಲ್ಲ ನಾನು ಕೇಳಿದಂಥ ವರ ಕೊಟ್ರೆ ಮಾತ್ರ ಎದ್ದು ಬರುತ್ತೇನೆ ಎಂದು ಹಠ ಮಾಡಿದಾಗ ಶಿವ ಅದಕ್ಕೆ ಒಪ್ಪಿ ವರವೇನು ಬೇಕು ಎಂದು ಕೇಳಿದನು. ' ಆಗ ವಿಧುತಿ ಏನಿಲ್ಲ ದೇವಾನು ದೇವತೆಗಳೆಲ್ಲರನ್ನು ಗೆಲ್ಲುವಂಥ ಒಬ್ಬ ಮಗನನ್ನು ವರವಾಗಿ ನೀಡು' ಎಂದಾಗ ಶಿವ ತಥಾಸ್ತು ಎಂದು ಹೇಳಿ ಹೊರಟು ಹೋದನು.

ಆಗ ದೇವಾನು ದೇವತೆಗಳು ತಮಗೆ ಉಳಿಗಾಲವಿಲ್ಲವೆಂದರಿತು ಆಕೆಯ ಹೊಟ್ಟೆಯಲ್ಲಿರುವ ಪಿಂಡವನ್ನು ಹೇಗಾದರೂ ಮಾಡಿ ಭೇದ ಮಾಡಬೇಕೆಂದು ಒಬ್ಬ ಚಿಕ್ಕ ಹುಡುಗನ ರೂಪತಾಳಿ ಬ್ರಹ್ಮ ಆಕೆಯ ಬಳಿ ಹೋಗಿ ನಾನು ನಿನ್ನ ಮಗನೇ ಒಬ್ಬನೇ ಉಳಿದಿರುವೆನೆಂದು ನಂಬಿಸಿ ಸಮಯವನ್ನು ಕಾದು ಆಕೆಯ ಹೊಟ್ಟೆಯೊಳಗೆ ಹೋಗಿ ಚಂದ್ರಾಯುಧದಿಂದ ಪಿಂಡವನ್ನು ಅಡ್ಡವಾಗಿ ಸೀಳದೆ ಉದ್ದವಾಗಿ ಸೀಳಿ ಬರುತ್ತಾನೆ. ಆ ಪಿಂಡ ಎರಡು ಹೋಳಾಗಿ ಕೆಳಗಡೆ ಬೀಳುತ್ತದೆ. ಪಿಂಡಗಳೇ ಮಣಿಕಾಸುರ, ಮಲ್ಲಾಸುರರೆಂಬ ರಾಕ್ಷಸರು. ತಮ್ಮ ತಾಯಿಂದ ದೇವತೆಗಳು ನಮ್ಮನ್ನು ಸಂಹರಿಸಲು ಯತ್ನಿಸಿದ ಬಗೆಯನ್ನು ತಿಳಿದುಕೊಂಡು ಬಾವಿ ಒಳಗೆ ಬಾವಿ, ಬಾವಿ ಮೇಲೆ ಡಮರುಗಾಣಿಗೆ, (ಬಾವಿಯ ಮೇಲೆ ಅಡ್ಡವಾಗಿ ಹಾಸಿದ ಕಲ್ಲಿನ ಕಂಬ) ಆ ಕಂಬದ ಮೇಲೆ ಸೂಜಿ, ಸೂಜಿ ಮ್ಯಾಲೆ ಬಲಗಾಲ ಹೆಬ್ಬೊಟ್ಟೊಂದೇ ಊರಿ ಘೋರ ತಪಸ್ಸು ಮಾಡತೊಡಗಿದರು. ತಪಸ್ಸಿನ ಫಲವಾಗಿ ಮಣಿ-ಮಲ್ಲಾಸುರರು ಶಿವನಿಂದ ಯಾವ ದೇವತೆಗಳ ಕೈಯಿಂದಲೂ ಸಾವು ಬರಬಾರದು. ಕೊನೆಗೆ ವರನೀಡಿದ ಪರಶಿವನಿಂದಲೂ ನಮಗೆ ಸಾವು ಇರಬಾರದು ಅನ್ನುವಂತಹ ವರವನ್ನು ಪಡೆಯುತ್ತಾರೆ.

ಶಿವನಿಂದ ವರಪಡೆದ ಇವರುಗಳು ದೇವತೆಗಳಿಗೆ ನಾನಾ ರೀತಿಯಿಂದ ಕಷ್ಟಗಳನ್ನು ಕೊಡುತ್ತಿರಲು ದೇವಾನು ದೇವತೆಗಳೆಲ್ಲ ಚಿಂತೆಗೊಳಗಾದರು. ಆಗ ದೇವಾನುದೇವತೆಗಳೆಲ್ಲ ಈ ರಾಕ್ಷಸರನ್ನು ಸಂಹರಿಸಲು ಶಿವನೇ ಸೂಕ್ತ ಎಂದು ತಿಳಿದು, ಆತನಲ್ಲಿಗೆ ಬಂದು 'ಪರಶಿವನೇ ನೀನೇ ಯಾವುದಾದರೂ ಒಂದು ಹೊಸ ಅವತಾರವನ್ನು ಎತ್ತಿ ಆ ರಾಕ್ಷಸರನ್ನು ಸಂಹಾರ ಮಾಡಬೇಕೆಂದಾಗ ಶಿವನು ಅದಕ್ಕೆ ಒಪ್ಪಿದ.

ಪರಶಿವ ಮಲ್ಲೇಶ್ವರನ ಅವತಾರವನ್ನು ಎತ್ತಿ ಒಡೆಯನನ್ನು ಗುರುವಾಗಿ ಮಾಡಿಕೊಂಡು ಅವರಿಂದ ಭಂಡಾರವನ್ನು ಪಡೆದು ತನ್ನ ಹಣೆಗಣ್ಣು ಮುಚ್ಚಿ ಹೋಗುವ ರೀತಿಯಲ್ಲಿ ಹಣೆಗೆ ಹಚ್ಚಿಕೊಳ್ಳುತ್ತಾನೆ. ಹೀಗೆ ಮಲ್ಲಯ್ಯ ಮಣಿ-ಮಲ್ಲಾಸುರರನ್ನು ಸಂಹರಿಸಲು ಹೋಗುವಾಗ ಪಾರ್ವತಿ-ಮಾಳಮ್ಮನ ರೂಪತಾಳಿ, ನಂದಿ ಕುದುರೆಯ ರೂಪತಾಳಿ, ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳು ತ್ರಿಶೂಲವಾಗುತ್ತಾರೆ. ಆಗ ಅಶ್ವರೂಢರಾಗಿ ಮಾಳಾ-ಮಲ್ಲೇಶ್ವರರು ನಾಯಿಗಳನ್ನು ಕರೆದುಕೊಂಡು ಯುದ್ಧಕ್ಕೆ ತೆರಳುತ್ತಾರೆ.

ಯುದ್ಧದಲ್ಲಿ ಮಲ್ಲೇಶ್ವರನಿಗೆ ಸೋಲುವ ಪ್ರಸಂಗ ಬರುತ್ತದೆ. ಕಾರಣ ರಾಕ್ಷಸರ ಒಂದು ಹನಿ ರಕ್ತ ಭೂಮಿಗೆ ತಾಗಿದರೆ ಸಾಕು ಕೋಟ್ಯಾನುಕೋಟಿ ರಾಕ್ಷಸರು ಹುಟ್ಟತೊಡಗಿದರು. ಇವರನ್ನು ಸಂಹರಿಸುವುದೇ ಮಲ್ಲಯ್ಯನಿಗೆ ಮುಳುವಾದಾಗ ವಿಷ್ಣುವಿನ ಸಲಹೆಯ ಮೇರೆಗೆ ಮಲ್ಲಯ್ಯ ಘೃತಮಾರಿಯನ್ನು ಕರೆಸುತ್ತಾನೆ. ಆಕೆ ಬಂದು ಭೂಮಿಯಲ್ಲಿ ಇಳಿದು ತನ್ನ ನಾಲಿಗೆಯನ್ನು ಈ ಭೂಮಿಯ ಉದ್ದಗಲಕ್ಕೂ ಚಾಚುತ್ತಾಳೆ. ಆಗ ರಾಕ್ಷಸರು, ಮಲ್ಲಯ್ಯ, ಮಾಳಮ್ಮ ಎಲ್ಲರೂ ಆಕೆಯ ನಾಲಿಗೆಯ ಮೇಲೆಯೇ ಇರುತ್ತಾರೆ. ಆಗ ಮಾಳಮ್ಮ ಮಣಿಕಾಸುರನನ್ನು ಸಂಹಾರ ಮಾಡುತ್ತಾಳೆ.

ನಂತರ ಮಲ್ಲಾಸುರನು ಮೂರ್ಛೆಯಿಂದ ಎಚ್ಚೆತ್ತಾಗ ಮಹೇಶ್ವರ ಆತನನ್ನು ಕುರಿತು 'ಏನಯ್ಯ ಮಲ್ಲಾಸುರ ನನ್ನ ಕೈಲಿ ನಿನ್ನನ್ನು ಸಂಹಾರ ಮಾಡಾಕ ಆಗಲಿಲ್ಲ. ನೀನು ವರ ಕೇಳ್ತೀಯ ಕೇಳು' ಎಂದಾಗ 'ನನಗೆ ವರ ಬೇಕಿಲ್ಲ. ವರ ಕೊಟ್ಟಾತ ನೀನೆ. ಮತ್ತೆ ನನ್ನ ಸಂಹಾರ ಮಾಡಾಕ ಬಂದಾತ ನೀನೆ. ಹೀಗಾದಾಗ ಕೊನೆಗೆ ಮಲ್ಲಾಸುರ ಒಂದು ಒಪ್ಪಂದ ಮಾಡಿಕೊಳ್ಳುತ್ತಾನೆ. ಅದೇನೆಂದರೆ; ನನ್ನ ಪೂಜೆ ಮುಂದು, ನಿನ್ನ ಪೂಜೆ ಹಿಂದು ಅಂಗಾದ್ರೆ ನಾನು ಸಾಯ್ತೀನಿ' ಎನ್ನುತ್ತಾನೆ. ಅದಕ್ಕ ಒಪ್ಪಿದ ಮಲ್ಲಯ್ಯ ಆತನನ್ನು ಸಂಹಾರ ಮಾಡುತ್ತಾನೆ. ಅಂದಿನಿಂದ ಶಿವನಿಗೆ ಮಲ್ಲ+ಈಶ್ವರ ಮಲ್ಲೇಶ್ವರ ಅಂತ ಹೆಸರು ಬಂದಿದೆ.

### ೭.೨.೨. ನಾಟಕ :

**ಖಂಡೋಬ :**

ಖಂಡೋಬ ಈ ಸಂಗೀತ ನಾಟಕ ರಾಜ ಪುರೋಹಿತ ಕೃಷ್ಣಭಟ್ಟ ತೆಕ್ಕಲಕೋಟೆಯವರು ೧೯೫೫ರಲ್ಲಿ ರಚಿಸಿದ್ದಾರೆ. ಈ ನಾಟಕದ ವಸ್ತು ದೇವತೆಗಳ ಮತ್ತು ಮಾನವರ ಮತ್ತು ದಾನವರ ಜೀವನ ವೃತ್ತಾಂತದ ಚಿತ್ರಣವನ್ನು ನೀಡುವಂತಹದ್ದು.

ಈ ನಾಟಕದಲ್ಲಿ ಮುಖ್ಯವಾಗಿ ಮಾನವರಿಗೆ ಉಪದ್ರವಗಳನ್ನು ಕೊಟ್ಟು ಧರ್ಮವನ್ನು ನಾಶ ಗೊಳಿಸುವ ರಾಕ್ಷಸ ಪ್ರವೃತ್ತಿಯ ರಾಕ್ಷಸರು ಈ ನಾಟಕದ ಖಳನಾಯಕರಾದರೆ ಧರ್ಮದ ಉಳಿವಿಗೆ ಧರ್ಮದ ರಕ್ಷಣೆಗೆ ದೇವತೆಗಳು ರಾಕ್ಷಸರಾಗಿಯೇ ನಿಲ್ಲುತ್ತಾರೆ.

ಮುಖ್ಯವಾಗಿ ಮಣಿಕಾಸುರ ಮಲ್ಲಸುರರು ರಾಕ್ಷಸ ಸಾಮ್ರಾಜ್ಯದ ದೊರೆಗಳು ಇವರು ತಮ್ಮ ಅಪಾರ ವಾದ ತಪಸ್ಸಿನಿಂದ ಬ್ರಹ್ಮದೇವನನ್ನು ಕಂಡು ತಮಗೆ ಯಾರಿಂದಲೂ ಸಾವು ಬರಕೂಡದು ಎಂದು ವರವನ್ನು ಪಡೆಯುತ್ತಾರೆ. ವರವನ್ನು ಪಡೆದ ಈ ದಾನವರು ತಮಗೆ ಯಾರು ಸರಿಸಾಟಿ ಇಲ್ಲವೆಂದು ತಿಳಿದು ಋಷಿಗಳ

ಮಾನವರ ಜೀವನವನ್ನು ಬರ್ಭರಗೊಳಿಸಿ ಯಜ್ಞ ಯುಗಾದಿಗಳನ್ನು ಧ್ವಂಸ ಮಾಡಿ ತಮ್ಮ ರಾಕ್ಷಸಿತನವನ್ನು ಮೆರೆಯುತ್ತಾರೆ. ಕೊನೆಗೆ ಮಾನವರಿಗಲ್ಲದೇ ದೇವತೆಗಳಿಗೂ ಹೆದರದೇ ಅಹಂಕಾರವನ್ನು ಮೆರೆಯುತ್ತಾ ಸಾಮ್ರಾಜ್ಯ ಜನಜೀವನಕ್ಕೆ ಅಡ್ಡಿಯಾಗಿ ಅಹಂಕಾರವನ್ನು ಭೂಲೋಕದಲ್ಲಿ ಸೃಷ್ಟಿಸುತ್ತಾರೆ. ಇದರಿಂದ ಬೇಸತ್ತ ದೇವತೆಗಳು, ಋಷಿಗಳು ಹೋಗಿ ಪಾರ್ವತಿ ಪರಮೇಶ್ವರರಲ್ಲಿ ತಮ್ಮ ಮನದ ಇಂಗಿತವನ್ನು ಹೇಳುತ್ತಾರೆ. ಇದನ್ನು ತಿಳಿದುಕೊಂಡ ಪರಮೇಶ್ವರ ಈ ರಾಕ್ಷಸರ ಸಂಹಾರ ಮಾಡುವ ನಿರ್ಧಾರಗಳನ್ನು ತೆಗೆದುಕೊಂಡರು.

ಆದರೆ ಅವರ ಸಾವು ಮಾನವರಿಂದ ದೇವತೆಗಳಿಂದ ಇಲ್ಲದಿರುವುದನ್ನು ಕಂಡು ಗೊಂದಲಕ್ಕೆ ಒಳಗಾಗುತ್ತಾನೆ. ಕೊನೆಗೆ ತನ್ನ ಸತಿ ಪಾರ್ವತಿಯ ಉಪಾಯದಂತೆ ಗೊರವ ಗೊರವರಿಯರ ವೇಷಧರಿಸಿ ಭಿಕ್ಷಾಟನೆ ಕೈಗೊಂಡು ರಾಕ್ಷಸರ ಪೂರ್ವಾಪರ ವಿಚಾರಗಳನ್ನು ತಿಳಿದುಕೊಂಡು ಅವರನ್ನ ನಾಶಗೊಳಿಸಲು ಯತ್ನಿಸುತ್ತಾನೆ.

ಆದರೆ ಮಣಿಕಾಸುರ ಮಲ್ಲಾಸುರರು ಸದಾ ಮಧ್ಯಪಾನಿ ವ್ಯಸನಿಗಳಾಗಿದ್ದರು. ಎಚ್ಚರಿಕೆಯನ್ನು ಹೊಂದಿದವರಾಗಿರುತ್ತಾರೆ. ಆದರೆ ಹೆಣ್ಣಿನ ವಿಷಯಕ್ಕೆ ಬಂದಾಗ ಇವರೂ ಸ್ತ್ರೀ ಲೋಲುಪತೆಯಿಂದಲೇ ಅವರ ಅವನತಿಯನ್ನು ಕಾಣಬಹುದಾಗಿದೆ. ಭಿಕ್ಷಾಟನೆ ಮಾಡುತ್ತಾ ಗೊರವ ವೇಷಧರಿಸಿ ಪಾರ್ವತಿ ಮಣಿಕಾಸುರನ ಅರಮನೆಯ ಹತ್ತಿರ ಒಂದು ನರ್ತಿಸುತ್ತಿದ್ದಾಗ ಅವಳ ಅಂಗಾಂಗಗಳನ್ನು ನೋಡಿ ಮನಸೋತು ಮಣಿಕಾಸುರ ಪಾರ್ವತಿಯನ್ನು ತನ್ನವಳಾಗುವಂತೆ ಕೇಳುತ್ತಾನೆ. ಆಗ ಪಾರ್ವತಿ ಅವನಿಗೆ ಸಹಕರಿಸುವಂತೆ ನಟಿಸಿ ಮಧ್ಯಪಾನಿಯಾದ ಅವನಿಗೆ ದ್ರಾಕ್ಷರಸವನ್ನು ನೀವು ಸ್ವೀಕರಿಸಬೇಕು ಎಂದಾಗ ಕಾಮದ ಗುಂಗಿನಲ್ಲಿದ್ದ ಮಣಿಕಾಸುರ ಪಾರ್ವತಿ ಕೊಟ್ಟ ದ್ರಾಕ್ಷರಸವನ್ನು ಸೇವೆಸುತ್ತಾನೆ. ಪಾರ್ವತಿ ದ್ರಾಕ್ಷರಸವೆಂದು ಬದಲಿಗೆ ವಿಷ ತುಂಬಿದ ದ್ರವವನ್ನು ನೀಡುತ್ತಾಳೆ. ಇದನ್ನು ಕುಡಿದು ಮಣಿಕಾಸುರ ತನ್ನ ಬದುಕಿನ ಅಂತ್ಯವನ್ನು ಕಾಣುತ್ತಾನೆ. ಕೊನೆಗೆ ಮಲ್ಲಾಸುರ ಶಿವನಿಗೆ ಮಾರು ಹೋಗಿ ಅವನ ವಚನಕ್ಕೆ ಶರಣಾಗಿ ತನ್ನ ತಪ್ಪುಗಳ ಅರಿವಾಗಿ ಮಾನವತೆ ಯಿಂದ ಬಾಳುತ್ತೇನೆಂದು ಪ್ರಮಾಣ ಮಾಡುತ್ತಾನೆ. ಈತನ ಭಕ್ತಿಗೆ ಮೆಚ್ಚಿ ಶಿವ ಮಲ್ಲಸುರನ ನಾಮಾಂಕಿತವನ್ನು ಹೊಂದಿ ಮಲ್ಲೇಶ್ವರನಾಗಿ ಆಂಧ್ರ ಪ್ರದೇಶದ ಆಲೂರು ತಾಲೂಕಿನ ನೆರಣಿಕೆಯ ಮತ್ಸ್ಯ ಪರ್ವತದಲ್ಲಿ ಮಾಳಮಲ್ಲೇಶ್ವರನಾಗಿ ನೆಲೆಸುತ್ತಾನೆ. ಇಲ್ಲಿಗೆ ಈ ನಾಟಕ ಕೊನೆಗಾಣುತ್ತದೆ. ಆದರೆ ನಾಟಕದಲ್ಲಿ ಬರುವ ವಿಶಿಷ್ಟ ಪಾತ್ರಗಳಾದ ಚಾಂಡಾಲ, ಬೀಮಿಯರ ಹಾಸ್ಯ ಪ್ರಸಂಗವು ದಾನವರ ಅಟ್ಟಹಾಸ, ಶರಣರ ಮೃದು ವಚನ, ದೇವತೆಗಳ ಧರ್ಮ ರಕ್ಷಣೆ ಇವೆಲ್ಲವುಗಳನ್ನು ಬಹಳ ವ್ಯವಸ್ಥಿತವಾಗಿ ಪಾತ್ರಗಳನ್ನು ದುಡಿಸಿಕೊಳ್ಳುತ್ತಾ ಮುಂದೆ ಸಾಗಿದ ನಾಟಕಕಾರರು ಕಥಾ ಉದ್ದಕ್ಕೂ ಸಹೃದಯರ ಮನವನ್ನು ಗೆದ್ದಿದ್ದಾರೆ. ಈ ಸಂಗೀತ ಪ್ರಧಾನವಾದ ನಾಟಕ ಭಕ್ತಿರಸವನ್ನು ಹೊಂದಿದೆ.

## ೭.೨.೩ ಸುಪ್ರಭಾತ ಹಾಗೂ ಭಕ್ತಿಗೀತೆಗಳು :

**ಸುಪ್ರಭಾತ**

**ರಚನೆ :** ಶ್ರೀ ಕಲ್ಮಾಲಿ ಷಡಕ್ಷರಯ್ಯ ಸ್ವಾಮಿ

ಏಳು ಏಳಯ್ಯ ದೇವಗಿರಿವಾಸ
ಮಲ್ಲಯ್ಯ ಮೈಲಾರಲಿಂಗ ಎದ್ದೇಳು
ಬೆಳಗಾಯಿತು ಸುಪ್ರಭಾತವು
ಬೆಳಗಾಯಿತು ಸುಪ್ರಭಾತವು
ನಿಮಗೆ ಸುಪ್ರಭಾತ ॥
ನಿಮಗೆ ಸುಪ್ರಭಾತ ( ಇಳಿವು).

ಮೂಡಲದ ಅಂಚಿನಲಿ
ಹೊಂಗಿರಣ ಹರಡುತಲಿ
ಮೂಡಣದ ಅಂಚಿನಲಿ
ಹೊಂಗಿರಣ ಹರಡುತಲಿ
ಸೂರ್ಯನುದಯಿಸಿ ಕೈ ಜೋಡಿಸಿ
ದೇವಗಿರಿದಡಿಯಲಿ ನಿಂದಿಹನು ॥ ( ಏರು)
ಸುಪ್ರಭಾತವು ನಿಮಗೆ ಸುಪ್ರಭಾತ
ಸುಪ್ರಭಾತ.

ಅಂಬರದ ಹಕ್ಕಿಗಳು ಸಂಭ್ರಮದಿಂದ ಹರಸುತಿಹವು ॥
ಶಂಭು ಭಕ್ತರೆಲ್ಲರು ಗಾನ ಮಾಡುತಿಹರು
ಇಂಬಿನಲಿ ಹರಿಯುತಿಹ ತರತರದ ಗಾನಾ
ನಂಬಿದೆಲ್ಲಕು ತಾನೇ ಶಿವಭಕ್ತಿ ತಾಣಾ
ಸುಪ್ರಭಾತ ನಿಮಗೆ ಸುಪ್ರಭಾತ.

ಕೋಗಿಲೆಯು ಕೂಗುತಿದೆ
ಕೋಗಿಲೆಯು ಕೂಗುತಿದೆ ಭಕ್ತರನು ಕರೆಯುತಿದೆ.
ರಾಗರಂಜಿತ ಸಪ್ತಸ್ವರಗಳಿಂದ
ಯೋಗಿ ವೃಂದವು ಕೂಡಿ ಗಾನ ಮಾಡುತಿಹರು
ಯೋಗಿ ವೃಂದವು ಕೂಡಿ ಗಾನ ಮಾಡುತಿಹರು (ಏರು)
ಬೇಗನೇ ಎದ್ದೇಳು ದೇವಗಿರಿ ಮಲ್ಲೇಶ.

ತರತರದ ಪಕ್ಷಿಗಳು ಕೂಗುತಿರುವವು
ನಿನ್ನ ಗಿರಿಯ ಸುತ್ತ ಹರಸುತ್ತಲಿರುವವು
ದೇವಾ ಗಿರಿಮಲ್ಲಯ್ಯ
ನೀನೆಚ್ಚೆತ್ತು ಧರೆಗಿಳಿದು ಬಾರಾ
ಎಂದು ಧ್ವನಿಗೈಯುತಿಹವು
ನಿನಗೆ ಸುಪ್ರಭಾತ.

ನಾಡಿನಾ ಭಕ್ತರೆಲ್ಲರು ಕೂಡಿ
ಕಡುಮಮತೆಯಿಂದ ಸೇವೆ ಮಾಡುತಿಹರು
ಒಡೆಯ ದೇವಗಿರಿ ಮಲ್ಲಯ್ಯನ
ದೃಢ ಮನಸ್ಸಿನಿಂದ ಮೃಡ ರೂಪಿ
ಮಲ್ಲಯ್ಯನೆಂದು ಪೂಜಿಸುತಿಹರು
ನಿನಗೆ ಸುಪ್ರಭಾತ.

ನಾಡಾ ನಾಡಿನಿಂದ ಬರುವ ಭಕ್ತರೆಲ್ಲರೂ
ಕೂಡಿ ನಿನ್ನ ಧ್ಯಾನಿಸುತ್ತ ಗುಡ್ಡದಾ ತುಂಬೆಲ್ಲಾ
ಬಂಡೆಗಲ್ಲುಗಳ ಮೇಲೆ ದೃಢ ಮನದಿ ಕುಳಿತು
ಕಾಲಮಾನ ದೇಣಿಗೆ ಕೇಳಲು ಬಂದಿಹರು
ನಿನಗೆ ಸುಪ್ರಭಾತ ಸುಪ್ರಭಾತ.

ದಿಕ್ಕು ದಕ್ಕಿನಿಂದ ಬರುವ ಭಕ್ತರೆಲ್ಲರೂ
ಒಕ್ಕಲಿಗರಲ್ಲದೆ ಬಹುಭಕ್ತಿಯಿಂದ ಬರುವ ವ್ಯಾಪಾರಿಗಳು
ನಿನ್ನ ಅಕ್ಕರದಿ ಧ್ಯಾನಿಸುತೆ ನಿನ್ನ ಭಕ್ತರೆಲ್ಲರು
ದೇವಗಿರಿಸುತ್ತ ನಿಂದಿಹರು
ನಿನಗೆ ಸುಪ್ರಭಾತ...

ಏಳೇಳು ಮಲ್ಲಯ್ಯ ಬೆಳಗಾಯ್ತು ಎದ್ದೇಳು
ಏಳುಕೋಟಿ ವಗ್ಗಯ್ಯಗಳು ನಿನ್ನ
ಬಳಿ ಬಂದು ಗಂಟೆ ಜಾಗಟೆ ನುಡಿಸುತ್ತ
ಫರಾಕು ಹೇಳುತ್ತ ಇಳೆತುಂಬ ನಿಂದಿಹರು
ನಿನಗೆ ಸುಪ್ರಭಾತ.

ಏಳು ಏಳಯ್ಯ ಈರೇಳು ಲೋಕದ ಪ್ರಭುವೇ..
ಭಕ್ತ ಜನ ವಿಭುವೇ...
ಏಳು ಸಚ್ಚಿದಾನಂದ ಪಥ ತೋರಿದ ಪ್ರಭುವೇ
ಏಳುನೂರಾ ಎಪ್ಪತ್ತು ಅಮರಗಣಂಗಳು
ಇಳೆ ತುಂಬಾ ನಿಂದಿಹರೂ ॥
ನಿನಗೆ ಸುಪ್ರಭಾತ ಸುಪ್ರಭಾತ.

ಜಗದ ಲೀನಾ ವೈಭವ ನಟಿಸಿ ತೋರಲಿಕೆ ॥
ಜಗದ ಕತ್ತಲೆಯ ಕಳೆಯಲಿಕೇ
ಜಗದ ಕತ್ತಲೆಯ ಕಳೆಯಲಿಕೆ
ಯುಗ ಯುಗದಿ ಅವತರಿಸಿದಿ
ಮಲ್ಲೇಶ ನಿನ್ನ ಮಗ ಬಸವಲಿಂಗ
ಆಸ್ಪರಿಯಿಂದ ಬಂದಿಹನು.
ನಿನಗೆ ಸುಪ್ರಭಾತ.

ಸದ್ಭಕ್ತರೆಲ್ಲರೂ ನಿದ್ರೆಯಿಂದೆಚ್ಚೆತ್ತು
ಎದ್ದು ಬಂದಿಹರು ಸದ್ದಿಲ್ಲದೇಕೆ ಮಲಗಿದ್ದೀ
ಮಲ್ಲೇಶ...
ಎದ್ದು ಬಾರಯ್ಯ ತಂದೆ ನಿನ್ನ
ಸದ್ಭಕ್ತರೆಲ್ಲರು ಸ್ಮರಿಸುತ್ತ ನಿಂದಿಹರು.
ನಿನಗೆ ಸುಪ್ರಭಾತ.

ಹರಿವಿರಂಚಿ ಇಂದ್ರಾದಿ ದಿಕ್ಪಾಲಕರು
ಸುರಮುನಿಗರುಡ ಗಂಧರ್ವರು
ನಾರದಾದಿ ವರಲಕ್ಷ್ಮಿ ಸರಸ್ವತಿ
ದೇವಾನು ದೇವತೆಗಳು
ನಿನ್ನ ದರುಶನಕೆ ನಿಂದಿಹರು
ನಿನಗೆ ಸುಪ್ರಭಾತ.

ಏಳು ಏಳಯ್ಯ ಭಕ್ತ ಹೃದಯ ಮಂದಿರ ದಿವಾಕರನೇ
ಏಳು ಶರಣಾನಂದ ಅಂಭುದಿಯ ಚಂದ್ರನೇ
ಏಳು ಭವರೋಗ ವೈಧ್ಯನೇ ಅಭಯ ಹಸ್ತನೇ
ಏಳು ಏಳಯ್ಯ ದೇವಗಿರಿವಾಸ ಮೈಲಾರ ಲಿಂಗನೇ
ನಿನಗೆ ಸುಪ್ರಭಾತ ॥

ಅಕ್ಷರಕೆ ಸಾಕ್ಷಾತ್ಕಾರವು ಷಡಕ್ಷರಿ ಮಂತ್ರವು
ಈಕ್ಷಿಸಲು ಷಡುವಂಗ ಷಡುಲಿಂಗ ತಂತ್ರವು
ಅಕ್ಷಯದ ಷಡುಶಕ್ತಿ ಷಡುಭಕ್ತಿ ಯಂತ್ರವು
ಈಕ್ಷಿಸೆಂದು ಭಕ್ತರೆಲ್ಲರು ಬಂದು ನಿಂದಿಹರು
ಈಕ್ಷಿಸೆಂದು ಭಕ್ತರೆಲ್ಲರು ಬಂದು ನಿಂದಿಹರು
ನಿನಗೆ ಸುಪ್ರಭಾತ ॥

ಹಿಂಡುಹಿಂಡು ಹಿಂಡಾಗಿ ಬರುವ
ಭಕ್ತರು ಶರದ್ಮಾಸ ವಿಜಯದಶಮಿಯಂದು
ದಂಡ ಕೋಲ್ಗಳ ಹಿಡಿದು ಬಂಢಾರ ಗಗನಕ್ಕೆ ಎಸೆಯುತ್ತ
ಪ್ರಪಂಚ ಮಲ್ಲಯ್ಯ ಸೇವೆಗೈಯುತ್ತಾ
ಕಂಡ ಭಕ್ತರೆಲ್ಲರೂ ಆನಂದಿಸಿ
ಧ್ಯಾನಿಸುತ್ತಿಹರೂ
ಸುಪ್ರಭಾತವು ನಿನಗೆ ಮಲ್ಲಯ್ಯ
ಮಲ್ಲಯ್ಯ...

ಮಂಗಲವು ಪಾರ್ವತಿಪತಿ ಮಲ್ಲಯ್ಯನಿಗೆ
ಮಂಗಲವು ಶಿವ ನಂದೀಶನಿಗೆ
ಮಂಗಲವು ಸುರ ಸುಪ್ರಭಾತ ರಚನೆಗೆ
ಮಂಗಲವು ಮಾಳ ಗುಂಡಮ್ಮನಿಗೆ
ಮಲ್ಲಯ್ಯಾ ಸುಪ್ರಭಾತ.

**ಬೇರೆ ಧಾಟಿ :**

ಮಂಡಲದೊಳ ಸುರ ಸುಪ್ರಭಾತವು ರಚಿಸಿ
ಭವ ದಂಡನೆಯ ಗೆಲವುದೋ ಖಂಡಿತವಿದೆಂದು
ಪಂಡಿತರು ಮೆಚ್ಚುವಂತೆ ಕಲ್ಮಾಲಿ ಷಡಕ್ಷರಿ
ಮಂಡೆಬಾಗಿ ಕರಮುಗಿದು ದೇವಗಿರಿ.
ಮಲ್ಲಯ್ಯಗರ್ಪಿಸುವ ಕಿರುಕಾಣಿಕೆ
ಸುಪ್ರಭಾತ ಮಲ್ಲಯ್ಯ...

ಪಂಡಿತರು ಮೆಚ್ಚುವಂತೆ
ಕಲ್ಮಾಲಿ ಷಡಕ್ಷರಿ
ಮಂಡೆಬಾಗಿ ಕರ ಮುಗಿದು
ದೇವಗಿರಿ ಮಲ್ಲಯ್ಯಗರ್ಪಿಸುವ
ಕಿರುಕಾಣಿಕೆ
ಸುಪ್ರಭಾತ ಮಲ್ಲಯ್ಯ ಸುಪ್ರಭಾತ
ಮಲ್ಲಯ್ಯ ಸುಪ್ರಭಾತ.

ಏಳು ಏಳಯ್ಯ ದೇವಗಿರಿವಾಸ
ಮಲ್ಲಯ್ಯ ಮೈಲಾರಲಿಂಗ ಎದ್ದೇಳು
ಬೆಳಗಾಯಿತು ಸುಪ್ರಭಾತ
ನಿಮಗೆ ಸುಪ್ರಭಾತ (೨)
ಮಲ್ಲಯ್ಯ ಸುಪ್ರಭಾತ
ಓಂ ಮಲ್ಲೇಶಾಯ ನಮಃ
ಓಂ ಮಲ್ಲೇಶಾಯ ನಮಃ
ಓಂ ಮಲ್ಲೇಶಾಯ ನಮಃ
ಓಂ ಮಲ್ಲೇಶಾಯ ನಮಃ

೩.೨.೪. **ಹಾಡುಗಳು :**

**ಹಾಡು (ಮೂಡಲ್ ಕುಣಿಗಲ್ ಕೇರಿ) :** **ರಚನೆ :** ಹೆಚ್.ಕೆ. ರಘುನಾಥ್ (ಹನವಾಳು)

**ಹಾಡು - ೧**

ಓ...ಓ...ಓ...ಓ...
ನಡಿ ನಡಿ ದೇವರ ದರ್ಶನಕ್ಕೆ
ಗುಡ್ಡದ ಮಲ್ಲಯ್ಯನ ಹೇಳ್ಕೆ ಕೇಳೋದ ಕ್ಕೆ
ಗುಡ್ಡದ ಮಲ್ಲಯ್ಯನ ಹೇಳ್ಕೆ ಕೇಳೋದ ಕ್ಕೆ (ಕೋರಸ)
ಸಡಗರ ಸಂಪತ್ತು ಪಡೆವುದ ಕ್ಕೆ
ದೃಢ ಮನಸಿನಿಂದ ಶಿವ ದರ್ಶನಕ್ಕೆ
ನಾವು ದೃಢ ಮನಸಿನಿಂದ ಶಿವ ದರ್ಶನಕ್ಕೆ (ಕೋ).

ಚೆಂದಾದ ದೇವಗಿರಿ ಕ್ಷೇತ್ರ ಕ್ಕೆ
ಮುಂದಾಗ್ವ ಹೇಳ್ಕೆ ಕೇಳೋದಕ್ಕೆ
ನಾವು ಮುಂದಾಗ್ವ ಹೇಳ್ಕೆ ಕೇಳೋದಕ್ಕೆ
ಬಂದೇವು ನಿನ್ನ ವಿಜಯದಶಮಿ ದಿನಕ್ಕೆ
ಚಂದುಳ್ಳ ಮಲ್ಲಯ್ಯನ ದರ್ಶನಕ್ಕೆ.

ಪ್ರಪಂಚ ಪರಮಾರ್ಥ ಹೇಳ್ಕೆ ಕೇಳೋದಕ್ಕೆ
ಕಾಪಾಡಿ ದಯವೀ ತಿಳಿವುದಕ್ಕೆ
ಕಾಪಾಡಿ ದಯದಿಂದ ತಿಳಿವುದಕ್ಕೆ
ವಿಪರೀತ ವಾಗ್ವಾಧಾರಣೆ ಕೇಳುದಕ್ಕೆ
ಪರಬ್ರಹ್ಮ ಮಲ್ಲಯ್ಯನ ದರ್ಶನಕ್ಕೆ
ಸ್ವಾಮಿ ಪರಬ್ರಹ್ಮ ಮಲ್ಲಯ್ಯನ ದರ್ಶನಕ್ಕೆ।

ಮಳೆಮರಳ ಮಾರಾಟ ತಿಳಿವುದಕ್ಕೆ
ಮೂರಾರು ಮಾತಿನ ಹೇಳ್ಕೆ ಕೇಳೋದಕ್ಕೆ
ಮೂರಾರು ಮಾತಿನ ಹೇಳ್ಕೆ ಕೇಳೋದಕ್ಕೆ (ಕೋರಸ್)
ನಿಲುರೆಲ್ಲದಾರು ಮೂರು ಮಾತಿನರ್ಥ ತಿಳಿವುದಕ್ಕೆ
ಮಲ್ಲಯ್ಯನ ಹೇಳ್ಕೆ ಕೇಳೋದಕ್ಕೆ
ದೇವಗಿರಿ ಮಲ್ಲಯ್ಯನ ಹೇಳ್ಕೆ ಕೇಳೋದಕ್ಕೆ (ಕೋರಸ್).

## ಹಾಡು - ೨

ಲೋಕನಾಯಕ ಮಲ್ಲಯ್ಯ
ಶ್ರೀಕರ ಮೂರುತಿ ಮಲ್ಲಯ್ಯ ॥
ಏಕಾಂತ ವಾಸ ಮಲ್ಲಯ್ಯ
ಬೇಕಂತ ಪೂಜಿಪೆ ಮಲ್ಲಯ್ಯ ॥

ಸಾಕು ಮಾಡು ಭವ ಮಲ್ಲಯ್ಯ
ಸಾಕು ಮಲ್ಲನೂಕ ಮಲ್ಲಯ್ಯ
ಸಾಕಾರ ಮೂರುತಿ ಮಲ್ಲಯ್ಯ
ಜ್ವಾರೆತಿ ನಡಿಸೋ ಮಲ್ಲಯ್ಯ ॥

ಹಿಂದೇಳು ನಮ್ಮ ಮಲ್ಲಯ್ಯ
ಒಂದೊಂದು ಮನೆ ಹೊಕ್ಕೆ ಮಲ್ಲಯ್ಯ॥
ನೊಂದೆನೆಂಬುದಿಲ್ಲ ಮಲ್ಲಯ್ಯ
ನಮ್ಮ ಗುಂದುಗ ಬಿಡಿಸೋ ಮಲ್ಲಯ್ಯ॥
ನೊಂದೆನೆಂಬುದಿಲ್ಲ ಮಲ್ಲಯ್ಯ
ನಿನಗೆ ಎಂದಾಗ್ವ ಸುಖ ಮಲ್ಲಯ್ಯ॥

ಪ್ರಳಯ ವಾಗ್ವಮುನ್ನ ಮಲ್ಲಯ್ಯ
ಕಾಳಿನಾದವೆಂದು ತಿಳಿ ನಿಲ್ಲಯ್ಯ
ಗಿರಿಯೊಳಗ ಇರುವ ಗಿರಿ ಮಲ್ಲಯ್ಯ
ಹಳವ ನನ್ನ ಗುರು ಬಸವಲಿಂಗಯ್ಯ ॥

## ಹಾಡು - ೩

ಸ್ವಾಮಿ ಮಲ್ಲಯ್ಯ ಮಹದೇವ
ಮನಮಂದಿರವಾಸ ಈಶ
ಮೈಲಾರಲಿಂಗ ಮಾಳಮ್ಮ ಪತಿ ಶಿವಾ...ಶಿವಾ ॥ (ಕೋರಸ್)

ಫಲಪುಷ್ಪಗಳು ತಂದಿಹ ಭಕ್ತರು
ಪರಮಾನಂದವನೂ
ನೀಡಲು ಬೇಡಿ ನಿಂದಿಹರು ನಿಮ್ಮ
ಮಂದಿರ ದ್ವಾರದಲೀ ಸ್ವಾಮಿ ॥ ಮಲ್ಲಯ್ಯ ಮಹದೇವ....

ಬಿಲ್ವಾರ್ಚನೆಗೆ ಬಂದಿಹ ಭಕ್ತರು
ಬೇಡಿದ ವರಗಳನೂ
ನೀಡಲು ನಿಂದಿಹ ಮಲ್ಲೇಶ್ವರನ
ಪಾದಗಳಿಗೆ ನಮನ.. ॥ ಮಲ್ಲಯ್ಯ ಮಹದೇವ....

ದೂರದ ಬೆಟ್ಟದ ಮೇಲಡಗಿರುವ
ಗುಡುಗುಡು ಮಲ್ಲಯ್ಯ
ಸುರನರವಂದಿತ ಸುಂದರ ವದನ
ಹರಹರ ಮಹದೇವ ॥ ಮಲ್ಲಯ್ಯ ಮಹದೇವ....

ಪ್ರತಿನವರಾತ್ರಿ ಜಾತ್ರೆಗೆ ಬರುವ
ಭಕುತರ ಬೇಡಿಕೆಯಾ
ಈಡೇರಿಸುವ ಈಶ್ವರನ
ಮಲ್ಲೇಶ್ವರನಾ ಭಜನೆ ॥ ಸ್ವಾಮಿ ಮಲ್ಲಯ್ಯ ಮಹದೇವ....

ಕರುನಾಡಿನಗಡಿ ಮಲ್ಲಯ್ಯನ ಗುಡಿ
ಗುಡ್ಡದ ಮಲ್ಲಯ್ಯ...
ಹರಹರ ಶಂಭೋ ಶಂಕರ ಶಿವನೇ
ಬೇಗನೆ ಬಾರಯ್ಯ ॥ಸ್ವಾಮಿ ಮಲ್ಲಯ್ಯ ಮಹದೇವ....

## ಹಾಡು - ೪

ಜೈ ಮಲ್ಲೇಶ ಜೈ ಸರ್ವೇಶ ಜೈ ಸರ್ವಾಂತರಂಗ
ಜೈ ಮಲ್ಲೇಶ ಜೈ ಸರ್ವೇಶ ಜೈ ಸರ್ವಾಂತರಂಗ ।
ಕಾಲಮಾನ ಹೇಳಿ ಮೆರೆವ ಕರುಣಾಂತರಂಗ
ಕಾಲಮಾನ ಹೇಳಿ ಮೆರೆವ ಕರುಣಾಂತರಂಗ । ಕೊ।

ವಿಜಯ ದಶಮಿ ಹಬ್ಬ ಬಂದು ಭಕ್ತರೆಲ್ಲ ಕೂಡಿ
ವಿಜಯ ದಶಮಿ ಹಬ್ಬ ಬಂದು ಭಕ್ತರೆಲ್ಲ ಕೂಡಿ ।ಕೊ।
ಕೋಲು ಹಂದರದ ಕೆಳಗೆ ಕುಣಿವ ಹರನ ನೋಡಿ
ಕೋಲು ಹಂದರದ ಕೆಳಗೆ ಕುಣಿವ ಹರನ ನೋಡಿ । ಕೊ।
ಬೆಟ್ಟದ ಮೇಲೆಲ್ಲ ಭಕ್ತ ಜನರ ಕೋಲಾಹಲ

ಬೆಟ್ಟದ ಮಲ್ಲಯ್ಯನಿವನ ನೋಡನ್ನಿರೆಲ್ಲ
ದಿಟ್ಟ ಮಲ್ಲಯ್ಯನನಿವನ ನೋಡ ಬನ್ನಿರೆಲ್ಲ
ದಿಟ್ಟ ಮಲ್ಲಯ್ಯನಿವನ ನೋಡಬನ್ನಿರೆಲ್ಲ ।ಕೊ।
ದಿಟ್ಟ ಮಲ್ಲಯ್ಯನಿವನ ನೋಡ ಬನ್ನಿರೆಲ್ಲ ।ಕೊ।

ಕಂಬಳಿ ಉಡುಪನ್ನು ಧರಿಸಿ ಕಾಣುವ ಗೊರವಯ್ಯ ।ಕೊ।
ಕೈಯಲಿ ಡಮರುಗ ಹಿಡಿದು ನುಡಿಸುವ ಮಲ್ಲಯ್ಯ ।ಕೊ।
ಬೆಟ್ಟದ ಪರಿಸರವೆಲ್ಲ ತುಂಬಿ ಪ್ರಣವ ನಾದ ।ಕೊ।
ಕೊಟ್ಟು ಹೊರವ ಗೊರವರಿಗೆ ಹರನೇ ನೆರಳಾದ ।ಕೊ।
ಗುಡ್ಡದ ಮಲ್ಲಯ್ಯನೆಂಬ ಜನಪದದ ವಾಣಿ
ಮಲ್ಲಯ್ಯನ ಸತಿ ಪಾರ್ವತಿ ಮಾಳಮ್ಮ ಗೆ । ಕೊ। ಬರಿ। ।ಹಿ।।
ಉದ್ಭವಿಸಿದ ಲಿಂಗಪೂಜೆ ನೋಡಬನ್ನಿರೆಲ್ಲ ।
ಮಲ್ಲಯ್ಯನ ಮಹಿಮೆ ಜಗದ ಗೊರವಯ್ಯನೆ ಬಲ್ಲ ।ಬರೀ ಹಿ।

ಲಕ್ಷ ಜನ ಕೈಯಲಿ ಬಿದಿರಿನ ಕೋಲೊಂದೊಂದು ।।ಕೋ।।
ಸಾಲು ಸಾಲಿನಿಂದ ಭಕ್ತ ಜನರ ದಂಡು ।।ಕೋ।।
ಮಂಟಪದಂತಾದ ಮಲ್ಲಯ್ಯನ ಶಿವ ಮಂದಿರ ।।ಕೋ।।
ನೋಡ ಬಯಸಿ ಬನ್ನಿರೆಲ್ಲ ಸುಂದರ ಬಹು ಸುಂದರ ।।ಕೋ।।
ಕರುನಾಡಿನ ಗಡಿಯಲ್ಲಿ ಮೆರೆವ ಸುಕ್ಷೇತ್ರ
ದೇವಗಿರಿ ಮಲ್ಲಯ್ಯನ ನಾಮವೇ ಪವಿತ್ರ । ಬರೀ ಹಿಮ್ಮೇಳ।
ಪ್ರತಿಯೊಬ್ಬರ ದುರಿತಗಣನ ದೂರ ಮಾಡು ತಂದೆ.
ದೇವಗಿರಿ ಮಲ್ಲೇಶ್ವರ ದೇನ ಬಂಧುವೆಂದೇ.

## ಹಾಡು - ೫

ಜೋಲಾಲಿ ಎಂದು ಹಾಡಿರಿ
ಮಲ್ಲಯ್ಯ ಸ್ವಾಮಿ ಮಲಗೊ
ತೊಟ್ಟಿಲ ತೂಗೂತಾ... ||ಮು||

ಜೋಲಾಲಿ ಎಂದು ಹಾಡಿರಿ
ಮಲ್ಲಯ್ಯ ಸ್ವಾಮಿ
ಮಲಗೊ ತೊಟ್ಟಿಲ ತೂಗುತಾ |ಹಿ|
ಬೆಟ್ಟದ ಮೇಲಿನಿಂದ ದೇವ ಗಿರೀಶನ
ಭಕ್ತರೆಲ್ಲರು ಕೂಡಿ ತೊಟ್ಟಿಲ ತೂಗಿ ಹಾಡಿ ||ಜೋ||

ಮಲ್ಲಿಗೆ ಹೂವ ತಂದು
ಮಲಗೋ ತೊಟ್ಟಿಲ ಸುತ್ತಿ
ಎಲ್ಲಾ ಭಕ್ತರು ನಿಂದು
ಉಯ್ಯಾಲೆ ಸೇವಾ ಮಾಡಿ ||ಜೋ, ಕೋ||

ಹಸುವಿನ ನೊರೆ ಹಾಲು
ಬಿಸಿ ಮಾಡಿ ಭಕ್ತಿಯಿಂದ
ಬೆಳ್ಳಿ ಪಾತ್ರೆಯ ತುಂಬಿ
ಬೇಡೋಣ ಸೇವಿಸೆಂದು ||ಜೋ, ಕೋ||

ಭೀತಿಯ ಕಳೆಯುವಂತ
ವಿಭೂತಿಯನ್ನು ಧರಿಸಿ
ಜ್ಯೋತಿ ಸ್ವರೂಪನಿಗೆ
ಜೋಲಾಲಿ ಎಂದು ಹಾಡಿ ||ಜೋ, ಕೋ||

ಕೋಲೀನ ಮಂಟಪದ
ಮೇಲೆ ತೋರಣ ಕಟ್ಟಿ
ಗೊರವಯ್ಯರೆಲ್ಲ ಬಂದು
ನರ್ತಿಸಿ ನಾಟ್ಯವಾಡಿ ||ಜೋ, ಕೋ||

ದೂರ ದೂರದ ಊರ
ಭಕ್ತರೆಲ್ಲರೂ ಕೂಡಿ
ಸಾರಿ ಹೇಳುವ ಕಾಲ
ಜ್ಞಾನ ಕೇಳೋನ ಬನ್ನಿ ||ಜೋ, ಕೋ||

ಮಲ್ಲೇಶ್ವರನು ಮಾಳಾಂಬ
ಸಹಿತ ನಿಂತ
ಲಿಂಗ ಮಾರುತಿ ನಮ್ಮ
ಜಂಗಮ ದೇವನಿಗೆ ||ಜೋ, ಕೋ||

ಬೆಟ್ಟಾದ ಮೇಲಿನಿಂದ
ದೇವಾ ಗಿರೀಶನ
ಭಕ್ತರೆಲ್ಲರು ಕೂಡಿ
ತೊಟ್ಟಿಲ ತೂಗಿ ಹಾಡಿ ||ಜೋ, ಕೋ||

''ಎದ್ದೊಂದು ಗಳಿಗೇಲಿ ಯಾರನ್ನ ನೆನೆಯಲಿ'' ಎಂದು ಜನಪದರ ಹಾಡಿನಂತೆ, ಎದ್ದ ಗಳಿಗೆಯಲ್ಲಿಯೇ ಏಳು ಏಳಯ್ಯ ದೇವಗಿರಿವಾಸ ಮಲ್ಲಯ್ಯ ಮೈಲಾರಲಿಂಗ ಎದ್ದೇಳು ಬೆಳಗಾಯಿತು ಎಂದು ಹೇಳುವ ಭಕ್ತ ಸಮೂಹ ಮನುಜರಲ್ಲದೇ ಅಂಬರವ ಹಕ್ಕಿಗಳು ಸಂಭ್ರಮದಿ ಹರಸುತಿಹವು. ಕೋಗಿಲೆಯು ನಿನ್ನ ಧ್ಯಾನಿಸುವುದು, ಭಕ್ತ ಸಮೂಹದ ವಿವಿಧ ವರ್ಗದ ಜನರು, ಕೃಷಿಕರು, ವ್ಯಾಪಾರಿಗಳು, ಪೂಜಾರಿಗಳು ಎಲ್ಲರೂ ನಿನ್ನ ದರುಶನಕೆ ನಿಂತಿಹರು ನಿನ್ನ ಆಶೀರ್ವಾದ ಬೇಡುತ್ತಿರುವರು. ಈ ರೀತಿಯಾಗಿ ಮಲ್ಲಯ್ಯ ಹಾಡುಗಳು ಭಕ್ತ ಕೋಟಿ ಸಮೂಹ ವಗ್ಗರು, ಗೊರವರು, ಗೊರವಿಯರು, ಪೂಜಾರಿಗಳು, ಹಕ್ಕಿ ಪಕ್ಷಿಗಳು ಎಲ್ಲರೂ ಪೂಜಿಸಿ ಮಲ್ಲಯ್ಯನ ಜೀವನದ ಗುಣಗಾನ ಮಾಡುತ್ತಾ ಬಾಲ್ಯದಲ್ಲಿ ಹೇಗಿದ್ದ ಮಲ್ಲಯ್ಯ ಅವನ ತೊಟ್ಟಿಲು ಹೇಗಿತ್ತು ಅವನ ನಡವಳಿಕೆಗಳೇನು ಆತನ ಪವಾಡಗಳು ಏನು ಜಗತ್ತನ್ನು ರಕ್ಷಿಸಿದ ಪರಿ ಎಲ್ಲವುಗಳ ಬಗ್ಗೆ ಭಕ್ತಿ ತುಂಬಿ ಮಲ್ಲೇಶ್ವರನನ್ನು ಕುರಿತ ಭಕ್ತಿ ಗೀತೆಗಳಾಗಿವೆ.

ಒಟ್ಟಾರೆ ಶಿಷ್ಟ ಸಾಹಿತ್ಯದ ಬಗ್ಗೆ ಕ್ಷೇತ್ರ ಕಾರ್ಯ ಕೈಗೊಂಡಾಗ ನನಗೆ ದೊರಕಿರುವಂತಹವುಗಳು ಕಥೆಗಳು, ನಾಟಕ, ಬಯಲಾಟಕಗಳು ಮತ್ತು ಕ್ಷೇತ್ರದ ಕಮಿಟಿ ಅಧ್ಯಕ್ಷರಾದ ಶ್ರೀ ಮುದ್ದುಬಸವನ ಗೌಡರು ರೂಪಿಸಿರುವ ಮಲ್ಲಯ್ಯನ ಕುರಿತಾದ ಸುಪ್ರಭಾತ ಮತ್ತು ಭಕ್ತಿಗೀತೆಗಳ ಕ್ಯಾಸೆಟ್‌ಗಳು ಮತ್ತಿತರೆ ಆಕರಗಳು. ಇವೆಲ್ಲವುಗಳಲ್ಲಿ ಸುಪ್ರಭಾತ ಮತ್ತು ಭಕ್ತಿಗೀತೆಗಳನ್ನು ಬಿಟ್ಟರೆ ಉಳಿದೆಲ್ಲ ಪ್ರಕಾರಗಳಲ್ಲಿ ಮಣಿ-ಮಲ್ಲಾಸುರರನ್ನು ಸಂಹರಿಸುವ ಕಥಾ ವಿವರವೇ ಕಾಣಸಿಗುವ ಇವೆಲ್ಲವುಗಳು ಅಪ್ರಕಟಿತವಾಗಿವೆ.

ಅಕ್ಷರದಲ್ಲಿ ಕಾಣಿಸಿಕೊಳ್ಳುವ ಜನಪದ ಸಾಹಿತ್ಯವನ್ನು ಹಾಡುವವರು ಬೇರೆಯಾದರೂ ಹಾಡಿನ ಮೂಲ ಒಂದೇ. ಹಾಡುಗಾರಿಕೆಗೆ ಯಾವುದೇ ವಿಶೇಷ ಆಹ್ವಾನಬೇಕಾಗಿಲ್ಲ. ಯಾವ ವೆಚ್ಚದ ಅಗತ್ಯವಿಲ್ಲ. ಹಸಿವು ಎಷ್ಟು ಸಹಜವೋ, ನೀರಡಿಕೆ ಎಷ್ಟು ಸಹಜವೋ ಹಾಗೆಯೇ ಹಾಡುವವರಿಗೆ ಹಾಡಬೇಕೆನ್ನುವುದು ಅಷ್ಟೇ ಸಹಜ. ಇವರು ಎಷ್ಟೋ ವರ್ಷಗಳ ಕಾಲ ಗೊತ್ತಾದ ಗುರುವನ್ನು ಆಶ್ರಯಿಸಿ ಈ ಹಾಡುಗಳನ್ನು ಕಲಿಯಬೇಕಾದುದಿಲ್ಲ. ನುರಿತ ಗಾಯಕರ ಜೊತೆಯಲ್ಲಿ ಸೊಲ್ಲು ಕೊಡುತ್ತಾ ತೊದಲು ನುಡಿಯುತ್ತಾ ಕಲಿತು ಬಿಡುತ್ತಾರೆ. ಮೊದಲನೆಯ ವರ್ಗ ಮುಮ್ಮೇಳದವರಾದರೆ ಎರಡನೇ ವರ್ಗ ಹಿಮ್ಮೇಳನವರದು. ಸಾಮಾನ್ಯವಾಗಿ ಬಹುಪಾಲು ಹಾಡುಗಾರಿಕೆಯ ಸಂದರ್ಭದಲ್ಲಿ ಮುಮ್ಮೇಳ ಮತ್ತು ಹಿಮ್ಮೇಳಗಳು ಇದ್ದೇ ಇರುತ್ತವೆ. ಮುಮ್ಮೇಳರವರು ಮುಖ್ಯಗಾಯಕರಾದರೆ ಹಿಮ್ಮೇಳದವರು ಪೋಷಕ ಗಾಯಕರಾಗುತ್ತಾರೆ. ಕೆಲವರು ಸೊಲ್ಲು ಕೊಡುವುದಷ್ಟನ್ನೇ ಅಭ್ಯಾಸ ಮಾಡಿಕೊಳ್ಳಲು ಸಾಧ್ಯ. ಇವರನ್ನು ಮಂದಗಾಯಕರು ಎನ್ನಬಹುದು. ಕೆಲವರು ಚುರುಕಾಗಿ ಉತ್ಸಾಹಶೀಲರಾಗಿ ಹಾಡುಗಳನ್ನು ಸಮಗ್ರವಾಗಿ ಕಲಿತು ಅವುಗಳನ್ನು ನಿರಂತರವಾಗಿ ಹಾಡಿಕೊಂಡು ಹೋಗಬಲ್ಲ ಜಾಣರಾಗಿರುತ್ತಾರೆ. ಇವರನ್ನು ಪ್ರತಿಗಾಯಕರು ಎನ್ನಬಹುದು. ಮೂಲತಃ ಹಾಡು ಒಬ್ಬನಿಂದ ಸೃಷ್ಟಿಯಾದರೂ ಒಬ್ಬ ಕರ್ತೃವಿಗೆ ಸೀಮಿತವಾಗಿ ಅಲ್ಲೇ ನಿಂತುಕೊಳ್ಳುವುದಿಲ್ಲ. ಕಾಲ ಕಳೆದಂತೆ ಸಮೂಹ ವಸ್ತುವಾಗುತ್ತದೆ. ಜನಪದ ಗೀತೆ ನಿರ್ಧಿಷ್ಟ ರೂಪದಲ್ಲಿ ಉಳಿಯುವುದಿಲ್ಲ. ಅದು ಸದಾ ಪರಿವರ್ತನಾಶೀಲವಾಗಿರುತ್ತದೆ. ಒಂದು ಹಂತದಲ್ಲಿ ಮೂಲ ಕರ್ತೃವಿನ ಹೆಸರು ಬಿಟ್ಟು ಹೋಗುತ್ತದೆ. ಮುಂದಿನ ಹಾಡುಗಾರರು ತಮಗೆ ಗೊತ್ತಿದ್ದೋ ಗೋತ್ತಿಲ್ಲದೆಯೋ ಅಲ್ಪ ಸ್ವಲ್ಪ ಬದಲಾಯಿಸಿ ಹೊಸದನ್ನು ಸೇರಿಸಿ, ಇರುವುದನ್ನು ಬಿಟ್ಟು ಅಥವಾ ಕೆಡಿಸಿ ಹಾಡುತ್ತಾರೆ. ಸ್ಥಳೀಯ ಪಾಠ ಪ್ರಾದೇಶಿಕ ರೂಪ ಮೂಲ ಪಾಠಕ್ಕೆ ತಲೆ ಹಾಕುತ್ತದೆ. ಹೀಗಾಗಿ ಜನಪದ ಗೀತೆಯ ಮೂಲಪಾಠವನ್ನು ನಿರ್ಣಯಿಸುವುದು ಕಷ್ಟ. ವಿದ್ವಾಂಸರು ಅಭಿಪ್ರಾಯಪಟ್ಟಿರುವಂತೆ ಚಾರಿತ್ರಿಕ ಭೌಗೋಳಿಕ ಕ್ರಮದಿಂದ ಈ ಸಮಸ್ಯೆಯನ್ನು ಸ್ವಲ್ಪ ನಿವಾರಿಸಬಹುದು.

ಶ್ರೀ ಮೀನಗುಂದಿ ಮಲ್ಲಯ್ಯನ ಹಾಡುಗಳನ್ನು ಗಮನಿಸಿದಾಗ ದೈವದ ಹಿನ್ನೆಲೆಯಲ್ಲಿ ಮಲ್ಲಯ್ಯನ ಜೀವನ ವಿಧಾನ, ಶ್ರದ್ಧೆ, ನಂಬಿಕೆ, ಆಚರಣೆಗಳ ನೈಜ ಪರಿಚಯ ನಮಗಾಗುತ್ತದೆ. ಛಂದಸ್ಸಿನ ವಿಚಾರದಲ್ಲಿ ಯಾವುದೇ ಭಾಷೆಯ ದೇಸೀ ಸಂಪತ್ತಾಗಿರುವ ಈ ಹಾಡುಗಳಲ್ಲಿ ಬಹುಪಾಲು ಏಕನಾದವಾಗಿರುತ್ತದೆ. ಪುನರಾವರ್ತನೆಗಳು ಮೊರೆಯುತ್ತವೆ. ಒಟ್ಟಾರೆಯಾಗಿ ಕರ್ನಾಟಕದ ಜನಪದ ಕಾವ್ಯಗಳಲ್ಲಿ ಧಾರ್ಮಿಕ ಕಾವ್ಯಗಳಿಗೆ ಉನ್ನತ ಸ್ಥಾನವಿದೆ. ವೃತ್ತಿ ಗಾಯಕ ಪರಂಪರೆಯಿಂದ ಸಂರಕ್ಷಿತವಾಗಿರುವ ಅವು ಧಾರ್ಮಿಕ ಆವರಣದಿಂದ ಕೂಡಿದ್ದರೂ ಉತ್ತಮ ಕಾವ್ಯಗಳಾಗಿಯೂ ನಿಲ್ಲತಕ್ಕವಾಗಿವೆ. ದೇವರ ಮಹಿಮೆಗಳು, ಪವಾಡಗಳು, ಅಲ್ಲಿ ಪ್ರಧಾನವಾಗಿ ಕಂಡುಬಂದರೂ ಅವುಗಳ ಹಿನ್ನೆಲೆಯಲ್ಲಿಯೇ ಆಕರ್ಷಕ ವರ್ಣನೆಗಳು,

ಅಪೂರ್ವ ಸನ್ನಿವೇಶ ಕಲ್ಪನೆ, ನೈಜ ಪಾತ್ರ ಚಿತ್ರಣ, ಪ್ರಾದೇಶಿಕ ಭಾಷೆಯ ಸೊಗಡಿನಿಂದ ಕೂಡಿ ವಿಶಿಷ್ಟ ಶೈಲಿ, ದೈವಗಳ ವಿರುದ್ಧ ನಿಂತು ಹೋರಾಡುವ ವ್ಯಕ್ತಿಗಳ ವಿಲಕ್ಷಣ ಗುಣ ಸ್ವಭಾವಗಳು, ಸಂಭಾಷಣೆಯ ಸೊಗಸು, ನಾಟಕೀಯ ಗುಣ, ಕಲ್ಪನಾ ರಮ್ಯತೆಯಿಂದ ಕೂಡಿದ ಕಥೆಗಾರಿಕೆಯ ಸೊಗಸು ಈ ಎಲ್ಲಾ ದೃಷ್ಟಿಯಿಂದಲೂ ಉತ್ತಮ ಕಾವ್ಯವಾಗುವ ಸತ್ವವನ್ನು ಇದು ಪಡೆದುಕೊಂಡಿದೆ.

ಕರ್ನಾಟಕ ಮತ್ತು ಮಹಾರಾಷ್ಟ್ರದಲ್ಲಿ ದೊರೆಯುವ ಮೈಲಾರಲಿಂಗನ ಗೊರವ ಸಂಪ್ರದಾಯದಲ್ಲಿ ಅನೇಕ ಹಾಡುಗಳು, ಕಥೆ, ಐತಿಹ್ಯ ಮುಂತಾದ ಮೌಖಿಕ ಪರಂಪರೆಯ ಸಾಹಿತ್ಯ ದೊರೆಯುತ್ತದೆ. ಅದರಂತೆ ಹಿಂದಿನ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಈಗ ಆಂಧ್ರದ ಕರ್ನೂಲು ಜಿಲ್ಲೆಗೆ ಸೇರಿರುವ ಮೀನಗೊಂದಿ ಮಲ್ಲಯ್ಯನ ಕ್ಷೇತ್ರವು ಪ್ರಸಿದ್ಧವಾಗಿದೆ. ಇಲ್ಲಿ ಕೂಡ ಮಲ್ಲಯ್ಯನ ಕುರಿತಾದ ಮೌಖಿಕ ಸಾಹಿತ್ಯ ಹೇರಳವಾಗಿ ದೊರೆಯುತ್ತಿದ್ದು ಉಳಿದ ಎರಡು ರಾಜ್ಯಗಳಿಗಿಂತ ಭಿನ್ನವಾಗಿದೆ. ಅನೇಕ ವಿಷಯಗಳಲ್ಲಿ ಅಂದರೆ ಶ್ರೀ ಮಲ್ಲಯ್ಯ, ಮಾಳಮ್ಮ, ಕೋಮಲೆಯರ ಪ್ರಸಂಗದಲ್ಲಿ ಮೌಖಿಕ ಸಾಹಿತ್ಯದ ಆಶಯ ಒಂದೇ ಆಗಿದ್ದರೂ ಹಾಡುಗಾರಿಕೆ ಅಲ್ಲಲ್ಲಿ ಬರುವ ಸಾಹಿತ್ಯದ ವ್ಯತ್ಯಾಸ ಕಂಡುಬರುತ್ತದೆ. ಇದು ಯಾವುದೇ ಪ್ರಾದೇಶಿಕತೆಯ ವೈಶಿಷ್ಟ್ಯವೂ ಹೌದು. ಸಮಕಾಲೀನ ಸಂದರ್ಭ ಮತ್ತು ಪರಿಸರಕ್ಕೆ ತಕ್ಕಂತೆ ನಮ್ಮ ಜಾನಪದರು ಈ ಬಗೆಯ ಹಾಡುಗಳನ್ನು ಸಾಹಿತ್ಯವನ್ನು ರೂಪಿಸಿಕೊಂಡಿದ್ದು ಚರಿತ್ರೆಯ ಮುಖ್ಯ ಘಟ್ಟ ಎಂದು ಭಾವಿಸಬಹುದು. ಈ ಬಗೆಯ ಸಾಹಿತ್ಯದ ವಿಸ್ತೃತವಾದ ಮಾಹಿತಿ ಸಂಗ್ರಹ, ಸಂಪಾದನೆ ಮತ್ತು ವಿಶ್ಲೇಷಣೆ ಆ ಮೂಲಕ ತೌಲನಿಕ ಅಧ್ಯಯನಕ್ಕೆ ಒಂದು ವಿಶೇಷವಾದ ಆಕರವಾಗುತ್ತದೆ.

ಪ್ರಸ್ತುತ ಮೀನಗೊಂದಿ ಮಲ್ಲಯ್ಯನ ಸಂಬಂಧವಾಗಿ ಈ ಪರಿಸರದಾದ್ಯಂತ ಹಾಡುಗಳು, ಐತಿಹ್ಯಗಳು, ಐತಿಹ್ಯಗಳು, ಗಾದೆ, ಒಗಟು ಅದರಂತೆ ಬಯಲಾಟ ರಚನೆಯಾಗಿವೆ. ಈ ಎಲ್ಲಾ ಮೌಖಿಕ ಸಾಹಿತ್ಯವು ಹೆಚ್ಚಾಗಿ ಮಲ್ಲಯ್ಯ, ಮಾಳಮ್ಮ, ಕೋಮಾಲೆ ಹಾಗೂ ಮೀನಗುಂದಿಯ ಭೌಗೋಳಿಕ ಪರಿಸರ ಆ ಕ್ಷೇತ್ರದ ಪವಾಡ ಗಳನ್ನು ವಿವರಿಸುತ್ತದೆ. ಮುಖ್ಯವಾಗಿ ಪ್ರತಿವರ್ಷ ನಡೆಯುವ ದಸರಾ ಉತ್ಸವದಲ್ಲಿ ಮಲ್ಲಯ್ಯ ಮತ್ತು ಮಾಳಮ್ಮರ ಕಲ್ಯಾಣೋತ್ಸವವು ಈ ಮೌಖಿಕ ಸಾಹಿತ್ಯಕ್ಕೆ ಅತಿ ಮುಖ್ಯ ಘಟನೆಯಾಗಿ ಕಂಡು ಬಂದಿದೆ. ಜನಪದರು ಮಲ್ಲಯ್ಯನ ಕಲ್ಯಾಣೋತ್ಸವವನ್ನು ಹೇಳುತ್ತಲೇ ಬಾಲ್ಯದಿಂದ ಮಲ್ಲಯ್ಯ ಮತ್ತು ಮಾಳಮ್ಮ ಬೆಳೆದು ಬಂದ ಬಗೆ, ದನಕಾಯುವುದು, ಕುರಿ ಕಾಯಿವುದು, ಪವಾಡಗಳನ್ನು ತೋರಿಸುವುದು. ಆ ಮೂಲಕ ಭಕ್ತರನ್ನು ಶರಣಾಗಿಸಿಕೊಳ್ಳುವುದು ಅವರಂತೆ ಗಂಗಿ ಮಾಳಮ್ಮನನ್ನು ಒಲಿಸಿಕೊಳ್ಳುವುದು ಕೊನೆಗೆ ತನ್ನ ದೈವತ್ವವನ್ನು ಮೆರೆಯುವುದು ಇವೆಲ್ಲವೂ ಹಾಡಿನ ಮೂಲಕ ಮೌಖಿಕ ಪರಂಪರೆ ನಮಗೆ ಕಟ್ಟಿಕೊಡುತ್ತದೆ.

ಇದೊಂದು ದೀರ್ಘ ಕಥನವೇ ಆಗಿದೆ. ಈ ದೀರ್ಘ ಕಥನ ಅಲ್ಲದೆ ಪ್ರಾದೇಶಿಕವಾಗಿ ಕುರುಬರು, ಗೊರವರು, ಅಲ್ಲದೆ ಅನೇಕ ಭಕ್ತರು ಮಲ್ಲಯ್ಯನ ಕುರಿತಾದ ಯಾವುದೋ ಒಂದು ಘಟನೆಯನ್ನು ತೆಗೆದುಕೊಂಡು ಸಾಹಿತ್ಯವನ್ನು ಕಟ್ಟಿದ್ದಾರೆ. ಇದರಿಂದ ಅನೇಕ ಬಿಡಿ ಹಾಡುಗಳು ಇಲ್ಲಿ ದೊರೆಯುತ್ತವೆ. ಉದಾಹರಣೆಗೆ ಮಲ್ಲಯ್ಯನ ಶೋಭನವನ್ನು ಕುರಿತಾಗ ಒಂದು ಸುಂದರ ರಸಾತ್ಮಕ ಹಾಡು ಇಲ್ಲಿ ಕಟ್ಟಿದ್ದಾರೆ.

ಮೌಖಿಕ ಸಾಹಿತ್ಯ ಕೇವಲ ಗಂಡಸರಿಂದ ಅಲ್ಲದೇ ಹೆಣ್ಣು ಮಕ್ಕಳಿಂದಲೂ ಕೂಡಾ ಇಲ್ಲಿ ಹಾಡುಗಳು ಹೆಣೆಯಲ್ಪಟ್ಟಿವೆ. ಇಲ್ಲಿರುವ ವಿಶಿಷ್ಟ ಸಂಪ್ರದಾಯವಾದ ಬಸವಿ ಪದ್ಧತಿಯು ತನ್ನದೇ ಆದ ಹಾಡುಗಳನ್ನು ಕಟ್ಟಿಕೊಂಡಿದೆ. ಬಸವಿಯರ ಹಾಡುಗಳೇ ವಿಶೇಷ ಬಗೆಯವು. ಇವು ಒಂದಲ್ಲ ಒಂದು ರೀತಿಯಲ್ಲಿ ಮಲ್ಲಯ್ಯನ ಸೇವೆಗೆ ಬದ್ಧವಾಗಿರುತ್ತವೆ. ಅದರಂತೆ ಗಂಗಿಮಾಳಮ್ಮ, ತುಪ್ಪದ ಮಾಳಮ್ಮ, ಕೋಮಲಿ, ಕುರುಬತಿಯರಿಗೆ ಸಂಬಂಧಿಸಿದ ಕೇವಲ ಹೆಣ್ಣು ಮಕ್ಕಳ ಹಾಡುಗಳು ಇಲ್ಲಿ ದೊರೆಯುತ್ತವೆ. ಇವುಗಳನ್ನು ಸಂಗ್ರಹಿಸಲಾಗಿದೆ.

ಹೊಟ್ಟೆಪಾಡಿಗಾಗಿ ಮಲ್ಲಯ್ಯನ ಮಹಿಮೆಯನ್ನು ಹಾಡುತ್ತಾ ಊರೂರು ತಿರುಗುವ ಗೊರವರು ಹೊಸ ಹೊಸ ಹಾಡುಗಳನ್ನು ಕಟ್ಟಿದ್ದಾರೆ. ಇವು ಒಂದು ಪ್ರತ್ಯೇಕ ವಿಭಾಗವೇ ಆಗುತ್ತವೆ. ಒಟ್ಟು ಮೀನಗೊಂದಿ ಮಲ್ಲಯ್ಯನ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸುವುದರ ಮೂಲಕ ಆ ಕ್ಷೇತ್ರದ, ಆ ಸಂಪ್ರದಾಯದ, ಆ ಪ್ರಾದೇಶಿಕ ಪರಿಸರದ ಸ್ಥೂಲ ಚಿತ್ರಣ ನಮಗೆ ಸಿಗುತ್ತದೆ.

ಅಧ್ಯಾಯ - ೮

# ಮೀನಗೊಂದಿ ಮಲ್ಲಯ್ಯ ಮತ್ತು ಮೈಲಾರಲಿಂಗ ತೌಲನಿಕ ಅಧ್ಯಯನ

ಅಧ್ಯಾಯ - ೮

# ಮೀನಗೊಂದಿ ಮಲ್ಲಯ್ಯ ಮತ್ತು ಮೈಲಾರಲಿಂಗ ತೌಲನಿಕ ಅಧ್ಯಯನ

ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಮೇಲುನೋಟಕ್ಕೆ ಎದ್ದು ಕಾಣುವಂತಹ ವ್ಯತ್ಯಾಸವಿಲ್ಲದಿದ್ದರೂ ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳಲ್ಲಿ ಸ್ಪಷ್ಟ ವ್ಯತ್ಯಾಸವನ್ನು ಗುರುತಿಸಬಹುದು. ಆಚರಣೆಯ ಒಂದು ಪ್ರಮುಖ ಲಕ್ಷಣವೆಂದರೆ ಅವು ಬಹುತೇಕವಾಗಿ ಧಾರ್ಮಿಕ ಮತ್ತು ದೈವಿಕ ಸಂಸ್ಪರ್ಷವನ್ನು ಪಡೆದಿರುತ್ತವೆ. ಅವು ಯಾವುದೋ ಒಂದು ನಂಬಿಕೆಯನ್ನು ಆಧರಿಸಿ ರೂಪಗೊಂಡಿರುತ್ತವೆ. ಆಚರಣೆಗೆ ಒಂದು ನಿರ್ಧಿಷ್ಟ ಫಲಾಪೇಕ್ಷೆಯಿರುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಆಚರಣೆಗೆ ಒಂದು ನಿರ್ಧಿಷ್ಟ ರಚನಾ ವಿನ್ಯಾಸವಿದ್ದು, ಈ ಅಂಶವು ಅವುಗಳನ್ನು ಸಂಪ್ರದಾಯಗಳಿಂದ ಸ್ಪಷ್ಟವಾಗಿ ಬೇರ್ಪಡಿಸುತ್ತದೆ. ಈ ರೀತಿಯ ಆಚರಣೆಗಳನ್ನು ಆಧಾರವಾಗಿಟ್ಟುಕೊಂಡು ಮೀನಗೊಂದಿ ಮಲ್ಲಯ್ಯ ಮತ್ತು ಮೈಲಾರಲಿಂಗ ಕ್ಷೇತ್ರಗಳಲ್ಲಿ ತೌಲನಿಕ ನೋಟವನ್ನು ಅಭಿವ್ಯಕ್ತಿಸುತ್ತಿದ್ದೇನೆ.

ಮೀನಗೊಂದಿ ಮಲ್ಲಯ್ಯನ ಕುರಿತಾದ ಅಧ್ಯಯನಗಳು ಈಚೆಗೆ ನಡೆಯುತ್ತಿವೆ. ಆಂದ್ರದಲ್ಲಿ ಈ ಮುಂಚೆ ಸೂಚಿಸಿದ ಮೀನಗೊಂದಿ ಮತ್ತು ಐನವೋಲು ದೇವಾಲಯಗಳಲ್ಲದೇ ಮೈಲಾರಂ (ಅದಿಲಾಬಾದ ಜಿಲ್ಲೆ) ಕೋಮರಾಳಿ ಮುಂತಾದ ಊರುಗಳಲ್ಲಿ ದೇವಾಲಯಗಳಿರುವುದಾಗಿ ತಿಳಿದುಬರುತ್ತದೆ (ಡಾ. ಎಂ.ಬಿ. ನೇವಿನಹಾಳ; ೧೯೯೭:೪). ಆದರಲ್ಲಿಯೂ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹಿರೇಮೈಲಾರ ಕ್ಷೇತ್ರದ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ವಿದ್ವಾಂಸರು ಈ ಕ್ಷೇತ್ರದ ಬಗ್ಗೆ ಬೆಳಕು ಚೆಲ್ಲಿದಷ್ಟು ಬೇರೆ ಯಾವ ಕ್ಷೇತ್ರದ ಮೇಲೆಯೂ ಬೆಳಕು ಬೀರಿಲ್ಲ. ಈ ಕಾರಣಗಳಿಂದ ಉಳಿದ ಅನೇಕ ಕ್ಷೇತ್ರಗಳು ಗೌಣವಾಗಿವೆ. ಅವುಗಳಲ್ಲಿ ದೇವರ ಹಿಪ್ಪರಗಿ, ಯಾತಗಿರಿ, ದೇವರ ಶೀಗೇಹಳ್ಳಿ, ಗುಡೂರು, ಮೀನಗೊಂದಿ ಮುಂತಾದವುಗಳಾಗಿವೆ. ಈ ದೃಷ್ಟಿಯಿಂದ ಮೀನಗೊಂದಿ ಮಲ್ಲಯ್ಯನ ಅಧ್ಯಯನ ಒಂದು ವಿಶಿಷ್ಟ ಅಧ್ಯಯನವಾಗಿ ತೋರುತ್ತದೆ.

ಮೇಲಿನ ಭೂಮಿಕೆಯೊಂದಿಗೆ ಆದಿಮೀನಗೊಂದಿ ಮತ್ತು ಹಿರೇಮೈಲಾರ ಕ್ಷೇತ್ರಗಳಲ್ಲಿನ ಆಚರಣೆಗಳನ್ನು ತೌಲನಿಕವಾಗಿ ನೋಡುವ ಮೂಲಕ ವಿಶಿಷ್ಟ ಅಂಶಗಳನ್ನು ಗಮನಿಸಬಹುದು.

## ೮.೧. ಗೊರವ ಸಂಪ್ರದಾಯ :

ಮಲ್ಲಯ್ಯ ಅಥವಾ ಮೈಲಾರಲಿಂಗ ಗೊರವರ ಪುರಾಣ ಪುರುಷ. ಪಶುಪಾಲನಾ ಸಂಸ್ಕೃತಿಯ ಹಂತದಲ್ಲಿ ಬುಡಕಟ್ಟು ಜನರು ತಮಗೆ, ತಮ್ಮ ದನಕರುಗಳಿಗೆ ಆಸಕ್ತಿಯಾದ ಗುಡ್ಡ, ಬೆಟ್ಟ ಪರ್ವತಗಳ ಬಗ್ಗೆ ಗೌರವ, ಭಯ ಭಕ್ತಿಗಳನ್ನು ಬೆಳೆಸಿಕೊಂಡಿದ್ದರು. ಕಾಲ ಕ್ರಮೇಣ ಬೆಟ್ಟ ಗುಡ್ಡಗಳನ್ನೇ ತಮ್ಮ ದೇವರುಗಳನ್ನಾಗಿ ಪೂಜಿಸಲಾರಂಭಿಸಿದರು. ಮಲೆ ಎಂದರೆ ಬೆಟ್ಟ, ಗುಡ್ಡ ಎಂದರ್ಥ. ಮಲೆಯ ಅಯ್ಯ ಮಲ್ಲಯ್ಯನಾದನು. ಬೆಟ್ಟದ ದೇವರೆನಿಸಿಕೊಂಡ ಮಲ್ಲಯ್ಯ ಬೇಟೆಯ ಸಂಸ್ಕೃತಿಗೆ ಸೇರಿದ ದೇವತೆ. ಬೇಟೆಯ ಸಂಸ್ಕೃತಿಯಲ್ಲಿ ನಾಯಿಯ ಪಾತ್ರಪ್ರಧಾನವಾದದ್ದರಿಂದ ನಾಯಿಯು ಮಲ್ಲಯ್ಯನ ಲಾಂಛನವಾಗಿ ಪರಿಣಮಿಸಿತು. ಕುದುರೆ ವಾಹನವಾಯಿತು. ಇದರಿಂದಾಗಿ ಗೊರವರು ತಾವು ದೇವರ ವಾಹನ ಎನ್ನುವ ಭಾವದಿಂದ ಕುದುರೆಕಾರರ ಸೇವೆ ನಡೆಸುವುದು, ದೇವರ ಎದುರಿನಲ್ಲಿ ನಾಯಿಯಂತೆ ಬೊಗಳಾಟ ನಡೆ ಸುವುದು, ದೋಣಿಯಲ್ಲಿ ನಾಯಿಗಳಂತೆ ಆಹಾರವನ್ನು ಸ್ವೀಕರಿಸುವುದು ಮುಂತಾದ ಆಚರಣೆಗಳು ರೂಢಿಗತವಾಗಿವೆ.

ಗೊರವ ಪದಕ್ಕೆ ಹಿಂದಿನಿಂದಲೂ ಪ್ರಧಾನ ಸಂಸ್ಕೃತಿಯ ಮತೀಯ ಮನಸ್ಸು ತಿರುಕ, ಭಿಕ್ಷುಕ ಮುಂತಾದ ಹೀನಾರ್ಥಗಳನ್ನೇ ಬೆಳೆಸಿ ಬಳಸಿಕೊಂಡು ಬಂದಿರುತ್ತದೆ. ಗುರು ಶಬ್ಧದ ಪ್ರಥಮಾ ಬಹುವಚನ ರೂಪ ಗುರುವೆ ಎಂಬುದೇ ಕಾಲಾಂತರದಲ್ಲಿ ಗುರುವ, ಗೊರವ ಎಂದಾಗಿರಬಹುದೆಂದು ವಿಧ್ವಾಂಸರು ತರ್ಕಿಸಿದ್ದಾರೆ. ಗೊರವ ಎಂಬುದು ಸಂಸ್ಕೃತದ ಗುರು+ಅಡಿಯ ತದ್ಭವವೆಂದೂ, ಗೊರವ ಎಂದರೆ ದೇವಸ್ಥಾನದ ಗುರು ಅಥವಾ ಭಗವಂತನ ಪಾದದ ಸಮೀಪದಲ್ಲಿರುವವನು ಎಂದರ್ಥ'' ಎಂದು ಸಾಲೆ ತೊರೆಯವರು ಹೇಳುತ್ತಾರೆ. ಡಾ॥ ಎಂ.ಚಿದಾನಂದ ಮೂರ್ತಿಯವರು ಮುಂದುವರೆದು 'ಗುರು' ಎಂಬ ಸಂಸ್ಕೃತ ಪದದ ಬಹುವಚನ ರೂಪ ಎಂಬುದೇ ಗೊರವ ಎಂದಾಗಿ ಅದಕ್ಕೆ ಅಡಿಗಳ ಪದವು ಸೇರಿ 'ಗುರುವಡಿಗಳ' ಅಥವಾ ಗೊರವಡಿಗಳ ಎಂದಾಗುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಗೊರವ ಶಬ್ದಕ್ಕೆ ಕಿಟೆಲ್ ಅವರ ಅರ್ಥಕೋಶದಲ್ಲಿ 'ಎ ಕ್ಲಾಸ್ ಆಫ್ ಶೈವ ಬೆಗ್ಗರ್ಸ್' ಎಂದು ಕೊಡಲಾಗಿದೆ. ಜೊತೆಗೆ ಗೊಗ್ಗ ಎಂಬ ಶಬ್ದಕ್ಕೆ ಮೈಲಾರಲಿಂಗನ ಹಿಂಬಾಲಕರು ಎಂಬ ವಿವರಣೆಯನ್ನು ಕಿಟಲ್ ಕೋಶ ನೀಡುತ್ತದೆ.

### ಪ್ರಕಾರಗಳು :

ಗೊರವ ಗೊರವಿಯರಲ್ಲಿ ನಾನಾ ಬಗೆಗಳಿವೆ. ಮುಖ್ಯವಾಗಿ ನಾಯಿಗೊರವರು, ಕರಡಿಗೊರವರು, ಪಾರಿಗೊರವರು, ಮದ್ದಲಿಗೊರವರು, ಶಿವಗೊರವರು (ಭಂಡಾರದವರು), ಕಿನ್ನರಿ ಗೊರವರು, ಕುದುರೆಕಾರರು, ಕಂಚಾವೀರರು, ಮುಂತಾದನ್ನು ನಾನಾ ಪ್ರಕಾರದವರು ಬರುತ್ತಾರೆ. ಇವರಲ್ಲದೆ ಬಲ್ಲಿನವರು, ನಿಶಾನೆಯವರು, ತ್ರಿಶೂಲದವರು, ಮುಂತಾದ ನಾನಾ ತೆರನಾಗಿ ಸೇವೆಯ ಹೊರೆ ಹೊತ್ತು

ನಡೆಸುವವರು, ಹಲವಾರು ಪ್ರಕಾರದ ಗೊರವಿಯರೂ ಸಹ ಇರುವುದನ್ನು ನಾವು ಕಾಣುತ್ತೇವೆ. ಆದಿ ಮೀನಗೊಂದಿ ಮಲ್ಲಯ್ಯನ ಕ್ಷೇತ್ರದಲ್ಲಿಮುಖ್ಯವಾಗಿ ಗಣಾಚಾರಿಗಳು, ಕಂಚಾವೀರರು, ಕುದುರೆಕಾರರು, ನಾಯಿಗೊರವರು (ವಗ್ಗರು) ಮುಂತಾದ ಗೊರವರನ್ನು ಕಾಣುವುದರ ಜೊತೆಗೆ ಡೊಳ್ಳಿನವರು, ಪಂಜಿನವರು, ಗಡೆಕಾರರು, ಬಸವಿಯರು ಮೊದಲಾದ ಸೇವೆ ಹೊರೆ ಹೊತ್ತು ನಡೆಸುವವರನ್ನು ನಾವು ಕಾಣುತ್ತೇವೆ . ಮೊದಲನೆಯದಾಗಿ:

## ೮.೧.೧. ಮದ್ದಲಿಗೊರವರು :

ಮೀನಗೊಂದಿ ಕ್ಷೇತ್ರದ ಮಲ್ಲೇಶ್ವರನಿಗೆ ನಡೆದುಕೊಳ್ಳುವ ಮದ್ದಲಿ ಗೊರವರು ಹಾಲು ಮತದ ಉಣ್ಣೆ ಕಂಕಣದ ಕುರುಬ ಪಂಗಡಕ್ಕೆ ಸೇರಿರುವರು. ಮದ್ದಳೆಯನ್ನು ಸದಾ ತಮ್ಮ ಕೊರಳಿಗೆ ನೇತು ಹಾಕಿಕೊಂಡಿರುವುದರಿಂದ ಇವರಿಗೆ ಈ ಹೆಸರು ಬಂದಿದೆ. ಇವರನ್ನು ಗಣಾಚಾರಿಗಳು ಎಂದು ಸಹ ಕರೆಯುತ್ತಾರೆ. ಇವರಿಗೆ ಚೆಟ್ಟಿದಲ್ಲಿ ಅಧಿಕಾರ ಬಂದು ಶಿವಸಾನ ಗದ್ದಿಗೆಯಲ್ಲಿ ಕುಳಿತ ಒಡೆಯರಿಗೆ ಪಾದ ಪೂಜೆ ಮಾಡುತ್ತಾರೆ. ಸರಪಳಿ ಪೂಜೆಯನ್ನು ಮಾಡುವುದು, ಮಂಗಳಾರತಿ ಮಾಡಿ ಕಾಯಿ ಕರ್ಪೂರ ಬೆಳಗುವುದು. ಮುಖ್ಯವಾಗಿ ಒಡೆಯರ ನಂತರ ಪ್ರಮುಖ ಪಂಗಡವಾಗಿ ಬರುವ ಇವರು ವಗ್ಗರಿಗೆ, ಕುದುರೆಕಾರರಿಗೆ, 'ಕಂಚಾವೀರರಿಗೆ, ದೇವದಾಸಿಯರಿಗೆ ದೀಕ್ಷೆಯನ್ನು ನೀಡುವ ಅಧಿಕಾರ ಪಡೆದುಕೊಂಡಿದ್ದಾರೆ. ಸ್ವತಃ ಇವರೇ ಭಕ್ತರಿಗೆ ದೀಕ್ಷೆಯನ್ನು ನೀಡಿ ತದ ನಂತರ ಒಡೆಯರ ಸಮ್ಮುಖಕ್ಕೆ ಅವರನ್ನು ತರುವ ಕಾರ್ಯ ಇವರದಾಗಿದೆ. ದಸರಾ ಅಮಾವಾಸೆಯಾದ ಐದನೇ ದಿನದಂದು ಚೆಟ್ಟಿದಲ್ಲಿ ನಡೆಯುವ ಕಂಕಣದಲ್ಲಿ ಇವರಿಗೂ ಸ್ಥಾನವಿದೆ. ಜೊತೆಗೆ ದಸರಾ ದಿನ ಬನ್ನಿಯ ಕಾರ್ಯಕ್ರಮದಲ್ಲಿ ಮೆರವಣಿಗೆಯಲ್ಲಿ ಹೊರಟ ಉತ್ಸವ ಮೂರ್ತಿಗಳಿಗೆ ಅಲಂಕಾರವನ್ನು ಮಾಡುವ ಅಥವಾ ಆಭರಣಗಳು ಸಡಿಲಗೊಂಡಿದ್ದರೆ ಅವುಗಳನ್ನು ಸರಿಪಡಿಸಿ ಉತ್ಸವವನ್ನು ಮುಂದುವರೆಸುವ ಪ್ರಮುಖ ಕಾಯಕ ಇವರದಾಗಿದೆ. ಸಾವಿನ ಸಂದರ್ಭದಲ್ಲಿ ಭಕ್ತರು ಇವರನ್ನು ಮನೆಗೆ ಕರೆಯಿಸಿ ಸೂತಕವನ್ನು ಕಳೆದುಕೊಳ್ಳುತ್ತಾರೆ. ಜಾತ್ರೆಯಲ್ಲಿ ಶಿವಸಾನ ಗದ್ದಿಗೆಯ ದೇವರುಗಳ ಎದುರುಗಡೆ ಬಿಡ್ಗ ( ಒಡಪು) ವನ್ನು ಹೇಳುವ ವಿಶೇಷ ಅಧಿಕಾರ ಇವರದಾಗಿದೆ.

''ಶಿವ ಶಿವ ಶಿವನ ಗುಂಡಿಗೆ
ಶಿವನಾಗ ಮಲ್ಲ ಹೊನ್ನ ಕಿರೀಟ ಎತ್ತಿದನಲ್ಲ
ಬಂಗಾರದೂಟು, ಬಲಮು ಕೋಡು
ತೂಗು ತೊಟ್ಟಿಲವಾಗಲಿ

ಮಲ್ಲೇಶ್ವರನಂಥ ಗಂಡುಮಕ್ಕಳಾಗಲೀ
ಮಾಳಮ್ಮ ನಂಥ ಹೆಣ್ಣುಮಕ್ಕಳಾಗಲೀ
ನಮ್ಮಂಥ ಗೊರ ವಪ್ಪನವರಿಗೆ ಮಾಡಿ ನೀಡುವಂತಾಗಲೀ
ಜಗಂಬತ್ತಿ ಏಳುಕೋಟಿ ... ಏಳುಕೋಟಿ.

" ಆ....ಹ..ಹ...ಶಿವ
ಈತನೇ ಮದ್ದಲಿ ಗೊರವನಾಗಿ ಬಂದಿದ್ದನಲ್ಲ
ಆ .... ಶಿವ
ಈತನೇ ಸಾಕ್ಷಾರ ಪರಮೇಶ್ವರನಾಗಿದ್ದನಲ್ಲ......."

ಅಭ್ಯಾಸದ ಬಲದಿಂದ ಕೆಲ ವಗ್ಗಪ್ಪನವರೂ ಸಹ ಒಡಪುಗಳನ್ನು ಹೇಳುತ್ತಾರೆ. ಆದರೆ ಅದು ತುಂಬಾ ವಿರಳ. ಮದ್ದಲಿ ಗೊರವರು ದೀಕ್ಷೆ ನೀಡುವ ಸಂದರ್ಭದಲ್ಲಿ ದೀಕ್ಷೆಯನ್ನು ಪಡೆಯುವವರಿಗೆ "ಏನು ಒಂದು ತಪ್ಪು ದಾರಿಗೆ ನಡಿಯಬಾರದು. ಒಳ್ಳೆಯ ರೀತಿಯಿಂದ ಹೋಗಬೇಕು " ಎಂದು ಮುಂತಾಗಿ ಕಿವಿಯಲ್ಲಿ ಐದು ನುಡಿಗಳನ್ನು ಹೇಳುತ್ತಾರೆ. ಮುದ್ರೆಹಾಕಿ ಕೊರಳಲ್ಲಿ ಕವಡೆ ಸರವನ್ನು ಕಟ್ಟಿ ಪಂಚಾಮೃತವನ್ನು ನೀಡುತ್ತಾರೆ. ಇದೇ ತೆರನಾದ ಪದ್ಧತಿಯ ಜೊತೆಗೆ ಬಸವಿಯರಿಗೆ ಇವರೇ ತಾಳಿಯನ್ನು ಕಟ್ಟುತ್ತಾರೆ. ದೀಕ್ಷಾ ಗುರುವಾದ ಇವರಿಗೆ ಭಕ್ತರು ತಮಗೆ ತೋಚಿದ ರೀತಿಯಲ್ಲಿ ಕಾಣಿಕೆಯನ್ನು ಸಲ್ಲಿಸುವುದುಂಟು. ಇವರ ಬಳಿ ಮದ್ದಲಿಯಂತೆ ಭಂಡಾರವೂ ಯಾವತ್ತೂ ಇರುತ್ತದೆ. ತಲೆಗೆ ಬಿಳಿಯ ಪೇಟವನ್ನು ಸುತ್ತಿರುತ್ತಾರೆ.

ಮೈಲಾರ ಕ್ಷೇತ್ರದಲ್ಲಿ ಮದ್ದಲಿ ಗೊರವರು ಅನ್ನುವ ಪ್ರತ್ಯೇಕ ಪಂಗಡವಿಲ್ಲ. ಜಯಚಂದ್ರ ಒಡೆಯರ ಪ್ರಕಾರ ಗಣಾಚಾರಿಗಳೆಂದರೆ ಮೀನಗೊಂದಿಯ ಮದ್ದಲಿಗೊರವರ ಸಂಪ್ರದಾಯದವರೇ ಆಗಿದ್ದಾರೆ. ಈ ಗಣಾಚಾರಿಗಳು ಗುರುವಿನ ತರುವಾಯ ದೇವಸ್ಥಾನದ ಸಮಸ್ತ ಜವಾಬ್ದಾರಿಯುತ ವ್ಯಕ್ತಿಯಾಗಿದ್ದಾರೆ. ಮೀನಗೊಂದಿಯಲ್ಲಿರುವಂತೆ ಇಲ್ಲಿಯೂ ಗಣಾಚಾರಿಗಳು ವಗ್ಗರಿಗೆ, ಕಂಚಾವೀರರಿಗೆ, ಕುದುರೆಕಾರರಿಗೆ, ಗೊರಮ್ಮನವರಿಗೆ, ದೀಕ್ಷೆಯನ್ನು ನೀಡುವ ಅಧಿಕಾರ ಹೊಂದಿರುತ್ತಾರೆ. ಆದರೆ ಮೈಲಾರದಲ್ಲಿ ಖಡ್ಗ ಹೇಳೂವ ಅಧಿಕಾರ ಕಂಚಾವೀರರಿಗೆ ಇದೆ. ಮೀನಗೊಂದಿಯಲ್ಲಿ ಮದ್ದಲಿಗೊರವಯ್ಯನವರಿಗೆ ಈ ಅಧಿಕಾರ ಇರುವುದು ವಿಶೇಷ.

### ೮.೧.೨. ಕಾರಣಿಕದವರು :

ಮೈಲಾರಲಿಂಗನ ಸಂಪ್ರದಾಯದ ಆಚರಣೆಗಳಲ್ಲಿ ಕಾರಣಿಕ ಮುಖ್ಯವಾದುದು. ಕಾರಣಿಕ ಪದದ ಅರ್ಥವನ್ನು ಗಮನಿಸಿದಾಗ 'ಅವತಾರ ಪುರುಷ' ಎಂದಾಗುತ್ತದೆ. ಕಾರಣಿಕ ನುಡಿಯುವಾಗ ಅವರಿಂದ ಹೊರಡುವ ಶಬ್ದಗಳು ದೇವರ ವಾಕ್ಯ, ದೇವರ ನುಡಿಗಳಾಗಿವೆ. ಈ ನುಡಿಗಳು ಸುಳ್ಳಾಗದು ಎಂಬುದು ಜನಪದರ ನಂಬಿಕೆ. ಆದರೆ ಹೇಳಲ್ಪಡುವ ಭವಿಷ್ಯದ ವಾಕ್ಯಗಳು ಮಾತ್ರ ಸಾಂಕೇತಿಕವಾಗಿದ್ದು. ಜನಪದರು ಸುಲಭವಾಗಿ ಅರ್ಥೈಸಲು ಬಾರದಷ್ಟು ಅರ್ಥಗರ್ಭಿತವಾಗಿರುತ್ತವೆ. ಆದರೂ ಜನತೆ ತಮ ತಮಗೆ ತೋಚಿದ ರೀತಿಯಲ್ಲಿ ಕಾರಣಿಕದ ನುಡಿಗಳಿಗೆ ಅರ್ಥ ಹುಡುಕುತ್ತಾ ಮುಂದೆ ಆಗಬಹುದಾದ ಕೆಲಸಗಳ ಬಗ್ಗೆ ಲೆಕ್ಕಚಾರ ಹಾಕುತ್ತಾ ಮರಳುತ್ತಾರೆ. ಕ್ಷಣಾರ್ಥದಲ್ಲೇ ಈ ಸುದ್ದಿ ಗಾಳಿಯಂತೆ ಹಬ್ಬಿ ನಿಲ್ಲುತ್ತದೆ.

ಮೀನಗೊಂದಿ ಕ್ಷೇತ್ರದಲ್ಲಿ ಕಾರಣಿಕವನ್ನು ನುಡಿಯುವವರು ಜೀರ್ರರು ಮನೆತನದವರು. ಇವರು ನೆರಣಿಕೆ ಗ್ರಾಮದಲ್ಲಿ ವಾಸವಾಗಿದ್ದು ಸುತ್ತ ಮುತ್ತ ಊರುಗಳಲ್ಲಿ ಈ ಮನೆತನದವರು ಇಲ್ಲದಿರುವುದು ಆಶ್ಚರ್ಯಕರ. ನೆರಣಿಕೆಯಲ್ಲಿ ಈ ಮನೆತನಕ್ಕೆ ಸಂಬಂಧಿಸಿದಂತೆ ನಾಲ್ಕು ಮನೆಗಳಿವೆ. ಬೆಟ್ಟದಲ್ಲಿ ಸ್ವಾಮಿ ಮಾಳಾ-ಮಲ್ಲೇಶ್ವರರಿಗೆ ಹಣ್ಣು, ಕಾಯಿ, ನೈವೇದ್ಯ ಮುಂತಾದ ಕೈಂಕರ್ಯಗಳನ್ನು ಸಲ್ಲಿಸುವವರಾಗಿದ್ದಾರೆ. ಪ್ರತಿ ಕುಟುಂಬಗಳು ಮೂರು ತಿಂಗಳು ಗಿರಿಯ ಮಲ್ಲೇಶ್ವರನನ್ನು ಪೂಜಿಸುವ ಅಧಿಕಾರವನ್ನು ಹೊಂದಿವೆ. ಅಧಿಕಾರ ಹೊಂದಿದಂತಹ ಕುಟುಂಬ ಮೂರು ತಿಂಗಳು ಬೆಟ್ಟದಲ್ಲಿಯೇ ಇದ್ದು ಅಲ್ಲಿಯೇ ವಾಸ ಮಾಡುತ್ತಾರೆ. ನಂತರ ಮೂರು ತಿಂಗಳು ಇನ್ನೊಂದು ಕುಟುಂಬ. ಹೀಗೆ ವರ್ಷಕ್ಕೆ ಸರಿಯಾಗಿ ನಾಲ್ಕು ಕುಟುಂಬಗಳು ದೇವರ ಪೂಜಾ ಕಾರ್ಯಕ್ರಮವನ್ನು ನೆರವೇರಿಸುತ್ತಾ ಬಂದಿರುವರು.

ಕಾರಣಿಕ ನುಡಿಯುವಾತನನ್ನು ಗೊರವ ಎಂದು ಕರೆಯುವುದಿಲ್ಲ. ಆತನನ್ನು 'ಹೇಳಿಕೆ ಸ್ವಾಮಿ' ಅಂತಲೇ ಈ ಕ್ಷೇತ್ರದ ಜನರು ಕರೆಯುತ್ತಾರೆ. ಕಾರಣ ಇವರು ಲಿಂಗಾಯತ ಪಂಥಕ್ಕೆ ಸೇರಿದ ಜೀರರು. ಇವರಿಗೆ ಒಡೆಯರಿಂದ ಯಾವ ದೀಕ್ಷೆಯೂ ಇರುವುದಿಲ್ಲ. ಬದಲಿಗೆ ದೇವರಿಗೆ ಪ್ರತಿ ನಿತ್ಯವೂ ಪೂಜೆಯನ್ನು ಸಲ್ಲಿಸುವ ಅಧಿಕಾರವನ್ನು ಹೊಂದಿದ್ದಾರೆ. ಕಾರಣಿಕವನ್ನು ಹೇಳುವುದು ಮೂರು ತಿಂಗಳಿಗೆ ಒಂದಾವರ್ತಿ ಪೂಜಾ ಕಾರ್ಯಕ್ರಮದ ಅಧಿಕಾರದಂತೆ ಇರದೆ ಪ್ರತಿ ವರ್ಷ ಪ್ರತ್ಯೇಕ ನಿಗದಿತ ಕುಟುಂಬದ ಹಿರಿಯ ವ್ಯಕ್ತಿಯೇ ಕಾರಣಿಕವನ್ನು ಹೇಳುತ್ತಾನೆ. ಅದು ವಂಶಪರಂಪರಾಗತವಾಗಿ ಅದೇ ಕುಟುಂಬಕ್ಕೆ ಬಂದಿದೆ. ಜೀರ್ರರೇ ಆದ ಬೇರೆ ಕುಟುಂಬಗಳಿಗೆ ಈ ಅವಕಾಶವಿಲ್ಲ.

ಕಾರಣಿಕ ನುಡಿಯುವ ಸ್ವಾಮಿಗೆ ದಸರಾ ಅಮಾವಾಸೆಯಾದ ಐದನೇ ದಿನಕ್ಕೆ ಬೆಟ್ಟದಲ್ಲಿ ಕಂಕಣ ಇರುತ್ತದೆ. ಅಲ್ಲಿಂದ ಬನ್ನಿಯ ದಿನ ಬರುವವರೆಗೆ ಒಂದೊತ್ತು (ಒಪ್ಪತ್ತು) ಇದ್ದು ಕಠಿಣ ನಿಯಮಗಳನ್ನು ಪಾಲಿಸುತ್ತಾನೆ. ಹೇಗೆಂದರೆ ಹತ್ತು ದಿನಗಳ ಒಂದೊತ್ತಿನಲ್ಲಿ ಪ್ರತಿ ದಿನ ರಾತ್ರಿ ಊಟ ಆದ ಮೇಲೆಯೇ ಒಂದೊತ್ತನ್ನು ಬಿಡೋದು. ಬೆಳಗಿನಿಂದ ನೀರನ್ನು ಸಹ ಕುಡಿಯದೆ ಹಾಗೆ ಹತ್ತು ದಿನಗಳು ಗಿರಿಯಲ್ಲಿಯೇ ಇರುತ್ತಾನೆ. ಒಂದೊತ್ತು ಇದ್ದು ನಿಷ್ಠೆಯಿಂದ ಆತ ಪೂಜಾ ಕಾರ್ಯಕ್ರಮವನ್ನು ದಿನವೂ ನೆರವೇರಿಸುತ್ತಾನೆ.

ಬಹುತೇಕ ಕ್ಷೇತ್ರದ ಜನರು ನುಡಿದಂತೆ ಹೇಳಿಕೆ ಸ್ವಾಮಿಯ ಹೆಂಡತಿಗೆ ಹೇಳಿಕೆ ಹೇಳುವ ಒಂದು ದಿನದ ಮುಂಚೆ ದೇವರು ಕನಸಿನಲ್ಲಿ ಬಂದು ವಾಕ್ಯಗಳನ್ನು ನುಡಿಯುತ್ತಾನಂತೆ. ಅದನ್ನೇ ಆಕೆ ತನ್ನ ಗಂಡನಿಗೆ ಹೇಳುತ್ತಾಳೆ. ಅಂತೂ ಕಾರಣಿಕದ ಸ್ವಾಮಿ ಕಾರಣಿಕದಲ್ಲಿ ಹೆಂಡತಿ ಹೇಳಿದ ವಾಕ್ಯಗಳನ್ನೇ ನುಡಿಯುತ್ತಾನೆ ಎಂಬುದು ವಾಡಿಕೆ. ಆದರೆ ನಾನು ಸ್ವತಃ ಹೇಳಿಕೆ ಹೇಳುವ ಕಾರಣಿಕ ಮಲ್ಲಯ್ಯ ಸ್ವಾಮಿಯನ್ನು ಸಂದರ್ಶಿಸಿದಾಗ ಅವರಿಂದ ತಿಳಿದದ್ದು ಇಷ್ಟು ''ಲೇದು ದೇವುಡು ನಾ ಕಲಲೋನೆ ವಸ್ತಾಡು ಎಪ್ಪುಡು ವಸ್ತಾಡು ಅಂಟೆ ರೇಪು ಕಾರಣಿಕಮುವುಂದಿ ಅಂಟೆ ಇಪೊದ್ದು ನಾ ಕಲಲೋ ವಚ್ಚಿ ವಾಕ್ಯಮುಲನು ಚೆಪ್ಪಿಂಟಾಡು. ಆ ಮಲ್ಲಯ್ಯ ಚೆಪ್ಪಿನ ಮಾಟಲೇ ನೇನು ಅಕ್ಕಡ ಕಾರಣೀಕಲೋನಿ ಚೆಬುತಾನು. ಅದಿ ದೇವುಡು ಏಮಿ ನಾಕು ಚೆಪ್ಪಿನಾಡು ಅನೇದಿ ಗೂಡಾ ನಾಕು ಗುರುತು ಉಂಡದು'' (ಇಲ್ಲ ದೇವರು ನನ್ನ ಕನಸಿನಲ್ಲಿಯೇ ಬರೋದು ಅದು ಯಾವಾಗ ಅಂದ್ರೆ ನಾಳೆ ಕಾರಣಿಕ ಇದೆ ಅಂದರೆ ಈ ದಿನ ದೇವರು ನನ್ನ ಕನಸಿನಲ್ಲಿ ಬಂದು ವಾಕ್ಯಗಳನ್ನು ಹೇಳ್ತಾನೆ. ಆ ಮಲ್ಲಯ್ಯ ಹೇಳಿದ ಮಾತುಗಳನ್ನೇ ನಾನು ಅಲ್ಲಿ ನಡೆವ ಕಾರಣಿಕದಲ್ಲಿ ಹೇಳೋದು. ಆದರೆ ದೇವರು ನನಗೆ ಏನು ಹೇಳಿದ್ದಾನೆ ಅನ್ನುವುದು ನಂಗೆ ಗುರ್ತು ಇರೋಲ್ಲ).

ಬನ್ನಿಯ ದಿನ ರಾತ್ರಿ ಹನ್ನೆರಡು ಒಂದರ ಸುಮಾರಿಗೆ ಶ್ರೀ ಮಾಳಾ ಮಲ್ಲೇಶ್ವರರಿಗೆ ಗಿರಿಯ ಮೇಲೆ ಲಗ್ನದ ಕಾರ್ಯಕ್ರಮ ಮಗಿದ ನಂತರ ದೇವರುಗಳು ಶಿವಸಾನ ಗದ್ದಿಗೆಗೆ ಬರುತ್ತವೆ. ಅಲ್ಲಿ ದೇವರಿಗೆ ಒಡೆಯರಿಂದ ಮಂಗಳಾರತಿಯ ಕಾರ್ಯಕ್ರಮ ನೆರವೇರುತ್ತದೆ. ನಂತರ ಹೇಳಿಕೆಯ ಸ್ವಾಮಿ ಶಿವಸಾನ ಗದ್ದಿಗೆಯಲ್ಲಿ ಇರುವ ವಿಘ್ನೇಶ್ವರನಿಗೆ ನಮಸ್ಕರಿಸಿ ದೇವರ ಉತ್ಸವ ಮೂರ್ತಿಗಳ ಹಿಂದೆಯೇ ಹೊರಡುತ್ತಾನೆ. ದೇವರುಗಳು ಪಾದಾಲಿಗಟ್ಟೆ, ಮುಳ್ಳಿನಬಂಡೆ, ರಕ್ಷಪಡೆ, ಬನ್ನಿಮರ, ಹೊನ್ನಿಕೆರೆಕಟ್ಟೆ ಹೀಗೆ ಮುಂದುವರಿದು ಎದುರು ಬಸವನ ಗುಡಿಗೆ ಸೇರುತ್ತವೆ. ಅಲ್ಲಿ ಆಗಲೇ ಗುಡಿಯ ಮೇಲೆ ಹೇಳಿಕೆಗೆ ಸಕಲವೂ ಸಿದ್ಧಗಿರುತ್ತವೆ. ಪತ್ನಿ ಸಮೇತನಾಗಿ ಕಾರಣಿಕ ಸ್ವಾಮಿಯು ಬಸವನ ಗುಡಿಯ ಮೇಲೆ ಕುಳಿತು ಕಾರಣಿಕವನ್ನು ನುಡಿಯುತ್ತಾರೆ. ಕಾರಣಿಕಸ್ವಾಮಿಯ ಮಾತೃ ಭಾಷೆ ತೆಲಗು. ಇವರಿಗೆ ಕನ್ನಡ ಭಾಷೆ ಸ್ವಲ್ಪ ಸ್ವಲ್ಪ ಅರ್ಥವಾಗುತ್ತದೆ. ಆದರೆ ಮಾತನಾಡಲು ಬರುವುದಿಲ್ಲ. ಆದರೆ ಕಾರಣಿಕ ಹೇಳುವುದು ಮಾತ್ರ ಕನ್ನಡದಲ್ಲಿ. ಇದು ಸ್ವಾಮಿ ಮಲ್ಲಯ್ಯನ ಮಹಿಮೆಯೆಂದೇ ಜನರು ನುಡಿಯುತ್ತಾರೆ. ಕಾರಣಿಕದ ಹೇಳಿಕೆ ಹೀಗಿದೆ.

**ಬಹು ಪರಾಕ್**

೧. ೬೦೦ ಜೋಳ

೨. ೨೦೦೦ ನಗ ಹಳ್ಳಿ

೩. ೩-೬, ೬ ವರನ ಆದೀತು

೪. ಎರೆ ದೊರೆ ಆದೀತು.

ಈ ಹೇಳಿಕೆಯ ಸ್ವಾಮಿಯ ಉಡುಪು ಸರಳವಾಗಿದ್ದು ತಲೆಗೆ ಮುಂಡಾಸ ಧರಿಸಿರುತ್ತಾನೆ. ಅದು ಬಿಟ್ಟರೆ ಗಮನ ಹರಿಸುವಂತಹ ಯಾವುದೇ ವಿಶೇಷ ಉಡುಪುಗಳನ್ನು ಧರಿಸುವುದಿಲ್ಲ.

ಹಿರೇಮೈಲಾರದಲ್ಲಿ ಕಾರಣಿಕೋತ್ಸವವು ಬೇರೆ ತೆರನಾಗಿದೆ. ಇಲ್ಲಿ ನಿರ್ಧಿಷ್ಟ ಪಡಿಸಿದ ವೇಳೆಯ ಒಂದು ದಿನ ಸುಮಾರು ೧೫-೨೦ ಫೀಟು ಉದ್ದದ ಒಂದು ಕಂಬಕ್ಕೆ ಅಷ್ಟೇ ಉದ್ದದ ಕಬ್ಬಿಣದ ಸರಪಳಿಯನ್ನು ತೊಡಿಸಿ ನೇರವಾಗಿ ನಿಲ್ಲಿಸುತ್ತಾರೆ. ಶಿವನು ಈ ಬಿಲ್ಲನ್ನು ಅಸುರರ ವಧೆಗಾಗಿ ಉಪಯೋಗಿಸಿದನೆಂದು ಜನರು ನಂಬುತ್ತಾರೆ. ಕಾರಣಿಕದ ಗೊರವ ಈ ಕಂಬವನ್ನು ಹತ್ತುತ್ತಾನೆ. ಕಂಬದ ಸುತ್ತ ಕೆಲವು ಗೊರವರು, ಭಕ್ತರು ನಿಂತಿರುತ್ತಾರೆ. ಮೇಲೇರಿದ ಗೊರವ ಕಂಬವನ್ನು ಕಾಲಿನಿಂದ ಹಿಡಿದು ಕೈಗಳನ್ನು ಬಿಟ್ಟು ಆಕಾಶ ನೋಡುತ್ತ ಕಾರಣಿಕವನ್ನು ಹೇಳುತ್ತಾನೆ. ಇಲ್ಲಿ ಕಾರಣಿಕ ಹೇಳುವುದು ಗೊರವ ಸಂಪ್ರದಾಯದವರು. ಕಾರಣಿಕ ಗೊರವ ಅನ್ನುವ ಒಂದು ವಿಶಿಷ್ಟ ಮನೆತನವೇ ಇದೆ (ಡಾ. ಎಂ.ಬಿ.ನೇಗಿನಹಾಳ; ೧೯೯೨:೧೫೩).

ಹಿರೇಮೈಲಾರ ಕ್ಷೇತ್ರದಲ್ಲಿ ಕಾರಣಿಕ ನುಡಿಯುವಾತ ಸಾಮಾನ್ಯ ವರ್ಗದ ಗೊರವ. ಗೊರವರಂತೆ ದೀಕ್ಷೆ ಪಡೆದು ವೇಷ-ಭೂಷಣಗಳನ್ನು ಧರಿಸುವನು. ತಲೆಯ ಮೇಲೆ ಮುರಗಿ ಮುಂಡಾಸನದ ಮೇಲೆ ಇನ್ನೊಂದು ಬಟ್ಟೆಯನ್ನು ಹಾಕಿಕೊಳ್ಳುವನು. ನಿತ್ಯದ ದೋತರದ ಬದಲು ಅಂದು ಶೇರವಾಲದಂತಹ ಚಲ್ಲಣ ತೊಡುವನು. ಈ ಕಾರಣಿಕ ಹೇಳುವವರದೇ ಒಂದು ವಿಶಿಷ್ಟ ಮನೆತನವೇ ಇದೆ. ಈ ಮನೆತನದಲ್ಲಿ ತಂದೆಯ ತರುವಾಯ ಮಗ ಕಾರಣಿಕ ಹೇಳುವ ಪರಿಪಾಠವಿದೆ. ಕಾರಣಿಕ ಹೇಳುವ ಸಂದರ್ಭದಲ್ಲಿ ಇವರು ವಿಶೇಷವಾಗಿ ಮಡಿ ಆಚರಿಸಬೇಕು. ಕಾರಣಿಕ ಗೊರವಪ್ಪನೆಂದು ನಿಯಮಿತನಾದವನು ಆ ಮುಂಚೆ ಲಗ್ನವಾಗಿದ್ದರೂ ಹೆಂಡತಿಯನ್ನು ತ್ಯಜಿಸಬೇಕು. ಅಂದರೆ ಅವನಿಗೆ ಅಂದಿನಿಂದ ಪ್ರಾಪಂಚಿಕ ಜೀವನ ನಿಷಿದ್ಧ. ಒಮ್ಮೆ ಬಿಲ್ಲು ಏರಿದ ನಂತರ ದೇವಾಲಯದ ಪಾಳಿಯಲ್ಲಿರುವ ಒಂದು ಕೋಣೆಯಲ್ಲಿ ಅವನು ಯಾವತ್ತೂ ವಾಸ ಮಾಡುವನು. ದೇವಸ್ಥಾನದ ವತಿಯಿಂದ ಮತ್ತು ಭಕ್ತರಿಂದ ಬರುವ ಕಾಣಿಕೆಯ ಹಣದಿಂದ ಅವನ ಖರ್ಚು ನಡೆಯುತ್ತದೆ. ವಿಶೇಷವೆಂದರೆ ಉಳಿದ ಗೊರವರಂತೆ ಈತ ಬೇಕಾಬಿಟ್ಟಿಯಾಗಿ ಸಂಚರಿಸಕೊಡದು.

ಪರಸ್ಥಳದ ಭಕ್ತರು, ವಿಶೇಷ ಆಮಂತ್ರಣವಿತ್ತು ಕರೆಯಿಸಿಕೊಂಡಾಗ ಮಾತ್ರ ಅವರೊಂದಿಗೆ ಹೋಗಿ ಮಂಗಲ ಕಾರ್ಯಗಳಲ್ಲಿ ಭಾಗವಹಿಸಿ ಕಾಣಿಕೆ ಮುಂತಾದವುಗಳನ್ನು ಸ್ವೀಕರಿಸಿ ತಿರುಗಿ ದೇವಸ್ಥಾನಕ್ಕೆ ಬರುವನು. ಈತ ದೇವಸ್ಥಾನದಲ್ಲಿ ಯಾವತ್ತೂ ಕೂತಿದ್ದು ದೇವರ ಪಲ್ಲಕ್ಕಿ ಉತ್ಸವ ಹೊರಟಾಗ ಅದರ ಜೊತೆಗೆ ಈತ ಇದ್ದೇ ತೀರಬೇಕು. ಮೈಲಾರದ ಕಾರಣಿಕದಲ್ಲಿ ಹನ್ನೊಂದು ದಿವಸ ಕಾರಣಿಕದ ಗೊರವ ಉಪವಾಸ ವಿರುವುದು ಕಡ್ಡಾಯ.

ದೇವರ ಗುಡ್ಡದಲ್ಲಿ ಹಕ್ಕುದಾರರಾಗಿರುವ ಮನೆತನಗಳಲ್ಲಿ ಒಬ್ಬನು ಕಾರಣಿಕ ಹೇಳಲು ಟ್ರಸ್ಟ್‌ನ ವತಿಯಿಂದ ನೇಮಿಸಲ್ಪಡುವನು. ಇಲ್ಲಿಯೂ ಕೂಡಾ ತಂದೆಯ ತರುವಾಯ ಮಗನಿಗೆ ಆಯ್ಕೆಯಲ್ಲಿ ಆಧ್ಯತೆ ದೊರೆಯುವುದಾದರೂ ಅದು ಕಟ್ಟು ನಿಟ್ಟಾದ ನಿಯಮವಾಗಿಲ್ಲ. ಕಾರ ಹುಣ್ಣಿಮೆಗೆ ಮೈಲಾರಲಿಂಗಪ್ಪನಿಗೆ ಲಗ್ನವಾಗುವುದಷ್ಟೇ. ದೇವರ ಲಗ್ನದಂತೆ ಈ ಕಾರಣಿಕದ ಗೊರವಪ್ಪ ಮತ್ತು ಒಬ್ಬ ಗೊರವಮ್ಮನ ಜೊತೆಗೆ ಈತನ ಲಗ್ನದ ಕಾರ್ಯಕ್ರಮ ನಡೆಯುತ್ತದೆ. ವಿಶೇಷವೆಂದರೆ ಈ ಲಗ್ನ ಕೇವಲ ಹೆಸರಿಗೆ ಮಾತ್ರ. ಅವರಿಬ್ಬರಲ್ಲಿ ಲಗ್ನದ ತರುವಾಯ ಯಾವ ಸಂಬಂಧವೂ ಉಳಿದು ಬರುವುದಿಲ್ಲ(ಡಾ. ಎಂ.ಬಿ.ನೇಗಿನಹಾಳ; ೧೯೯೨ :೧೫೪).

ಈ ಎರಡೂ ಕ್ಷೇತ್ರಗಳನ್ನು ಅವಲೋಕಿಸಿದಾಗ ಭಿನ್ನತೆಗಳು ಕಂಡುಬರುತ್ತವೆ. ಮೊದಲನೆಯದಾಗಿ ಮೀನಗೊಂದಿ ಮಲ್ಲಯ್ಯನ ಕ್ಷೇತ್ರದಲ್ಲಿಕಾರಣಿಕ ನುಡಿಯುವವರು ಕುರುಬ ಜನಾಂಗಕ್ಕೆ ಸೇರಿದವರಾಗಿರದೆ ವೀರಶೈವ (ಲಿಂಗಾಯತರು) ಪಂಥದ ಜೀರ್ರರು ಮನೆತನದವರಾಗಿರುವುದು ಒಂದು ವಿಶೇಷ. ಸತಿ-ಪತಿಯರು ಜೊತೆಗೂಡಿ ಬಸವನ ಗುಡಿಯ ಮೇಲೆ ಕುಳಿತು ಹೇಳುವುದು, ಕಾರಣಿಕದ ನುಡಿ ಮೈಲಾರದಲ್ಲಿಯಂತೆ ಒಂದೇ ಸಾಲಾಗಿರದೆ. ನಾಲ್ಕೈದು ನುಡಿಗಳವರೆಗೆ ಇರುವುದು. ಮೈಲಾರದಲ್ಲಿ ಕಾರಣಿಕ ಸಾಯಂಕಾಲ ಆರರ ಸುಮಾರಿಗೆ ನುಡಿದರೆ, ಮೀನಗೊಂದಿಯಲ್ಲಿ ಬೆಳಗಿನ ಜಾವ 5-30 ರ ಸುಮಾರಿಗೆ ನುಡಿಯುವರು. ಒಟ್ಟಾರೆ ಕಾರಣಿಕ ನುಡಿಯುವುದು ಹಿರೇಮೈಲಾರಕ್ಕಿಂತ ಮೀನಗೊಂದಿಯಲ್ಲಿ ವೈಶಿಷ್ಟ್ಯಪೂರ್ಣವಾದ ಆಚರಣೆಗಳನ್ನು ಮೈಗೂಡಿಸಿಕೊಂಡಿದೆ.

## ೮.೧.೩. ಕಂಚಾವೀರ :

ಮೀನಗೊಂದಿ ಕ್ಷೇತ್ರದಲ್ಲಿ ಕಂಚಾವೀರರು ಕುರುಬ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಈ ಕಂಚಾವೀರರ ಕುಟುಂಬ ಕೇವಲ ಒಂದೇ ಒಂದು ಕುಟುಂಬ ಆಗಿದ್ದು, ಅವರು ನೆರಣಿಕೆ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ವಂಶಪಾರಂಪರ್ಯವಾಗಿ ಬಂದಿರುವ ಈ ಕಾಯಕ ಕಂಚಾವೀರ ಮಲ್ಲಣ್ಣನವರು ವಯಸ್ಸಾದ ಕಾರಣದಿಂದ ಮುಂದಿನ ಜವಾಬ್ದಾರಿಯನ್ನು ಮಗನಿಗೆ ವಹಿಸಬೇಕಾಗಿತ್ತು. ಆದರೆ ಹುಡುಗ ಇನ್ನು

ಚಿಕ್ಕವನಾದುದರಿಂದ ಈ ಕಾಯಕವನ್ನು ಕಂಚಾವೀರ ಮಲ್ಲಣ್ಣನ ಹೆಂಡತಿಯ ಅಣ್ಣನಾದ ಮಲ್ಲಪ್ಪನಿಗೆ ಇದನ್ನು ವಹಿಸಿಕೊಡಲಾಗಿದೆ. ಇವರು ಕಂಚಾವೀರರಾಗಿ ದೀಕ್ಷೆ ಪಡೆದುಕೊಂಡು ಒಂಭತ್ತು ವರ್ಷಗಳು ಕಳೆದಿವೆ. ಇವರ ನಂತರ ಮುಂದಿನ ಹೊಣೆಯನ್ನು ಕಂಚಾವೀರ ಮಲ್ಲಣ್ಣನ ಮಗನಾದ ಬಸವರಾಜ. ಕೆ. ಇವರಿಗೆ ನೀಡುವವರಿದ್ದಾರೆ.

ದಸರಾ ಅಮವಾಸೆ ಕಳೆದು ಮೂರು ದಿನದಾಗ ಕಂಚಾವೀರ ಮಲ್ಲಪ್ಪನವರು ನೆರಣಿಕೆ ಗ್ರಾಮಕ್ಕೆ ಬರುತ್ತಾರೆ. ಅಂದಿನಿಂದ ಅವರು ದಿನಾಲು ತಪ್ಪದೇ ಸ್ನಾನ ಮಾಡಿ ಮಡಿ ಉಡಿಯಿಂದ ಇರುತ್ತಾರೆ. ಇವರು ಕಂಕಣಕ್ಕಿಂತ ಒಂದು ದಿನ ಮುಂಚೆಯೇ ಬೆಟ್ಟಕ್ಕೆ ಬಂದಿರುತ್ತಾರೆ. ಅಲ್ಲಿ ಕಾಡಸಿದ್ಧಪ್ಪನ ಮಠದಲ್ಲಿ ಉಳಿದುಕೊಂಡಿದ್ದು, ಅಮಾವಾಸೆ ಆಗಿ ೫ನೇ ದಿನಕ್ಕೆ ಕಂಕಣವನ್ನು ಕಟ್ಟುತ್ತಾರೆ. ಅಂದಿನಿಂದ ಒಂಭತ್ತು ದಿನಗಳವರೆಗೆ ಕಂಚಾವೀರ ಒಂದೊತ್ತು ಇರುತ್ತಾನೆ. ಬನ್ನಿಯ ದಿನ ಅಗಸರು ಇವರಿಗೆ ಒಂದು ಪಂಜನ್ನು, ಬಾರಿಕರು ಒಂದು ಮಗ್ಗು ಎಣ್ಣೆಯನ್ನು ನೀಡುತ್ತಾರೆ. ಕಾರಣ ದೇವಸ್ಥಾನದ ವತಿಯಿಂದ ಕಂಚಾವೀರರ ಪಂಜು ಎಂದೇ ಇವರಿಗೆ ಪ್ರತ್ಯೇಕವಾಗಿ ನೀಡುತ್ತಾರೆ. ಈ ಪಂಜನ್ನು ಹಿಡಿಯುವ ಕಾರ್ಯ ಅವರ ಮನೆತನದಲ್ಲಿ ಯಾರಾದರೂ ಆಗಿರುತ್ತಾರೆ.

ಕಂಚಾವೀರರು ಕಾಲು ಪವಾಡ ಮಾಡಲು 'ಬಾಣತಿ ಶಾಸ್ತ್ರ'ವನ್ನು ವರ್ಷಕ್ಕೆ ಒಂದು ಬಾರಿ ನಡೆಯುವ ಬನ್ನಿಯ ಉತ್ಸವಕ್ಕೆ ಹೊರಗಡೆ ತೆಗೆಯುವ ಕಾರಣದಿಂದ ಶಸ್ತ್ರವನ್ನು ಹೊಳಪು ಬರುವ ಹಾಗೆ ಉಜ್ಜ ಬೇಕಾಗುತ್ತದೆ. ''ಮೊದಲು ಶಸ್ತ್ರನ ಬೀಸಾ ಕಲ್ಲಿಗೆ ಹಾಕಿ ತಿಕ್ತಾವಿ. ಬೀಸಾಕಲ್ಲು ಆದ ಮ್ಯಾಕ ರಂಗೋಲಿ ಪುಡಿ ಆಕಿ ತಿಕ್ಕತೀವಿ. ಆ ಮೇಲೆ ಕರಕು ( ಇದ್ದಲಿ)ನಿಂದ ತಿಕ್ಕುತೀವಿ. ವಿಭೂತಿಯಿಂದ, ಮತ್ತೆ ಕರುಕಿನಿಂದ ಸಾಣಿ ಪೇಪರ್‌ನಿಂದ ಕೊನೆಗೆ ವಿಭೂತಿಯಿಂದ ತಿಕ್ಕಿ ಶಸ್ತ್ರ ಹೊಳಪು ಬರಂಗೆ ಮಾಡ್ತೀವಿ. ಈ ಶಸ್ತ್ರಕ್ಕೆ ೧೨ ಮಾರು ಉದ್ದದ ದಾರವನ್ನು ಹೊಸದು, ಅದನ್ನ ಶಸ್ತ್ರದ ಕೊನೆಗೆ ಸುತ್ತಿ ಬಂದು ಬಟ್ಟೆ ಹಾಕಿ ಮುಚ್ಚಿಡ್ತೀವಿ. ಅದನ್ನ ಯಾರಿಗೂ ಕಾಣದ ಹಾಗೆ ಗಿರಿಗೆ ತರ್ತೀವಿ.'' ಎಂದು ಕಂಚಾವೀರ ಮಲ್ಲಪ್ಪ ಹೇಳುತ್ತಾರೆ.

ಬನ್ನಿಯ ದಿನ ಮಾಳಾ-ಮಲ್ಲೇಶ್ವರರಿಗೆ ರಾತ್ರಿ ನಡೆಯುವ ಲಗ್ನದ ಕಾರ್ಯಕ್ರಮದಲ್ಲಿ ಮತ್ತೊಮ್ಮೆ ಇವರಿಗೆ ಕಂಕಣವನ್ನು ಕಟ್ಟುತ್ತಾರೆ. ಕಲ್ಯಾಣದ ಕಾರ್ಯ ಮುಗಿದ ನಂತರ ದೇವರ ಉತ್ಸವ ಮೂರ್ತಿಗಳನ್ನು ಬೆಂಕಿ ಮತ್ತು ಬಡಿಗೆಗಳ ಜೊತೆಯಲ್ಲಿ ಶಿವಸಾಸ ಗದ್ದಿಗೆಗೆ ತರುತ್ತಾರೆ. ಬೆಟ್ಟದಿಂದ ಕೆಳಗೆ ಬರುವವರೆಗೆ ದೇವರನ್ನು ಹೊರುವ ಜವಾಬ್ದಾರಿ ಇವರದಾಗಿರುತ್ತದೆ. ಶಿವಸಾನ ಗದ್ದಿಗೆಯಲ್ಲಿ ಮಂಗಳಾರತಿ ಮುಗಿದ ಮೇಲೆ ದೇವರುಗಳು ರಕ್ಷಪಡೆಯ ಕಡೆಗೆ ಸಾಗುತ್ತವೆ. ಕಂಚಾವೀರ ಬೇರೆ ಮಾರ್ಗವಾಗಿ ದೇವರುಗಳು ಬರುವ ಮೊದಲೇ ರಕ್ಷ ಪಡೆಯಲ್ಲಿ ಸೇರಿಕೊಂಡಿರುತ್ತಾನೆ. ಇವರು ಮಾಡುವ ಪವಾಡವನ್ನು ವೀಕ್ಷಿಸಲು ನೆರಣಿಕೆ

ಗ್ರಾಮದ ಗೌಡರು, ಬ್ರಾಹ್ಮಣರು, ಶ್ಯಾನುಭೋಗರು ಹಲವಾರು ಜನ ಭಕ್ತರು ನೆರೆಯುತ್ತಾರೆ. ''ಡೊಳ್ಳಿನ ಸದ್ದು ಆದ ಕೂಡ್ಲೇ ನನ್ನ ಪರವಶ ನನಿಗೆ ಗೊತ್ತಿಲ್ಲ. ರಾಕ್ಷಸಿ ಬಂದಿದ್ದು ಕಣ್ಣಿಗೆ ಕಾಣ್ತಾವ. ಆಗ್ಲಿ ದೇವರು ಸನ್ಯಾಕ ಬಂದ್ರು ಕೂಡಾ ಕಾಣಂಗಿಲ್ಲ. ಗವಿಕಡಿಗೆ ಮಖ(ಮುಖ) ಮಾಡಿ 'ಭಲೇ ಎಚ್ಚರ' ಅಂತೀನಿ ಏಳು ಮಂದಿ ಕೂದಲು ಬಿಟ್ಟಗಂಡು ಬಂದಿರ್‍ತಾರ ರಾಕ್ಷಸರು. ಆಗ ನನಿಗೆ ಏನಾಗ್ತೈತೆ ಅಂದ್ರೆ ಆತನದು ಜ್ಞಾನ ಬಂದು ಬಿಡ್ತೈತೆ ಬಂಢಾರ ತಗಂಡು ಉಗ್ಗಿ ಬಿಡ್ತೀನಿ. ಅವು ಓಡಿ ಹೋಗಿ ಬಿಡ್ತಾವ. ದೇವರು ಇನ್ನು ರಕ್ಷ ಪಡೆಗೆ ಬರುತ್ತಿದ್ದಂತೆ ನಾನು ಕಾಲಿಗೆ ಶಸ್ತ್ರ ಹಾಕ್ಯಂತೀನಿ.'' ಎಂದು ಮಲ್ಲಪ್ಪ ಹೇಳುತ್ತಾರೆ.

ಈ ರೀತಿಯಾಗಿ ಕಂಚಾವೀರ ಬೇರೆಯವರ ಸಹಾಯವನ್ನು ಬಯಸದೇ ತಾನೇ ಸ್ವತಃ ಶಸ್ತ್ರವನ್ನು ಹಾಕಿಕೊಂಡು ದೇವರನ್ನು ಹೊತ್ತುಕೊಂಡು ಬಂದು ಐದು ಹೆಜ್ಜೆ ಕುಣಿಯುತ್ತಾನೆ. ಜೋಯಿಸರಿಂದ ಶಮೀವೃಕ್ಷದ ಪೂಜೆ ಆದನಂತರ ನೆರಣಿಕೆಯ ಗೌಡರು ಕಂಚಾವೀರನಿಗೆ ಹಚ್ಚಡ ಹೊದಿಸಿ ಅಭಿನಂದಿಸುತ್ತಾರೆ. ಇದು ಒಂದು ರೀತಿ ಸನ್ಮಾನದ ರೀತಿಯಲ್ಲಿಯೇ ಇರುತ್ತದೆ. ಕಂಚಾವೀರರು ಬಾಣತಿ ಶಸ್ತ್ರ ಪವಾಡ ಒಂದನ್ನು ಬಿಟ್ಟು ಬೇರೆ ಯಾವುದೇ ರೀತಿಯ ಪವಾಡಗಳನ್ನು ಮಾಡುವುದಿಲ್ಲ. ಇವರ ಉಡುಪು, ಸರಳವಾದ ದೋತರ ಅಂಗಿ ಹಾಕಿಕೊಂಡದ್ದು ತಲೆಗೆ ಮುರಗಿ ಮುಂಡಾಸು ಧರಿಸಿರುತ್ತಾರೆ. ಬಲಗೈಯಲ್ಲಿ ಡಮರುಗವನ್ನು ಹಿಡಿದಿರುತ್ತಾರೆ. ಹಣೆಗೆ ವಿಭೂತಿ, ಬಂಢಾರ, ಗಂಧಗಳಿರುತ್ತವೆ. ಇವರು ಕಾಲಿಗೆ ಮೆಟ್ಟುಗಳನ್ನು ಧರಿಸರು, ಕಂಚಾವೀರರಿಗೆ ಒಡೆಯರು ದೀಕ್ಷೆಯನ್ನು ನೀಡಿರುತ್ತಾರೆ.

ಹಿರೇಮೈಲಾರದಲ್ಲಿ ಇವರು ಜಾತಿಯಿಂದ ಹರಿಜನರಾದರೂ ಮಾಂಸಹಾರ, ಮದ್ಯಪಾನಗಳಿಂದ ಕಟ್ಟು ನಿಟ್ಟಿನ ಮಡಿ ಮೈಲಿಗೆಗಳನ್ನು ಅನುಸರಿಸುತ್ತಾರೆ. ಕಂಚಾವೀರರಲ್ಲಿ ಎರಡು ಪ್ರಕಾರಗಳಿವೆ. ಸಾಮಾನ್ಯ ಕಂಚಾವೀರರು ಮತ್ತು ವೀರಗಾಸೆಯವರು. ಸಾಮಾನ್ಯ ಕಂಚಾವೀರರು ದೋತರ, ಚಲ್ಲಣ, ಅಂಗಿ , ತಲೆಗೆ ಮುರಗಿ ಮುಂಡಾಸು, ಹೆಗಲ ಮೇಲೊಂದು ದೋತರ ಹೊದ್ದು, ಕೋಟು ತೊಡುತ್ತಾರೆ. ವೀರಗಾಸೆಯವರು ಮುಂಡಾಸು ಸುತ್ತುವುದಿಲ್ಲ. ಕೂದಲನ್ನು ಉದ್ದಕ್ಕೆ ಬೆಳಸಿ ರಣಗೂದಲಿನಂತೆ ಕೆದರಿಕೊಳ್ಳುತ್ತಾರೆ. ಅದರ ಮೇಲೆ ಗೆಜ್ಜೆಗಳನ್ನು ಸೇರಿಸಿ, ಹೊಲಿದ ಬಟ್ಟೆಯ ಪಟ್ಟಿಯೊಂದನ್ನು ಬಿಗಿದುಕೊಳ್ಳುತ್ತಾರೆ. ಕೊರಳಲ್ಲಿ ರುದ್ರಾಕ್ಷಿ ಮಾಲೆಯಿದ್ದು, ದೋತರವನ್ನು ವೀರಗಚ್ಚೆ ಹಾಕಿ ಉಡುವರು. ನಡುವಿಗೆ ಹಿತ್ತಾಳೆಯ ಮೂರು ಮುಖಗಳನ್ನುಳ್ಳ ವೀರಮುಖದ ಪಟ್ಟಿಕೆಯನ್ನು ಕಟ್ಟಿಕೊಂಡು ಸೊಂಟದ ಸುತ್ತಲೂ ಕೂದಲ ಕುಚ್ಚಗಳನ್ನು ಇಳಿ ಬೀಳುವಂತೆ ಕಟ್ಟಿಕೊಂಡಿರುತ್ತಾರೆ. ಹಣೆಯಲ್ಲಿ ವಿಭೂತಿ, ಬಂಢಾರ, ಗಂಧಗಳನ್ನು ಧರಿಸಿ, ಕೈಯಲ್ಲಿ ಖಡ್ಗ ಇಲ್ಲವೆ ಶಸ್ತ್ರವನ್ನು ಹಿಡಿದಿರುತ್ತಾರೆ. ಶಸ್ತ್ರ ಪವಾಡಗಳನ್ನು ಮಾಡುವುದು ದೇವರ ಮುಂದೆ, ಒಡೆಯರ ಮುಂದೆ, ಒಡಪು ಹೇಳುವರು.

''ಹಾ....ಪೀರ, ಹಾಜಿನಲ್ಲಿ ಘಟ್ಟಗಳು
ಬುದ್ಧೀಲಿ ರಂಗವಾರಿಗಳು
ಕವಡೆಯಲ್ಲಿ ಕೋಟೆಗಳು......
..................................
..............................ನೀನೇ ಮೈಲಾರಲಿಂಗ ಗುರು ಗೋವಿಂದ
ಒಡೆಯರಿಗೆ ಐಸ್ಸುರಯ್ಯ ಹ...ಹ...ಹ...

ಭರತ ಹುಣ್ಣಿಮೆಯಲ್ಲಿ ಅಣಕು ಕಾಳಗದ ಸಮಯದಲ್ಲಿ ಮಲ್ಲಾಸುರನ ಶಿರಸ್ಸು ತರುವುದು ಇವರ ಪ್ರಧಾನ ಸೇವೆಗಳು. ಮೈಲಾರ ಲಿಂಗನ ಕ್ಷೇತ್ರಗಳಲ್ಲಿ ಕಂಚಾವೀರರುಗಳ ದೇವಾಲಯಗಳಿದ್ದು, ಕೆಂಚಪ್ಪನ ಗುಡಿ ಎಂದು ಕರೆಯುತ್ತಾರೆ.

ಮೈಲಾರದಲ್ಲಿ ಹರಿಜನರ ೧೪-೧೫ ಮನೆಗಳಿವೆ. ಅದರಲ್ಲಿ ಕಂಚಾವೀರರ ಎರಡು ಮನೆತನದವರು ಬ್ಯಾರೆ ಇದ್ದಾರೆ. ''ನಮ್ಮ ಅಣ್ಣ ತಮ್ಮಗಳಲ್ಲಿ ನಾವು ಪಾಳಿಯ ಪ್ರಕಾರ ಪವಾಡವನ್ನು ಮಾಡ್ತೀವಿ. ಈಗ್ಗೆ ಎರಡು ವರ್ಷ ನಾನೇ ಮಾಡೀನ್ರೀ ಈ ವರ್ಷ ಬ್ಯಾರೆಯವರಿಗೆ ಐತೆ. ಭಿಕ್ಷಾಟನೆಯಲ್ಲೂ ಸಹ ಇಂಥದೇ ಊರುಗಳಿಗೆ ಹೋಗಿ ಬರಬೇಕು ಎನ್ನುವ ವಾಡಿಕೆ ಅವರಲ್ಲಿದೆ.'' ಎಂದು ಮೈಲಾರದ ಶಿವಪುತ್ರಪ್ಪ ಹೇಳುತ್ತಾರೆ.

ಮೈಲಾರದಲ್ಲಿ ಒಂದು ವರ್ಷದೊಳಗೆ ಮೂರು ಸಾರಿ ಕಂಚಾವೀರ ಪವಾಡ ಮಾಡುವ ಯೋಜನೆ ಬರುತ್ತೆ. ಒಂದು ಭರತ ಹುಣ್ಣಿಮೆಗೆ, ಎರಡು ಅಗಿ ಹುಣ್ಣಿಮೆಗೆ ಮತ್ತು ಶೀಗೇ ಹುಣ್ಣಿಮೆ ಅಗಿ ೭ನೇ ದಿವಸಕ್ಕೆ ಪವಾಡ ಕಾರ್ಯಗಳು ನಡೆಯುತ್ತವೆ. ಇವರು ಪವಾಡ ಮಾಡುವ ಮುಂಚೆ ಹನ್ನೊಂದು ದಿವಸ ಒಂದೊತ್ತು ಇದ್ದು, ಒಟ್ಟು ಸಸ್ಯಹಾರ, ಹಾಲು, ಹಣ್ಣು, ತುಪ್ಪ, ಸಕ್ಕರೆ ಎಲ್ಲಾ ಸಿಹಿ ಊಟವನ್ನೇ ಸೇವಿಸುತ್ತಾರೆ. ಮಾಂಸ ಒಂದನ್ನು ಬಿಟ್ಟು ಬೇಕಾದ್ದನ್ನು ತಿನ್ನುತ್ತಾರೆ.

ಕಂಚಾವೀರರು ಅಥವಾ ಕಂಚೇವೀರರು ಮೈಲಾರಲಿಂಗನ ಭಕ್ತರಲ್ಲಿ ಒಂದು ವಿಶೇಷ ವರ್ಗದವರಾಗಿದ್ದಾರೆ. ಒಂದರ್ಥದಲ್ಲಿ ಇವರು ಗೊರವರೇ ಎನಿಸಿದರೂ ಗೊರವರು ಮತ್ತು ಕಂಚಾವೀರರಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ. ವೇಷಭೂಷಣಗಳು ಅಷ್ಟೇ ಅಲ್ಲದೆ ಸೇವೆಯ ವಿಷಯದಲ್ಲಿಯೂ ಕೂಡಾ ಅವರು ಇತರರಿಂದ ಭಿನ್ನರು.

ಎರಡೂ ಕ್ಷೇತ್ರಗಳ ಕಂಚಾವೀರರೂ, ಅವರು ಮಾಡುವ ಪವಾಡಗಳು, ಆಚರಿಸುವ ವಿಧಾನಗಳನ್ನು ತುಲನೆ ಮಾಡಿ ನೋಡಿದಾಗ ಭಿನ್ನತೆಗಳಿರುವುದನ್ನು ಕಾಣುತ್ತೇವೆ. ಮೀನಗೊಂದಿಯಲ್ಲಿ ಕಂಚಾವೀರರು ಕುರುಬರಾಗಿದ್ದರೆ, ಬಹುತೇಕ ಮೈಲಾರ ಕ್ಷೇತ್ರ ಜತೆಗೂಡಿ ಮಲ್ಲಯ್ಯನ ಎಲ್ಲಾ ಕ್ಷೇತ್ರಗಳಲ್ಲಿ ಕಂಚಾವೀರರು ಕೆಳವರ್ಗದ ಹರಿಜನರೇ ಆಗಿರುತ್ತಾರೆ. ಎರಡನೆಯದಾಗಿ ಮೀನಗೊಂದಿಯಲ್ಲಿ ಕಂಚಾವೀರನ ಶಸ್ತ್ರ ಪವಾಡ ಅಂದರೆ ಮೀನಗಂಡದಲ್ಲಿ ಶಸ್ತ್ರವನ್ನು ಹಾಕಿಕೊಂಡು ದಾರ ಎಳೆಯುವ ಈ ಪವಾಡ ಒಂದು ಬಿಟ್ಟರೆ, ಬೇರೆ ಯಾವ ಪವಾಡಗಳು ಕಾಣಸಿಗದು. ಮೈಲಾರದಲ್ಲಿ ಶಸ್ತ್ರ ಪವಾಡ, ಕೈಪವಾಡ, ಕಾಲು ಪವಾಡಗಳು ಮುಂತಾದ ಅನೇಕ ಪವಾಡಗಳನ್ನು ಮಾಡುತ್ತಾರೆ. ಮೈಲಾರದಲ್ಲಿ ವರ್ಷಕ್ಕೆ ಮೂರು ಬಾರಿ ಪವಾಡ ನಡೆಸುವ ಪರಿಪಾಠವಿದೆ. ಆದರೆ ಮೀನಗೊಂದಿಯಲ್ಲಿ ದಸರೆಯ ಬನ್ನಿಯಲ್ಲಿ ಮಾತ್ರ ಪವಾಡ ನಡೆದು ಬೇರೆ ದಿನಗಳಲ್ಲಿ ಪವಾಡದ ವಿಶೇಷಗಳು ಕಾಣಸಿಗದು.

## ೮.೧.೪. ಗೊರವಿಯರು (ದೇವ ನಾರಿಯರು) :

ಆದಿ ಮೀನಗೊಂದಿ ಸಿಂಹಾಸನದಲ್ಲಿ ಗಣಾಚಾರಿಗಳಿಗೆ ಕುದುರೆಕಾರರಿಗೆ, ಕಂಚಾವೀರರಿಗೆ, ವಗ್ಗಪ್ಪನವರಿಗೆ, ಬಸವಿಯರಿಗೆ ಮುಂತಾದವರಿಗೆ ದೀಕ್ಷೆ ಇರುವಂತೆ ಪ್ರತ್ಯೇಕವಾಗಿ ಗೊರವಿಯರನ್ನು ಬಿಡುವ ಪದ್ಧತಿ ಇಲ್ಲಿ ಕಾಣಸಿಗದು. ಆದರೆ ಅಪವಾದವೆಂಬಂತೆ ಈಗ್ಗೆ ಸುಮಾರು ೮-೧೦ ವರ್ಷಗಳ ಕೆಳಗೆ ಸಿಂಧವಾಳದ ದುರುಗಮ್ಮ ಎಂಬುವವರು ದೀಕ್ಷೆಯನ್ನು ಪಡೆದುಕೊಂಡಿದ್ದಾರೆ. ಈ ವಿಷಯ ಕ್ಷೇತ್ರದ ಬಹುಪಾಲು ಜನರಿಗೆ, ಗೊರವರಿಗೆ, ಗಣಾಚಾರಿಗಳಿಗೆ, ವಗ್ಗಪ್ಪನವರಿಗೆ ಸ್ವತಃ ದೀಕ್ಷೆ ನೀಡಿದ ಒಡೆಯರಿಗೂ ಮರೆತು ಹೋಗಿದೆ. ಸ್ವತಃ ದೀಕ್ಷೆ ನೀಡಿದ ಮಲ್ಲಪ್ಪಯ್ಯ ಒಡೆಯರನ್ನು ಈ ಕುರಿತಾಗಿ ಪ್ರಶ್ನಿಸಿದಾಗ ಅವರಿಂದ ಸಿಕ್ಕ ಉತ್ತರ '' ಈ ಕ್ಷೇತ್ರದಲ್ಲಿ ಗೊರವಮ್ಮನವರನ್ನು ನಾವು ಬಿಟ್ಟಿಲ್ಲ. ಕಾರಣ ಆ ಪದ್ಧತಿ ನಮ್ಮಲ್ಲಿ ಇಲ್ಲ. ಜೋಗತಿಯರೂ ಮುಂದೆ ಬಂದಿಲ್ಲವೆಂದು ಹೇಳಿರುವರು. ಆದರೆ ದುರುಗಮ್ಮ ದೀಕ್ಷೆ ಪಡೆದಿರುವುದಂತೂ ದಿಟ. ಇವರು ಸಿಂಧವಾಳದಲ್ಲಿ ಮಲ್ಲಯ್ಯನ ಚಿಕ್ಕ ಗುಡಿಯನ್ನು ಕಟ್ಟಿಸಿ, ಸೇವೆಯನ್ನು ಮಾಡುತ್ತಿರುವರು''.

ಮೂಲತಃ ಇವರು ನಾಯಕ ಜನಾಂಗದವರು. ಇವರ ಮನೆ ದೇವರು ಬಂದು, ಹುಲಿಗೆಮ್ಮ, ಗಂಡನವರು ಮಲ್ಲಯ್ಯನಿಗೆ ನಡೆದುಕೊಳ್ಳುತ್ತಿದ್ದರು. ಹೀಗಿರುವಾಗ ಇವರಿಗೆ ಮೊದಲು ಮಾಳಮ್ಮ ಮೈದುಂಬಲು ಶುರು ಮಾಡಿದಳು. ಮೊದಲಿಗೆ ನಮ್ಮ ಮನೆ ದೇವತೆ ಹುಲಿಗೆಮ್ಮ. ಆ ಯಮ್ಮನೇ ಇದ್ಲು ಈ ಗುಡಿಯಾಗ. ಮಾಳಮ್ಮ ನನ್ನ ಮೈಯಾಗ ಬಂದದ್ದು ಹುಲಿಗೆಮ್ಮಗ ಸರಿಯಾಗಲಿಲ್ಲ. ಒಂದು ಕಡಿಗೆ ಮಾಳಮ್ಮ ಮಯ್ಯಾಗ ಬರೋದು ಸ್ಯಾನ ಜೋರು ಮಾಡಿಬಿಟ್ಲು. ಅಂಗೆ ಹುಲಿಗೆಮ್ಮನೂ ನಂದು ತಳ ಅಂತ ಆಯಮ್ಮನೂ ಕಾಡಿಬಿಟ್ಲು. ಆಗ ಮಲ್ಲಯ್ಯನು ಹಿಂದಿನಿಂದ ಬಂದ. ಮೈಯಾಗ ಬಂದಾಗ ಜನರಿಗೆ ಕಷ್ಟ

ನಿಷ್ಠೂರ ಇದ್ದರೆ ಪರಿಹಾರ ಹೇಳ್ತಾನೆ. ಹಂಗೆ ಮಾಡ್ತಾ ಮಾಡ್ತಾ ಆತನದು ರೊವಸ್ಟು ಜಾಸ್ತಿ ಆದಂಗಾಯ್ತು. ಅಂಗೆ ಜನರು ಸುಖ ಕಂಡಂಗೆಲ್ಲ ನಿಂತರ ಬರೋರು ಜಾಸ್ತಿ ಮಾಡಿದ್ರು. ಹೀಗೆ ಭಕ್ತರು ಅವರು ಇವರು ಆಟೀಟು ಆಕಿ ಈ ಗುಡಿ ಕಟ್ಟಿಸಿದ್ರು. ಈ ರೀತಿಯಾಗಿ ದುರುಗಮ್ಮಳಿಗೆ ಸ್ವಾಮಿ ಮಲ್ಲಯ್ಯ ಭಾನುವಾರ ಬೆಳಿಗ್ಗೆ ಒಂಭತ್ತರ ನಂತರ, ಸಾಯಂಕಾಲ ಏಳರ ನಂತರ ಮಯ್ಯಾಗ ಬಂದು ಭಕ್ತರ ಸಮಸ್ಯೆಗಳನ್ನು ನಿವಾರಿಸುತ್ತಾ ಒಂದು ರೀತಿ ಪವಾಡಗಳೇ ನಡೆಯತೊಡಗಿದವು. ಇದೇ ರೀತಿಯಲ್ಲಿ ಕೆ.ಬಿ.ಬಡಿಗೇರರ ಮೈಯಲ್ಲಿ ಶ್ರೀ ಮೈಲಾರ ಲಿಂಗನು ಬಂದು ಭಕ್ತರ ಕಷ್ಟಗಳಿಗೆ ಸ್ಪಂಧಿಸುತ್ತಾ ಬಳ್ಳಾರಿ ಜಿಲ್ಲೆ ಹಾಗೂ ತಾಲೂಕಿನ ಎರ್ರೆಂಗಳಿ ಗ್ರಾಮದಲ್ಲಿ ಮೈಲಾರಲಿಂಗನ ಗುಡಿಗೆ ಕಾರಣವಾಗಿದೆ. ಅಲ್ಲದೇ ಇವರು ಮೂಲತಃ ಬಡಿಗೇರರು. ಆದರೂ ಒಡೆಯರ ಸ್ಥಾನದಲ್ಲಿ ನಿಂತು ಒಂಭತ್ತು ಜನರಿಗೆ ದೀಕ್ಷೆಯನ್ನು ನೀಡಿದ್ದಾರೆ. ಕಾರಣ ಇವರು ಮಲ್ಲಯ್ಯ ಮೈದುಂಬಿದಾಗ ಮೂಡುವ ಕಾರ್ಯಗಳಾಗಿವೆ. ಜನರು ಸಹ ಅಷ್ಟೇ ಶ್ರದ್ಧೆಯಿಂದ ನಡೆದುಕೊಳ್ಳುತ್ತಾರೆ. ಈ ಪುಟ್ಟ ಕ್ಷೇತ್ರ ಹಿರೇ ಮೈಲಾರದ ಅವತರಣಿಕೆಯಾಗಿದೆ.

### ದೀಕ್ಷೆಗೆ ಹಿನ್ನೆಲೆ :

"ಹಿಂಗ ಇದ್ದಾಗ ನನಿಗೆ ಬೇಸಿದ್ದಿಲ್ಲ. ರಗುತ ಹೋಗ್ತಿತ್ತು. ಏನು ಹಿಂಗ್ಯೆತೆ ಆಸ್ಪತ್ರೆಗೆ ಹೋಗಿ ಜಿಡೋಣ ಅಂತ ನಮ್ಮ ಯಜಮಾನರು ಅಂದ್ರು. ಅದಕ್ಕೆ ನಾನು ಆಸ್ಪತ್ರೆಗೆ ಹೋಗೋದು ಬ್ಯಾಡ ದೇವರು ಮೈಯಾಗ ಬಂದಾಗ ಕೇಳ್ರಿ ಅಂತ ನಾನು ನಮ್ಮೂರಿನವರ ಎದುರಿಗೆ ಅಂದೀನಿ. ಅದೇ ರೀತಿ ದೇವರು ಮೈಯಾಗ ಬಂದಾಗ ಕೇಳ್ಯಾರ. ಆಗ ದೇವರು ಹೇಳಿರೋದು ಹಿಂಗೆ; ಎಲ್ಲ ಕಂಡು ದೇವರು ಈಕೆಗೆ ಕಾಡ್ತಾನ ಸ್ವತಂತ್ರ ಕುದುರೆ ಮಾಡಿಕೊಟ್ರೆ ನಿಮಗೆ ಸುಖ ಐತೆ. ಇಲ್ಲಂದ್ರೆ ಮಗಳು ದೇಶಭ್ರಷ್ಟ ಆಗ್ತಾಳ. ಐದು ರುದ್ರಾಕ್ಷಿ, ನಾಲ್ಕು ಕವಡೆ ಸರ ಕೊರಳಿಲ್ಲಿ ಮರಿಬೇರು ಅಂತ ಹೇಳಿದ." ಎಂದು ದುರುಗಮ್ಮನವರು ಹೇಳುತ್ತಾರೆ. ಈ ರೀತಿ ಆದಾಗ ಇವರ ಯಜಮಾನರು ಬೆಟ್ಟಕ್ಕೆ ಬಂದು ಒಡೆಯರನ್ನು ಕಂಡು ನಮ್ಮ ಮನೆಯವರಿಗೆ ಗೊರವಮ್ಮನಾಗಿ ಬಿಡಬೇಕು ಅಂತ ಅನ್ಕಂಡೀವಿ ಅಂತ ಹೇಳಿದಾಗ ಮಲ್ಲಪ್ಪಯ್ಯ ಒಡೆಯರು ಇಲ್ಲ ಬಸವಿಯರಿಗೆ ಆದ್ರ ದೀಕ್ಷೆ ನೀಡಾಕ ಬರ್ತೈತೆ. ಈ ಯಮ್ಮಗ ಬರಾದಿಲ್ಲ ಅಂತ ಹೇಳಿ ಕಳಸಿದ್ರಂತೆ. ಹೀಗೆ ಕೆಲ ದಿನಗಳು ಕಳೆದಾಗ ಆಯಮ್ಮಗ ಇನ್ನೂ ದೇವರು ಕಾಡೋದು ಜಾಸ್ತಿ ಆಯ್ತು. ಮತ್ತೊಮ್ಮೆ ಗಿರಿಗೆ ಬಂದು ಒಡೆಯರಿಗೆ ವಿಷಯ ತಿಳಿಸಿದಾಗ ಒಡೆಯರು ಒಪ್ಪಿ ಮಲ್ಲಪ್ಪಯ್ಯ ಒಡೆಯರು, ಮಲ್ಲಿಕಾರ್ಜುನ ಸ್ವಾಮಿಗಳು, ಗೊರವರು, ವಗ್ಗಪ್ಪನವರು, ಸಿಂಧವಾಳದ ಗಣಾಚಾರಿಗಳು, ಭಕ್ತರೆಲ್ಲರೂ ಸಿಂಧವಾಳಕ್ಕೆ ಬಂದರು. ಒಡೆಯರು ಎಲ್ಲಾ ಗೊರವರಿಗೆ ದೀಕ್ಷೆ ನೀಡುವ ಪದ್ಧತಿಯಂತೆ ವಿಧಾನವನ್ನು ಅನುಸರಿಸಿ, ಕವಡಿ ಸರವನ್ನು ಕಟ್ಟಿ ದೀಕ್ಷೆಯನ್ನು ನೀಡಿ, ಶ್ರೀಮುಖವನ್ನು ಕೊಟ್ಟಿದ್ದಾರೆ. ಆಗ ದುರುಗಮ್ಮನವರು ಒಡೆಯರಿಗೆ, ಗಣಾಚಾರಿಗಳಿಗೆ ನೀಡಬೇಕಾದ ದಕ್ಷಿಣೆಯನ್ನು ನೀಡಿ ಗುರುಗಳನ್ನಾಗಿ ಸ್ವೀಕಾರ ಮಾಡಿದ್ದಾಳೆ. ಇವರಿಗೆ ಯಾವುದೇ ರೀತಿಯ ವಿಶೇಷ ಉಡುಪು ಇಲ್ಲ. ತಮ್ಮ ಊರಿನಲ್ಲಿಯೇ ಒಂದು ಪ್ರತ್ಯೇಕವಾದ ಮಲ್ಲಯ್ಯನ

ಪುಟ್ಟ ಗುಡಿಯನ್ನು ಕಟ್ಟಿಸಿಕೊಂಡಿರುವಳು., ಗುಡಿಯ ದ್ವಾರಬಾಗಿಲಿನ ಒಳಗಡೆ ಬಲಭಾಗದಲ್ಲಿ ಹುಲಿಗೆಮ್ಮ ದೇವಿಯ ಗದ್ದಿಗೆ ಇದೆ. ಎದುರಿಗೆ ಮಲ್ಲೇಶ್ವರ, ಮಾಳಮ್ಮನವರ ಕಲ್ಲಿನ ವಿಗ್ರಹವಿದೆ. ಕುದುರೆಯ ಉತ್ಸವ ಮೂರ್ತಿಗಳಿಲ್ಲ. ಅಂತಹವುಗಳನ್ನು ಮಾಡಿಸುವ ಉದ್ದೇಶವಿದೆಯಂತೆ. ಪ್ರತಿ ದಿನ ಸ್ವಾಮಿಯ ಪೂಜೆಯನ್ನು ಮಾಡುತ್ತಾಳೆ. ವಾರದ ದಿನದಂದು ವಿಶೇಷವಾಗಿ ಬೆಳಿಗ್ಗೆ ಜಳಕ ಆದನಂತರ ಗುಡಿಯನ್ನೆಲ್ಲಾ ತೊಳೆದು ಮುಂಜಾನೆ ಒಂಭತ್ತು ಗಂಟೆಯ ಪೂಜೆಯ ಹೊತ್ತಿಗೆ ಮಲ್ಲಯ್ಯ ಮೈದುಂಬುತ್ತಾನೆ. ಅದೇ ದಿನ ರಾತ್ರಿ ೭ರ ನಂತರ ಮತ್ತೊಮ್ಮೆ ಮಲ್ಲಯ್ಯ ಮೈದುಂಬುವನು. ಈ ರೀತಿ ದೇವರು ಮಯ್ಯಾಗ ಬಂದಾಗ ಅನೇಕ ಭಕ್ತರು ನೆರೆದಿದ್ದು, ತಮ್ಮ ಕಷ್ಟ ಕಾರ್ಪಣ್ಯ ಗಳಿಗೆ ಪರಿಹಾರಗಳನ್ನು ಕೇಳಿಕೊಳ್ಳುತ್ತಾರೆ. ಈ ದಿನ ವಿಶೇಷವಾಗಿ ಸುತ್ತಮುತ್ತಲಿನ ಊರಿನಿಂದಲೂ ಭಕ್ತರು ಗುಡಿಗೆ ಬರುತ್ತಾರೆ. ಅಮಾವಾಸೆಯ ದಿನ ಬೆಳಿಗ್ಗೆ ಪೂಜೆ ಮಾಡಿ, ದೇವರ ಗುಡ್ಡಕ್ಕೆ (ಮೀನಗೊಂದಿ) ಹೋಗುತ್ತಾಳೆ. ಇವರು ಊರಿನಲ್ಲಿ ಅನೇಕ ಪವಾಡಗಳನ್ನು ಮಾಡಿದ್ದಾರೆ ಕೂಡ. ಆದರೆ ಇವರು ಭಿಕ್ಷಾಟನೆಗೆ ಹೋಗಿಲ್ಲ.

ಅದೇ ರೀತಿ ನೆರಣಿಕೆ ಗ್ರಾಮದ ಕುರುಬರ ನೆರಣಿಕೆ ಮಾರ್ತಾಂಡಪ್ಪನ ಮಗ ದೊಡ್ಡ ಮಲ್ಲಯ್ಯನ ಹೆಂಡತಿಯಾದ ಮಲ್ಲಮ್ಮ ಸ್ವತಃ ಗೊರವಮ್ಮ ಅಂತ ಹೇಳಿಕೊಳ್ಳುತ್ತಿರುವಳು. ಇವರು ತಮ್ಮ ಯಜಮಾನರು ತೀರಿಕೊಂಡ ಮ್ಯಾಲೆ ಈ ರೀತಿ ಗೊರವಮ್ಮ ಎಂದು ಹೇಳಿಕೊಳ್ಳುತ್ತಿರುವಳು. ಮನೆಯ ಸಂಸಾರದಲ್ಲಿ ಅನೇಕ ತೊಡಕುಗಳು ಉಂಟಾಗಿ ಮನೆ ಬಿಟ್ಟು ಹೊರಬಂದು ಗೊರವಮ್ಮಳಾಗಿ ಉಪಜೀವನಕ್ಕೆ ಇವರು ಭಿಕ್ಷಾಟನೆಯನ್ನು ಅವಲಂಬಿಸಿರುವರು. ಉಡುಪಿನಲ್ಲಿ ಇವರಿಗೆ ಅಂತಹ ಪ್ರತ್ಯೇಕತೆ ಏನೂ ಇಲ್ಲ. ತ್ರಿಶೂಲ, ಬಂಢಾರಚೀಲ ಧರಿಸಿರುತ್ತಾಳೆ. ಗಿರಿಗೆ ಅಮಾವಾಸೆಗೋ ಇಲ್ಲಿ ವಾರಕ್ಕೊಮ್ಮೆ ಬಂದಾಗ ಗೊರವಪ್ಪನವರ ಜೊತೆಗೂಡಿ ಮಲ್ಲಯ್ಯನ ಹಾಡುಗಳನ್ನು ಹಾಡುವ ಮೂಲಕ ಸ್ವಾಮಿಯ ಸೇವೆಯನ್ನು ಮಾಡುತ್ತಾರೆ. ನಿಮಗೆ ಯಾವ ಒಡೆಯರು ದೀಕ್ಷೆಯನ್ನು ನೀಡಿದ್ದಾರೆ ಅಂತ ಕೇಳಿದಾಗ; '' ಇಲ್ಲ ನಮ್ಮ ಯಜಮಾನನ ಚ್ಯಾಕರಿ ಮಾಡಿ ಗುರುಬೋಧೆ ತಗಂಡಂಗೆ'' ಅಂತ ಹೇಳಿರುವರು. ಇದು ಪೂರ್ತಿ ಗುರುಬೋಧೆ ತಾನೆ? ಅಂತ ಪ್ರಶ್ನಿಸಿದಾಗ ''ಇಲ್ಲಿ ಗುರುಬೋಧೆ ಅಂದ್ರೆ ಆತನೇ ದೀಕ್ಷೆ ಅಂದ್ರೂ ಆತನೇ. ನಮ್ಮ ಗುರುಕ್ಕಿನ ಹೆಚ್ಚಿನ ದೇವರು ಇಲ್ಲ'' ಅಂತ ಹೇಳಿರುವರು. ಇವರು ಹೇಳುವ ರೀತಿಯನ್ನು ನೋಡಿದಾಗ ದೀಕ್ಷೆಯ ಬಗ್ಗೆ ಸಂಶಯ ಬಂದು ಮಲ್ಲಪ್ಪ ಒಡೆಯರನ್ನು ಪ್ರಶ್ನಿಸಿದಾಗ ದೀಕ್ಷೆಯನ್ನು ನೀಡಿಲ್ಲ ಎನ್ನುವ ಉತ್ತರ ಬಂತು. ಆದರೆ ಇವರು ತಮ್ಮ ಯಜಮಾನರು ( ಒಗ್ಗಪ್ಪ) ತೀರಿಕೊಂಡ ಮೇಲೆ ತಮ್ಮ ಹಿರಿಯರ ಸೇವೆಯನ್ನು ನೆನೆದು ಕ್ಷೇತ್ರಕ್ಕೆ ತನ್ನನ್ನು ತಾನು ಅರ್ಪಿಸಿಕೊಂಡಿದ್ದಾಳೆ. ''ನನಿಗೆ ಬಾನ (ಅನ್ನ) ಇಡೋರು ಯಾರು ಇಲ್ಲ. ಬಟ್ಟೆ ತರೋರು ಯಾರು ಇಲ್ಲ ಅದಕ್ಕೆ ನಾನು ಗೊರವಮ್ಮ ಆಗೀನಿ'' ಎನ್ನುವ ಮಾತುಗಳು ಬಡತನಕ್ಕೆ ಸಾಕ್ಷಿಯಾಗಿ ಗೊರವಮ್ಮಳೆಂದು ತನ್ನಿಷ್ಟಕ್ಕೆ ತಾನೇ ಘೋಷಿಸಿಕೊಂಡಿರುವಳು. ಇವರಿಬ್ಬರನ್ನು ಬಿಟ್ಟರೆ ಈ ಕ್ಷೇತ್ರದಲ್ಲಿ ಗೊರವಮ್ಮನವರು ಬಹುಶಃ ಇದ್ದಂತಿಲ್ಲ.

ಹಿರೇಮೈಲಾರದಲ್ಲಿ ಗೊರವಿಯರು ಹೆಚ್ಚಾಗಿ ಕಂಡುಬರುತ್ತಾರೆ. ಇವರು ಒಡೆಯರಿಂದ ದೀಕ್ಷೆಯನ್ನು ಪಡೆದು, ಹೆಚ್ಚಾಗಿ ಕಂಬಳಿ ಕುಲಾವಿ ಧರಿಸಿರುವರು. ಇನ್ನುಳಿದವರು ಗೊರವರ ರೀತಿಯಲ್ಲಿಯೇ ಸಲಕರಣೆಗಳನ್ನು ಧರಿಸಿರುವರು. ಆದರೆ ಚೌರ ಮತ್ತು ಎಲಿಚೆಂಚಿಯವರು ಹಸಿರು ಸೀರೆ, ಹಸಿರು ಕುಪ್ಪಸವನ್ನು ಧರಿಸಿ, ಹಸಿರು ಬಳೆಗಳನ್ನು ತೊಟ್ಟು, ತಮ್ಮ ಸೇವೆಯ ಮುಖ್ಯ ಸಲಕರಣೆಗಳಾದ ಎಲಿಚೆಂಚಿ ಮತ್ತು ಚೌರಗಳನ್ನು ಹಿಡಿದು ಸ್ವಾಮಿಗೆ ಸೇವೆಯನ್ನು ಮಾಡುವರು. ಗೊರವರಂತೆ ಗೊರವಿಯರು ಭಿಕ್ಷಾಟನೆಗೆ ಹೋಗುತ್ತಾರೆ. ''ನಮ್ಮ ಬಳಿ ಚೌರಿ ಐತೆ, ದೋಣಿ ಪೆಟ್ಟಿಗೆ ಐತೆ, ಗಂಟೆ ಐತೆ, ಊರು ಆಡ್ತೀವಿ. ಆಯಿತವಾರ ಈ ರೀತಿ ಚೌರಿ ಹಕ್ಕಂಡು ಮಾಮೂಲು ಉಡುಪಿನ ಮ್ಯಾಲೆ ಬರ್ತೀವಿ. ಹುಣ್ಣಿಮೆಗೆ ಮಾತ್ರ ಅಂಗಿ ಗಂಟೆ ಆಕ್ಯಂಡು ಊರು ಆಡ್ತೀವಿ'' ಎಂದು ಹೊಳಲಿನ ಸಿದ್ದಮ್ಮ ಹೇಳುತ್ತಾರೆ.

ಈ ರೀತಿಯಾಗಿ ಹಿರೇ ಮೈಲಾರದಲ್ಲಿ ಭಿಕ್ಷಾಟನೆ ಸರ್ವ ಸಾಮಾನ್ಯವಾಗಿದೆ. ಆದರೆ ಇದಕ್ಕೆ ಅಪವಾದವೆಂಬಂತೆ ಕಾಂತೆಬೆನ್ನೂರಿನ ಹರಿಜನ ಚೌರಿ ಗೊರವಮ್ಮಳಾದ ಬಸಮ್ಮ ಇವರು ದೀಕ್ಷೆಯನ್ನು ವಂಶಪರಂಪಾರಗತವಾಗಿ ಪಡೆದು, ಭಿಕ್ಷಾಟನೆಯನ್ನು ಮಾಡಧೇ ಜೀವನಕ್ಕೆ ವ್ಯವಸಾಯವನ್ನು ಅವಲಂಬಿಸಿದ್ದಾರೆ. ಕಾರಣ ಕೆಳವರ್ಗದವರಾದ ಇವರು ಭಿಕ್ಷಾಟನೆಗಿಂತ ಸ್ವಾಮಿಯ ಸೇವೆಯ ಪ್ರತೀಕದಂತೆ ಕೃಷಿ ಕಾಯಕದಲ್ಲಿ ತೊಡಗಿ ಬದುಕನ್ನು ಕಂಡುಕೊಂಡಿದ್ದಾರೆ. ಈ ರೀತಿ ಇರುವವರನ್ನು ನಾವು ಬೇರೆ ಬೇರೆ ಜಾತಿಯ ಗೊರವಿಯರಲ್ಲೂ ಕಾಣಬಹುದಾಗಿದೆ.

ಗೊರವರಂತೆ ಗೊರವಿಯರನ್ನು ಬಿಡುವುದು ಮೈಲಾರ ಕ್ಷೇತ್ರದಲ್ಲಿ ಸಾಮಾನ್ಯ ಹಾಗೂ ಸಹಜವಾಗಿದೆ ಎಂದು ಹೇಳಬಹುದು. ಇದರಲ್ಲಿ ಅಂತಹ ವಿಶೇಷವೇನೂ ಕಾಣದು. ಆದರೆ ಮೀನಗೊಂದಿ ಸಿಂಹಾಸನದ ಪರಿಧಿಯಲ್ಲಿ ಗೊರವಿಯರು ಎನ್ನುವ ಯಾವುದೇ ಪ್ರಕಾರವಿಲ್ಲ. ಅದಕ್ಕೆ ಅಪವಾದವೆಂಬಂತೆ ಸಿಂಧವಾಳದ ದುರುಗಮ್ಮ ಹಾಗೂ ತನ್ನ ಜೀವನಾಧಾರಕ್ಕೆ ಭಿಕ್ಷಾಟನೆಯನ್ನು ಅವಲಂಬಿಸಿದ ನೆರಣಿಕೆಯ ಮಲ್ಲಮ್ಮ ಇವರುಗಳು ಇದ್ದರೂ ತಮ್ಮದೇ ಆದ ಒತ್ತಡಗಳಲ್ಲಿ ದೀಕ್ಷೆಯನ್ನು ಪಡೆದವರಾಗಿದ್ದಾರೆ. ಆದರೆ ಗೊರವಮ್ಮನವರನ್ನು ಬಿಡುವುದು ಅಪರಾಧ ಎಂಬ ಗುಳ್ಯಂನಲ್ಲಿರುವ ಕಪಿಲಮುನಿ ಒಡೆಯರು ಅಭಿಪ್ರಾಯ ಪಟ್ಟಿರುವರು.

## ೮.೨. ಕಲ್ಯಾಣೋತ್ಸವ :

ಮೀನಗೊಂದಿ ಕ್ಷೇತ್ರದಲ್ಲಿ ದಸರಾ ಅಮಾವಾಸೆಯಾದ ಐದನೇ ದಿನ ಅಂದರೆ ಆಶ್ವಿನಿ ಶುದ್ಧ ಪಂಚಮಿಯ ದಿನದಂದು ಶ್ರೀ ಮಾಳಾ ಮಲ್ಲೇಶ್ವರರಿಗೆ ಪಂಚಾಮೃತ ಮತ್ತು ರುದ್ರಾಭಿಷೇಕ ಮಾಡಲಾಗುವುದು. ಶ್ರೀ ಮಾಳಾ ಮಲ್ಲೇಶ್ವರರ ಉತ್ಸವಗಳು ನೆರಣಿಕೆ ಗ್ರಾಮದಿಂದ ಬಂದು ತಲುಪಿದಾಗ

ರಾತ್ರಿ ಸುಮಾರು ೮ರಿಂದ ೯ಗಂಟೆಯ ವೇಳೆಗೆ ಕಂಚಾವೀರರು, ಪೂಜಾರಿಗಳು, ಮದ್ದಲಿ ಗೊರವಯ್ಯನವರು, ಎಳ್ಳಾರ್ಥಿ ಗೊರವಯ್ಯನವರು ಹಾಗೂ ಬಲ್ಲೂರಿನ ಒಡೆಯರು ಬಂದು ಸೇರುತ್ತಾರೆ. ಆಗ ಬ್ರಾಹ್ಮಣ ಅರ್ಚಕರು ಶಾಸ್ತ್ರೋಕ್ತವಾಗಿ ನಿಶ್ಚಿತಾರ್ಥ ಕಾರ್ಯಕ್ರಮವನ್ನು ನೆರವೇರಿಸುವರು. ಇದರಲ್ಲಿ ಮುಖ್ಯವಾಗಿ ಒಡೆಯರು ಮಲ್ಲೇಶ್ವರನ ಪರವಾಗಿ, ಮಾಳಮ್ಮನ ಪರವಾಗಿ ಬ್ರಾಹ್ಮಣ ಅರ್ಚಕರು ಇರುವರು. ಶಾಸ್ತ್ರೋಕ್ತ ಮಂತ್ರಗಳ ಪಠಣೆಯೊಂದಿಗೆ ಈ ಐದು ಜನರಿಗೆ ಕಂಕಣಧಾರಣೆಯಾಗುವುದು. ವಿಜಯ ದಶಮಿಯ ದಿನದಂದು ಶ್ರೀ ಮಾಳಾ-ಮಲ್ಲೇಶ್ವರರಿಗೆ ಕಲ್ಯಾಣೋತ್ಸವದ ಕಾರ್ಯಕ್ರಮವಿರುತ್ತದೆ. ಆ ದಿನ ರಾತ್ರಿ ಸುಮಾರು ೧೨ರ ಹೊತ್ತಿಗೆ ಪರೋಹಿತರು ಶಿವಸಾನ ಗದ್ದುಗೆಗೆ ಬಂದು ವಿಘ್ನೇಶ್ವರನಿಗೆ ಪೂಜೆಯನ್ನು ಸಲ್ಲಿಸಿ, ಗಿರಿಯ ಮೇಲೆ ಸಾಗುತ್ತಾರೆ. ಆ ವೇಳೆಗೆ ಕಂಚಾವೀರರು, ಅರ್ಚಕರು, ಮದ್ದಲಿ ಗೊರವರು, ಎಳ್ಳಾರ್ಥಿ ಗೊರವಯ್ಯನವರು, ತಾಳಿಯ ಸಂದರ್ಭಕ್ಕೆ ಹಾಜರಿರುತ್ತಾರೆ. ಈ ಎಲ್ಲರಿಗೂ ಪುರೋಹಿತರು ಕಂಕಣವನ್ನು ಕಟ್ಟುತ್ತಾರೆ. ಕಂಕಣಧಾರಣೆಯಾದ ನಂತರ ಶಾಸ್ತ್ರೋಕ್ತವಾಗಿ ಮಹಾ ವೈಭವೋಪೇತವಾಗಿ ಪುರೋಹಿತರಿಂದ ಕಲ್ಯಾಣೋತ್ಸವ ಕಾರ್ಯಕ್ರಮ ಜರುಗುತ್ತದೆ.

ಮೈಲಾರದ ಒಡೆಯರ ಬಳಗದವರು ಮೀನಗೊಂದಿಯಲ್ಲಿ ವಿಜಯದಶಮಿಯ ದಿನದಂದು ನಡೆಯುವ ಬನ್ನಿಗೆ ಬರುವ ಸಾಹಸ ಮಾಡುತ್ತಿಲ್ಲ. ಕಾರಣ ಮೀನಗೊಂದಿಯಲ್ಲಿ ನಡೆಯುವ ಬಡಿಗೆ ಆಟದ ದೃಶ್ಯಗಳು ಮನಸ್ಸಿಗೆ ಬಹಳ ಘೋರವನ್ನು ತಂದುಕೊಡುತ್ತಿವೆ. ಬಡಿಗೆ ಆಟ, ಆರ್ಭಟ, ಹೊಡೆದಾಟ, ರಕ್ತ, ಸಾವು ಇವೆಲ್ಲವನ್ನು ನೋಡಿ ನಮಗೆ ಅಲ್ಲಿಗೆ ಬರಲು ಹಿಂಜರಿಕೆ ಎಂದು ಜಯಚಂದ್ರ ಒಡೆಯರ ಪುತ್ರ ಶ್ರೀ ಗುರು ವೆಂಕಪ್ಪಯ್ಯ ಒಡೆಯರು ತಿಳಿಸಿರುವರು.

ಮೈಲಾರದಲ್ಲಿ ಮೈಲಾರಲಿಂಗಪ್ಪ ಗಂಗಿ ಮಾಳಮ್ಮನವರ ಲಗ್ನ ಆಗಿ ಹುಣ್ಣಿಮೆಯಲ್ಲಿ ಏರ್ಪಡುತ್ತದೆ. ಸಾಮಾನ್ಯ ಮಾನವರ ಲಗ್ನದಲ್ಲಿ ನಡೆಯುವಂತೆ ಕನ್ಯಾ ನಿಶ್ಚಯದಿಂದ ಪ್ರಾರಂಭಿಸಿ ಎಲ್ಲಾ ಕಾರ್ಯಕ್ರಮಗಳು ನೆರವೇರುತ್ತವೆ. ಈ ಕಾರ್ಯಕ್ರಮಕ್ಕಾಗಿ ಲಗ್ನ ಮನೆಯಿರುವುದನ್ನು ಕಾಣಬಹುದು. ಲಗ್ನದಲ್ಲಿ ಬ್ರಾಹ್ಮಣ ಅರ್ಚಕರು ಗಂಗಿಮಾಳಮ್ಮನ ಪರವಾಗಿಯೂ, ಒಡೆಯರು ಗಂಡಿನ ಪರವಾಗಿಯೂ ನಿಂತು ಮದುವೆ ಕಾರ್ಯವನ್ನು ನೆರವೇರಿಸುತ್ತಾರೆ (ಡಾ. ಎಂ.ಬಿ.ನೇಗಿನಹಾಳ; ೧೯೯೨ : ೧೧೩).

ಎರಡೂ ಕ್ಷೇತ್ರಗಳಲ್ಲಿ ಕಲ್ಯಾಣೋತ್ಸವ ನಡೆಯುವ ಬಗೆ ಒಂದೇ ರೀತಿಯಾಗಿದ್ದರೂ ದಿನಗಳಲ್ಲಿ ವ್ಯತ್ಯಾಸವಿರುವುದನ್ನು ಕಾಣುತ್ತೇವೆ. ಮೈಲಾರದಲ್ಲಿ ಆಗಿ ಹುಣ್ಣಿಮೆಯಲ್ಲಿ ಲಗ್ನ ನಡೆದರೆ, ಮೀನಗೊಂದಿ ಯಲ್ಲಿ ವಿಜಯದಶಮಿ ದಿನದಂದು ಲಗ್ನ ಕಾರ್ಯ ಜರುಗುವುದು ವಿಶೇಷವಾಗಿದೆ. ಆಗ ಹುಣ್ಣಿಮೆಯ ದಿನದಂದು ತೆಕ್ಕಲಕೋಟೆಯ ಬಳಿ ಇರುವ ಶ್ರೀ ವರವಿನ ಮಲ್ಲಪ್ಪನ ಗುಡಿಯಲ್ಲಿಯೂ ಲಗ್ನದ ಕಾರ್ಯ ನೆರವೇರುವುದು.

## ೮.೩. ಬಡಿಗೆ ಆಟ :

ಮೀನಗೊಂದಿಯಲ್ಲಿ ನಡೆಯುವ ಈ ಆಚರಣೆಯು ಭಾರತದಲ್ಲಿಯೇ ಒಂದು ವಿಶೇಷ ರೀತಿಯ ಆಚರಣೆ ಎಂದರೆ ತಪ್ಪಾಗಲಾರದು. ಮಣಿ-ಮಲ್ಲಾಸುರರನ್ನು ಸಂಹರಿಸುವ ಶಿವ ಆತ, ವಿಜಯದ ಸಂಕೇತವಾಗಿ ಹಾಗೂ ಅಂದು ಗಂಗಿ ಮಾಳಮ್ಮನ ಜೊತೆಗೆ ಮಲ್ಲಯ್ಯನ ಮದುವೆ ಮಾಡುವ ಉತ್ಸವದ ಸಲುವಾಗಿ ಈ ಮೆರವಣಿಗೆಯಲ್ಲಿ ಕೋಲು ಹಿಡಿದು ಕುಣಿಯುವುದು ಒಂದು ವಿಶೇಷ. ಇದನ್ನು ಹಣಸಿನ ಬಡಿಗೆ ಎಂದು ಕರೆಯುತ್ತಾರೆ. ಈ ವಿಜಯದಶಮಿಯ ದಿನದಂದು ಸುತ್ತಮುತ್ತಲಿನ ಸಾವಿರಾರು ಮಂದಿ ಭಕ್ತರು ಹಣಸಿನ ಬಡಿಗೆಯನ್ನು ಕೈಯಲ್ಲಿ ಹಿಡಿದು ಈ ಜಾತ್ರೆಗೆ ಬರುತ್ತಾರೆ. ಇದರ ಸಂಕೇತ ಮಲ್ಲಯ್ಯನು ಮಣಿ-ಮಲ್ಲಾಸುರರನ್ನು ಸಂಹರಿಸಲು ಸೈನ್ಯವನ್ನು ಕಟ್ಟಿಕೊಂಡು ಹೋಗಿ ವಿಜಯವಂತರಾಗಿ ಬಂದದ್ದು. ಮುಖ್ಯವಾಗಿ ಈ ಬಡಿಗೆಯನ್ನೇ ಹಿಡಿದ ಜನರು ತಮ್ಮ ಅನೇಕ ರೀತಿಯ ಕಸರತ್ತುಗಳನ್ನು ತೋರಿಸುತ್ತ ಬಡಿಗೆ ಆಟ ಆಡುತ್ತಾರೆ. ಈ ಹಿಂದೆ ವಿಜಯದ ಸಂಕೇತವಾಗಿ ಮತ್ತು ಆಯುಧ ಪೂಜೆಯ ಸಂಕೇತವಾಗಿ ಕತ್ತಿಗಳನ್ನು, ಕೊಡಲಿಗಳನ್ನು ಹಿಡಿದುಕೊಂಡು ಹೋಗುತ್ತಿದ್ದುದು ಉಂಟು. ಅಲ್ಲಿ ಜನರು ಶಾಂತಿಯಿಂದ ಉತ್ಸವವನ್ನು ಆಚರಿಸುತ್ತಾ ಕುಣಿದಾಡುತ್ತಿದ್ದರು. ಆಗ ಅದು ವಿಚಿತ್ರವಾದ ಸ್ವರೂಪವನ್ನು ಪಡೆದುಕೊಂಡು, ಕಾಳಗದ ರೀತಿಯಲ್ಲಿ ಮಾರ್ಪಾಡಾಗಿದೆ. ಈ ಬಡಿಗೆ ಆಟದಲ್ಲಿ ಪ್ರತಿ ವರ್ಷ ಏನಿಲ್ಲವೆಂದರೂ ಕನಿಷ್ಠ ಪಕ್ಷ ಮುರು-ನಾಲ್ಕು ಹೆಣಗಳು ಉರುಳುತ್ತವೆ. ಬಹಳವಾಗಿ ಮಲ್ಲಯ್ಯ ಮತ್ತು ಗಂಗಿ ಮಾಳಮ್ಮರಿಗೆ ರಾತ್ರಿ ೧೨-೩೫ರ ಸುಮಾರಿನಲ್ಲಿ ಮದುವೆ ಕಾರ್ಯ ನೆವವೇರಿಸಿ, ಮೂರ್ತಿಗಳು ಸಿಂಹಾಸನ ಕಟ್ಟೆಗೆ ಬರುವ ಹಾದಿಯಲ್ಲಿ ನಾ ಮುಂದು, ತಾ ಮುಂದು ಎಂದು ಬಡಿಗೆಗಳ ನೂಕು ನುಗ್ಗಲಿನಲ್ಲಿ ಹೆಣಗಳು ಉರುಳುತ್ತವೆ. ಈ ಬಾರಿ ಇದಕ್ಕೆ ಅಪವಾದವೆಂಬಂತೆ ರಾತ್ರಿ ೧೦-೩೫ರ ಸುಮಾರಿಗೆ ಎರಡು ಹೆಣಗಳು ಬಿದ್ದವು. ಇನ್ನು ಮದುವೆ ಕಾರ್ಯ ನೆರವೇರಿಸಲು ಎರಡು ತಾಸು ಬಾಕಿಯಿತ್ತು. ಈ ಬಡಿಗೆ ಆಟದ ಬಗ್ಗೆ ಎಳ್ಳಾರ್ಥಿ ಗ್ರಾಮದ ಹಿರಿಯರಾದ ಶ್ರೀ ಗುಂಡೂರು ಶೇಷಗಿರೆಪ್ಪ ಇವರು ಕೇಳಿದಾಗ ಈ ತೆರನಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ; ''ಅದು ಮೂಲತಃ ಉತ್ಸವ. ಅದರ ಹೆಸರಿನಲ್ಲಿ ಜನರು ಅಜ್ಞಾನದಿಂದ ಬಡಿದಾಡಿಕೊಂಡು ಸಾಯುತ್ತಿದ್ದಾರೆ. ಹಿಂದೆ ಹೊಡೆದಾಟ ಎನ್ನುವುದು ಇದ್ದಿಲ್ಲ. ಬರೀ ಕೋಲು ಹಿಡಿದು ಓಂ ನಮಃ ಶಿವಾಯ ಎಂದು ಹೇಳುತ್ತಾ ಉತ್ಸವ ಮಾಡುತ್ತಿದ್ದರು. ಈಗ ಅದು ಬೇರೆ ರೀತಿಯೇ ಆಗಿದೆ. ವೈಯಕ್ತಿಕ ದ್ವೇಷಗಳು ಹಾಗೂ ಕೆಲವು ಹಳ್ಳಿಗಳಿಗೆ ಮಲ್ಲಯ್ಯನ ಆಚರಣೆ ಸಂಬಂಧವಾಗಿ ನೀಡದಿರುವ ಅಧಿಕಾರವನ್ನು ನೆಪಮಾಡಿಕೊಂಡು ಹೊಡೆದಾಟಗಳು ನಡೆಯುತ್ತವೆ. ಮಲ್ಲಯ್ಯ ಮತ್ತು ಮಾಳಮ್ಮ ದೇವರ ಉತ್ಸವ ಮೂರ್ತಿಗಳನ್ನು ಈ ಬಡಿಗೆ ಆಟದ ಕಸರತ್ತಿನ ನಡುವೆ ಒಯ್ಯುತ್ತಾರೆ. ಇಲಾಲುಗಳಿಗೆ ಬೆಂಕಿ ಹಚ್ಚಿಕೊಂಡು ಮನುಷ್ಯರ ಮೇಲೆ ತೂರುವುದು, ಕಲ್ಲು ತೂರುವುದು ಇಂತಹ ವಿಚ್ಛಿದ್ರಕಾರಕ ಆಚರಣೆಗಳು ನಡೆಯುತ್ತವೆ. ಇವೆಲ್ಲವೂ ನಡೆಯುವುದು ಮಧ್ಯರಾತ್ರಿಯಲ್ಲಿ. ಸಾವಿಗೀಡಾದವರನ್ನು ಅವನು ಪಾಪ ಮಾಡಿದವನು ಎಂದು ಜನರು ನಂಬುತ್ತಾರೆ.

ಈ ವಿಚಿತ್ರ ರೀತಿಯ ಆಚರಣೆ ಮೈಲಾರನಿಗೆ ಸಂಬಂಧಿಸಿದ ಯಾವ ಕ್ಷೇತ್ರದಲ್ಲಿಯೂ ನಡೆಯುವುದಿಲ್ಲ. ಇಲ್ಲಿ ಅದು ತುಂಬಾ ವಿಶೇಷವಾದುದಾಗಿದೆ. ಬಡಿಗೆ ಆಟ ಯುದ್ಧದ ರೀತಿಯಂತೆ ನಡೆದು ನೋಡುಗರನ್ನು ಬೆಚ್ಚಿ ಬೀಳಿಸುತ್ತದೆ. ಹಿರೇಮೈಲಾರದಲ್ಲಿ ಇದರ ಇನ್ನೊಂದು ರೂಪದಂತೆ 'ಕಡುಬಿನ ಕಾಳಗ' ಇರುವುದನ್ನು ಕಾಣಬಹುದಾಗಿದೆ.

**ಕಡುಬಿನ ಕಾಳಗ :**

ಹಿರೇ ಮೈಲಾರದಲ್ಲಿ ರಥಸಪ್ತಮಿಯಂದು ಸಂಜೆ ಕಡುಬಿನ ಕಾಳಗ ನಡೆಯುತ್ತದೆ. ಸಜ್ಜೆಯ ಹಿಟ್ಟು ಮತ್ತು ಬೆಲ್ಲಗಳಿಂದ ತಯಾರಾದ ಕಡುಬುಗಳನ್ನು ದೇವರಿಗೆ ನೈವೇದ್ಯ ಮಾಡಿದ ಮೇಲೆ ಆ ಕಡುಬುಗಳನ್ನು ತೆಗೆದುಕೊಂಡು ಪರಸ್ಪರ ಹೊಡೆದಾಡುತ್ತಾರೆ. ಈ ಕಡುಬಿನ ಕಾಳಗದ ಪದ್ಧತಿ ಹಿಂದಿನಿಂದಲೂ ನಡೆದು ಬಂದುದಾಗಿದೆ. ವಾಸ್ತವವಾಗಿ ಕಡುಬು ಎನ್ನುವುದು 'ಕಡುಪು' ಪದದಿಂದ ಬಂದದ್ದಾಗಿರಬಹುದು. 'ಕಡಪು' ಎಂದರೆ ಶೌರ್ಯ, ಸಾಹಸ, ಸೊಕ್ಕು, ಉತ್ಸಾಹ ಇತ್ಯಾದಿ ಅರ್ಥಗಳಿವೆ. ಪರಶಿವನು ಅಸುರರ ವಧೆಗೆ ಹೊರಡುವ ಮುನ್ನ ೭ ಕೋಟಿ ಗಣಗಳು ಉತ್ಸಾಹದಿಂದ ಸೊಕ್ಕೇರಿ ತಂತಮ್ಮಲ್ಲೇ ಘರ್ಷಣೆಗೆ ಇಳಿದ ಸಂದರ್ಭ ಇದಾಗಿದ್ದು, ಗೊರವರು ಈ ಆಚರಣೆಯನ್ನು ಅನುಸರಿಸಿಕೊಂಡು ಬಂದಿರುವುದಾಗಿದೆ. ಈ ಹಿಂದೆ ಕೈಯಲ್ಲಿ ದೊಣ್ಣೆ, ಬಡಿಗೆಗಳನ್ನು ಹಿಡಿದು ಅಣಕ ಯುದ್ಧ ಮಾಡುತ್ತ (ಬಡಿಗೆ ಆಟ) ಸಾಗುತ್ತಿದ್ದರು. ಆದರೆ ಅಣಕ ಯುದ್ಧ ಹಲವಾರು ಸಂದರ್ಭಗಳಲ್ಲಿ ನಿಜ ಯುದ್ಧವೇ ಆಗಿ ಪರಿಣಮಿಸತೊಡಗಿತು. ಹಾಗಾಗಿ ಆ ಕ್ರಮ ವರ್ಜಿತವಾಗಿ ಈ ಕಡುಬಿನ ಕಾಳಗ ಜಾರಿಯಲ್ಲಿದೆ (ಡಾ. ಎಂ.ಬಿ.ನೇಗಿನಹಾಳ ; ೧೯೯೨ :೧೧೩).

''ಕಡುಬಿನ ಕಾಳಗ ಅಂದ್ರೆ ಹೆದ್ರಿಕೆಂಬಂತ ರಣರಂಗ ಅಲ್ಲ. ಅದೇನಂದ್ರೆ ಹಿಡಿಕೆಯಷ್ಟು ಕಡುಬು ಮಾಡ್ತಾರೆ, ಮಾಡಿದ ಮ್ಯಾಕ ಹೆಣ್ಣು ಮಕ್ಕಳು, ಗಣಮಕ್ಕಳು, ಸೋದರ ಮಾವನವ್ರು, ಸೊಸ್ತು ಆಗಾರು, ಬೀಗ್ರು ಆಗಾರು ಅವರವರೇ ಬಡಿದಾಡಿಕಂತಾರೆ ಅಷ್ಟೇ. ಮೀನಗೊಂದಿಯಲ್ಲಿರುವಂತೆ ಬಡಿಗೆಯ ರೌದ್ರವತೆ ಇಲ್ಲ. ಇಲ್ಲಿ ಬಡಿಗೆ ಆಟದ ದಿನ ರಾತ್ರಿ ಜನ ನೋಡಾಕ ಬಂದೋರು ಆ ಆರ್ಭಟಕ್ಕೆ ಹೆದರಿ ದೂರ ಗುಂಡುಗಳಲ್ಲಿ ಸೇರಿಕೊಂಡು ಬಿಡುತ್ತಾರೆ. ಈತನಿಗೆ ಧೈರ್ಯ (ಮೀನಗೊಂದಿ ಮಲ್ಲಯ್ಯನಿಗೆ) ಸಿಗುತ್ತದೆ. ಆದಕ್ಕೆ ಈ ಸ್ಥಾನಬಿಟ್ಟು ಎಲ್ಲೂ ಹೋಗಿಲ್ಲ. ಮೈಲಾರದಲ್ಲಿರುವಾತಗ ಧೈರ್ಯ ಸಾಲದು'' ಎಂದು ದ್ಯಾವಲಾಪುರದ ಪಾರ್ವತಮ್ಮ ಹೇಳುತ್ತಾರೆ.

ಕಡುಬಿನ ಕಾಳಗ ಅಂತ ಅಂದ್ರೆ; ಕಾಳಗ ಅಂದ್ರೆ ಯುದ್ಧ, ಕಡುಬಿನ ಅಲ್ಲ ಕಳುಹಿಸುವ ದಿನದ ಕಾಳಗ ಎಂದು ಅರ್ಥ. ಅದು ಕೊನೆಯ ದಿನ ಯುದ್ಧವಾದ ನಂತರ ಯಾರದು ಜಯ, ಯಾರದು ಅಪಜಯ ಅಂತ ಗೊತ್ತಾಗುತ್ತದೆ ಎಂದು ಜೋಯಿಸ ಸುಬ್ರಹ್ಮಣ್ಯಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ.

ಮೈಲಾರದ ಜಯಚಂದ್ರ ಒಡೆಯರು ಇದೇ ರೀತಿಯ ಅಭಿಪ್ರಾಯಪಟ್ಟಿರುವರು. ಈ ಮೊದಲು ದೊಣ್ಣೆ, ಬಡಿಗೆಗಳನ್ನು ಹಿಡಿದುಕೊಂಡು ಹೊಡೆದಾಡುತ್ತಿದ್ದರು. ಇದರಿಂದ ರಕ್ತಪಾತವೇ ಸಂಭವಿಸಿ ಬಿಡುತ್ತಿತ್ತು. ಆದ್ದರಿಂದ ಕೈಬಿಟ್ಟು ಕಡಬುಗಳಲ್ಲೇ ಹೊಡೆದಾಡುವ ರೂಢಿಯನ್ನು ಜಾರಿಗೆ ತರಲಾಯಿತು (ಚಕ್ಕೆರೆ ಶಿವಶಂಕರ್ ೧೯೯೨:೮೧).

ಇವರುಗಳ ಈ ಅಭಿಪ್ರಾಯ ಸತ್ಯವಾದುದಾಗಿದೆ. ಕಾರಣ ಮೀನಗೊಂದಿ ಸಿಂಹಾಸನದಲ್ಲಿ ಇಂದಿಗೂ ಬಡಿಗೆ ಆಚರಣೆ ಜೀವಂತವಾಗಿದ್ದು, ಸಾವು ನೋವುಗಳಿಗೆ ಲೆಕ್ಕಿಸದೆ ಬಡಿಗೆ ಆಟವೇ ಈ ಕ್ಷೇತ್ರದ ಭಕ್ತಾದಿಗಳಿಗೆ ಉಸಿರಾಗಿಬಿಟ್ಟಿದೆ. ಒಂದು ಅಂಶವನ್ನು ಇಲ್ಲಿ ಗಮನಿಸಬೇಕು. ಮೀನಗೊಂದಿಯೇ ಮೂಲ ಕ್ಷೇತ್ರವಾಗಿದ್ದು, ಅಲ್ಲಿ ಇರುವ ಈ ಆಚರಣೆ ಇತರೆ ಮೈಲಾರ ಕ್ಷೇತ್ರಗಳಿಗೆ ಸಾಗಿ, ತಮ್ಮ ಜಾಯಮಾನಗಳಿಗೆ ಅದು ಒಗ್ಗದೇ ಕೈಬಿಟ್ಟಂತಿದೆ. ಜಯಚಂದ್ರ ಒಡೆಯರ ಅಭಿಪ್ರಾಯ ಇದಕ್ಕೆ ಸಾಕ್ಷಿಯಾಗಿದೆ. ಆದರೆ ಇಂದಿಗೂ ಜೀವಂತವಾಗಿ ಉಳಿದು ಬಂದಿರುವ ಮೀನಗೊಂದಿ ಕ್ಷೇತ್ರದ ಬಡಿಗೆ ಆಚರಣೆ ಸಾವು ನೋವುಗಳ ಮಧ್ಯೆಯೂ ಜೀವಂತವಾಗಿ ರುವುದು ಆಶ್ಚರ್ಯದ ಜೊತೆಗೆ ಮುಖ್ಯ ವೈಶಿಷ್ಟ್ಯವೂ ಆಗಿದೆ.

## ೮.೪. ಕುಂಭ ಹೊರುವುದು :

ಮೀನಗೊಂದು ಮಲ್ಲಯ್ಯನ ಕ್ಷೇತ್ರದಲ್ಲಿ ಕುಂಭ ಹೊರುವ ಪದ್ಧತಿ ತುಂಬಾ ವಿಶಿಷ್ಟವಾದುದು. ವಿಜಯ ದಶಮಿಯ ದಿನದಂದು ಕಲ್ಯಾಣೋತ್ಸವ ಮುಗಿದ ಮೂರು ದಿನಗಳಲ್ಲಿ ಜಾತ್ರೆಯು ನಡೆಯುತ್ತದೆ. ಆ ದಿನ ಸಂಜೆ ರಥೋತ್ಸವದ ಕಾರ್ಯಕ್ರಮ. ಈ ಕಾರ್ಯಕ್ರಮಕ್ಕೆ ಮೊದಲು ಗೊಲ್ಲ ಜನಾಂಗದವರು ಕುಂಭವನ್ನು ಹೊರುತ್ತಾರೆ. ಈ ಕುಂಭವನ್ನು ಹೊತ್ತು ತಂದು ಸ್ವಾಮಿ ಮಲ್ಲಯ್ಯನಿಗೆ ಮುಟ್ಟಿಸಿದ ಮೇಲೆಯೇ ರಥವನ್ನು ಎಳೆಯುತ್ತಾರೆ. ಈ ಕುಂಭವನ್ನು ಮಲ್ಲಮ್ಮನ ಪಡುಗ (ಗಡಿಗೆ), ಮಲ್ಲಯ್ಯನ ಪಡುಗ ಎಂದು ಕರೆದುಕೊಂಡು ಗಂಡು ಮಕ್ಕಳು ಹೊತ್ತುಕೊಂಡು ಬರುತ್ತಾರೆ. ಇವರ ಮುಂದೆ ಹೆಣ್ಣು ಮಕ್ಕಳು ಕಳಸ ಹಿಡಿದಿರುತ್ತಾರೆ. ಕುಂಭ ಹೊರುವ ಮೊದಲು ಈ ಕ್ಷೇತ್ರದ ಧರ್ಮಾಧಿಕಾರಿ ( ಒಡೆಯರು) ಗೊಗ್ಗರ ಮೂಲಕ ಒಂದುವರೆ ಸೇರು ಜೋಳ, ಒಂದು ಸೇರು ನೆಲ್ಲಕ್ಕಿ ಮತ್ತು ಪೂಜಾ ಸಾಮಾನುಗಳನ್ನು ಉಂಬಳಿಯಾಗಿ ನೀಡಿ, ಕುಂಭ ಹೊರುವವರಿಗೆ ಆಹ್ವಾನ ನೀಡುತ್ತಾರೆ. ''ಅವತ್ತಿಗೆ ನಮ್ಮ ಸ್ಥಿತಿ ಸರಿಗಿದ್ದಿಲ್ಲ. ಅದಕ್ಕೆ ಒಡೆಯುರು ನಮಗೆ ಕುಂಭ ಹೊರಾಕ ಹೇಳಿ ನಮಗೆ ಸಹಾಯ ಮಾಡ್ತಿದ್ದಾರೆ'' ಎಂದು ಗೊಲ್ಲರ ಹುಚ್ಚೀರಪ್ಪ ಹೇಳುತ್ತಾರೆ. ಈ ಆಹ್ವಾನವನ್ನು ಸ್ವೀಕರಿಸಿದ ಗೊಲ್ಲ ಸಮುದಾಯವು ಜಾತ್ರೆಯ ದಿನ ಪಡುಗಗಳನ್ನು ಹೊತ್ತು ತರುತ್ತಾರೆ.

## ೮.೫. ಬಸವಿ ಪದ್ಧತಿ :

ಅನೇಕ ಶಕ್ತಿ ದೇವತೆಯ ಶಿಷ್ಯರಾಗಿ ಬರುವ ಅಂಗಭೋಗ, ರಂಗಭೋಗ, ದೈಹಿಕಭೋಗದ ಬಸವಿಯರು ಹೆಣ್ಣು ದೇವತೆಗೆ ಸೀಮಿತವಾಗಿರುವುದು ಕಂಡು ಬರುತ್ತದೆ. ಆದರೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿರುವ ಮೈಲಾರ ಸಂಪ್ರದಾಯದಲ್ಲಿ ಬಸವಿ ಪದ್ಧತಿಯು ಕಂಡುಬರುತ್ತದೆ. ಆದರೆ ಆಂಧ್ರದ ಮೀನಗೊಂದಿ ಕ್ಷೇತ್ರದಲ್ಲಿ ಬಸವಿ ಸಂಪ್ರದಾಯವು ಅತ್ಯಂತ ವಿಶೇಷವಾಗಿದೆ. ಇಲ್ಲಿರುವ ಬಸವಿಯರು ಹರಿಜನರೇ ಆಗಿದ್ದಾರೆ. ಇವರು ತಮ್ಮನ್ನು ತಾವು ಮಲ್ಲಯ್ಯ ಸೇವಕರೆಂದೂ, ಮಲ್ಲಯ್ಯನ ದಾಸರೆಂದೂ ನಂಬುತ್ತಾರೆ. ಇವರಿಗೆ ದೀಕ್ಷೆಯನ್ನು ಮದ್ದಲಿ ಗೊರವರು ಇಲ್ಲವೆ ಒಡೆಯರು ನೀಡುತ್ತಾರೆ.

ಇವರಿಗೆ ದೀಕ್ಷೆ ಆದನಂತರ ಮದ್ದಲಿ ಗೊರವರು ಅವರಿಗೆ ಅಲ್ಲಿಗೆ, ಇಲ್ಲಿಗೆ ಹೋಗಬಾರದು. ಏನು ಕೇಟ್ಟರೂ ಸುದ್ಧಿ ಮಾತನಾಡಬಾರದು. ಯಾರಾದರೂ ಊರಲ್ಲಿ ಸತ್ತರೆ, ಅವರನ್ನು ಕಾಡಿಗೆ ಕಳುಹಿಸಿ (ಶವ ಸಂಸ್ಕಾರ ಆದ ನಂತರ) ಬಂದು ಜಳಕ ಮಾಡಿ ದೇವರ ಪೂಜೆಯಾದ ನಂತರ ಊಟ ಮಾಡಬೇಕು. ಕಾಗೆ ಮುಟ್ಟಿದ್ದನ್ನು ಊಟ ಮಾಡಬಾರದು ಎನ್ನುವ ಪದ್ಧತಿ ಇದೆ. ಮುದ್ರೆಯನ್ನು ಹಾಕಿದ ಮೇಲೆ ಇವರನ್ನು ಗಂಗಿ ಮಾಳಮ್ಮನವರು, ಮಲ್ಲಯ್ಯನ ಹೆಂಡಂದಿರೂ ಎಂದು ಕರೆಯುತ್ತಾರೆ. ಬಸವಿಯರು ಎಂದು ಗುರುಗಳು ಕರೆಯುವುದಿಲ್ಲ. ಆದರೆ ಹಳ್ಳಿಗಳಲ್ಲಿ ಇವರನ್ನು ದೇವದಾಸಿಯರು, ಬಸವಿಯರು ಎಂದೇ ಕರೆಯುತ್ತಾರೆ. ಇವರಿಗೆ ಈ ದೀಕ್ಷೆ ಆದ ಮೇಲೆ ಒಡೆಯರಿಂದ ಶ್ರೀಮುಖ ಪಡೆಯುತ್ತಾರೆ.

ಈ ದೀಕ್ಷೆಯ ದಕ್ಷಿಣೆ ಮುಂತಾದ ವೆಚ್ಚವನ್ನು ಬಸವಿಯ ಸಂಬಂಧಿಕರು ಭರಿಸಬೇಕಾಗುತ್ತದೆ. ಹಸಿರು ಮತ್ತು ಕೆಂಪು ಮಣಿಗಳನ್ನು ಕೊರಳಲ್ಲಿ ಹಾಕಿಕೊಂಡ ಇವರು ಒಂದೊಮ್ಮೆ ಬೆಳ್ಳಿ ಬಂಗಾರಗಳನ್ನು ಹಾಕಿಕೊಳ್ಳುತ್ತಾರೆ. ''ದೇವರಿಗೆ (ಬಸವಿಗೆ) ಬಿಡಲು ಸಿದ್ಧವಾದಾಗ ನಾವು ಗಣಾಚಾರಿಗಳಿಗೆ ತಿಳಿಸ್ತೀವಿ. ಇಂಗಿಂಗ ಮನ್ಯಾಗ ದೇವರನ್ನ ಕಟ್ತೈದೀವಿ, ಗಂಗಿ ಮಾಳಮ್ಮನ ನಮ್ಮನ್ಯಾಗ ಬಿಡ್ತೈದೀವಿ ಅಂದಾಗ ಅವರು ಒಡೆಯರಿಗೆ ಒಂದು ಮಾತು ತಿಳಿಸ್ತಾರೆ. ಜೊತೆಗೆ ಊರಿನ ದೊಡ್ಡ ಮನಿಸ್ಯಾರಿಗೂ ತಿಳಿಸ್ತೀವೆ. ಆವಾಗ ಇಂಥ ದಿನ ಅಂತ ಗೊತ್ತು ಮಾಡಿ ಮನೆ ಮಾರಿ ಎಲ್ಲಾ ತೊಳ್ಕಂಡು ಸಿಹಿ ಅಡಿಗೆ ಮಾಡ್ತೀವಿ. ಅನ್ನಸಾರು ಮಾಡ್ಕಂತೀವಿ. ಮಾಡಿದ ಮೇಲೆ ಆವತ್ತಿನ ದಿನ ಹಗಲೆಲ್ಲಾ ಒಂದೊತ್ತು, ಆಗ ಗಣಾಚಾರಿಗಳನ್ನು ಮನ್ಯಾಗ ಕರ್ಕಂಡ್ಬಂದು ಕಂಬಳಿ ಹಾಸಿ ಮನ್ಯಾಗ ಕುಂದ್ರಸ್ತೀವಿ. ಅವ್ರು ಊಟ ಮಾಡಂಗಿಲ್ಲ; ನಾವೂ ಊಟ ಮಾಡಂಗಿಲ್ಲ. ಸುರಿಗೆ ಸುತ್ತಿ ನಮ್ಮನ್ನ ಕಂಬಳಿ ಮ್ಯಾಲೆ ಕುಂದ್ರುಸ್ತಾರ. ನಾಕೂ ಮೂಲಿಗೆ ನಾಲ್ಕು ಕೊಬ್ಬರಿ ಬಟ್ಲ, ಉತ್ತುತ್ತಿ, ಎಲಿ-ಅಡ್ಕಿ, ದಕ್ಷಿಣೆ ಎಲ್ಲಾ ಇಡ್ತಾರ. ಮತ್ತೆ ಮಧ್ಲಿಗೆ ನಾಕು ಕೊಬ್ಬರಿ ಬಟ್ಲ, ಉತ್ತುತ್ತಿ, ಅರಶಿಣಕೊಂಬು, ಬೆಳ್ಳೊಳ್ಳಿ ಎಲ್ಲಾ ಇಕ್ಕಿ ದಕ್ಷಿಣೆ ಎಲ್ಲಾ ಇಡಬೇಕು. ಆಮ್ಯಾಗ ಹೂವಿನ ಕೂಟ ಅಂತೇಳಿ

ಹೂವಿನ ಕೂಟ ನಮ್ಮನ್ನ ಹಿಂಗ ಎಡಕಿ ಮುಟ್ಟುಸ್ತಾರ. ಇವ್ರು ಬಸಿವೇರು ಅಂತ್ಹೇಳಿ ಮಾಡಿಸ್ತಾರ. ಮಾಡಿಸಿದ ಮ್ಯಾಲೆ ನಾವು ಅವರ ಪಾದ ತೊಳೆದು ಪೂಜೆ ಮಾಡಿ ಕಾಯಿ ಒಡೆದು ಎಲ್ಲಾ ಮಂಗಳಾರತಿ ಎತ್ತಿ ಆವಾಗ ಅವ್ರು ತಾಳಿ ಕಟ್ಟತಾರ'' ಎಂದು ಹನುಮಮ್ಮ ಹೇಳುತ್ತಾರೆ.

ಬಸಿವೆಯರನ್ನು ಏತಕ್ಕಾಗಿ ಬಿಡುತ್ತಿದ್ದಾರೆ ಎನ್ನುವ ಅಂಶ ಬಹು ಸ್ಪಷ್ಟವಾಗಿದೆ. ಮನ್ಯಾಗ ತಿಕ್ಕಡಿ, ಕಾಡಾಟ ಜಾಸ್ತಿಯಾದಾಗ, ಹೆಣ್ಣು ಮಕ್ಕಳಾದರೆ ಆಕೆಯನ್ನು ನಿನ್ನ ಸೇವೆಗೆ ಬಿಡ್ತೀನಿ ಅಂತ ಹರಕೆ ಹೊತ್ತಾಗ, ಗಂಡು ವಂಶ ಇಲ್ಲದ ಪಕ್ಷದಲ್ಲಿ ತಂದೆ ತಾಯಿಗಳು ಹೆಣ್ಣು ಮಕ್ಕಳನ್ನು ಮನಿಯಾಗ ಬಿಟ್ಟುಕೊಳ್ತಾರೆ. ಕಾರಣ ಆಕೆಗೆ ಮದುವೆ ಆದರೆ ಗಂಡನ ಮನೆಗೆ ಹೋಗ್ತಾಳೆ. ಆಗ ಹೆತ್ತ ತಂದೆ ತಾಯಿಯರನ್ನು ಯಾರು ನೋಡ್ತಾರೆ ಎನ್ನುವ ಸಲುವಾಗ ಮಗಳನ್ನು ದೇವರ ಹೆಸರಿನಲ್ಲಿ ಮನೆಯಲ್ಲಿಯೇ ಬಿಡ್ತಾರೆ. ಈ ಹಲವಾರು ಕಾರಣಗಳು ಬಸವಿ ಪದ್ಧತಿಗೆ ಕಾರಣಗಳಾಗಿವೆ.

ಈ ಕ್ಷೇತ್ರದ ಕೆಲವು ಜನ ಬಸವಿಯರು ಮಲ್ಲಯ್ಯನ ಹೆಸರಿನ ಮೇಲೆ ಭಿಕ್ಷಾಟನೆಯನ್ನು ಮಾಡುತ್ತಾರೆ. ಆಗ ಅವರು ;

''ದೇವಿ ದೇವ
ವಾರ್‍ನಾಲಗ್ಯೆ ದೇವೀ ದೇವ
ಈದ್ಗಾಂದೆ ದೇವೀ ದೇವ
ಆಲುಬಾವ್ಯೆ ದೇವೀ ದೇವ
ಸೋಲುವಾವ್ಯೆ ದೇವೀ ದೇವ....''

ಎಂಬ ಶ್ಲೋಕವನ್ನು ಹಾಡುತ್ತಾ ಹಳ್ಳಿ ಹಳ್ಳಿಗಳಿಗೆ ತಿರುಗುತ್ತಾರೆ. ಇನ್ನು ಕೆಲವು ಬಸವಿಯರು ಹುಲಿಗೆಮ್ಮನ ಕ್ಷೇತ್ರಕ್ಕೆ ನಡೆದುಕೊಂಡು ಹಡ್ಲಿಗಿಯನ್ನು ಹಿಡಿದಿರುತ್ತಾರೆ. ಅಂತಹ ಉದಾಹರಣೆಗಳು ಅಲ್ಲಲ್ಲಿ ಸಿಕ್ಕಿವೆ. ಅದು ಬಹಳ ವಿರಳ. ದ್ಯಾವಲಾಪುರದ ಪಾರ್ವತಮ್ಮ ಇವರು ಇದಕ್ಕೆ ಸಾಕ್ಷಿಯಾಗಿದ್ದಾರೆ. ಇವರು ಹುಲಿಗಿಗೆ ಹೋಗಿ ದೀಕ್ಷೆಯನ್ನು ಪಡೆದಿದ್ದಾರೆ. ಗುಡ್ಡದ ಮಲ್ಲಯ್ಯನ ಕ್ಷೇತ್ರದಲ್ಲೂ ದೀಕ್ಷೆಯನ್ನು ಪಡೆದುಕೊಂಡಿರುವರು. ಇವರು ತಮ್ಮ ಉಪ ಜೀವನಕ್ಕೆ ಬೇಸಾಯವನ್ನೇ ಅವಲಂಬಿಸಿದ್ದಾರೆಯೇ ಹೊರತು ಪ್ರತಿನಿತ್ಯ ಭಿಕ್ಷಾಟನೆಗೆ ಹೋಗುವುದಿಲ್ಲ. ''ನಾವು ಬೇಸಾಯ ಮಾಡೋದ್ರಿಂದ ನಮಿಗೆ ಜೀವನ ನಡಿಯೋದು. ಭಿಕ್ಷಕ್ಕೆ ಹೋದರೆ ಅದರಿಂದ ನಮಗೆ ಏನೂ ಉಪಯೋಗಕ್ಕೆ ಬರುವುದಿಲ್ಲ. ಯಾವಾಗೋ ವರ್ಷಕ್ಕೆ ಒಂದು ಸಲ ನಡತೆ ಬಿಡಬಾರದು ಅಂತ ಭಿಕ್ಷಕ್ಕೆ ಹೋಗ್ತೀವಿ. ಐದು ಮನೆ ಆಗ್ಲಿ ಭಿಕ್ಷೆ ಬೇಡಿ ಬರ್‍ತೀವಿ. ತ್ರಿಶೂಲ, ಆಗ್ಗಿ, ಹಡ್ಲಿಗಿ ಮುಂತಾದವುಗಳನ್ನು ಹಾಗೇ ಇಡಬಾರದು ಅಂತ ಹೋಗ್ತೀವಿ. ದಸರಾ ಅಮವಾಸೆಯಾಗಿ ಶಿ

ದಿವಸದಾಗೆ ಗುಡ್ಡದಲ್ಲಿ ಕಂಕಣ ಕಟ್ಟುತಾರಲ್ಲ; ಆವತ್ತು ಕಂಕಣ ಕಟ್ಟಿಕೊಂಡು ತ್ರಿಶೂಲ ಹಿಡ್ಕಂಡು, ಬಂಢಾರ ಚೀಲ ಹಕ್ಯಂಡು ಐದು ಮನಿಗೆ ಭಿಕ್ಷಕ್ಕ ಹೋಗಿ ಬರ್ತಿವಿ''. ಹುಲಿಗೆಮ್ಮನದು ಆಚರಣೆ ಭರತ ಹುಣ್ಣಿಮೆಯ ಮುಂದೆ ಆಗುತ್ತದೆ. ಅಲ್ಲಿ ಆಗ ಹಡ್ಲಿಗಿ ತಗಂಡು ಭಿಕ್ಷಕ್ಕೆ ಹೋಗುತ್ತಾರೆ.

ಮೀನಗೊಂದಿ ಕ್ಷೇತ್ರದಲ್ಲಿ ದಸರಾ ಉತ್ಸವದ ಕೊನೆಯ ಹಂತವಾಗಿ ಬಸವಿಯರ ಆಟ ಅಥವಾ ಓಕುಳಿ ಆಟದ ಕಾರ್ಯಕ್ರಮ ನಡೆಯುವುದು. ಬನ್ನಿಯ ಮೂರು ದಿನಗಳ ಎಲ್ಲಾ ಕಾರ್ಯಕ್ರಮಗಳು ಸಾಂಗೋಪಸಾಂಗವಾಗಿ ನೆರವೇರಿದವು ಎನ್ನುವ ಉದ್ದೇಶಕ್ಕಾಗಿ ಸಂತೋಷ ಕೂಟದ ಆಚರಣೆಯ ಭಾಗವಾಗಿ ಈ ವಸಂತೋತ್ಸವ ಕಾರ್ಯಕ್ರಮವು ವಿಶೇಷವಾಗಿ ಜರುಗುತ್ತದೆ. ಬಸವಿಯರು ತಮ್ಮ ಸೇವೆಯನ್ನು ಮಲ್ಲಯ್ಯನಿಗೆ ಅರ್ಪಿಸುವ ಪ್ರಮುಖ ಕಾರ್ಯಕ್ರಮ ಇದಾಗಿದೆ. ಆ ದಿನ ಇವರುಗಳು ಬಿಳಿಯ ಸೀರೆ, ಬಿಳಿಯ ರವಿಕೆಯನ್ನು ತೊಟ್ಟಿರುತ್ತಾರೆ. ಸರಪಳಿ ಪವಾಡದ ದಿನ ಮಧ್ಯಾಹ್ನ ೨-೩೦, ಇಲ್ಲ ಮೂರು ಗಂಟೆಯ ಸುಮಾರಿಗೆ ಕ್ಷೇತ್ರದ ಎಲ್ಲಾ ಬಸವಿಯರು ಶಿಬಾರ ಕಟ್ಟೆಯ ಮುಂದೆ, ಕರಿಯಾಲ ಗಿಡದ ಕೆಳಗೆ ಜಮಾಯಿಸುತ್ತಾರೆ. ಆಗಲೆ ಡೊಳ್ಳಿನವರು ತಮ್ಮ ಕಾರ್ಯವನ್ನು ಶುರು ಮಾಡುತ್ತಾರೆ. ಡೊಳ್ಳಿನ ಶಬ್ದ ಹೆಚ್ಚಾದಂತೆಲ್ಲ ಬಸವಿಯರು ಶಿವಸಾನ ಗದ್ದಿಗೆಯಲ್ಲಿ ಕುಳಿತ ಮಲ್ಲಯ್ಯ-ಮಾಳಮ್ಮನವರ ಉತ್ಸವ ಮೂರ್ತಿಗಳ ಅಭಿಮುಖವಾಗಿ ನಿಂತಿರುತ್ತಾರೆ. ಮಾಳಾ ಮಲ್ಲೇಶ್ವರರಿಗೆ ಮಂಗಳಾರತಿಯ ಕಾರ್ಯಕ್ರಮ ನಡೆಯುತ್ತಿದ್ದಂತೆ ಭಕ್ತರು, ಗಣಾಚಾರಿಗಳು ಮುಂತಾದವರು ಬಸವಿಯರ ಮೇಲೆ ಬಂಢಾರವನ್ನು ಎರಚುತ್ತಾರೆ. ಬಂಢಾರವನ್ನು ಎರಚುತ್ತಿದ್ದಂತೆ, ಇತ್ತ ಕಡೆ ಡೊಳ್ಳಿನ ಶಬ್ದ ಹೆಚ್ಚಿದಂತೆ ಕೆಲ ಬಸವಿಯರಿಗೆ ಮೈ ತುಂಬಿದಂತಾಗಿ (ಮಲ್ಲಯ್ಯ ಮೈಯೊಳಗೆ ಪ್ರವೇಶಿಸಿದವರಂತೆ) ಓಲಾಡುತ್ತಿರುತ್ತಾರೆ. ಆಗಲೇ ಅಗಸರು ಬಂಢಾರ, ಸುಣ್ಣ, ಸ್ವಲ್ಪ ಎಣ್ಣೆಯನ್ನು ನೀರಿನಲ್ಲಿ ಕಲಸಿ, ಓಕುಳಿಯನ್ನು ಸಿದ್ಧ ಮಾಡಿಟ್ಟಿರುತ್ತಾರೆ. ಆ ಓಕುಳಿಗೆ ಕಾಯಿ ಒಡೆದು ಪೂಜೆ ಮಾಡಿ ಬಸವಿಯರಿಗೆ, ಭಕ್ತರಿಗೆ ಓಕುಳಿಯನ್ನು ಹಾಕುತ್ತಾರೆ. ಇದೇ ಸಂದರ್ಭದಲ್ಲಿ ಅಗಸರು ಒಂದು ಐದು ಹೆಜ್ಜೆ ಬಸವಿಯರನ್ನು ಹೊತ್ತುಕೊಂಡು ಕುಣಿಯುತ್ತಾರೆ. ''ನಮ್ಮದು ಬಸಿವೇರ ಆಟದಾಗ ಹೊಸ ಬಸವಿಯರನ್ನ ಯಾರನ್ನೇ ಬಿಡಲಿ ನಮಗೆ ಒಪ್ಪಿ ೨೫ ರೂಪಾಯಿಗಳನ್ನು ಕಾಣ್ಕೆ ಕೊಟ್ಟು ನಮ್ಮ ಪಟ್ಟಿಗೆ ಸೇರಿಸಬೇಕು. ಓಕುಳಿಯಾಟದಾಗ ನಾವು ಡೊಳ್ಳಿನ ಶಬ್ದಕ್ಕೆ ಬಸವಿಯರನ್ನು ಐದು ಮಿನಿಟು ಎತ್ತಿ ಕುಣಿಸ್ತೀವಿ. ಅಂಗ ಮಾಡಿದರೆ ಅವ್ರು ಮೋಕ್ಷ ಪಟ್ಟರು ಅಂತ ಲೆಕ್ಕನೇ. ಹೊಸದಾಗಿ ಬಿಟ್ಟ ಬಸವಿಯರನ್ನು ಇದೇ ರೀತಿ ಎತ್ತಿ ಆಡಿಸಿ, ಇಳಿಸಿಬಿಟ್ವಿ ಅಂದ್ರೆ ಅವರಿಗೆ ದೀಕ್ಷೆ ಆದಂಗೇನೆ, ಮೋಕ್ಷ ಸಿಕ್ಕಂಗೇನೇ ಲೆಕ್ಕ. ಇದು ಪ್ರತಿ ವರ್ಷ ಹಿಂಗೆ ಮುಂದುವರೀತೈತೆ. ಬಸವಿಯರು ಈ ಓಕುಳಿ ಆಟಕ್ಕೆ ಬೊಂಬಾಯಿದಾಗ ಇದ್ರೂ ಕೂಡ ಬರ್ಲೇಬೇಕು. ಬರ್ತಾರೆ ಕೂಡ'' ಎಂದು ಅಗಸರ ಹನುಮಂತಪ್ಪ ಹೇಳುತ್ತಾರೆ. ಇದು ಅಗಸರಿಗೆ ಅವತ್ತಿನ ಕಾರ್ಯವಾಗಿದೆ.

''ಅಗಸರು ನಮ್ಮನ್ನ ಎತ್ತಿ ಇಳಿಸಿದ್ರೇನೇ ಅವರಿಂದ ನಾವು ಮೋಕ್ಷ ಪಡೆದೆವು ಅಂತ ಅರ್ಥ. ಅದು ಹೊಸಬರಿಂದ ನಾವು ಓಕುಳಿಯನ್ನು ಹಾಕಿಸಿಕೊಳ್ಳುವುದಿಲ್ಲ. ಎತ್ತಿಕೊಳ್ಳುವುದಕ್ಕೂ ಬಿಡಂಗಿಲ್ಲ. ಹಳಬರು ಇದ್ರೆ ಮಾತ್ರ ಓಕುಳಿಯನ್ನು ಹಾಕಿಸಿಕೊಳ್ತೀವಿ. ಅದನ್ನ ಹಿರಿಯರು ಅವತ್ತಿಗೆ ಮಾಡಿದ್ದಾರೆ. ಅದನ್ನ ಅಂಗೇ ನಡಿಸ್ಕಂತ ಬಂದೀವಿ. ಇನ್ಯಾಕ ಯಾರನ್ನ ಬಸವಿಗೆ ಬಿಡಂಗಿಲ್ಲ. ಆಯ್ತಿನ್ನ ಅವತ್ತಿಗೇನೋ ತಕ್ಕ ಮಂದಿ ಈ ರೀತಿ ಮಾಡ್ಯಾರ. ಬಿಟ್ಟಕಂಡು ಬಿಡೋದೇ. ಏನೈತಿ ಇದರಾಗ ಬರೀ ಹೊಲಸು. ನಾವಂತೂ ಹಿಂಗಾದ್ವಿ ನಮ್ಮ ಮಕ್ಳು ಹಿಂಗಾಗಬಾರ್ದು. ಅದರಾಗ ಗೊರಮೆಂಟು ಕೂಡಾ ನಮಗೆ ಸಪೋರ್ಟು ಮಾಡ್ತೈತೆ'' ಎಂದು ನೆರಣಿಕೆ ತಳವಾರ ಶಾಂತಮ್ಮ ನುಡಿಯುತ್ತಾಳೆ.

ಈ ರೀತಿಯಾಗಿ ತಮ್ಮ ಆಚರಣೆಯ ಪ್ರತ್ಯೇಕತೆಯನ್ನು ಹೇಳುವುದರ ಜೊತೆಗೆ ಬಹುಶಃ ಬಸವಿಯರು ತಮ್ಮ ಪದ್ಧತಿಯ ಪರಂಪರೆಯನ್ನು ಮುಂದುವರಿಕೆಯ ಬಗ್ಗೆ 'ನ'ಕಾರವನ್ನು ಎತ್ತಿದ್ದಾರೆ. ಕಾರಣ ಇಂತಹ ಒಂದು ಪದ್ಧತಿ ನಮ್ಮೊಂದಿಗೆ ಮುಕ್ತಾಯವಾಗಲಿ ಎಂದು ಅಭಿಪ್ರಾಯ ಪಡುತ್ತಿರುವರು. ಇವರುಗಳ ನಿರ್ಧಾರ ನೋಡಿದ ನಂತರ ಈ ಪದ್ಧತಿ ಕ್ಷೀಣಿಸುತ್ತಾ ಸಾಗಬಹುದು. ಈ ಕ್ಷೇತ್ರದಲ್ಲಿ ೨ ಸಾವಿರ ಬಸವಿಯರು ಇರುವುದಾಗಿ ಗುಳ್ಯಂನಲ್ಲಿ ವಾಸವಾಗಿರುವ ಕಪಿಲಮುನಿ ಒಡೆಯರು ತಾವು ಪಾಲಿಸುತ್ತಾ ಬಂದ ರೆಕಾರ್ಡ್‌ನಲ್ಲಿ ಇರುವಂತೆ ತಿಳಿಸಿರುವರು. ಈ ಸಂಖ್ಯೆ ಇನ್ನು ಮುಂದೆ ಕ್ಷೀಣಿಸುತ್ತಾ ಬಂದರೆ ಆಶ್ಚರ್ಯ ಪಡಬೇಕಾಗಿಲ್ಲ.

ಲಗ್ನವಾಗಿ 'ಗಂಡುಬಾಲೆ'ಯರೂ ಎಲಿಚೆಂಚಿ-ಚವುರದ ಹೊರೆ ಹೊತ್ತು ಇರುವುದು ಇಂದು ವಾಸ್ತವ ಸಂಗತಿ. ಅಂಥವರ ಸಂಖ್ಯೆಯೇ ಹಿರೇ ಮೈಲಾರ ಕ್ಷೇತ್ರದಲ್ಲಿ ಬಹುತೇಕ ಹೆಚ್ಚಾಗಿ ಕಂಡುಬರುತ್ತದೆ. ಸಧ್ಯ ಸಮಾಜದಲ್ಲಿ ಚವುರ ಮತ್ತು ಎಲೆಚೆಂಚಿ ಹೊರೆಯ ಬಗ್ಗೆ ಯಾವ ತಪ್ಪು ಕಲ್ಪನೆಯು ಇಲ್ಲ. ಈ ಹೊರೆ ಹೊತ್ತು ದೇವದಾಸಿಯರಂತೆ ನಡೆದುಕೊಳ್ಳುತ್ತಿದ್ದವರ ಸಂಖ್ಯೆ ಮುಂಚೆ ವಿಶೇಷವಾಗಿತ್ತಂತೆ. ಈಗಂತೂ ಇವರು ಇಲ್ಲವೇ ಇಲ್ಲ ಎನ್ನುವ ಸ್ಥಿತಿ ಬಂದಿದೆ.

ಈ ಅಂಶವನ್ನು ದೃಢಪಡಿಸುವ ಆಧಾರ ನಾನು ಕ್ಷೇತ್ರ ಕಾರ್ಯಕ್ಕೆ ಮೈಲಾರಕ್ಕೆ ಹೋದಾಗ ದೊರಕಿತು. ಕಂಚಾವೀರ ಶಿವಪುತ್ರಪ್ಪ ತಿಳಿಸಿದಂತೆ '' ಈ ಮೊದಲು ಬಸವಿಯನ್ನು ಬಿಡುವ ಪದ್ಧತಿ ಇತ್ತು. ಅವರನ್ನ ಅಜ್ಜನ ಸೇವೆಗಂಥ ಬಿಟ್ಟಕಂಡಿದ್ರು. ಈಗೀಗ ಅದೇ ಹೋಗಿ ಬಿಡ್ತು. ಈಗ ಮೊನ್ನೆ ತಾನೆ ಇಬ್ಬರು ಖಾಲಿ ಆದ್ರು ನೋಡ್ರಿ. ಬಸವೇರು ಆಗಿ ಅಜ್ಜನ ಸೇವೆ ಮಾಡಿಕೊಂಡು ಇದ್ದವರು ಈಗ ಒಂದು ತಿಂಗಳು ಆಯ್ತು ತೀರಿಕೊಂಡು''. ಹೀಗೆ ಮೈಲಾರದಲ್ಲಿ ಇದ್ದುದರ ನಿದರ್ಶನಗಳು ನಮಗೆ ದೊರೆಯುತ್ತವೆ. ಉತ್ತರ ಕರ್ನಾಟಕದ ಒಂದು ವಿಶೇಷವೆಂದರೆ; ' ಮಂಗಸೂಲಿ ಮಲ್ಲಯ್ಯನಿಗೆ' ಸೂಳೆಯರನ್ನು ಬಿಡುತ್ತಾರೆ. ಅವರಿಗೆ 'ಮುರಳಿ' ಯರು ಎಂದು ಹೆಸರು. ಗೊಗ್ಗಯ್ಯಗಳ ಸಂಗಡ ಊರೂರು ಅಲೆಯುತ್ತಾರೆ. ಗೊಗ್ಗಯ್ಯನಿಗೆ ಮುರಳಿ ತಂಗಿಯಾಗಿರುತ್ತಾಳೆ. ಈ ಮುರಳಿಯರು ಅರಿಶಿಣ ಬಣ್ಣದ ಸೀರೆಯನ್ನುಟ್ಟು ಕಚ್ಚೆ ಹಾಕಿಕೊಳ್ಳುತ್ತಾರೆ. ನಡುವಿಗೆ ಸೆರಗು ಸುತ್ತುತ್ತಾರೆ. ಜೋಡಿ ಗಂಟೆಯನ್ನು ಕೈಯಲ್ಲಿ ಬಾರಿಸುತ್ತಾ ಕುಣಿಯುತ್ತಾರೆ.

ಮಹಾರಾಷ್ಟ್ರದಲ್ಲಿ ಮಲ್ಲಯ್ಯನ ಸೇವೆಗೆ ಮೀಸಲಾದ ಮುರಳಿ ಎಂಬ ದೇವದಾಸಿಯರೂ ಇದ್ದರು. ವಗ್ಗಯ್ಯ ವಿವಾಹಿತನಾದರೆ; ಮುರಳಿ ವೇಶ್ಯಾವೃತ್ತಿ ನಡೆಸುತ್ತಾಳೆ. ಇವರಿಗೆ ಕರ್ನಾಟಕದಲ್ಲಿ ಗೊರವಮ್ಮ ಎಂದು ಹೇಳುವರು. ಕರ್ನಾಟಕದಲ್ಲಿ ವೇಶ್ಯಾವೃತ್ತಿಯನ್ನು ನಡೆಸುವ ಗೊರವಮ್ಮ ಈಗ ಇಲ್ಲ. ಮಹಾರಾಷ್ಟ್ರದಲ್ಲಿಯೂ ಅವರ ಸಂಖ್ಯೆ ತೀರಾ ಕಡಿಮೆಯಾಗಿದೆ. ಆದರೆ ಹಿಂದೆ ಜೆಜೂರಿಯಂಥ ಕ್ಷೇತ್ರದಲ್ಲಿ ಈ ಮುರಳಿಯರ ಹಿಂಡೇ ಇತ್ತೆಂದು ತಿಳಿಯುತ್ತದೆ. 'ಮರುಳಿ' ಎಂಬ ಕನ್ನಡ ಶಬ್ದ, ಮುರಳಿ ಆಗಿದೆ ಎಂಬ ಡಾ.ಪಿ.ಬಿ. ದೇಸಾಯಿ ಹೇಳುತ್ತಾರೆ.

ಬಂಗಾಲದ ಪ್ರಸಿದ್ಧ ಸಂತ ಗೌರಾಂಗ ಅಥವಾ ಚೈತನ್ಯ ಪ್ರಭುತೀರ್ಥಯಾತ್ರೆ ಮಾಡುತ್ತಾ ಕ್ರಿ.ಶ. ೧೫೧೦-೧೧ರಲ್ಲಿ ಜೆಜೂರಿಗೆ ಬಂದಿದ್ದಂತೆ ತಿಳಿದುಬರುತ್ತದೆ. ಕ್ರಿ.ಶ. ೧೫೩೩ ರಿಂದ ೧೬೩೪ರ ಅವಧಿಯಲ್ಲಿದ್ದ ಸಂತ ತಾರಾನಾಥ ಖಂಡೋಬನನ್ನು ಅವನ ಸಂಬಂಧಿಯಾದ ಆರಾಧನೆಗಳನ್ನು ಬಾರಿಬಾರಿ ಉಲ್ಲೇಖಿಸಿದ್ದಾನೆ. ಒಟ್ಟಿನಲ್ಲಿ ದೇವರನ್ನು ಮತ್ತು ಆರಾಧನೆಯನ್ನು ಈ ಸಂತ ಒಪ್ಪಿದರೂ ಮುರಳಿ ಪದ್ಧತಿಯನ್ನು ಪರೋಕ್ಷವಾಗಿ ಖಂಡಿಸಿದ್ದಾನೆ(ಡಾ. ಎಂ.ಬಿ.ನೇಗಿನಹಾಳ; ೧೯೯೭ :೧೯೪-೧೯೫) ಕರ್ನಾಟಕ, ಮಹಾರಾಷ್ಟ್ರಗಳಲ್ಲೆಲ್ಲಾ ಕಾಯ್ದೆಗಳಾಗಿ ದೇವದಾಸಿ ಪದ್ಧತಿಯ ಮೇಲೆ ನಿರ್ಬಂಧ ಹೇರಲ್ಪಟ್ಟಿರುವುದರಿಂದ ಈ ದೇವಾಲಯಗಳಲ್ಲಿ ಶಿಖರದಾಳಿ ಧರಿಸುವುದು ಅಥವಾ ಮುರಳಿಯರಾಗುವುದು ನಿಂತು ಹೋಗಿದೆ. ಆದರೂ ಕೆಲವೊಮ್ಮೆ ಕ್ವಚಿತ್ತಾಗಿ ಕಳ್ಳತನದಲ್ಲಿ ಆಗುವುದು ಉಂಟು.

ಒಟ್ಟಾರೆಯಾಗಿ ಮೀನಗೊಂದಿ ಮಲ್ಲಯ್ಯನ ಕ್ಷೇತ್ರದಲ್ಲಿ ಬಸವಿಯರು ಇರುವಂತೆ ಬಹುತೇಕ ಮೈಲಾರ ಕ್ಷೇತ್ರಗಳಲ್ಲೆಲ್ಲಾ ಬಸವಿಯರು ಇರುವುದು ಕಂಡುಬರುತ್ತದೆ. ಆಧುನಿಕತೆಯ ಸೋಂಕಿನಿಂದ ಮೈಲಾರದಲ್ಲಿ ಈ ಪದ್ಧತಿ ನಶಿಸಿ ಹೋಗಿದೆ. ಮೀನಗೊಂದಿಯಲ್ಲಿ ಈ ಪದ್ಧತಿ ಇನ್ನೂ ಜೀವಂತವಾಗಿರುವುದು ಸ್ಪಷ್ಟ. ಮೀನಗೊಂದಿಯಲ್ಲಿ ಉತ್ಸವದ ಕೊನೆಯ ಹಂತವಾಗಿ ಸಂತೋಷ ಕೂಟದ ಸಂಕೇತವಾಗಿ ವಿಶೇಷವಾಗಿ ಓಕುಳಿಆಟ ನಡೆದರೆ ಮೈಲಾರದಲ್ಲಿ ಸಹ ಇದೇ ರೀತಿ ಓಕುಳಿ ಆಡುವ ಕಾರ್ಯಕ್ರಮವಿದೆ. ಆದರೆ ಅದು ಈ ರೀತಿ ಬಸವಿಯರು ಪಾಲ್ಗೊಳ್ಳಲು ಆಟದಂತಿರದೆ ತ್ರಯೋದಶಿಯಂದು ದೇವರು ಓಕುಳಿಯಾಡುವನು. ದೇವಸ್ಥಾನದ ಮುಂದಿರುವ ಹೊಂಡದಲ್ಲಿ ಈ ಕಾರ್ಯಕ್ರಮ ಜರುಗುವುದು. ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ತಂದು ಹೊಂಡದ ಕಟ್ಟೆಯ ಮೇಲೆ ಸ್ಥಾಪಿಸುವರು. ಹೊಂಡದಲ್ಲಿ ನೀರು ತುಂಬಿ ಆದರಲ್ಲಿ ಕುಂಕುಮ ಅರಿಶಿಣಪುಡಿ ಬೆರಸಿ ಓಕುಳಿ ತಯಾರಿಸಿ ದೇವರಿಗೂ ನೆರೆದ ಜನರಿಗೂ ಸಿಂಪಡಿಸುವರು. ಪ್ರತ್ಯೇಕವಾಗಿ ಅಗಸರೇ ಬಸವಿಯರನ್ನು ಹೊತ್ತು ಕುಣಿದು ಅವರಿಗೆ ಮತ್ತು ನೆರೆದ ಭಕ್ತರಿಗೆ ಓಕುಳಿಯನ್ನು ಹಾಕುವುದರ ಮೂಲಕ ಈ ಪದ್ಧತಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದಿದೆ ಎಂದರೆ ತಪ್ಪಾಗಲಾರದು. ಇಲ್ಲಿ ದೇವರಿಗೆ ಓಕುಳಿಯನ್ನು ಹಾಕುವುದಿಲ್ಲ.

## ೮.೬. ಗುಲಾಬಿ ಹೂ ಅಲಂಕಾರ :

ಶ್ರೀ ಮೀನಗೊಂದಿ ಸಿಂಹಾಸನದ ಕ್ಷೇತ್ರದಲ್ಲಿ ಗಿರಿಯ ಮೇಲೆ ಮಲ್ಲಯ್ಯ ಗುಹೆಯಲ್ಲಿ ಕೂರ್ಮ ರೂಪದಲ್ಲಿ ಗುಂಡಿಗೆ ಒಡ ಮಾಡಿರುವುದನ್ನು ಕಾಣುತ್ತೇವೆ. ಇಂದಿಗೂ ಈ ಕೂರ್ಮ ರೂಪದ ಮಲ್ಲಯ್ಯನಿಗೆ ನಿತ್ಯವೂ ಪೂಜೆ ವಿಧಿ ವಿಧಾನಗಳು ನಡೆಯುತ್ತಿವೆ. ಈ ಉದ್ಭವ ಮೂರ್ತಿಯ ಪಕ್ಕದಲ್ಲಿ ಶ್ರೀ ಮಾಳ-ಮಲ್ಲೇಶ್ವರರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾರೆ. ಮಲ್ಲಯ್ಯನ ಜೊತೆಯಲ್ಲಿಯೇ ಗಂಗಿ ಮಾಳಮ್ಮನ ಮೂರ್ತಿಯಿರುವುದು ಇಲ್ಲಿಯ ವಿಶೇಷ. ಈ ದೇವಾಲಯದ ಪಕ್ಕದಲ್ಲಿ ತುಪ್ಪದ ಮಾಳಮ್ಮನ ಚಿಕ್ಕ ಗುಡಿಯಿರುವುದನ್ನು ಕಾಣುತ್ತೇವೆ. ಪ್ರತಿ ದಸರಾ ಹಬ್ಬದ ಸಮಯದಲ್ಲಿ ನೆರಣಿಕೆಯ ದೇವರ ಮನೆಯಿಂದ ಮಲ್ಲಯ್ಯ ಮತ್ತು ಮಾಳಮ್ಮನ ಕುದುರೆ ಉತ್ಸವ ಮೂರ್ತಿಗಳನ್ನು ಗಿರಿಗೆ ದಸರಾ ಅಮಾವಾಸೆಯಾದ ಐದನೇ ದಿನದಂದು ಸಕಲ ಭಾಜಾ ಭಜಂತ್ರಿಯ ಮೂಲಕ ವಿಜೃಂಬಣೆಯಿಂದ ಗಿರಿಗೆ ತರುತ್ತಾರೆ. ಬನ್ನಿಯ ದಿನ ಅದೇ ನೆರಣಿಕೆ ಗ್ರಾಮದಿಂದ ಪಲ್ಲಕ್ಕಿಯನ್ನು ಗಿರಿಗೆ ತರುತ್ತಾರೆ. ಮಲ್ಲಯ್ಯ ಮತ್ತು ತುಪ್ಪದ ಮಾಳಮ್ಮ ಅಶ್ವಾರೋಹಿಯಾಗಿ ಪಲ್ಲಕ್ಕಿಯಲ್ಲಿರುತ್ತಾರೆ.

ಬನ್ನಿಯ ದಿನ ಬೆಳಿಗ್ಗೆ ಸುಮಾರು ೮-೯ ರ ಹೊತ್ತಿಗೆ ನೆರಣಿಕೆಯ ಮದ್ದಲಿಗೊರವರು, ಕಂಚಾವೀರರು, ಹಾಗೂ ಪೂಜಾರಿಗಳು ಉತ್ಸವ ಮೂರ್ತಿಗಳ ಅಲಂಕಾರದಲ್ಲಿ ತೊಡಗುತ್ತಾರೆ. ಮಲ್ಲೇಶ್ವರನ ಉತ್ಸವ ಮೂರ್ತಿಯಲ್ಲಿ ಆತನ ವಿಗ್ರಹ ಇರುವುದರಿಂದ ಆತನಿಗೆ ಸಹಜವಾಗಿಯೇ ಅಲಂಕಾರ ನಡೆಯುತ್ತದೆ. ಆದರೆ ಮಾಳಮ್ಮನ ಉತ್ಸವ ಮೂರ್ತಿಗೆ ಆಕೆಯ ವಿಗ್ರಹ ಇಲ್ಲದ ಕಾರಣ ಆಕೆಯ ಸಾಂಕೇತಿಕ ರೂಪವಾಗಿ ಗುಲಾಬಿ ಹೂವಿನ ಅಲಂಕಾರ ಮಾಡಿ, ಮೇಲೆ ಬಟ್ಟೆಯನ್ನು ಹೊದಿಸಿ ಉರುಕೋಣಿ, ದಾರ, ನೂಲಿನ ಹಗ್ಗದಿಂದ ಚೆನ್ನಾಗಿ ಕಳಚಿ ಬರದ ಹಾಗೆ ಬಿಗಿಯುತ್ತಾರೆ. ಈ ಅಲಂಕಾರ ಮಧ್ಯಾಹ್ನ ಸುಮಾರು ೧-೨ ಗಂಟೆಯವರೆಗೆ ನಡೆಯುತ್ತದೆ. ಒಟ್ಟು ಇತರೆ ಎಲ್ಲಾ ಮೈಲಾರ ಕ್ಷೇತ್ರಗಳಲ್ಲಿರುವಂತೆ ಮಾಳಮ್ಮನಿಗೆ ಮೂರ್ತಿಯಿರದೇ ಹೂವಿನ ಮೂಲಕ ಅಲಂಕಾರವನ್ನು ಕಂಡು ಕೊಂಡಿರುವುದು ಇಲ್ಲಿನ ವಿಶೇಷವೇ ಸರಿ . ಈ ರೀತಿ ವಿಶೇಷವಾಗಿ ಆಚರಿಸಿದರೂ ಗುಲಾಬಿ ಹೂವಿನ ಅಲಂಕಾರದ ಸಂದರ್ಭವನ್ನು ಕುರಿತು ಅಲ್ಲಿನ ವಕ್ತೃಗಳನ್ನು ವಿಚಾರಿಸಿದಾಗ ''ಅವತ್ತಿಗೆ ಮಾಳಮ್ಮನ ಮೂರ್ತಿಯಲ್ಲಿ ಗುಲಾಬಿ ಹೂವಿಗೆ ಹಿರ್‍ಯಾರು ಮಾಡಿಕ್ಯಾಂತ ಬಂದು ಬಿಟ್ಟಾರ. ಮಲ್ಲೇಶ್ವರಗೆ ಮಾತ್ರ ಮೂರ್ತಿಯಿದೆ. ಮಾಳಮ್ಮಗ ಗುಲಾಬಿ ಹೂ ಮಾತ್ರ ಇರ್ತೈತೆ. ಮೊದಲಿನಿಂದ ಅಂಗೆ ಬಂದೈತೆ. ನಾವು ಆ ಹೂವಿಗೇ ಪೂಜೆ ಮಾಡಿ ಬಿಟ್ಟೇವಿ. ಈ ಹೂವೇ ಗಂಗಿ ಮಾಳಮ್ಮ ಅಂತೇಳಿ ಅವತ್ತಿಗೆ ನಿರ್ಣಯ ಮಾಡಿಬಿಟ್ಟಾರೆ'' ಎಂದು ಮಲ್ಲಪ್ಪಯ್ಯ ಸ್ವಾಮಿ ಒಡೆಯರು ಹೇಳುತ್ತಾರೆ.

''ನಾವು ನೆರಣಿಕೆಯ ಮದ್ದಲಿ ಗೊರವರು ಬನ್ನಿಯ ದಿನ ನಮಗೆ ಪುಜಾರಿಗಳು ಬಂಗಾರದಂಥ ಹೂ ನೀಡ್ತಾರೆ. ಆದನ್ನು ಉತ್ಸವ ಮುರ್ತಿಯಾದ ಕುದುರೆಯ ಮೇಲಿಟ್ಟು ಅಲಂಕಾರ ಮಾಡಿ ಊರುಕೋನಿ ಪರುಕೋನಿ, ದಾರ ಪ್ರತಿಯೊಂದು ಸ್ವಾಮಾನ ಮಾಡಿ ನೂಲು ಹಗ್ಗ ಹಾಕಿ ಬಿಗಿದು ಬಂದ ಬಸ್ತ ಮಾಡಿ ಕಟ್ತೀವಿ'' ಎಂದು ಗಣಾಚಾರಿಗಳು ತಿಳಿಸುತ್ತಾರೆ. ಈ ಮದ್ದಲಿ ಗೊರವರ ಸಹಾಯಕ್ಕೆ ಕಂಚಾವೀರರೂ ಪಾಲ್ಗೊಂಡಿರುತ್ತಾರೆ.

ನೆರಣಿಕೆಯ ಪುರೋಹಿತರೂ ವಿದ್ವಾಂಸರೂ ಆದ ಸುಬ್ರಹ್ಮಣ್ಯಶಾಸ್ತ್ರಿಯವರ ಪ್ರಕಾರ ''ಗಂಗಿ ಮಾಳಮ್ಮಗ ಕುದುರೆಯ ಮ್ಯಾಲೆ ಒಂದು ಗುಲಾಬಿ ಹೂವಿದೆ. ಅದು ಬಂಗಾರದ್ದು. ಅದೇ ಆಕೆಯ ಪ್ರತಿರೂಪ. ಹೂ ಅಂದರೆ ಅಲಂಕಾರ ಅಲ್ಲ ಅದು. ಅದು ಹೂವಿನ ಪ್ರತಿರೂಪ ಅಷ್ಟೇ. ಹೂವಿನಲ್ಲಿ ಪದ್ಮಾಸನೆ, ಪದ್ಮಕಲೆ, ಪದ್ಮ ಲೋಕೈಕ ಪೂಜಿತೆ ಅಂತ ಕೇಳಿರ್ತಿವಲ್ಲ ಆ ಪದ್ಮಾಸನದಲ್ಲಿ ಆಕೆ ಅಡಗಿರುತ್ತಾಳೆ. ಗಂಗಿ ಮಾಳಮ್ಮನೇ ಇಲ್ಲಿ ಹೂವಿನ ಸ್ವರೂಪದಲ್ಲಿ ಇದಾಳ''.

ಮೀನಗೊಂದಿಯಲ್ಲಿ ಮಾಳಮ್ಮಗ ಮೂರ್ತಿಯಲ್ಲಿ ರಾಕ್ಷಸ ವಧೆಯಲ್ಲಿ ಅವಳ ಪ್ರತೀಕವಾಗಿ ಗುಲಾಬಿ ಹೂ ಇರುತ್ತದೆ. ಅಲ್ಲಿ ಈ ಹೂವಿನ ಸನ್ನಿಧಿಯಲ್ಲಿಯೇ ರಾಕ್ಷಸರ ವಧೆ ನಡೆಯುತ್ತದೆ. ಆವಳಿಂದಲೇ ಅದು ಪೂರೈಸಲ್ಪಡಬೇಕು. ಅದಕ್ಕಾಗಿ ಮುಖ್ಯ ದೇವರ ಪಲ್ಲಕ್ಕಿಯನ್ನು ಒಂದೆಡೆ ಬಿಟ್ಟು ಹೂವನ್ನು ಮಾತ್ರ ತೆಗೆದುಕೊಂಡು ಹೋಗಿ ರಾಕ್ಷಸ ವಧೆಯ ಕಾರ್ಯಕ್ರಮ ಪೂರೈಸಲಾಗುತ್ತದೆ. ಇದರಿಂದ ಇವಳ ಪ್ರತಿರೂಪ ವೆಂದು ಹೂವು ಇರುವುದು ನೈಜವಾಗಿದೆ. ಹಲವಾರು ಹಿಂದೂ ದೇವತೆಗಳು ಕಮಲದಲ್ಲಿ ವಾಸಮಾಡುತ್ತಾರೆಂಬ ನಂಬಿಕೆ ನಮ್ಮಲ್ಲಿದೆ. ಇಲ್ಲಿರುವ ಗುಲಾಬಿ ಹೂ ಬಹುಶಃ ಮೂಲತಃ ಕಲಿಕೆಯಾಗಿರಬೇಕು. ಈ ರೀತಿಯ ಆಚರಣೆ ನಮ್ಮನ್ನು ಮುರ್ತಿ ಪೂಜೆಯ ಹಿಂದಿನ ಕಾಲಕ್ಕೆ ಕೊಂಡೊಯ್ಯುತ್ತದೆ (ಡಾ. ಎಂ.ಬಿ.ನೇಗಿನಹಾಳ; ೧೯೯೨ :೨೪೭).

ಈ ಮೇಲೆ ನೋಡಿದ ಅಂಶಗಳನ್ನೆಲ್ಲಾ ಗಮನಿಸುತ್ತಾ ಬಂದಾಗ ಮಾಳಮ್ಮನಿಗೆ ಮೂರ್ತಿ ಇಲ್ಲದಿರುವುದು ಸ್ಪಷ್ಟ. ಪುರಾತನ ಕಾಲದ ಮನುಷ್ಯ ದೈವತ್ವದ ಕಲ್ಪನೆಗೆ ಒಳಗಾಗುವ ಹಂತದಲ್ಲಿ ಪ್ರಕೃತಿಯಲ್ಲಿ ಇರುವ ಗಿಡ, ಮರ, ಸೂರ್ಯ, ಚಂದ್ರ, ಗಾಳಿ, ಮಳೆ, ಮುಂತಾದವುಗಳನ್ನೆಲ್ಲಾ ದೈವತ್ವವೆಂದು ಬಗೆದು ಪೂಜಿಸುವ ಕಾಲಕ್ಕೆ ಈ ಆಚರಣೆ ಕೊಂಡೊಯ್ಯುತ್ತದೆ ಎಂದರೆ ತಪ್ಪಾಗದು. ಇದು ಆದಿ ದೈವತ್ವದ ಪುರಾಣ ಕಲ್ಪನೆಯ ಚಾರಿತ್ರಿಕ ಹಿನ್ನೆಲೆಯನ್ನು ಪ್ರತಿನಿಧಿಸಿದಂತಿದೆ. ಈ ರೀತಿಯ ಗುಲಾಬಿ ಹೂವಿನ ಅಲಂಕಾರ ಮೀನಗೊಂದಿಯಲ್ಲಿ ಅತ್ಯಂತ ವಿಶೇಷವಾಗಿದ್ದರೆ ಮೈಲಾರದಲ್ಲಿ ಇಂಥ ಆಚರಣೆ ಕಾಣಸಿಗದು. ಜೊತೆಗೆ ಕರ್ನಾಟಕ ಹಾಗೂ ಮಹರಾಷ್ಟ್ರದಲ್ಲಿರುವ ಮಲ್ಲಯ್ಯನ ಎಲ್ಲಾ ಕ್ಷೇತ್ರಗಳಲ್ಲಿಯೂ ಈ ರೀತಿಯ ವೈಶಿಷ್ಟ್ಯಪೂರ್ಣ ಆಚರಣೆ ಎಲ್ಲಿಯೂ ಕಾಣಸಿಗದು.

## ೮.೭. ರಾಕ್ಷಸರ ಸಂಹಾರ :

ದಸರಾ ಹಬ್ಬದ ಬನ್ನಿಯ ದಿನ ರಾತ್ರಿ ಸುಮಾರು ೧೦-೧೧ ರ ಹೊತ್ತಿಗೆ ನೆರಣಿಕೆ ಗ್ರಾಮಸ್ತರು ಊರಿನಲ್ಲಿರುವ ಬ್ಯಾಗಾರ ಗುಡಿಯಿಂದ ಬ್ಯಾಗಾರ ದೇವರು, ಮಾದಾರ ಗುಡಿಯಿಂದ ಮಾದಾರ ದೇವರುಗಳ ಜೊತೆಗೆ ದೇವರ ಪಲ್ಲಕ್ಕಿಯನ್ನು ಹೊತ್ತು ಗಿರಿಯ ಕಡೆಗೆ ಸಾಗುತ್ತಾರೆ. ಗಿರಿಯ ಕೆಳಭಾಗದಲ್ಲಿ ಇರುವ ಡೊಳ್ಳಿನ ಬಂಡೆಗೆ ಬರುವ ಹೊತ್ತಿಗೆ ಬ್ಯಾಗಾರರ ಮತ್ತು ಮಾದರ ದೇವರುಗಳು ತಮ್ಮ ಗುಡಿಗಳಿಗೆ ಸೇರುತ್ತವೆ. ಉಳಿದಂತೆ ಬಡಿಗೆ ಆಡುವ ಸರದಾರರು ಡೊಳ್ಳಿನ ಬಂಡೆಗೆ ಬಂದು ಸೇರುತ್ತಾರೆ. ಆಗಲೇ ಹೊಸಪೇಟೆ, ತಾಂಡ, ಮೊದಲಾದ ಕಡೆಯಿಂದ ಬಡಿಗೆಗಳು ಬಂದಿರುತ್ತವೆ. ನೆರಣಿಕೆಯ ಸರಪಂಚರು, ಗೌಡರು ನೆರೆದ ಬಡಿಗೆಯವರಿಗೆ ಯಾರೂ ಯಾವುದೇ ಕಾರಣಕ್ಕೆ ಬಡಿದಾಡದಂಗೆ ಒಂದೇ ತಾಯಿ ಪಿಳೇ ಆಗಿ ಬೇಸು ಬರ್ರೀ ಅಂತ ಬಹುಪರಾಕ್ ಪೇಳಿ ಭಂಡಾರ ಉಗ್ಗುತ್ತಾರೆ. ಇದು ಮಣಿ-ಮಲ್ಲಾಸುರರನ್ನು ಸಂಹರಿಸಲುಯುದ್ಧಕ್ಕೆ ಹೊರಟ ವೀರರ ಉತ್ಸುಕತೆ ಜೊತೆಗೆ ಹಿರಿಯರ ಆಶೀರ್ವಾದವಾಗಿದೆ. ಆ ವೇಳೆಗಾಗಲೇ ಡೊಳ್ಳಿನ ಬಂಡಿಯಲ್ಲಿ ನಾಲ್ಕು ಅವುಟುಗಳನ್ನು ಹಾರಿಸಿರುತ್ತಾರೆ. ಐದನೇ ಅವುಟು ಹಾರಿದ ಮೇಲೆ ಬಡಿಗೆಗಳೆಲ್ಲ ಬಜಾರಕ್ಕೆ ನುಗ್ಗಿ ಬರುತ್ತವೆ. ರಾತ್ರಿ ಗಿರಿಯಲ್ಲಿ ೧ ಗಂಟೆಯ ಸುಮಾರಿಗೆ ಮಾಳಾ-ಮಲ್ಲೇಶ್ವರರಿಗೆ ಮದುವೆಯ ಕಾರ್ಯ ಮುಗಿದ ನಂತರ ಉತ್ಸವ ಮೂರ್ತಿಗಳು ಬಡಿಗೆಗಳೊಂದಿಗೆ ರಾಕ್ಷಸಪಡೆಗೆ ತೆರಳುತ್ತವೆ. ಈ ರಾಕ್ಷಸ ಪಡೆಯಲ್ಲಿ ರಾಕ್ಷಸರು ಇಂದಿಗೂ ವಾಸಿಸುತ್ತಿರುವರೆಂದು ಜನಪದರ ನಂಬಿಕೆಯಾಗಿದೆ. ಕಂಚಾವೀರ ತನ್ನ ಕಾಲಿನ ಮೀನಗಂಡದಲ್ಲಿ ಶಸ್ತ್ರ ಪವಾಡ ಮಾಡಿ ಐದು ಹನಿ ರಕ್ತ ಬಂಡೆಯ ಮೇಲೆ ಬಿದ್ದೊಡನೆ ರಾಕ್ಷಸರು ಆ ರಕ್ತದಿಂದ ತೃಪ್ತರಾದರು. ಅಂದರೆ ರಾಕ್ಷಸರ ಸಂಹಾರ ಆಯಿತೆಂದು ಭಾವಿಸುತ್ತಾರೆ. ಈ ಸಂಹಾರದಲ್ಲಿ ಪುರಾಣದ ಕಥೆಯನ್ನು ನಾವು ಈ ಗಾಗಲೇ ನೋಡಿದ್ದೇವೆ.

ಮೈಲಾರದಲ್ಲಿ ಅಸುರರ ಸಂಹಾರ ಮತ್ತು ಕಾರಣಿಕ ದಿನದಂದು ಬೆಳಿಗ್ಗೆ ಸುಮಾರು ೫ ಗಂಟೆಗೆ ಮೂರು ಸಲ ತುಬಾಕಿನಿಂದ ಗಾಳಿಯಲ್ಲಿ ಗುಂಡು ಹಾರಿಸುತ್ತಾರೆ. ಮೂರನೇ ಗುಂಡು ಹಾರಿದ ಕೂಡಲೇ ಮುಖ್ಯ ಒಡೆಯರು ಬಂದು ದೇವರನ್ನು ಎಬ್ಬಿಸಲು ಸಂಜ್ಞೆ ಮಾಡುತ್ತಾರೆ. ಕೂಡಲೇ ಬೋವಿಗಳು ವಾಹನವನ್ನು ಹೊತ್ತು ಡೆಂಕಣ ಮರಡಿಯ ಕಡೆಗೆ ಜೋರಾಗಿ ನಡೆಯತೊಡಗುತ್ತಾರೆ. ಸಾವಿರಾರು ಜನರ ಕೈಯಲ್ಲಿರುವ ಕಾಯಿ ಕೋಲು ದೀವಟಗೆ ಮತ್ತು ಗ್ಯಾಸು ದೀಪಗಳ ಬೆಳಕಿನಲ್ಲಿ ಉತ್ಸವ ಮೌನವಾಗಿ ಸಾಗುತ್ತದೆ. ಸವಾರಿ ಡೆಂಕಣ ಮರಡಿಗೆ ತಲುಪಿದೊಡನೆ ರಥ ಕೆಳಗಿಳಿಸಿ ಮಲ್ಲಾಸುರನ ಮುಖವನ್ನು ಎಲ್ಲಾರಿಗೂ ಕಾಣುವಂತೆ ಹೊರಳಿಸಿ ದೇವರ ಮೇಲಿನ ಮುಸುಕನ್ನು ಕಳಚಿ ಬಿಡುತ್ತಾರೆ. ಕುದುರೆ ಏರಿ ಬರುವ ಒಡೆಯರು, ನೆರೆದ ಗೊರವರು, ಭಕ್ತಾದಿಗಳೆಲ್ಲರೂ, ಡೆಂಕಣ ಮರಡಿಯನ್ನು ಆವರಿಸಿ ನಿಲ್ಲುವಂತೆ ಆದೇಶಿಸುತ್ತಾರೆ. ಮರಡಿಯ ಮೇಲಿರುವ ಶಿಬಾರಕ್ಕೆ ತುಸು ದೂರದಲ್ಲಿ ಇಬ್ಬರು ಮೇಕೆ ಮರಿ ಬಲಿಗಾಗಿ

ಒಡೆಯರ ಆದೇಶಕ್ಕಾಗಿ ಕಾಯುತ್ತಾ ನಿಲ್ಲುತ್ತಾರೆ. ತಕ್ಷಣ ತುಬಾಕಿನಿಂದ ಒಡೆಯರು ಗುಂಡು ಹಾರಿಸುತ್ತಾರೆ. ಕೂಡಲೇ ಮೇಕೆ ಮರಿಯ ಕತ್ತನ್ನು ಕತ್ತರಿಸಿ ಮಲ್ಲಾಸುರನ ಸಂಹಾರವಾಯಿತೆಂದು ಉಚ್ಚಸ್ವರದಲ್ಲಿ ಕೇಕೆ ಹಾಕಿ ಏಳುಕೋಟಿ, ಏಳುಕೋಟಿ ಚಾಂಗಮಲೋ ಎಂದು ಮುಗಿಲು ಮುಟ್ಟುವಂತೆ ಘೋಷಣೆ ಕೂಗತೊಡಗುತ್ತಾರೆ. ಎಂದರೆ ಈಗ ಮಲ್ಲಾಸುರ ಸಿಕ್ಕು ಅವನ ವಧೆ ಆಯಿತೆಂದು ಲೆಕ್ಕ. ಡಮರುಗ, ಗಂಟೆ, ಪಾರಿ, ಮುಂತಾದ ವಾದ್ಯಗಳ ಸಪ್ಪಳ ಬಾಣ ಬಿರುಸುಗಳ ಸಪ್ಪಳದಿಂದ ಕಿವಿಗಡಚಿಕ್ಕುತ್ತವೆ.

ಮಲ್ಲಯ್ಯನ ಎರಡೂ ಕ್ಷೇತ್ರಗಳಲ್ಲಿ ರಾಕ್ಷಸರ ಸಂಹಾರ ಮಾಡುವುದು ಮಣಿ ಮಲ್ಲಾಸರರನ್ನೇ ಆದರೂ ಸಂಹರಿಸುವ ವಿಧಾನಗಳು ಬೇರೆ ತೆರನಾಗಿವೆ. ಮೈಲಾರದಲ್ಲಿ ಒಡೆಯರು ಸ್ವತಃ ಡೆಂಕಣ ಮರಡಿಗೆ ಬಂದು ತುಬಾಕಿನಿಂದ ಗುಂಡು ಹಾರಿಸುವ ಮೂಲಕ ಕುರಿಯನ್ನು ರಾಕ್ಷಕರ ಸಂಕೇತವಾಗಿ ಬಳಸಿ ಸಂಹಾರ ಮಾಡುತ್ತಾರೆ. ಆದರೆ ಮೀನಗೊಂದಿಯಲ್ಲಿ ಕಂಚಾವೀರನು ತನ್ನ ಮೀನಗಂಡದಲ್ಲಿ ಶಸ್ತ್ರ ಪವಾಡ ಮಾಡಿ ಐದು ಹನಿ ರಕ್ತವನ್ನು ಬಂಡೆಗೆ ಸುರಿಸುವ ಮೂಲಕ ರಾಕ್ಷಸರನ್ನು ತೃಪ್ತಿಪಡಿಸಿದ ಅಥವಾ ಸಂಹಾರ ಮಾಡಿದ ಎಂದು ಬಗೆಯುತ್ತಾರೆ. ಒಂದು ಅಂಶ ಇಲ್ಲಿ ಸ್ಪಷ್ಟವಾಗಿ ಗಮನಿಸಬೇಕಾಗಿದೆ ಅದೇನೆಂದರೆ ನರರ ರಕ್ತವನ್ನೇ ರಾಕ್ಷಸರಿಗೆ ಆಹಾರವಾಗಿ ನೀಡುವುದು ಮೀನಗೊಂದಿಯಲ್ಲಿನ ಪ್ರತ್ಯೇಕ ವೈಶಿಷ್ಟವಾದರೆ ಪ್ರಾಣಿಯನ್ನು ಬಲಿ ಕೊಡುವುದು ಮೈಲಾರದಲ್ಲಿಯ ವೈಶಿಷ್ಟ್ಯವಾಗಿದೆ.

ಅವುಟು ಮತ್ತು ಬಂದೂಕಿನಿಂದ ಗುಂಡು ಹಾರಿಸುವುದು ಇವೆರಡು ಅಂಶಗಳನ್ನು ಗಣನೆಗೆ ತೆಗೆದುಕೊಂಡಾಗ ಅವುಟು ಎಂಬ ಪದ ಜನಪದರು ನುಡಿದಂತೆ ಸ್ಫೋಟಕ ಎಂಬ ಅರ್ಥವನ್ನು ಹೊಂದಿದೆ. ಗಿರಿ ಮಲ್ಲಯ್ಯ ಕ್ಷೇತ್ರ ಪರ್ವತ ಶ್ರೇಣಿಗಳಿಂದ ಆವರಿಸಿರುವುದರಿಂದ ಡೊಳ್ಳಿನ ಬಂಡೆಯಲ್ಲಿ ಅವುಟು ಎಬ್ಬಿಸುವುದರಿಂದ ಬಾಣ ಅತಿ ಮೇಲೆ ಹೋಗಿ ಮತ್ತೊಮ್ಮೆ 'ಹೂಂ ' ಅನ್ನುವ ಶಬ್ದ ಮಾಡಿದಾಗ ಕ್ಷೇತ್ರದ ಸುತ್ತ ಮುತ್ತಲಿನ ಗ್ರಾಮದವರಿಗೂ ಕಾರ್ಯಕ್ರಮದ ಹಂತ ತಿಳಿಯಲಿ ಎಂದು ಬಳಿಸಿದಂತಿದೆ. ಬಂದೂಕಿನಿಂದ ಗಾಳಿಯಲ್ಲಿ ಗುಂಡು ಹಾರಿಸುವುದು ಅದೇ ರೀತಿಯ ಅರ್ಥವನ್ನು ಹೊಂದಿದೆ ಆದರೂ ಅವುಟು ಅನಾಗರೀಕತೆ ಅನಾದಿಯಿಂದಲೂ ಸಾಗಿ ಇಂದಿಗೂ ಜೀವಂತಿಕೆಯನ್ನು ಪಡೆದುದರ ಸಂಕೇತವಾಗಿದೆ. ಬಂದೂಕು ಅನ್ನುವುದು ಆಧುನಿಕತೆಯ ಜಾಡಿಗೆ ತಿರುಗಿದ ಒಂದು ಹೊಸ ರೂಪವನ್ನು ಪ್ರತಿನಿಧಿಸುತ್ತದೆ.

## ೮.೮. ಬಂಢಾರ :

ಬಂಢಾರ ಮಲ್ಲಯ್ಯ ಹಾಗೂ ಮೈಲಾರಲಿಂಗನಿಗೆ ಅತಿ ಪ್ರಿಯವಾದ ವಸ್ತು. ಈತನನ್ನು ಭಂಡಾರದಯ್ಯ, ಭಂಡಾರದೊಡೆಯ ಎಂತೆಲ್ಲ ಭಕ್ತರು ಕರೆಯುತ್ತಾರೆ. ಸ್ವಾಮಿಯ ಭಂಡಾರಕ್ಕೆ ಎಂತಹ ಅದ್ಭುತವಾದ ದೈವೀ ಶಕ್ತಿ ಅಡಗಿದೆ ಎಂಬುದು ಬಹಳ ಕುತೂಹಲದ ವಿಷಯ. ಮೀನಗೊಂದಿಯಲ್ಲಿ ಸ್ವಾಮಿಯ ಪ್ರತಿಯೊಂದು ಕಾರ್ಯಗಳಾದ ಸರಪಳಿ ಪವಾಡವಾಗಲೀ, ಶಸ್ತ್ರಪವಾಡವಾಗಲೀ, ಬಸವಿಯರ ಆಟಕ್ಕಾಗಲೀ, ಕಾರಣಿಕ ಹೇಳುವಲ್ಲಾಗಲೀ, ಬಡಿಗೆ ಆಟದಲ್ಲಾಗಲೀ, ಉತ್ಸವಕ್ಕಾಗಲೀ ಹೀಗೆ ಪ್ರತಿಯೊಂದು ಆಚರಣೆಯಲ್ಲೂ ಭಂಡಾರವಿಲ್ಲದೆ ಯಾವ ಕಾರ್ಯಗಳು ನಡೆಯವು ಅನ್ನುವಷ್ಟರ ಮಟ್ಟಿಗೆ ಅದು ತನ್ನದೇ ಪ್ರಮುಖ್ಯತೆಯನ್ನು ಪಡೆದುಕೊಂಡಿದೆ. ಅಷ್ಟೇ ಅಲ್ಲದೆ ಒಡೆಯರು ಬಂದ ಭಕ್ತರಿಗೆ ಹಣೆಗೆ ಹಚ್ಚಿ ಪ್ರಸಾದ ರೀತಿಯಲ್ಲಿ ಭಂಡಾರವನ್ನೇ ನೀಡುತ್ತಾರೆ. ಅಂತಹ ಭಂಡಾರವನ್ನು ಒಂದು ವರ್ಷದವರೆಗೆ ಉಪಯೋಗಿಸುತ್ತಾರೆ. (ಸ್ವಾಮಿಯ ಕೈಯಿಂದಾಗಲೀ ಇಲ್ಲವೆ ಈ ಕ್ಷೇತ್ರದಿಂದ ತೆಗೆದುಕೊಂಡು ಹೋದ ಭಂಡಾರವಾಗಿದೆ) ಭಂಡಾರ ಪ್ರತಿಯೊಬ್ಬ ಭಕ್ತರ ಬದುಕಿಗೆ ಅವಿಭಾಜ್ಯ ಅಂಗವಾಗಿದೆಯೆಂದರೆ ತಪ್ಪಾಗದು. ಪ್ರತಿ ಮಲ್ಲಯ್ಯನ ಕ್ಷೇತ್ರದಲ್ಲಿ ಭಕ್ತರಿಗೆ ಬಂದ ರೋಗ-ರುಜಿನಗಳಿಗಾಗಲೀ, ಕಷ್ಟ ಕಾರ್ಪಣ್ಯಗಳಿಗಾಗಲೀ, ಭಂಡಾರವನ್ನು ಹಣೆಗೆ ಹಚ್ಚುವುದರಿಂದಲೇ ವಾಸಿಯಾಗುತ್ತದೆ ಎಂದು ಜನಪದರು ನಂಬಿರುವರು.

ಪ್ರಸ್ತುತ ಮೀನಗೊಂದಿ ಕ್ಷೇತ್ರದಲ್ಲಿ ಒಂದು ವಿಶಿಷ್ಟವಾಗಿ ಮನುಸಂಕುಲವನ್ನು ಬೆಚ್ಚಿ ಬೀಳಿಸುವಂತಹ ಬಡಿಗೆಯಾಟ ನೆರೆಯುತ್ತದೆ. ಆ ಸಂದರ್ಭದಲ್ಲಿ ಬಡಿಗೆಯಾಟ ಆಡುವವರು ಮಾನವೀಯ ಸಂಬಂಧಗಳನ್ನೆಲ್ಲಾ ಗಾಳಿಗೆ ತೂರಿ ಜೀವಗಳ ಜೊತೆ ಬಡಿದಾಡಿ ರಕ್ತದೋಕುಳಿ ಕಂಡು ತಲೆಗಳು ಉರುಳಿದರೂ ಅದನ್ನು ಅವರ ಮಾತಿನಲ್ಲೇ ಹೇಳುವುದಾದರೆ; ''ಬಂಢಾರ ಹಾಂದ ಮ್ಯಾಲೆ ಬಡಿಗೆ ಎತ್ತಂಗಿಲ್ಲ'' ಬಂಢಾರ ಚೆಲ್ಲುವುದ ಮುಗಿಯಿತು ಅಂತ ತಿಳಿದರೆ ಸಾಕು ಎಂತಹ ಕಾರ್ಯವಂತರೂ ತನ್ನವರೇ ಹೆಣವಾಗಿ ಉರುಳಿದ್ದರೂ ಶತೃಗಳೆಂದು ಪರಿಗಣಿಸಿದ್ದ ವ್ಯಕ್ತಿಗಳನ್ನು ಹೊಡೆಯದೆ ವಿನಮ್ರವಾಗಿ ಬಡಿಗೆಯಾಟ ನಿಲ್ಲಿಸಿ ಸ್ವಾಮಿಯ ಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ. ಆದರೆ ಈಗ ಇದು ಮತ್ತೊಂದು ರೂಪವನ್ನು ಪಡೆದುಕೊಂಡಿದೆ. ಅದೇನೆಂದರೆ; ಹೇಳಿಕೆಯ ನಂತರ ಬಂಢಾರವನ್ನು ಭಕ್ತರ ಮೇಲೆ ಎರಚಿದರೂ ಬಡಿಗೆ ಆಡುವವರು ಬಡಿಗೆಗಳನ್ನು ಇಳಿಸದೇ ದೇವರ ಉತ್ಸವ ಮೂರ್ತಿಗಳು ಶಿವಸಾನ ಗದ್ದಿಗೆಗೆ ಬಂದು ಕುಳಿತಾಗ ಬಡಿಗೆಗಳನ್ನು ಇಳಿಸುತ್ತಾರೆ. ಬಂಢಾರೋತ್ಸವ ಎನ್ನುವ ಪ್ರತ್ಯೇಕ ಕಾರ್ಯಕ್ರಮವನ್ನು ಮೈಲಾರದಲ್ಲಿ ಕಾಣಬಹುದು. ಆದರೆ ಮೀನಗೊಂದಿಯಲ್ಲಿ ನಡೆವ ವಿಶಿಷ್ಟ ರೀತಿಯ ಈ ಆಚರಣೆ ಅಲ್ಲಿ ಕಾಣಸಿಗದು.

## ೮.೯. ಬಲಿ

ಮೀನಗೊಂದಿ ಮಲ್ಲಯ್ಯನ ಕ್ಷೇತ್ರದಲ್ಲಿ ಪ್ರಾಣಿ ಬಲಿ ಕಂಡುಬರುವುದಿಲ್ಲ. ಅದೇನಿದ್ದರೂ ನಿಷಿದ್ಧ. ಎಂತಹ ಪರಿಸ್ಥಿತಿ ಬಂದೊದಗಿದರೂ ಬಲಿ ನಿಷೇಧವನ್ನು ಭಕ್ತರು ಕಟ್ಟುನಿಟ್ಟಾಗಿ ಪಾಲಿಸುತ್ತಾ ಬಂದಿದ್ದಾರೆ. ದಸರಾ ಅಮಾವಾಸೆಯಿಂದ ಹುಣ್ಣಿಮೆಯವರೆಗೆ ಮಲ್ಲಯ್ಯನ ಭಕ್ತರು ಮನೆಯಲ್ಲಿ ಮಾಂಸದ ಅಡುಗೆಯನ್ನು ಮಾಡುವುದಾಗಲೀ ಇಲ್ಲ. ಆ ನಡುವಿನ ೧೫ ದಿನಗಳಲ್ಲಿ ಹೊರಗಡೆ ಹೋಗಿ ತಿನ್ನುವುದಾಗಲೀ ಮಾಡುವುದಿಲ್ಲ. ಈ ಸ್ವಾಮಿಗೆ ಪ್ರಾಣಿ ಬಲಿ ಇಲ್ಲ. ''ಮೊದಲು ರಥೋತ್ಸವ ಸಂದರ್ಭದಲ್ಲಿ ರಥವನ್ನು ಎಳೆಯುವಾಗ ಈ ಕ್ಷೇತ್ರದಲಿ ಮೇಕೆಯನ್ನು ಬಲಿ ಕೊಡ್ತಾಯಿದ್ರು. ಅದು ನಮ್ಮ ದೊಡ್ಡಪ್ಪನವರ ಕಾಲದಲ್ಲಿ ನಿಷೇಧಿಸಲಾಯ್ತು. ಜಂತು ಬಲಿ ಬೇಡ ಅಂತ, ಈಗ ನಮ್ಮ ಸಮಯದಲ್ಲಿ ಕುಂಬಳಕಾಯಿಯನ್ನು ಒಡೆಯುವುದರ ಮೂಲಕ ಪ್ರಾಣಿ ಬಲಿಯನ್ನು ನಿಷೇಧಿಸಿದ್ದೇವೆ. ಅಂದ್ರೆ ಜೀವ ಹಿಂಸೆ ಮಾಡ ಕೂಡದು ಎನ್ನುವ ಒಂದು ದೃಷ್ಟಿಯಿಂದ ಹೀಗೆ ಮಾಡಿದ್ದೇವೆ'' ಎಂದು ಒಡೆಯರು ಹೇಳುವರು.

ಮಣಿ ಮಲ್ಲಾಸುರರ ಕಾಳಗಕ್ಕೂ ಬಲಿಗೂ ಈ ಕ್ಷೇತ್ರದ ಬಹುತೇಕ ಜನರು ಸಂಬಂಧವನ್ನು ಕಲ್ಪಿಸುತ್ತಾರೆ. ಮುಖ್ಯವಾಗಿ ಮಣಿಕಾಸುರ ಮಲ್ಲಾಸುರರು ನಮಗೆ ಇಷ್ಟು ಮನುಷ್ಯರ ಬಲಿ ಬೇಕು ಎಂದು ಮಲ್ಲಯ್ಯನನ್ನು ಕೇಳಿದಾಗ ಅದಕ್ಕೆ ತಪ್ಪದೇ ಪ್ರತಿ ವರ್ಷ ಇಷ್ಟು ಹನಿ ರಕ್ತ ಕೊಡ್ತೇವೆ. ಅದರಾಚೆ ನೀನು ಏನು ಬೇಡುವ ಹಾಗೆ ಇಲ್ಲ ಎನ್ನುತ್ತಾನೆ. ಹಾಗಾಗಿ ಇವತ್ತಿನವರೆಗೂ ಪ್ರತಿ ದಸರಾ ಬನ್ನಿಗೆ ಕಂಚಾವೀರರು ತಮ್ಮ ಮೀನಗಂಡದಿಂದ ರಕ್ತ ಕೊಡೋದು ಬಲಿಯ ಸಂಕೇತವಾಗಿದೆ. ಇದರ ಅರ್ಥ ಮಲ್ಲಯ್ಯನು ಮಣಿ ಮಲ್ಲಾಸುರರನ್ನು ಸಂಹರಿಸಿದನೆಂದೇ ಜನರು ಭಾವಿಸುತ್ತಾರೆ.

ಮೈಲಾರ ಕ್ಷೇತ್ರದಲ್ಲಿ ಪ್ರಾಣಿ ಬಲಿ ನಡೆಯುತ್ತಿರುವುದರ ಕುರುಹುಗಳು ನಮಗೆ ಸಿಗುತ್ತವೆ. ರಾಕ್ಷಸರನ್ನು ಸಂಹರಿಸುವ ದಿನದಂದು ಡೆಂಕಣ ಮರಡಿಯ ಮೇಲಿರುವ ಶಿಖರಕ್ಕೆ ತುಸು ದೂರದಲ್ಲಿ ಇಬ್ಬರು ಮೇಕೆ ಮರಿಯೊಂದನ್ನು ಹಿಡಿದು ನಿಂತಿರುತ್ತಾರೆ. ಮತ್ತೊಬ್ಬ ಆಯುಧ ಹಿಡಿದು ಬಲಿ ಹೊಡೆಯಲು ಒಡೆಯರ ಆದೇಶಕ್ಕೆ ಕಾಯುತ್ತಾ ನಿಲ್ಲುತ್ತಾನೆ. ಒಡೆಯರು ಒಮ್ಮೆ ಜೋರಾಗಿ ಕೇಕೆ ಹೊಡೆದ ತಕ್ಷಣವೇ ಮೇಕೆ ಮರಿಯ ಕತ್ತನ್ನು ಕತ್ತರಿಸಿ ಮಲ್ಲಾಸುರನ ಸಂಹಾರವಾಯಿತೆಂದು ಉಚ್ಚ ಸ್ವರದಲ್ಲಿ ಕೂಗುತ್ತಾ ಕೇಕೆ ಹಾಕುತ್ತಾ ಒಡೆಯರೂ ಸೇರಿದಂತೆ ಗೊರವರು ಮಂಟಪದ ಸುತ್ತ ಆವೇಶದಿಂದ ಗಸ್ತು ಹೊಡೆಯುತ್ತಾರೆ (ಚಕ್ಕೆರೆ ಶಿವಶಂಕರ; ೧೯೯೩:೮೩).

''ಸರಪಳಿ ಪವಾಡದ ದಿನದಂದು ಸರಪಳಿ ಹರಿದ ತರುವಾಯ ಒಂದು ಕುರಿಯನ್ನು ಬಲಿ ಕೊಡುತ್ತಾರೆ. ಮನೆಯವರಿಗೆ ಬೇಕಾದರೆ ಹೆಚ್ಚು ಸಂಖ್ಯೆಯ ಕುರಿಗಳನ್ನು ಬಲಿ ಕೊಡಬಹುದು. ತರುವಾಯ ಅಡುಗೆ ಮಾಡಿ ನೈವೇದ್ಯ ತೋರಿಸುತ್ತಾರೆ''(ಡಾ. ಎಂ.ಬಿ.ನೇಗಿನಹಾಳ; ೧೯೯೨:೧೯೨). ''ಭೂತಾಳ ಗುಂಡಿಯಲ್ಲಿ ಜೋಡು ಕುರಿಗಳ ಬಲಿ ನಡೆಯುವುದು''(ಡಾ. ಎಂ.ಬಿ ನೇಗಿನಹಾಳ ; ೧೯೯೨:೧೮೧). ಹೀಗೆ ಪ್ರಾಣಿ ಬಲಿ ಪದ್ಧತಿಯಂತಹ ಆಚರಣೆ ಮೀನಗೊಂದಿ ಮಲ್ಲಯ್ಯನ ಕ್ಷೇತ್ರದಲ್ಲಿ ಸಂಪೂರ್ಣ ನಿಷಿದ್ಧ. ಆದರೆ ಬಡಿಗೆಯಾಟದಂತಹ ಆಟವನ್ನು ಈ ಕ್ಷೇತ್ರದಲ್ಲಿ ಜೀವಂತವಾಗಿರಿಸಿಕೊಂಡಿರುವುದು ಒಂದು ರೀತಿಯ ಮಾನವ ಬಲಿ ಪದ್ಧತಿಗೆ ನಿದರ್ಶನವಾಗಿದೆ ಎಂದರೆ ತಪ್ಪಾಗದು. ಪ್ರತಿ ವರ್ಷ ಬಡಿಗೆಯಾಟದಲ್ಲಿ ಸಾವಿರಾರು ಜನರು ಪಾಲ್ಗೊಳ್ಳುತ್ತಾರೆ. ಅದರಲ್ಲಿ ಸುಮಾರು ೧೦೦ ರಿಂದ ೧೫೦ ಜನರಿಗೆ ತಲೆಗಳು ಒಡೆಯುತ್ತವೆ. ಕನಿಷ್ಠ ಇಬ್ಬರು, ಮೂವರಾದರೂ ಸಾವನ್ನಪ್ಪುತ್ತಾರೆ. ಇದನ್ನು ಕುರಿತು ಅಲ್ಲಿನ ಜನತೆಯನ್ನು ಪ್ರಶ್ನಿಸಿದಾಗ; ''ರಕ್ತ ಕಾಣದಿದ್ದರೆ ಅದು ಒಂದು ಹಬ್ಬವೇ? ರಕ್ತ ಕಂಡರೆ ಅದು ಹಬ್ಬ. ಇದೆಲ್ಲವೂ ಮಾನವ ಮಾಡುವಂತಹದಲ್ಲ. ರಾಕ್ಷಸರೇ ಮಾನವರ ಮೈಹೊಕ್ಕು ಮಾಡುವಂತಹ ಕಾರ್ಯ. ಆ ಸಂದರ್ಭದಲ್ಲಿ ಭಕ್ತರ ರಕ್ತದಿಂದ ರಾಕ್ಷಸರು ಸಂತೃಪ್ತರಾಗುತ್ತಾರೆ'' ಎನ್ನುತ್ತಾರೆ. ಒಟ್ಟಾರೆ ಗಮನಿಸಿದರೆ ಬಲಿ ಪದ್ಧತಿ ಎಂಬುದು ಈ ಕ್ಷೇತ್ರದಲ್ಲಿ ಇಲ್ಲ. ಆದರೆ ಪರೋಕ್ಷವಾಗಿ ಬಡಿಗೆ ಯಾಟದ ಸಂದರ್ಭದಲ್ಲಿ ಆಗುವ ನರಬಲಿ ಒಂದು ರೀತಿಯ ವಿಷಾದವೇ ಸರಿ.

## ೮.೧೦. ಸರಪಳಿ ಪವಾಡ :

ಮೀನಗೊಂದಿಯ ಕ್ಷೇತ್ರದಲ್ಲಿ ದಸರಾ ಬನ್ನಿಯಾದ ಮಾರನೆಯ ದಿನಕ್ಕೆ ಸರಪಳಿ ಪವಾಡದ ಕಾರ್ಯಕ್ರಮವಿರುತ್ತದೆ. ಆ ದಿನ ಶಿವಸಾನ ಗದ್ದಿಗೆಯಲ್ಲಿ ಮಲ್ಲಯ್ಯ ಮತ್ತು ಮಾಳಮ್ಮನವರ ಉತ್ಸವ ಮೂರ್ತಿಗಳನ್ನು ಕುಳ್ಳಿರಿಸಲಾಗುತ್ತದೆ. ಬೆಳಿಗ್ಗೆ ಸುಮಾರು ಆರರಿಂದಲೇ ದೇವರ ಉತ್ಸವ ಮೂರ್ತಿಗಳಿಗೆ ಪೂಜಾ ಕಾರ್ಯಕ್ರಮ ನೆರವೇರತೊಡಗುತ್ತದೆ. ಗಣಾಚಾರಿಗಳು ಭಕ್ತರು ತಂದ ಕಾಯಿಯನ್ನು ಗದ್ದಿಗೆಯಲ್ಲಿ ಒಡೆಯುತ್ತಾರೆ. ದೇವರಿಗಾಗಿ ತಂದ ಮೀಸಲನ್ನು ಭಕ್ತಿಪೂರ್ವಕವಾಗಿ ಭಕ್ತರಿಂದ ಸ್ವೀಕರಿಸಿ ಒಡೆಯರ ಸಮಕ್ಷಮಕ್ಕೆ ಕಳುಹಿಸಿಕೊಡುತ್ತಾರೆ. ಹೀಗಿರುವಾಗ ಬೆಳಿಗ್ಗೆ ಎಂಟು ಗಂಟೆಯ ಹೊತ್ತಿಗೆ ಸರಪಳಿಯನ್ನು ಶಿವಸಾನ ಗದ್ದುಗೆಯಲ್ಲಿಟ್ಟು ಗಣಾಚಾರಿಗಳು ಅದಕ್ಕೆ ಬಂಢಾರವನ್ನು ಎರಚುವುದರ ಮೂಲಕ ಸರಪಳಿಗೆ ಪೂಜಾ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಇತ್ತ ಭಕ್ತ ಜನಸ್ತೋಮ ಕಿಕ್ಕಿರಿದು ಸರಪಳಿ ಪವಾಡ ನೋಡಲು ಹೆಣಗಾಡುತ್ತಿರುತ್ತಾರೆ. ಒಡೆಯರು ಸರಪಳಿಗೆ ಭಕ್ತಿಪೂರ್ವಕವಾಗಿ ಬಂಢಾರವನ್ನು ಬಡಿದು ಸರಪಳಿ ಪವಾಡಕ್ಕೆ ಅನುಮತಿ ಯನ್ನು ನೀಡುತ್ತಾರೆ. ಶಿವಸಾನ ಮಂಟಪವನ್ನು ಹತ್ತುವ ಮೆಟ್ಟಿಲುಗಳ ಒಂದು ಕಲ್ಲಿನ ಕಂಭವನ್ನು ನೆಟ್ಟಿದ್ದಾರೆ. ಗಣಾಚಾರಿಗಳು ಸರಪಳಿಯನ್ನು ತಂದು ಆ ಕಂಬಕ್ಕೆ ಕಟ್ಟುತ್ತಾರೆ. ಬಲ್ಲೂರಿನವರೇ ಆದ ಒಗ್ಗಪ್ಪ ಈ ಪವಾಡವನ್ನು ಮಾಡುತ್ತಾರೆ. ವಂಶಾನುಪಾರಂಪರೆಯಿಂದಲೇ ಸರಪಳಿ

ಪವಾಡ ಮಾಡುವ ಕಾರ್ಯವನ್ನು ಅವರು ಮಾಡುತ್ತಲೇ ಬಂದಿದ್ದಾರೆ. ಇವರು ಮಾಮೂಲು ವಗ್ಗರಂತೆ ಕಂಬಳಿಯ ನಿಲುವಂಗಿ, ಕೊರಳಲ್ಲಿ ಕವಡೆ ಸರ, ತಲೆಗೆ ಕರಡಿ ಟೊಪ್ಪಿಗೆ, ಕೈಯಲ್ಲಿ ಡಮರುಗ,ಪಿಳ್ಳಂಗೋವಿ ಬಂಢಾರ ಚೀಲವನ್ನು ಧರಿಸಿರುತ್ತಾರೆ. ಪವಾಡದ ಸಮಯದಲ್ಲಿ ಬಂಢಾರ ಚಲ್ಲಿ, ಡಮರುಗ, ಪಿಳ್ಳಂಗೋವಿಯನ್ನು ತೆಗೆದಿರಿಸಿ ಬರುತ್ತಾರೆ. ಎಲ್ಲಾ ವಗ್ಗರಂತೆ ಇವರು ಒಡೆಯರಿಂದ ದೀಕ್ಷೆ ಪಡೆದು ಶ್ರೀಮುಖವನ್ನು ಪಡೆದುಕೊಂಡಿರುತ್ತಾರೆ. ಈ ವಗ್ಗಯ್ಯ ಶಿವಸಾನ ಗದ್ದುಗೆಯಲ್ಲಿ ಕುಳಿತಿರುವ ಮಾಳಾ-ಮಲ್ಲೇಶ್ವರರ ಉತ್ಸವ ಮೂರ್ತಿಗಳಿಗೆ ನಮಸ್ಕರಿಸಿ, ಒಡೆಯರ ಪಾದಗಳಿಗೆ ನಮಸ್ಕರಿಸಿ, ಅವರಿಂದ ಆಶೀರ್ವಾದ ಪಡೆದು ಸರಪಳಿ ಪವಾಡವನ್ನು ಮಾಡುತ್ತಾರೆ. ಯಾವಾಗ ಸರಪಳಿ ತುಂಡಾಗುತ್ತದೆಯೋ ಆಗ ಭಕ್ತರು ಜೋರಾಗಿ ಚಪ್ಪಾಳೆಯನ್ನು ತಟ್ಟುತ್ತಾರೆ. ಭಕ್ತರು ಪವಾಡ ಪುರುಷನನ್ನು ಹರ್ಷೋದ್ಗಾರದಿಂದ ಹೊತ್ತು ಕುಣಿಸುತ್ತಾರೆ. ಜೊತೆಗೆ ತುಂಡಾದ ಸರಪಳಿಯನ್ನು ಭಕ್ತರಿಗೆ ತೋರಿಸುತ್ತಾರೆ. ಈ ಸರಪಳಿ ಪ್ರತಿ ವರ್ಷ ಬಲ್ಲೂರಿನಿಂದಲೇ ಬರುತ್ತದೆ.

ಮೈಲಾರದಲ್ಲಿ ಪ್ರತಿ ವರ್ಷ ಮೂರು ಬಾರಿ ಸರಪಳಿ ಪವಾಡ ನಡೆಯುತ್ತದೆ. ೧. ಭರತ ಹುಣ್ಣಿಮೆ ಯಲ್ಲಿ, ೨. ಅಗಿ ಹುಣ್ಣಿಮೆಯಲ್ಲಿ, ೩. ಕುದುರೆ ಹಬ್ಬದಲ್ಲಿ. ಸರಪಳಿ ಪವಾಡವನ್ನು ಗೊರವರು ಮಾಡುತ್ತಾರೆ. ಇದಕ್ಕೆ ಸರಪಳಿ ಹರಿಯುವುದು ಎಂತಲೂ ಕರೆಯುತ್ತಾರೆ. ಈ ಕ್ಷೇತ್ರದಲ್ಲಿ ಗಂಗಿ ಮಾಳಮ್ಮನ ದೇವಾಲಯದ ಎದುರಿಗಿರುವ ಶಿಲಾಸ್ತಂಭಕ್ಕೆ ಸರಪಳಿಯ ಒಂದು ತುದಿಯನ್ನು ಬಲವಾಗಿ ಕಟ್ಟಿ, ಇನ್ನೊಂದು ತುದಿಗಿರುವ ಹಗ್ಗವನ್ನು ತಮ್ಮ ಕೊರಳಿಗೆ ಹಾಕಿಕೊಂಡು ಎರಡು ಕೈಗಳಿಂದ ಸರಪಳಿಯನ್ನು ಭದ್ರವಾಗಿ ಹಿಡಿದು ಝಟಿಕೆ ಹೊಡೆಯುತ್ತಾರೆ. ಹಾಗೆ ಎಳೆದ ರಭಸಕ್ಕೆ ಸರಪಳಿ ತುಂಡಾಗುತ್ತದೆ. ಸರಪಳಿ ಬೇಗ ತುಂಡಾಗದಿದ್ದರೆ ಗೊರವಪ್ಪನ ನಿಷ್ಠೆಯ ಬಗೆಗೆ ಸಂಶಯ ಪಡುವುದುಂಟು.

''ನಾವು ದೀಕ್ಷೆ ತಗಣಂಗಿಲ್ಲ. ಕಾರಣ ಸರಪಳಿ ಪವಾಡ ಮಾಡುವ ದಳವಾಯಿಗಳು ನಾವು. ದಳವಾಯಿಗಳೆಂದರೆ; ರಾಜ ವಿತ್ತ ಮಂತ್ರಿ ಸ್ಥಾನ ಇದ್ದಂಗೆ. ದೇವಸ್ಥಾನದ ಒಂದನೇ ಕಾರ್ಯಕರ್ತರು ನಾವು. ನಮ್ಮಲ್ಲಿ ಹುಟ್ಟಿದ ಪ್ರತಿ ಗಂಡು ಮಗುವಿಗೆ ಒಂದು ವರ್ಷ ತುಂಬಿದಾಗ ಗುರುಗಳ ಕೂಟ (ಒಡೆಯರ) ಒಂದೀಟು ಸೇವೆ ಮಾಡ್ಸಿ ಅಜ್ಜನ ಪಾದಕ್ಕೆ ಮುಟ್ಟುಸ್ತೀವಿ ಹೊರತು ನಮಗೆ ಪ್ರತ್ಯೇಕ ದೀಕ್ಷೆ ಇಲ್ಲ'' ಎಂದು ಮೈಲಾರದ ಮಾಲತೇಶ ದಳವಾಯಿ ಹೇಳುತ್ತಾರೆ. ಸರಪಳಿ ಪವಾಡದಂತಹ ಆಚರಣೆ ಎಲ್ಲಾ ಮಲ್ಲಯ್ಯನ ಕ್ಷೇತ್ರಗಳಲ್ಲಿ ಇರುವುದು ಕಾಣುತ್ತೇವೆ. ಆದರೆ ಆಚರಣೆಯ ವಿಧಿವಿಧಾನಗಳು ಭಿನ್ನವಾಗಿರುವುದು ಗಮನಾರ್ಹ. ಮುಖ್ಯವಾಗಿ ಸರಪಳಿ ಪವಾಡ ಮೀನಗೊಂದಿ ಕ್ಷೇತ್ರದಲ್ಲಿ ಶಿವಸಾನ ಗದ್ದುಗೆಯ ಎದುರಿಗೆ ಮಾಳಾ-ಮಲ್ಲೇಶ್ವರರ ಸಮ್ಮುಖದಲ್ಲಿಯೇ ಜರುಗಲ್ಪಡುತ್ತದೆ. ಆದರೆ ಮೈಲಾರ ಕ್ಷೇತ್ರದಲ್ಲಿ ಗಂಗಿ ಮಾಳಮ್ಮನ ಗುಡಿಯ ಮುಂದೆ ಮಾತ್ರ ಸರಪಳಿ ಪವಾಡ ನಡೆಯುತ್ತದೆ. ಈ ಪವಾಡವನ್ನು ಮಾಡುವವರು ಮರಾಠಿ ಮೂಲದ ವ್ಯಕ್ತಿಗಳು. ಜೊತೆಗೆ ಇವರು ದೀಕ್ಷೆಯ ಯಾವ ವಿಧಿವಿಧಾನಗಳನ್ನು ಒಡೆಯರಿಂದ

ಪಡೆದುಕೊಂಡಿರುವುದಿಲ್ಲ ಎಂದು ಸ್ವತಃ ಸರಪಳಿ ಪವಾಡದಾರರಾದ ಮಾಲತೇಶ ದಳವಾಯಿಯವರಿಂದ ತಿಳಿದು ಬಂದಿದೆ. ಈ ಪವಾಡ ವರ್ಷದಲ್ಲಿ ಮೂರುಬಾರಿ ನಡೆಯುತ್ತದೆ. ಆದರೆ ಮೀನಗೊಂದಿಯಲ್ಲಿ ಈ ಸರಪಳಿ ಪವಾಡದಾರರಿಗೆ ಎಲ್ಲಾ ಗೊರವ ರಂತೆ ದೀಕ್ಷೆ ಇದೆ. ಇವರು ಮೂಲತಃ ಬಲ್ಲೂರಿನವರೇ ಆಗಿದ್ದು, ಕುರುಬ ಜನಾಂಗಕ್ಕೆ ಸೇರಿದವರಾಗಿದ್ದಾರೆ. ದಸರಾ ಸಂದರ್ಭದಲ್ಲಿ ಮಾತ್ರ ಸರಪಳಿ ಪವಾಡ ನಡೆಯುವುದು ಇಲ್ಲಿನ ವಿಶೇಷವಾಗಿರುತ್ತದೆ.

## ೮.೧೧. ಬೇರೆ ಧರ್ಮದವರು ಪಾಲ್ಗೊಳ್ಳುವಿಕೆ :

''ಸರ್ವಜನೋ ಸುಖಿನೋಭವಂತು'' ಎನ್ನುವ ಸಂಸ್ಕೃತ ವಾಣಿಯು ಮಲ್ಲಯ್ಯ ದೇವರ ಆಚರಣೆಗಳನ್ನು ಗಮನಿಸಿದಾಗ ಅರ್ಥಪೂರ್ಣವೆನಿಸುತ್ತದೆ. ಹಿಂದೂ ಧರ್ಮದ ಎಲ್ಲಾ ವರ್ಗಗಳ, ಭಿನ್ನ ಜಾತಿಯವರಿಗೂ ಮನೆ ದೇವರೆನಿಸಿಕೊಂಡ ಮಲ್ಲಯ್ಯ ಅನ್ಯ ಧರ್ಮೀಯರನ್ನು ತನ್ನ ಧರ್ಮದವರ ಸಾಲಿನಲ್ಲಿಯೇ ನಿಂತು ನೋಡಿದ್ದಾನೆ ಎನ್ನುವುದು ಗಮನಾರ್ಹ. ಚರಿತ್ರೆಯುದ್ಧಕ್ಕೂ ನಡೆದ ಯುದ್ಧ, ಮುಸಲ್ಮಾನರ ದಾಯಾದಿತನವನ್ನು ಗಮನಿಸಿದಾಗ ಎಷ್ಟೋ ಹಿಂದೂ ದೇವಾಲಯಗಳು, ವೈಭವೋಪೇತವಾದ ರಾಜಗೃಹಗಳು ಕಾಲಗರ್ಭದಲ್ಲಿ ಹುದುಗಿ ಹೋಗಿವೆ. ಆದರೆ ಮೈಲಾರ, ಮಲ್ಲಯ್ಯನ ಮೇಲೆ ಮಾತ್ರ ಮುಸ್ಲಿಂ ಧರ್ಮೀಯರು ಗಧಾ ಪ್ರಹಾರ ಮಾಡಿಲ್ಲ. ಕಾರಣ ಈ ದೈವವನ್ನು ತಮ್ಮ ಮುಸ್ಲಿಂ ಧರ್ಮದ ಶ್ರೇಣಿಯಲ್ಲಿ ನಿಂತು ನೋಡಿ ಗೌರವಿಸಿದ ಕುರುಹುಗಳು ನಮಗೆ ಚರಿತ್ರೆಯಿಂದ ತಿಳಿದುಬರುತ್ತದೆ.

ಮುಖ್ಯವಾಗಿ ಮೀನಗೊಂದಿಯ ಕ್ಷೇತ್ರದ ಸುತ್ತಮುತ್ತಲು ಹಲವಾರು ಮುಸಲ್ಮಾನ ದರ್ಗಾಗಳು, ಮಸೀದಿಗಳು ಇರುವುದನ್ನು ನಾವು ಕಾಣುತ್ತೇವೆ. ಮುಸಲ್ಮಾನರ ಜೊತೆ ಹಿಂದೂಗಳು ದರ್ಗಾಗಳಿಗೆ ನಡೆದುಕೊಂಡಂತೆ, ಮುಸಲ್ಮಾನರೂ ಮಲ್ಲಯ್ಯನಿಗೆ ಭಕ್ತಿಪೂರ್ವಕವಾಗಿ ನಡೆದುಕೊಂಡಿದ್ದಾರೆ. ಮಲ್ಲಯ್ಯ ಹಾಗೂ ಮಾಳಮ್ಮರನ್ನು ಮಲ್ಲಂಗ್‌ಷಾ ಮಾಲನಬೀ ಎಂದೇ ವಿಂಗಡಿಸಿ ಹಿಂದೂ ಸಂಪ್ರದಾಯದ ಆಚರಣೆಗಳನ್ನು ಪಾಲಿಸುತ್ತಾ ಬಂದಿರುವುದು ವಿಶೇಷ. ''ನಮ್ಮ ಮುಸ್ಲಿಂನಲ್ಲಿ ಶೇಕಡಾ ೭೦ ರಿಂದ ೭೫ರಷ್ಟು ಜನ ಮಲ್ಲಯ್ಯನ ದರ್ಶನಕ್ಕೆ ಹೋಗ್ತಾರೆ. ಹೋಗಿ ಕಾಯಿ ಒಡೆಸಿಕೊಂಡು ಬರ್ತಾರೆ. ಬಂಢಾರ ಹಚ್ಚುತ್ತಾರೆ. ಬಡಿಗೆ ಆಟಕ್ಕೂ ಸಹ ಶೇಕಡ ೭೫ರಷ್ಟು ಜನ ಬಡಿಗೆ ಹಿಡಿದು ಹೋಗ್ತಾರೆ. ಎಲ್ಲಾ ಹಿಂದೂಗಳ ಥರನೇ ಮಾಡ್ತಾರೆ. ಏನೋ ಶೇಕಡ ೨೫ರಷ್ಟು ಜನ ಹೋಗೋದಿಲ್ಲ ಅಷ್ಟೇ'' ಎಂದು ಖಾಜಾಪೀರ್ ಹೇಳುತ್ತಾರೆ. ಜೊತೆಗೆ ಮುಸ್ಲಿಂನ ಇನ್ನೊಂದು ಪಂಗಡವೆನಿಸುವ ಪಿಂಜಾರರಿಗೆ ಬೆಟ್ಟದಲ್ಲಿ ಪ್ರತ್ಯೇಕವಾದ ಕಾರ್ಯ ಕ್ರಮವಿದೆ. ಅದೇನೆಂದರೆ; ಮಾಳಾ ಮಲ್ಲೇಶ್ವರರಿಗೆ ಮದುವೆಯಾದ ನಂತರ ಬೆಟ್ಟದಿಂದ ದೇವರ ಉತ್ಸವಗಳು ಇಳಿದು ಬರುವಾಗ ದಾರಿಯ ಮಧ್ಯದಲ್ಲಿ ಒಂದು ಕಟ್ಟೆಯ ತರಹ ಗದ್ದುಗೆಯ ಪುಟ್ಟ ಗುಡಿಯಿದೆ. ಅದನ್ನು 'ಪಿಂಜಾರರ ಕಟ್ಟೆ' ಎಂದು ಕರೆಯಲಾಗುತ್ತದೆ. ಈ ಮೊದಲು ಇಲ್ಲಿ ಒಂದು ಕಮಾನು ಇತ್ತಂತೆ. ಮುಸ್ಲಿಂ ಜನಾಂಗದವರು

ನಮ್ಮ ಹಿಂದೂಗಳ ಹತ್ರ ಕೇಳ್ಯಾರ ಈ ಕಮಾನಿನ ಹತ್ತಿರ ಮಂಗಳಾರತಿ ಮಾಡಿ ಕಾಯಿ ಒಡೆದು, ಆ ಮ್ಯಾಗ ಕೆಳಗೆ ಕಳಿಸ್ತೀವಿ ಅಂದಾರ. ಅದಕ್ಕೆ ನಮ್ಮ ಜನ ಒಪ್ಪಲಿಲ್ಲ. ಅಷ್ಟೊತ್ತಿಗೆ ಎಷ್ಟೋ ಎಕ್ಕಡದಿಕ್ಕಡಿ ಆಗಿ ಬಿಡ್ತೈತೆ. ದೇವರು ಬರುವಾಗ ನೀವು ಮಂಗಳಾರತಿ ಮಾಡಾತಟಿಗೆ ಎಷ್ಟೋ ಸಾವು ಆಗಿಬಿಡ್ತಾವ ಕೊಡಂಗಿಲ್ಲ ಅಂದಾರ. ಅದರ ಬದಲಿಗೆ ಈಗ ಕಟ್ಟೆ ಕಟ್ಯಾರ. ಅದನ್ನೇ ಪಿಂಚಾರ ಕಟ್ಟೆ ಅನ್ನೋದು. ಈ ಕಟ್ಟೆಯ ಬಳಿ ಇವರಿಗೆ ಇರುವ ಅಧಿಕಾರವೆಂದರೆ ಮಾಳಾ ಮಲ್ಲೇಶ್ವರರನ್ನು ಅಲ್ಲಿ ನಿಲ್ಲಿಸಿ ಮಂಗಳಾರತಿ ಮಾಡಿ, ಕಾಯಿ ಒಡೆದು ಮುಂದಕ್ಕೆ ಕಳುಹಿಸುವ ಪರಿಪಾಠ. ಆದರೆ ಈ ಬಡಿಗೆ ಆಟ ರೌದ್ರವಾಗಿರುವುದರಿಂದ ಒಂದು ಕ್ಷಣ ದೇವರುಗಳು ನಿಂತರೂ ಅನೇಕ ಸಾವುಗಳು ಸಂಭವಿಸುತ್ತವೆ. ಈ ಕಾರಣಕ್ಕಾಗಿ ಬರುತ್ತಿರುವ ದೇವರುಗಳಿಗೆ ದೂರದಿಂದಲೇ ಕಾಯಿ ಒಡೆದು ತಮ್ಮ ಸೇವೆಯನ್ನು ಸಮರ್ಪಿಸಿಕೊಳ್ಳುತ್ತಾರೆ.

ಮೈಲಾರದಲ್ಲಿರುವ ಮೈಲಾರಲಿಂಗಪ್ಪನನ್ನು ಮುಸಲ್ಮಾನರು ಮಲ್ಲುಖಾನ ಎಂದು ಕರೆಯುತ್ತಾರೆ. ಯುಸೂಫ, ಆದಿಲ್‌ಷಾನ ಒಬ್ಬ ಹಿಂದೂ ಸತಿಯ ಮಗನ ಹೆಸರು ಕೂಡಾ ಮಲ್ಲುಖಾನ. ಸಿಡಿಗಿನಹಾಳು ಗ್ರಾಮದ ಸ್ಥಿತಿವಂತ ಮುಸ್ಲಿಂ ಮನೆತನದ ಹೆಣ್ಣುಮಗಳೊಬ್ಬಳು ಅಂದು ಕಲ್ಹತ್ತಿ ಮರಕ್ಕೆ ಬರಬೇಕು. ಯಾವತ್ತೂ ಘೋಷದಲ್ಲಿರುವ ಅವಳು ಅಂದು ಅಲ್ಲಿ ತನ್ನ ಬುರಿಕಿ ತೆಗೆದಿಟ್ಟು ದೇವರಿಗೆ ಚಾಮರ ಬೀಸುವ ಸೇವೆ ಸಲ್ಲಿಸಬೇಕು. ಅಭಿಷೇಕಾದಿಗಳು ಮುಗಿದ ತರುವಾಯ ಅವಳು ತೀರ್ಥ ಪ್ರಸಾದ ಸ್ವೀಕರಿಸುವುದು ಮೊದಲಿನಿಂದಲೂ ನಡೆದುಬಂದ ಕ್ರಮ. ಅಂದು ಕಲ್ಹತ್ತಿ ಮರದಲ್ಲಿ ನಡೆಯುವ ಈ ಕಾರ್ಯಕ್ರಮ ಈ ಮನೆತನಕ್ಕಾಗಿಯೇ ಎಂದು ತೋರುತ್ತದೆ. ಕಲ್ಹತ್ತಿ ಮರದ ಪ್ರಸ್ತುತ ಶಿಬಾರವಿರುವುದು ಈ ಮನೆತನರವರ ಹೊಲದಲ್ಲಿಯೇ ಎಂಬುದನ್ನು ಇಲ್ಲಿ ಲಕ್ಷಿಸಬಹುದಾಗಿದೆ. ಈ ಮುಸ್ಲಿಂ ಕುಟುಂಬದಲ್ಲಿಯೇ ಕಾಯಿಕೋಲು ದೀವಟಿಗೆ ಮತ್ತು ಚಾಮರಗಳು ಇರುವುದು ಕಂಡುಬರುತ್ತದೆ. ವಿಶೇಷವಾಗಿ ಮೈಲಾರದಲ್ಲಿ ಬಂಢಾರ ಹಚ್ಚುವಲ್ಲಿ ಮತ್ತು ಹೊರೆ ಹೊರಿಸುವಲ್ಲಿ ಜಾತಿ ಅಥವಾ ಸ್ತ್ರೀಪುರುಷರ ಬೇಧವನ್ನೆಣಿಸುವುದಿಲ್ಲ. ಇಷ್ಟಪಟ್ಟ ವರಿಗೆಲ್ಲಾ ಹೊರೆ ಹೊರಿಸಿ ಬಂಢಾರ ಹಚ್ಚುತ್ತಾರೆ. ಲಂಬಾಣಿಗಳು, ಮುಸಲ್ಮಾನರೂ ಕೂಡಾ ಹಾಗೆ ಹೊರೆ ಹೊತ್ತವರಲ್ಲಿ ಇದ್ದಾರೆ.

ಮೇಲೆ ತಿಳಿಸಿದ ಮೈಲಾರ ಕ್ಷೇತ್ರದಲ್ಲಿ ಮುಸಲ್ಮಾನರು ಮೈಲಾರ ದೇವರಿಗೆ ನಡೆದುಕೊಳ್ಳುವ ವಿಧಿ ವಿಧಾನಗಳನ್ನು ಗಮನಿಸಿದಾಗ ಮುಸಲ್ಮಾನರೂ ಸ್ವಪ್ರೇರಣೆಯಿಂದಲೇ ತಮ್ಮನ್ನು ತಾವು ಮೈಲಾರ ದೇವರಿಗೆ ಸಮರ್ಪಿಸಿಕೊಂಡಿರುವುದು ಕಾಣುತ್ತೇವೆ. ಮೀನಗೊಂದಿ ಕ್ಷೇತ್ರದಲ್ಲಿ ಸಹ ಮುಸಲ್ಮಾನರು ಮಲ್ಲಯ್ಯನಿಗೆ ಭಕ್ತಿಪೂರ್ವಕವಾಗಿ ನಡೆದುಕೊಂಡಿರುವುದು ನೋಡಬಹುದಾಗಿದೆ. ಒಟ್ಟಾರೆಯಾಗಿ ಹಿಂದೂ ಧರ್ಮದ ಎಲ್ಲಾ ದೇವರಿಗಿಂತಲೂ ಬಹು ಮುಖ್ಯವಾಗಿ ಮಲ್ಲಯ್ಯ, ಮೈಲಾರಲಿಂಗನಿಗೆ ವಿಶೇಷವಾಗಿ ಮುಸ್ಲಿಂ ಬಾಂಧವರು ಜೊತೆಗೆ ಇತರ ಧರ್ಮದವರು ಹೆಚ್ಚಾಗಿ ನಡೆದುಕೊಂಡಿರುವುದು ವಿಶೇಷತೆ ಜೊತೆ ಸೋಜಿಗವಾಗಿದೆ.

## ೮.೧೨. ಹುಣ್ಣಿಮೆ - ಅಮವಾಸೆ :

ಬಂಢಾರದ ಒಡೆಯನಾದ ಮಲ್ಲಯ್ಯನಿಗೆ ಅತಿ ಶ್ರೇಷ್ಠವಾದ ದಿನ ಭಾನುವಾರ. ಆದ್ದರಿಂದ ಈತನನ್ನು ಆಯಿತವಾರದಯ್ಯ ಅಂತಲೂ ಕರೆಯುತ್ತಾರೆ. ಇಂತಹ ಮಲ್ಲಯ್ಯನಿಗೆ ಅಮಾವಾಸೆಯೇ ಅತೀ ಶ್ರೇಷ್ಠವಾಗಿದೆ. ಪ್ರತಿ ಅಮಾವಾಸೆಗೂ ಸುತ್ತಮುತ್ತಲಿನ ಊರಿನ ಭಕ್ತರು ಗಿರಿಗೆ ಬಂದು ಸ್ವಾಮಿಯ ದರ್ಶನವನ್ನು ಪಡೆದುಕೊಳ್ಳುತ್ತಾರೆ. ಎರಡು-ಮೂರು ವರ್ಷಗಳ ಕೆಳಗೆ ಈ ಬೆಟ್ಟಕ್ಕೆ ಅಮಾವಾಸೆಯ ದಿನದಂದು ಬರಬೇಕಾದರೆ ಭಕ್ತರು ತುಂಬಾ ತ್ರಾಸುಪಡಬೇಕಾಗಿತ್ತು. ಕ್ಷೇತ್ರಕ್ಕೆ ಬರಲು ಸರಿಯಾದ ವಾಹನಗಳ ವ್ಯವಸ್ಥೆ ಇಲ್ಲ. ಗಿರಿಯ ಬಳಿ ಬಂದರೂ ನೀರಿನ ಕೊರತೆ, ಆಹಾರದ ಕೊರತೆ ಇತ್ಯಾದಿ ಮೂಲ - ಸೌಕರ್ಯಗಳ ಕೊರತೆಯಿಂದ ಈ ಕ್ಷೇತ್ರಕ್ಕೆ ಬರುವ ಭಕ್ತರ ಸಂಖ್ಯೆ ತೀರಾ ಕಡಿಮೆಯಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಟ್ರಸ್ಟ್ ಮುಖಂಡರು, ನೆರಣಿಕೆ ಗ್ರಾಮದ ಹಿರಿಯರಾದ ಮಲ್ಲನಗೌಡರು, ಗುಳ್ಯಂ ಊರಿನ ಹಿರಿಯರು ಮುಖ್ಯವಾಗಿ ಒಡೆಯರು ಭಕ್ತರಿಗೆ ಬೇಕಾಗುವ ಮೂಲ ಸೌಕರ್ಯಗಳನ್ನು ಕಲ್ಪಿಸುತ್ತಾ ಬಂದಿದ್ದಾರೆ. ಪ್ರತಿ ಅಮಾವಾಸೆಯ ದಿನದಂದು ಬೆಟ್ಟಕ್ಕೆ ಬರಲು ಲಾರಿಗಳ ವ್ಯವಸ್ಥೆಯನ್ನು ಮಾಡಿದ್ದಾರೆ. ಮಧ್ಯಾಹ್ನ ನೆರಣಿಕೆ ಗ್ರಾಮದ ಮುಖಂಡರು ಅನ್ನ ದಾಸೋಹವನ್ನು ಏರ್ಪಡಿಸುತ್ತಾರೆ. ಗುಳ್ಯಂ ಗ್ರಾಮದವರಿಂದ ರಾತ್ರಿಯ ಅನ್ನದಾಸೋಹ ಇರುತ್ತದೆ. ವಿಶೇಷವಾಗಿ ಒಡೆಯರು ಪ್ರತಿ ಭಾನುವಾರ ತಮ್ಮ ಸ್ವಂತ ಖರ್ಚಿನಿಂದ ಬಂದ ಭಕ್ತರಿಗೆ ಅನ್ನ ದಾಸದೋಹವನ್ನು ಏರ್ಪಡಿಸುತ್ತಾರೆ. ಹೀಗೆ ಇತ್ತೀಚಿನ ದಿನಗಳಲ್ಲಿ ಅಮಾವಾಸೆಗೆ ಬರುವ ಭಕ್ತರ ಸಂಖ್ಯೆ ಹೆಚ್ಚುತ್ತಾ ಸಾಗಿದೆ.

ಅಮಾವಾಸೆಯ ದಿನ ಭಕ್ತರು ತಮ್ಮ ಮನೆಯನ್ನು ಚೆನ್ನಾಗಿ ತೊಳೆದು ಜಳಕ ಮಾಡಿ ಮನೆಯಲ್ಲಿ ದೇವರಿಗೆ ನೈವೇದ್ಯಕ್ಕೆ ಸಿಹಿ ಅಡುಗೆಯನ್ನು ಮಾಡಿ ಪೂಜೆಯ ನಂತರ ಗಿರಿಗೆ ತೆರಳುತ್ತಾರೆ. ಅಂದು ಶಿವಸಾನ ಗದ್ದುಗೆಯಲ್ಲಿ ಕುಳಿತ ಒಡೆಯರ ಪಾದಗಳಿಗೆ ಭಕ್ತರು ನಮಸ್ಕರಿಸಿ ಅವರಿಂದ ಆಶೀರ್ವಾದವನ್ನು ಪಡೆದು ಕೊಳ್ಳುತ್ತಾರೆ. ಮಧ್ಯಾಹ್ನದ ಹೊತ್ತಿಗೆ ಅಪ್ಪರಸ್ವಾಮಿ ಮಠದಲ್ಲಿ ದಾಸೋಹ ಇರುತ್ತದೆ. ''ಅಮಾವಾಸೆಗೆ ನಾವು (ಕಂಚಾವೀರರ, ವಗ್ಗಪ್ಪನವರ, ಗಣಾಚರಿಗಳ) ಗಿರಿಗೆ ಬರ್ತೀವಿ. ಮಧ್ಯಾಹ್ನ ಮಠದಾಗೆ ನಮ್ಗೆ ಎಡೆ ಹಾಕ್ತಾರೆ. ನಾವು ಏಳುಕೋಟಿ ಇಟ್ಟು ಡಮರುಗ ಬಾರಿಸಿದ ಮೇಲೆ ದಾಸೋಹ ಪ್ರಾರಂಭ''. ರಾತ್ರಿ ಅನ್ನ ದಾಸೋಹ ಆದನಂತರ ಭಜನಾ ಕಾರ್ಯಕ್ರಮವಿರುತ್ತದೆ. ಈ ರೀತಿಯಾಗಿ ಪ್ರತಿ ಅಮವಾಸೆಯಲ್ಲಿಯೂ ಸಹ ಇದೇ ತೆರನಾಗಿ ಸಾಗುವುದು. ಬದಲಿಗೆ ಈ ಕ್ಷೇತ್ರದಲ್ಲಿ ಯಾವ ಉತ್ಸವಗಳಾಗಲಿ ಜರುಗುವುದಿಲ್ಲ. ಹುಣ್ಣಿಮೆಯ ಆಚರಣೆ ಇಲ್ಲಿ ಇಲ್ಲ. ದಿನಂಪ್ರತಿಯಂತೆ ಹುಣ್ಣಿಮೆಯಲ್ಲಿ ಪೂಜೆಯಾಗುವುದೇ ವಿನಃ ವಿಶೇಷತೆ ಇರುವುದಿಲ್ಲ. ಅದೇನಿದ್ದರೂ ಅಮಾವಾಸೆಗೇನೆ ಸೀಮಿತವಾಗಿದೆ.

ಮೈಲಾರ ಕ್ಷೇತ್ರದಲ್ಲಿ ಹುಣ್ಣಿಮೆಯೇ ಪ್ರಧಾನ. ಭರತ ಹುಣ್ಣಿಮೆಗೆ ಆತನ ಜಾತ್ರೆ ನಡೆಯುವುದು. ಕಾರಣಿಕವೂ ಸಹ ಆಗಲೇನೇ. ''ನಮ್ಮ ಮೈಲಾರ ಲಿಂಗೇಶ್ವರ ಭೂಲೋಕಕ್ಕೆ ಬರಬೇಕಾದರೆ ಯಾವಾಗ ಬರ್‍ತಾನೆ ಅಂತಂದ್ರೆ; ರಥ ಸಪ್ತಮಿಯ ದಿನ ಕೈಲಾಸದಿಂದ ಭಗವಂತ ಬರ್‍ತಾನೆ. ಅದು ಹುಣ್ಣಿಮೆಯ ದಿನ. ಅಂದೇ ಮೈಲಾರಲಿಂಗ ಈ ಭೂಲೋಕಕ್ಕೆ ಬಂದು ಉಂಗ್ಲಾರ ಕ್ಷೇತ್ರವಾದ ಇಲ್ಲಿ ತುಂಗಭದ್ರ ನದಿಯಲ್ಲಿ ಸ್ನಾನ ಮಾಡಿಕೊಂಡು ಈ ಸ್ಥಳದೊಳಗೆ ಬಂದು ಕುಳಿತ'' ಎನ್ನುವರು.

ಹುಣ್ಣಿಮೆಯ ದಿನದಂದೇ ದೇವರು ಮೈಲಾರದಲ್ಲಿ ದರ್ಶನ ನೀಡಿರುವನು. ಆದ್ದರಿಂದ ಅವರು ಹುಣ್ಣಿಮೆಯನ್ನೇ ವಿಶೇಷವಾಗಿ ಆಚರಿಸುತ್ತಾ ಬಂದಿರುವರೆಂದು ಗುಳ್ಯಂನಲ್ಲಿ ವಾಸವಾಗಿರುವ ಕಪಿಲಮುನಿ ಒಡೆಯರು ಅಭಿಪ್ರಾಯ ಮಾಡುತ್ತಾರೆ. ಮೈಲಾರದಲ್ಲಿ ಪ್ರತಿ ಹುಣ್ಣಿಮೆಗೆ ಸ್ವಾಮಿಯ ಉತ್ಸವ ಆಚರಣೆ ನಡೆಯುತ್ತದೆ. ಆ ದಿನ ಭಕ್ತರೆಲ್ಲರೂ ಕ್ಷೇತ್ರಕ್ಕೆ ರೊಟ್ಟಿ, ಪಲ್ಲೇವು, ಭುತ್ತಿ ಮಾಡಿಕೊಂಡು ಬಂದು ಬುತ್ತಿ ರೊಟ್ಟಿಯನ್ನು ದೇವರಿಗೆ ಅರ್ಪಿಸಿ, ಅಲ್ಲೇ ಅಣಕ ಮಾಡಿಕೊಂಡು ಆ ದಿನ ರಾತ್ರಿ ಅಲ್ಲೇ ಉಳಿದು, ಬೆಳಿಗ್ಗೆ ತಂತಮ್ಮ ಊರುಗಳಿಗೆ ತೆರಳುತ್ತಾರೆ. ಆದರೆ ಅಮವಾಸೆಗೆ ಇಲ್ಲಿ ಯಾವುದೇ ರೀತಿಯ ವಿಶೇಷ ಕಾರ್ಯಕ್ರಮ ಗಳು ಜರುಗದೇ ದಿನಂಪ್ರತಿಯಂತೆ ಇರುತ್ತದೆ.

ಎರಡೂ ಕ್ಷೇತ್ರಗಳಲ್ಲಿ ಅಮಾವಾಸೆ, ಹುಣ್ಣಿಮೆ ಆಚರಿಸುವ ವಿಧಾನವನ್ನು ನೋಡಿದಾಗ ಮೈಲಾರದಲ್ಲಿ ಹುಣ್ಣಿಮೆ ಬಹಳ ಶ್ರೇಷ್ಠ. ಕಾರಣ ಭರತ ಹುಣ್ಣಿಮೆಯಂದೇ ದೇವರು ದರ್ಶನ ನೀಡಿರುವ ನೆಂಬ ನಂಬಿಕೆ ಇದೆ. ಮೀನಗೊಂದಿ ಮಲ್ಲಯ್ಯನಲ್ಲಿ ಹುಣ್ಣಿಮೆಗೆ ಯಾವುದೇ ರೀತಿಯ ವಿಶೇಷ ಪೂಜೆ ಇರದೇ ಅಮಾವಾಸೆಯೇ ಬಹಳ ಶ್ರೇಷ್ಠವಾದುದಾಗಿದೆ. ಕ್ಷೇತ್ರದಲ್ಲಿ ಬಹುತೇಕ ಜನರನ್ನು ವಿಚಾರಿಸಿದಾಗ 'ಅವತ್ತಿನಿಂದ ನಾವು ಅಮಾವಾಸೆಗೆ ನಡಕಂಡಿರೋದು. ಅದೇ ಶ್ರೇಷ್ಠ ನಮಗೆ. ಹುಣ್ಣಿಮೆಗೆ ನಾವೇನು ಮಾಡಂಗಿಲ್ಲ' ಅಂತ ಹೇಳುತ್ತಾರೆ. ಗುಳ್ಯಂನ ಕಪಿಲಮುನಿ ಒಡೆಯರು ಹೇಳಿರುವ ಅಮಾವಾಸೆ ಹುಣ್ಣಿಮೆಗಳ ಕಲ್ಪನೆ ಬಹಳ ಅರ್ಥಗರ್ಭಿತವಾಗಿದೆ. ಅದು 'ಅಮಾಸೆ ಬಂದ ಮ್ಯಾಗಿನಿಂದ ಬೆಳಕು ಬರುತ್ತೈತೆ. ಅಂದರೆ ಅಮಾಸೆ ನಂತರದಿಂದ ನಮ್ಮ ಬದುಕು ಬೆಳಕಾಗ್ತೈತೆ ಅಂತ ಅರ್ಥ. ಹುಣ್ಣಿಮೆ ಆದಂದಿನಿಂದ ಬೆಳಕು ಕಡಿಮೆ ಆಗ್ತೈತೆ. ಅಂದರೆ ನಮ ಬದುಕು ಕ್ಷೀಣಿಸುತ್ತಾ ಬರ್‍ತೈತೆ ಅಂತ ಅರ್ಥ''. ಸರಳವಾದ ಈ ಮಾತುಗಳು ವಿಸ್ತಾರ ವೆನಿಸಬಹುದು. ಆದರೆ ಆಳವಾಗಿ ಆಲೋಚಿಸಿದಾಗ ಕೆಲ ಕ್ಷಣ ಇದು ಸತ್ಯ ಎಂದೆನಿಸದೇ ಇರದು. ಇಲ್ಲಿಯ ಸಂಸ್ಕೃತಿಯ ದೈವತ್ವದ ಗರ್ಭದಲ್ಲಿ ಜಾತ್ರೆ, ಹಬ್ಬಗಳು ಮುಖ್ಯವೋ, ಅಷ್ಟೇ ಮುಖ್ಯವಾಗಿ ಅಮಾವಾಸೆ ಹುಣ್ಣಿಮೆಗಳು ಪ್ರಧಾನವಾದ ಪೂಜ್ಯ ಆಚರಣೆಗಳಾಗಿ ಉಳಿದುಕೊಂಡು ಬಂದಿವೆ.

## ೮.೧೩. ಮಾದರ ಮಲ್ಲಯ್ಯನ ಗುಡಿ :

ಶತಶತಮಾನಗಳಿಂದಲೂ ಸಮಾಜದ ಮೇಲ್ವರ್ಗದವರ ತುಳಿತಕ್ಕೆ ಒಳಗಾದ ಮಾದಿಗ ಹಾಗೂ ಬ್ಯಾಗಾರ ಜಾತಿಗಳು ಇಂದಿನ ೨೧ನೆಯ ಶತಮಾನದಲ್ಲಿಯೂ ಈ ಜಾತಿಯ ಸಂಕೋಲೆಯಿಂದ ಹೊರ ಬರಲು ಆಗುತ್ತಿಲ್ಲ. ಅದಕ್ಕೆ ಮೂಲ ಕಾರಣ ಜನಪದರು ನಂಬಿಕೊಂಡು ಬಂದ ಪದ್ಧತಿಗಳೇ ಆಗಿವೆ. ಮೇಲ್ವರ್ಗದ ಜನಾಂಗ ತಮ್ಮ ಅನುಕೂಲಕ್ಕೆ ತಕ್ಕಂತೆ ಧಾರ್ಮಿಕ ಆಚರಣೆಯ ವಿಧಾನಗಳನ್ನು ರೂಪಿಸಿ ಇಂಥವರು ದೇವಸ್ಥಾನದ ಪರಿಧಿಯೊಳಗೆ ಹೀಗೆ ಇರಬೇಕು. ಹೀಗೆ ಇರಬಾರದು ಎಂದು ತಿಳಿಸಿ ತಪ್ಪಿದರೆ ದೇವರು ಶಿಕ್ಷಿಸುವನು ಎಂಬುದನ್ನು ಕೆಳವರ್ಗದ ಜನರ ಮನದೊಳಗೆ ಬೇರೂರಿಸಿಬಿಟ್ಟಿದ್ದಾರೆ. ಈ ಜಾತಿಯ ವ್ಯವಸ್ಥೆ ಪ್ರಾರಂಭದ ಹಂತದಿಂದ ಇಲ್ಲಿಯವರೆಗೂ ಅದು ಹಾಗೆ ಮುಂದುವರೆದಿರುವುದು ವಿಪರ್ಯಾಸ. ಇನ್ನು ಮುಂದೆ ಇದು ಹೀಗೆ ಸಾಗಿದರೆ ಆಶ್ಚರ್ಯಪಡಬೇಕಾಗಿಲ್ಲ. ಇಂತಹ ಕಟ್ಟುನಿಟ್ಟಿನ ಜಾತಿಯ ವ್ಯವಸ್ಥೆಯೊಳಗೆ ನಮ್ಮ ಮೀನಗೊಂದಿ ಮಲ್ಲಯ್ಯನ ಕ್ಷೇತ್ರ ಕಾಣಸಿಗುತ್ತದೆ.

ಗಿರಿಯಿಂದ ಅರ್ಧ ಕಿ.ಮಿ. ದೂರದಲ್ಲಿ ಮಾದರ ಮಲ್ಲಯ್ಯನ ಗುಡಿ ಮತ್ತು ಬ್ಯಾಗಾರರ ಗುಡಿ ಎಂದು ಪ್ರತ್ಯೇಕವಾಗಿಯೇ ಇವೆ. ಈ ಗುಡಿಗಳಿಗೆ ಅವರ ಸಮುದಾಯದವರೇ ನಡೆದುಕೊಳ್ಳುವರು. ಮಾದರ ಮಲ್ಲಯ್ಯನ ಗುಡಿಗೆ ಆದೋನಿ ಕ್ಷೇತ್ರದ ಸುತ್ತಮುತ್ತ ಹಳ್ಳಿಗಳಿಂದ ಭಕ್ತಾದಿಗಳು ಜಾತ್ರೆಯ ಸಮಯಕ್ಕೆ ಈ ದೇವಸ್ಥಾನಕ್ಕೆ ಬಂದು ದೇವರಿಗೆ ನಡೆದುಕೊಳ್ಳುತ್ತಾರೆ. ಇವರಲ್ಲಿ ಅನೇಕ ರೀತಿಯ ಗೊರವರು, ವಗ್ಗರು, ಪೂಜಾರಿಗಳು ಅಂತ ಇದ್ದು ದೀಕ್ಷೆಯನ್ನು ಪೂಜಾರಿ ಅಂತ ಮೊದಲು ಅವರಲ್ಲಿ ಒಬ್ಬರನ್ನು ನಿರ್ಣಯಿಸಿ ಕೊಂಡು ಅವರೇ ಇವರಿಗೆ ದೀಕ್ಷೆಯನ್ನು ನೀಡುತ್ತಾರೆ. ಬದಲಿಗೆ ಒಡೆಯರಾಗಲೀ, ಗಣಾಚಾರಿಗಳಾಗಲಿ ಇವರಿಗೆ ದೀಕ್ಷೆಯನ್ನು ನೀಡುವುದಿಲ್ಲ. ಆದೇನಿದ್ದರೂ ಅವರು ಬಸವಿಯರಿಗೆ ಮಾತ್ರ ದೀಕ್ಷೆಯನ್ನು ನೀಡುತ್ತಾರೆ. ~~ಈ ಬಸವಿಯರು ದೀಕ್ಷೆಯನ್ನು ನೀಡುವುದಿಲ್ಲ~~. ಆದೇನಿದ್ದರೂ ಅವರು ಬಸವಿಯರಿಗೆ ಮಾತ್ರ ದೀಕ್ಷೆಯನ್ನು ನೀಡುತ್ತಾರೆ. ಈ ಬಸವಿಯರು ದೀಕ್ಷೆಯನ್ನು ಪಡೆದುಕೊಂಡಿದ್ದರೂ ಸಹ ಶಿವಸಾನ ಗದ್ದಿಗೆಯ ಒಳಗಡೆಯಾಗಲೀ, ಮೇಲೆ ಗಿರಿಯಲ್ಲಿರುವ ದೇವಸ್ಥಾನದ ಒಳಗಡೆ ಹೋಗಲು ಇವರಿಗೆ ನಿರ್ಬಂಧಗಳಿವೆ. ಕ್ಷೇತ್ರಕ್ಕೆ ಆಗಮಿಸಿದ ಹರಿಜನರು ಮಾದರ ಮಲ್ಲಯ್ಯನ ಗುಡಿಯ ಹತ್ತಿರನೇ ಇರುತ್ತಾರೆಯೇ ವಿನಃ ಮೇಲೆ ಗಿರಿಯ ದೇವರ ಒಳಗೆ ಹೋಗುವ ಸಾಹಸ ಮಾಡುತ್ತಿಲ್ಲ. ಇದು ಕೆಳವರ್ಗದವರು ಧಾರ್ಮಿಕ ನಿಕೃಷ್ಟತೆಯೊಂದಿಗೆ ಮಾಡಿಕೊಂಡ ರಾಜಿ ''ಮಾದರು ಗುಡಿಯ ಒಳಗೆ ಬರಬಾರದಲೇ ಅಂತ ಅಂತಿರ್ತಾರೆ. ಅದಕ್ಕೆ ಸಣ್ಣ ಕುಲದೋರು ಅಂತ ನಾವೇ ತಿಳ್ಕಂಡು ಹೋಗೋದಿಲ್ಲ. ಪೂಜಾರಿ ಒಬ್ಬನೇ ಬೆಟ್ಟದ ಹತ್ತಿರ ಒಡ್ಯಾಡ್ತಿರ್ತಾನೆ. ಬಹಳ ಜನ ಅಲ್ಲಿಗೆ ಹೋಗಂಗಿಲ್ಲ. ಇಲ್ಲಿಯೇ ನಡಕಳ್ತಾರೆ''.

ಈ ಮಾತಿನಿಂದಲೇ ತಿಳಿಯುತ್ತದೆ. ಈ ಜನ ಗಿರಿಯ ದೇವರ ಹತ್ತಿರ ಹೋಗುವುದು ಅಷ್ಟಕ್ಕಷ್ಟೇ ಎಂದು. ಈ ದೇವಸ್ಥಾನದ ಬಳಿಯಲ್ಲಿ ಒಗ್ಗರಾಟವಿರುತ್ತದೆ. ಒಗ್ಗರು ಕರಿಯ ಕಂಬಳಿ, ಟೊಪ್ಪಿಗೆ, ಪಿಳ್ಳಂಗೋವಿ ಇತ್ಯಾದಿಗಳನ್ನು ಧರಿಸಿ ತಲೆಗೆ ಮುಂಡಾಸು ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುತ್ತಾರೆ. ಅಷ್ಟನ್ನು ಬಿಟ್ಟರೆ ಬೇರೆ ಯಾವುದೇ ಮಲ್ಲಯ್ಯನ ಉಡುಪುಗಳಿಲ್ಲ. ಪರುವು (ದಾಸೋಹ) ಕಾರ್ಯಕ್ರಮ, ಓಕುಳಿ ಆಟ ಮುಂತಾದ ಆಚರಣೆಗಳನ್ನು ಇವರು ಪ್ರತ್ಯೇಕವಾಗಿಯೇ ಆಚರಿಸಿಕೊಳ್ಳುತ್ತಾರೆ. ಒಗ್ಗರಾಟ, ಸರಪಳಿ ಪವಾಡ ಮುಂತಾದ ಕಾರ್ಯಕ್ರಮಗಳು ಗಿರಿಯಲ್ಲಿ ನಡೆಯುತ್ತಿರುವಾಗ ಕೇವಲ ಕೆಲವೇ ಜನ ನೋಡಲು ಹೋಗುತ್ತಾರೆ. ಉಳಿದಂತೆ ಎಲ್ಲರೂ ಇಲ್ಲಿಯೇ ಇದ್ದು ತಮ್ಮಲ್ಲಿಯೇ ಅದೇ ಆಚರಣೆಗಳನ್ನು ಮಾಡುತ್ತಾರೆ. ಈ ಮಾದರ ಗುಡಿಯಲ್ಲಿ ನೆರಣಿಕೆಯಿಂದ ಮೆರವಣಿಗೆಯಲ್ಲಿ ತಂದ ಕುದುರೆ ದೇವರ ಮೂರ್ತಿಗಳು ಇರುತ್ತವೆ. ಬಂದ ಭಕ್ತರು ಎರಡು ದಿನ ಇಲ್ಲವೆ ನಾಲ್ಕು ದಿನ ಇದ್ದು ದೇವರಿಗೆ ತಮ್ಮ ಸೇವೆಯನ್ನು ಮಾಡಿಕೊಂಡು ತೆರಳುತ್ತಾರೆ.

ವಿಶೇಷವೆಂದರೆ ನೆರಣಿಕೆ ಗ್ರಾಮದ ಬಡಿಗೆ ಆಟ ಆಡುವವರಲ್ಲಿ ಇವರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಬಡಿಗೆ ಆಟದಲ್ಲಿ ಯಾವುದೇ ರೀತಿಯ ಜಾತೀಯತೆ ಕಾಣಸಿಗದು. ಆದರೆ ಮುಖ್ಯ ದೇವಸ್ಥಾನದ ಪರಿಧಿಯೊಳಗೆ ಬಂದರೆ ಕಟ್ಟುನಿಟ್ಟಿನ ಜಾತಿಯ ವ್ಯವಸ್ಥೆಯನ್ನು ಕಾಣುತ್ತೇವೆ. ''ನಾವು ಮಾದರು ಅಂತ ಹಿಂಗ ನೋಡ್ತೈದಾರ. ಗುಡ್ಡದ ಮ್ಯಾಲೆ ಹೋಗಾಕ ಬಿಡ್ತಾರೆ ಅನುಕೋ ಆದ್ರೂ ನಾವು ಹೋಗಂಗಿಲ್ಲ. ನಮ್ಮ ಗುಡಿನೇ ನಮಿಗೆ ಮುಖ್ಯ ಆಗಿಬಿಟ್ಟೈತೆ. ಅಲ್ಲಿ ನಡೆಯುವಂತೆ ನಾವು ಇಲ್ಲಿ ಆಚರಣೆಗಳನ್ನು ಮಾಡಿಕೊಂಡು ತೃಪ್ತಿ ಪಟ್ಕೋತೀವಿ. ಅವತ್ತಿನಿಂದ ಹಿಂಗಾ ಬಂದೈತಿ. ನಾವು ಕೂಡಾ ಅಂಗೇ ನಡ್ಕಂತೈದೀವಿ. ಈ ಗುಡಿಗೆ ಬರಾ ಖರ್ಚನ್ನೆಲ್ಲಾ ನಾವೇ ಸ್ವತಃ ನೋಡ್ಕಂತೀವಿ. ಟ್ರಸ್ಟ್ ಆಗಲೀ, ಒಡೆಯರಾಗಲೀ, ಯಾವುದೇ ಒಂದೀಟು ಸಹಾಯ ಮಾಡಿಲ್ಲ. ಗಿರಿಯಲ್ಲಿ ನಮಗೆ ಯಾವ ಅಧಿಕಾರನೂ ಕೊಟ್ಟಿಲ್ಲ. ನಾವು ಏನರಾ ಕೇಳಿದರೆ ''ಮೀರು ಮಾದಿಗೊಳ್ಳು ಮೀದೇ ಮುಂದಿ' (ನೀವು ಮಾದಿಗರು ನಿಮ್ಮದೇನೈತಿ) ಅಂತಾರೆ. ಒಟ್ಟಾರೆ ಈ ಜನಾಂಗ ಶೋಷಣೆಗೆ ಒಳಗಾಗಿ ಗಿರಿಯಲ್ಲಿ ಯಾವುದೇ ಅಧಿಕಾರ ಇಲ್ಲದಿರುವುದು ಸ್ಪಷ್ಟ.

ಹಿರೇ ಮೈಲಾರದಲ್ಲಿ ಹರಿಜನರಲ್ಲಿ ಗೊರವಮ್ಮನವರು ಇದ್ದು, ಕಂಚಾವೀರರು ಇವರೇ ಆಗಿದ್ದಾರೆ. ಶಸ್ತ್ರ ಪವಾಡ ಮಾಡುವ ಅಧಿಕಾರ ಇದೆ. ಗೊರವಮ್ಮನವರಿಗೆ ಗುಡಿಯ ಒಳಗಡೆ ಪ್ರವೇಶವಿದ್ದಂತಿಲ್ಲ. ಇವರು ಹಣ್ಣು ಕಾಯಿ ಒಡೆಸಬೇಕಾದರೆ ಕಂಚಾವೀರರಿಗೆ ಕೊಡ್ತಾರೆ. ಅವರು ಹೋಗಿ ಪೂಜೆ ಮಾಡಿಸಿಕೊಂಡು ಬರ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಜಾತಿಯನ್ನು ಕೇಳುತ್ತಿಲ್ಲ. ಆದರೂ ಇವರೇ ತಿಳಿದುಕೊಂಡು ಹೋಗುತ್ತಿಲ್ಲ.

ಒಟ್ಟಾರೆ ಮೈಲಾರದಲ್ಲಿ ಜಾತಿಯ ವ್ಯವಸ್ಥೆ ಇದ್ದರೂ ಅದು ಸ್ವಲ್ಪ ಸಡಿಲವಾದಂತೆ ತೋರುತ್ತದೆ. ಹರಿಜನರಿಗೆ ಶಸ್ತ್ರ ಪವಾಡ ಮಾಡುವ ಅಧಿಕಾರ ನೀಡಿರುವರು. ಆದರೆ ಮೀನಗೊಂದಿಯಲ್ಲಿ ಬಹಳ ಕಟ್ಟು ನಿಟ್ಟಾಗಿ ನಡೆದುಕೊಳ್ಳುತ್ತಾರೆ. ಜೊತೆಗೆ ಇವರಿಗೆ ಯಾವುದೇ ಅಧಿಕಾರ ಇಲ್ಲ. ಮಾದರ ಮಲ್ಲಯ್ಯನ ಗುಡಿ ಅಂತನೇ ಅಂತಾರೆ. ದೇವರನ್ನೇ ಅಸ್ಪೃಶ್ಯತಾ ಭಾವನೆಯಿಂದ ನೋಡಿರುವುದು ವಿಪರ್ಯಾಸ ಮತ್ತು ವಿಷಾದ.

ಈ ದೇವಾಲಯ ಹಲವಾರು ದೃಷ್ಠಿಯಿಂದ ವೈಶಿಷ್ಟಪೂರ್ಣವಾಗಿದೆ. ಗಂಗಿ ಮಾಳಮ್ಮನಿಗೆ ಇಲ್ಲಿ ಪ್ರತ್ಯೇಕ ಗುಡಿಯಿಲ್ಲ. ಆದರೆ ರಾಕ್ಷಸವಧೆಯಲ್ಲಿ ಅವಳದೇ ಪ್ರಧಾನಪಾತ್ರ. ಅವಳ ಪ್ರತೀಕವಾಗಿ ಹೂ ಮಾತ್ರ ಇರುವುದು ತುಂಬಾ ಕುತೂಹಲಕರವಾದ ಅಂಶ. ಇಲ್ಲಿ ಸಧ್ಯ ಲಗ್ನ ಸಮಾರಂಭ ನಡೆಯುತ್ತಿಲ್ಲ. ಆದರೆ ಅಶ್ವಿನಿ ದ್ವಾದಸಿಯಂದು ಓಕುಳಿಯ ಕಾರ್ಯಕ್ರಮ ತಪ್ಪದೇ ನಡೆಯುತ್ತದೆ. ದೇವರ ಲಗ್ನ ನಡೆಯುವ ಹಿರೇ ಮೈಲಾರ, ದೇವರಗುಡ್ಡ ಮತ್ತು ಪಾಲಿಗಳಲ್ಲಿ ಈ ಮಿತಿ ದ್ವಾದಶಿಯೂ ಆಗಿರುವುದು ಗಮನಾರ್ಹ.

ಗಂಗಿ ಮಾಳಮ್ಮನಂತೆ ಹೆಗ್ಗಪ್ಪನಿಗೂ ಇಲ್ಲಿ ಪ್ರತ್ಯೇಕ ಗುಡಿಯಿಲ್ಲ. ಬದಲು ಗೊರವಲಿಂಗಪ್ಪನ ಗುಡಿ ಯಿರುವುದು ಕಂಡುಬರುತ್ತದೆ. ಮೊದಲಲ್ಲಿ ಇದ್ದ ಗುಡಿಗಳು ನಾಶವಾಗಿವೆಯೇ ಏನೋ ಅಥವಾ ಇನ್ನೊಂದು ಊಹೆಗೂ ಸಾಧ್ಯ. ಸಧ್ಯದ ಗೊರವಲಿಂಗಪ್ಪ ಕಾಲಾಂತರದಲ್ಲಿ ಹೆಗ್ಗಡೆ ಪ್ರಧಾನಿಯಾಗಿ ರೂಪಾಂತರ ಹೊಂದಿರಬಹುದು. ಅದೇರೀತಿ ಇಲ್ಲಿ ಚಿಕ್ಕಯ್ಯ - ಜುಂಜಯ್ಯರಿಗೂ ಪ್ರತ್ಯೇಕ ಸ್ಥಾನಗಳಿಲ್ಲ. ಮಹಾರಾಷ್ಟ್ರ ದಲ್ಲಿ ಮತ್ತು ಅದರ ಮೂಲ ಕೇಂದ್ರವಾದ ಪೇಂಬರದಲ್ಲಿ ಕೂಡ ಈ ದೇವರುಗಳ ಪರಂಪರೆಯಿಲ್ಲ. ಕಾರಣ ಇವರಿಬ್ಬರೂ ಕನ್ನಡ ನಾಡಿನ ವೈಶಿಷ್ಟ್ಯವೆಂದು ಹೇಳಬಹುದು.

ಇಲ್ಲಿ ಪ್ರತ್ಯೇಕವಾದ ಶಿಬಾರವಿಲ್ಲ (ಕಟ್ಟೆ) ಆದರೆ ಈ ಸಂಪ್ರದಾಯದ ದೇವಾಲಯಗಳ ಸ್ವರೂಪ ಶಿಬಾರದಿಂದಲೇ ವಿಕಾಸಗೊಂಡಿರುವ ಸಾಧ್ಯತೆ ಇರುವುದರಿಂದ ಮೀನಗೊಂದಿಯಲ್ಲಿ ಇದು ಯಾವತ್ತೂ ಇರಲಿಲ್ಲವೆಂದು ನಿರ್ಣಯಿಸಲಿಕ್ಕಾಗದು. ದೇವರಗುಡ್ಡದ ಕರಿಯಾಲ ಪ್ರದೇಶದಲ್ಲಿಯೇ ಶಿಬಾರ ಮಂಟಪ ವಿರುವುದು ಎದ್ದು ಕಾಣುವ ಸಾಮ್ಯ. ಎಂದರೆ ಮೀನಗೊಂದಿ ಗುಡ್ಡದಲ್ಲಿ ಸಧ್ಯ ಇರುವ ಸಿಂಹಾಸನವೇ ಮೂಲದ ಶಿಬಾರ ಅಥವಾ ಶಿಬಾರ ಮಂಟಪ ಎಂದು ಹೇಳುವುದೇ ಸೂಕ್ತ. ಒಡೆಯರು ದೇವರಗುಡ್ಡದ ಕರಿಯಾಲದ ಶಿಬಾರ ಮಂಟಪದಲ್ಲಿ ದಸರೆಯ ಕಾರಣಿಕೋತ್ಸವಕ್ಕೆ ಹೋಗಿ ಕುಳಿತುಕೊಳ್ಳುವಂತೆಯೇ, ಇಲ್ಲಿಯೂ ಈ ಕರಿಯಾಲದ ಸಿಂಹಾಸನದ ಮಂಟಪದಲ್ಲಿ ಹೋಗಿ ಕುಳಿತುಕೊಳ್ಳುವ ಕ್ರಮ ಈಗಲೂ ಇದೆ.

ಗೊರವರು ಹಾಡುವ ಮಟ್ಟು ಲಯಗಳಲ್ಲಿ ನಾವು ವ್ಯತ್ಯಾಸವನ್ನು ಕಾಣುತ್ತೇವೆ. ಮೈಲಾರದಲ್ಲಿ ದೇವರು ಶಾಂತಿಪ್ರಿಯವಾಗಿ ಲಯ ನಿಧಾನಗತಿಯಲ್ಲಿದ್ದು, ಮೀನಗೊಂದಿಯಲ್ಲಿ ದೇವರ ಆರ್ಭಟ ಜಾಸ್ತಿ. ಅದರಂತೆ ಹಾಡುಗಳು ಮಟ್ಟುಗಳಲ್ಲಿ ಆರ್ಭಟವನ್ನು ಕಾಣುತ್ತೇವೆ. ಹಿರೇಮೈಲಾರ - ದೇವರಗುಡ್ಡಗಳಲ್ಲಿ ಕುದುರೆಯ ಹಬ್ಬವೇ ಪ್ರತ್ಯೇಕವಾಗಿ ನಡೆಯುತ್ತಿದೆ.

ಇಲ್ಲಿ ದೇವರ ಪಲ್ಲಕ್ಕಿ ಪಂಚಮಿಯಿಂದ ದಶಮಿಯವರೆಗೆ ಸುಮ್ಮನೆ ಸಂಚರಿಸುತ್ತಿರುವುದು ಹಬ್ಬದ ಇನ್ನೊಂದು ರೂಪವೆಂದು ಕಾಣುತ್ತದೆ. ಪ್ರಸ್ತುತ ಸನ್ನಿವೇಶದಲ್ಲಿ ಕುದುರೆಕಾರರು ಕುಣಿಯುವುದು ಅಪೇಕ್ಷಣೀಯ ಆಚರಣೆ. ಈಗ ಇಲ್ಲಿ ಸಂಕ್ಷೇಪಗೊಂಡಂತೆ ಕಾಣುತ್ತದೆ. ಇನ್ನುಳಿದಂತೆ ಇಲ್ಲಿನ ಹೆಚ್ಚಿನ ಅಂಶಗಳು ಸಂಕ್ಷೇಪವಾಗಿದೆ ಎಂದರೆ ಸಂಪ್ರದಾಯದ ಮೂಲ ಸ್ವರೂಪಕ್ಕೆ ಬಹುಶಃ ಹತ್ತಿರವಾಗಿದೆ. ಗೊರವಿಯರು ಇಲ್ಲದೇ ಕೇವಲ ಬಸವಿಯರು. ಮಾತ್ರವಿರುವುದು, ದೋಣಿಗೆ ಹಾಲು ಮೊಸರು ಮುಂತಾದ ಕೆಲವೇ ಪದಾರ್ಥಗಳನ್ನು ಬಡಿಸುವುದು, ದೇವಿಯ ಪ್ರತೀಕವಾಗಿ ಹೂವು ಇರುವುದು. ಆದಿ ಮಾನವರ ಬೇಟೆ ನೆನಪನ್ನು ಸಾರುವ ಬಡಿಗೆ ಆಟ ಇವೆಲ್ಲಾ ಅಂಥ ಉದಾಹರಣೆಗಳು.

ಈ ರೀತಿಯಾಗಿ ಆದಿಮೀನಗೊಂದಿ ಮತ್ತು ಹಿರೇ ಮೈಲಾರ ಕ್ಷೇತ್ರದ ಆಚರಣೆಗಳು, ನಂಬಿಕೆಗಳು ಮುಂತಾದವು ಅಲ್ಲದೆ ಗೊರವ ಸಂಪ್ರದಾಯ, ಬಸವಿ ಪದ್ಧತಿ, ಬಡಿಗೆ ಆಟ ಮುಂತಾದವು ನಾನಾ ರೀತಿಯಲ್ಲಿ ಬದಲಾವಣೆಯನ್ನು ಮತ್ತು ವ್ಯತ್ಯಾಸವನ್ನು ಹೊಂದಿವೆ. ಮೂಲದಲ್ಲಿ ಇದೆಲ್ಲವೂ ಗೊರವ ಸಂಪ್ರದಾಯವೇ ಆದರೂ ಕ್ಷೇತ್ರದ ಮತ್ತು ಭೌಗೋಳಿಕವಾಗಿ ಚದುರಿರುವ ಈ ದೇವಸ್ಥಾನಗಳು ಪ್ರಾದೇಶಿಕ ವೈಶಿಷ್ಟತೆಯನ್ನು ಪಡೆದುಕೊಂಡಿರುವುದರಲ್ಲಿ ಸಹಜತೆ ಇದೆ. ಆದರೆ ಒಂದು ಸಂಪ್ರದಾಯಕ್ಕೆ ಬದ್ಧವಾದ ಅನೇಕ ಆಚರಣೆಗಳು ಸಾಮ್ಯವನ್ನು ಹೊಂದಿರುವುದು ಅಷ್ಟೇ ಸಹಜವಾಗಿದೆ. ಅದೇನೆ ಇದ್ದರೂ ಈ ಎರಡೂ ಕ್ಷೇತ್ರಗಳ ವಿಸ್ತೃತ ಅಧ್ಯಯನ ಮಾಡಿದಾಗ ಇನ್ನೂ ಹಲವಾರು ಸಂಪ್ರದಾಯಗಳ ವೈಶಿಷ್ಟ್ಯತೆಯು ಕಂಡುಬರಬಹುದು ಇಲ್ಲಿಯವರೆಗೆ ಮಾಡಿರುವ ಸಮೀಕ್ಷೆ ಒಂದು ಸಂಕ್ಷಿಪ್ತವಾದ ನೋಟವಾಗಿದೆ.

ಅಧ್ಯಾಯ : ೯

# ಉಪಸಂಹಾರ

ಶ್ರೀ ಮಾಳಸಾ ಮಲ್ಲೇಶ್ವರ ಸ್ವಾಮಿ ಶ್ರೀ ಆದಿಮೀನಗೊಂದಿ ಕ್ಷೇತ್ರದಲ್ಲಿ ನೆಲೆಸಿದ್ದು ಗಣಾಪತ್ಯರಿಗೆ ಗಣೇಶನಂತೆ, ವೈಷ್ಣವರಿಗೆ ಕೂರ್ಮರೂಪದ ವಿಷ್ಣುವಿನಂತೆ, ಶಾಕ್ತೆಯರಿಗೆ ಶಕ್ತಿರೂಪದಂತೆ, ಶಿವ ಭಕ್ತರಿಗೆ ಶಿವಲಿಂಗದಾಕಾರದಂತೆ, ಕಾರ್ತಿಕೇಯ ಭಕ್ತರಿಗೆ ಅಲ್ಲಿ ವಿಶೇಷವಾಗಿರುವ ನವಿಲುಗಳ ದರ್ಶನದಂತೆ, ಸೂರ್ಯೋಪಾಸಕರಿಗೆ ಸೂರ್ಯ ಬಿಂಬದಂತೆ ದರ್ಶನ ಕೊಡುತ್ತಾನೆ. ಇಂತಹ ಮಲ್ಲೇಶ್ವರ ಅಥವಾ ಮಲ್ಲಯ್ಯನನ್ನು ಸಕಲ ಪಂಗಡಗಳ ಭಕ್ತರು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಸಿದ್ಧಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಸ್ವಾಮಿ ಮಲ್ಲಯ್ಯನೊಂದಿಗೆ ಕ್ಷೇತ್ರದ ಜನರು ಅಥವಾ ಭಕ್ತರು ತಾವು ಇರಿಸಿರುವ ಭಕ್ತಿಯ ಸ್ವರೂಪ, ಆಚರಣೆಯ ವಿಧಿವಿಧಾನ, ಅವರ ಜೀವನ, ಸ್ಥಾನಿಕರುಗಳ ಒಡೆತನ, ಮುಂತಾದವುಗಳನ್ನೆಲ್ಲಾ '' ಶ್ರೀ ಆದಿಮೀನಗೊಂದಿ ಮಲ್ಲಯ್ಯನ ಆಚರಣೆ ಒಂದು ಜಾನಪದೀಯ ಅಧ್ಯಯನ'' ದ ಅಡಿ ಸಾಕಾರಗೊಳಿದಿದ್ದೇನೆ. ಅಧ್ಯಯನದ ಅನುಕೂಲಕ್ಕಾಗಿ ಒಂಭತ್ತು ಅಧ್ಯಾಯಗಳನ್ನಾಗಿ ಮಾಡಿಕೊಂಡಿರುವೆನು. ಇಲ್ಲಿ ಪ್ರತಿಯೊಂದು ಅಧ್ಯಾಯವೂ ತನ್ನದೇ ಆದ ಪ್ರತ್ಯೇಕತೆಯನ್ನು ಹೊಂದಿರುವುದು ವಿಶೇಷ.

ಮೊದಲನೇ ಅಧ್ಯಾಯವಾದ ' ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯಲ್ಲಿ ಈ ಅಧ್ಯಯನ ಕೈ ಗೊಳ್ಳಲು ಆದ ಪ್ರೇರಣೆ, ಇಲ್ಲಿನ ಆಚರಣೆಗಳ ವೈಶಿಷ್ಟ್ಯಗಳು, ಅದರ ಹಿನ್ನೆಲೆಯಲ್ಲಿ ಹಿರೇ ಮೈಲಾರದ ಆಚರಣೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಅಧ್ಯಯನದ ವ್ಯಾಪ್ತಿಯನ್ನು ಹೆಚ್ಚಿಸಿ, ಸಾಹಿತ್ಯಿಕ ಅಂಶಗಳ ಜೊತೆಗೆ ಈ ವರೆಗೆ ನಡೆದ ಅಧ್ಯಯನಗಳ ವಿವರ ಮತ್ತಿತರೆ ಅಂಶಗಳನ್ನು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯಲ್ಲಿ ವಿವರಿಸಿದ್ದೇನೆ. ಎರಡನೆಯ ಅಧ್ಯಾಯ ''ಮಲ್ಲಯ್ಯನ ಮೂಲ'' ದ ಕುರಿತಾದದ್ದು. ಇಲ್ಲಿ ಮುಖ್ಯವಾಗಿ ಕ್ಷೇತ್ರದ ಮೂಲದ ಬಗ್ಗೆ ಚರ್ಚಿಸಲಾಗಿದೆ. ವಿಶೇಷ ಆಚರಣೆಗಳಾದ ಬಡಿಗೆ ಆಟ, ಓಕುಳಿಯಾಟ, ರೋಜದ ಹೂವಿನ ಪದ್ಧತಿ, ಶಾಸನಾಧಾರ ಮುಂತಾದ ಅಂಶಗಳಿಂದ ಎಲ್ಲಾ ಮೈಲಾರ ಕ್ಷೇತ್ರಗಳಿಗೆ ಮೀನಗೊಂದಿ ಮಲ್ಲಯ್ಯನ ಕ್ಷೇತ್ರವೇ ಮೂಲ ಎಂದು ಸಕಾರಣಗಳನ್ನು ನೀಡಿ ವಿವರಿಸಿದ್ದೇನೆ. ಮೂರನೆಯ ಅಧ್ಯಾಯ 'ಸ್ವಾಮಿ ಮಲ್ಲಯ್ಯನ ಕ್ಷೇತ್ರ ಪರಿಚಯ'ದ ವಿವರಣೆಯಾಗಿದೆ. ಇಲ್ಲಿ ಕ್ಷೇತ್ರದ ಸುತ್ತಮುತ್ತಲಿನ ಪರಿಸರ, ಗಿರಿಯಲ್ಲಿ ಇರುವ ಪ್ರತಿಯೊಂದು ಚಿಕ್ಕಪುಟ್ಟ ಗುಡಿಗಳ ವಿವರಗಳನ್ನೊಳಗೊಂಡ ಕ್ಷೇತ್ರ ಪರಿಚಯವಾಗಿದೆ. ನಾಲ್ಕನೆಯ ಅಧ್ಯಾ ಯ ' ಕ್ಷೇತ್ರದ ಸ್ಥಾನಿಕರ' ಕುರಿತು ವಿವರಿಸಲಾಗಿದೆ. ಮುಖ್ಯವಾಗಿ ಒಡೆಯರ ಅಧಿಕಾರ, ಗಣಾಚಾರಿಗಳು, ವಗ್ಗರು, ಕುದುರೆಕಾರರು, ಬಸವಿಯರು, ಪಂಜಿನವರು, ಬಾರಿಕರು ಮುಂತಾಗಿ ದೇವಸ್ಥಾನದಲ್ಲಿ ಅಧಿಕಾರ ಮಾಡಿಕೊಂಡ ಪ್ರತಿಯೊಂದು ಪಂಗಡಗಳು ಹಾಗೂ ಜಾತ್ರೆಯಲ್ಲಿ ಅವರ ಕಾಯಕದ ಕುರಿತು ತುಂಬಾ ವಿವರವಾಗಿ ವಿವರಿಸಲಾಗಿದೆ. ಐದನೆಯ ಅಧ್ಯಾಯವು'ಅಧ್ಯಾಯವು

'ಮಲ್ಲಯ್ಯನ ಆಚರಣೆ'ಗಳಿಗೆ ಸಂಬಂಧಿಸಿದ್ದು ಇದರಲ್ಲಿ ಎರಡು ಭಾಗಗಳನ್ನು ಮಾಡಿರುವೆನು. ೧) ಮಲ್ಲಯ್ಯನ ವಾರ್ಷಿಕ ಆಚರಣೆಗಳು, ೨) ಜೀವನಾವರ್ತನದ ಆಚರಣೆಗಳು. ವಾರ್ಷಿಕ ಆಚರಣೆಯ ಈ ಭಾಗದಲ್ಲಿ ಪ್ರತಿದಿನದಿಂದ ಹಿಡಿದು ವಾರ, ಹುಣ್ಣಿಮೆ, ಅಮವಾಸೆ, ಹಬ್ಬ-ಹರಿದಿನ ಮತ್ತು ಜಾತ್ರೆಯಲ್ಲಿ ಭಕ್ತರು ಸ್ವಾಮಿ ಮಲ್ಲಯ್ಯನಿಗೆ ನಡೆದುಕೊಳ್ಳುವ ರೀತಿಯ ಬಗ್ಗೆ ತುಂಬಾ ಕೂಲಂಕುಷವಾಗಿ ವಿವರಿಸಿದ್ದೇನೆ. ಜೀವನಾವರ್ತನದ ಆಚರಣೆಯ ಈ ಭಾಗದಲ್ಲಿ ಜನನದಿಂದ ಮರಣದವರೆಗೆ ಇರುವ ಪ್ರತಿಯೊಂದು ಘಟ್ಟದಲ್ಲಿಯೂ ಭಕ್ತರು ಈ ದೇವರನ್ನು ಯಾವ ರೀತಿ ಆರಾಧಿಸುತ್ತಾರೆ ಎನ್ನುವುದರ ಬಗ್ಗೆ ವಿವರಿಸಿದ್ದೇನೆ. ಆರನೆಯ ಅಧ್ಯಾಯ 'ಮಲ್ಲಯ್ಯನ ಕುರಿತ ನಂಬಿಕೆ ಮತ್ತು ವಿಧಿ ನಿಷೇಧಗಳಾಗಿವೆ. ಈ ದೇವರ ಹಿನ್ನಲೆಯಲ್ಲಿ ಹುಟ್ಟಿಕೊಂಡಿರುವ ನಂಬಿಕೆಗಳೇನು, ಹಾಗೂ ವಿಧಿ-ನಿಷೇಧಗಳೇನು ಎನ್ನುವ ಕುರಿತು ಕೂಲಂಕುಷವಾಗಿ ವಿವರಿಸಿದ್ದೇನೆ. ಏಳನೆಯ ಅಧ್ಯಾಯ 'ಮಲ್ಲಯ್ಯನ ಸಾಹಿತ್ಯ'ದ ಕುರಿತಾಗಿದೆ. ಈ ಅಧ್ಯಾಯದಲ್ಲಿ ಎರಡು ಭಾಗಗಳಿವೆ. ೧) ಮಲ್ಲಯ್ಯನ ಜನಪದ ಸಾಹಿತ್ಯ, ೨) ಶಿಷ್ಟ ಸಾಹಿತ್ಯ. ಜನಪದ ಸಾಹಿತ್ಯದಲ್ಲಿ ಕಥೆ, ಹಾಡು, ಒಡಪು, ಐತಿಹ್ಯ ಮುಂತಾದ ಅಂಶಗಳನ್ನು ವಕ್ತೃಗಳಿಂದ ಸಂಗ್ರಹಿಸಿದ್ದೇನೆ. ಶಿಷ್ಟ ಸಾಹಿತ್ಯದಲ್ಲಿ ಈ ಕ್ಷೇತ್ರದಲ್ಲಿ ಬರವಣಿಗೆಯ ರೂಪದಲ್ಲಿ ದೊರೆತ ಕಥೆ, ಬಯಲಾಟ, ನಾಟಕ, ಧ್ವನಿಸುರುಳಿಯ ಹಾಡುಗಳು ಮುಂತಾದವುಗಳನ್ನು ದಾಖಲಿಸಿ ವಿಶ್ಲೇಷಿಸಿದ್ದೇನೆ. ಎಂಟನೆಯ ಅಧ್ಯಾಯವು 'ಮಲ್ಲಯ್ಯ ಮತ್ತು ಮೈಲಾರ ಲಿಂಗ ಒಂದು ತೌಲನಿಕ ಅಧ್ಯಯನ'ವಾಗಿದೆ. ಇದರಲ್ಲಿ ಮೀನಗೊಂದಿ ಮಲ್ಲಯ್ಯನ ಕ್ಷೇತ್ರ ಮತ್ತು ಹಿರೇ ಮೈಲಾರ ಕ್ಷೇತ್ರ ಇವರೆಡರ ಸಾಮ್ಯತೆ ಮತ್ತು ಭಿನ್ನತೆಗಳೇನೆಂಬುದನ್ನು ಅವಲೋಕಿಸಿ, ಮನೋಜ್ಞವಾಗಿ ವಿಶ್ಲೇಷಿಸಿದ್ದೇನೆ. ಇನ್ನು ಕೊನೆಯದಾದ ಒಂಭತ್ತನೆಯ ಅಧ್ಯಾಯ ಉಪಸಂಹಾರವಾಗಿದೆ. ಇದರಲ್ಲಿ ಒಟ್ಟಾರೆ ಅಧ್ಯಯನದ ಫಲಿತಗಳನ್ನು ಕುರಿತು ವಿವರಿಸಿದ್ದೇನೆ. ಜೊತೆಗೆ ಕ್ಷೇತ್ರದ ಬೆಳವಣಿಗೆ ಆಗದೇ ಇರುವುದಕ್ಕೆ ಕಾರಣಗಳನ್ನು ನೀಡಲು ಪ್ರಯತ್ನಿಸಿದ್ದೇನೆ.

ಇದುವರೆಗೂ ನಡೆದ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಈ ರೀತಿಯಾಗಿವೆ; ಎಲ್ಲಾ ಮೈಲಾರ ಕ್ಷೇತ್ರಗಳಿಗೂ ಶ್ರೀ ಆದಿಮೀನಗೊಂದ ಮಲ್ಲಯ್ಯನ ಕ್ಷೇತ್ರವೇ ಮೂಲವೆಂದು ಗುರುತಿಸುವ ಕೆಲ ಆಚರಣೆಗಳು ಬಹಳ ವಿಶಿಷ್ಟವಾಗಿವೆ. ಮೊದಲಿಗೆ 'ರೋಜಾದ ಹೂವಿನ ಅಲಂಕಾರ'. ಈ ಪದ್ಧತಿಯಲ್ಲಿ ಬಿಳಿ ಅಶ್ವದ ಮೇಲೆ ರೋಜದ ಹೂವಿನ ಅಲಂಕಾರ ಮಾಡಿ ಅದೇ ಗಂಗೀ ಮಾಳಮ್ಮನ ಪ್ರತಿರೂಪವೆಂದು ಭಾವಿಸಿ ಆರಾಧಿಸುವ ಈ ಆಚರಣೆ ಬಹು ಮುಖ್ಯವಾಗಿದ್ದು, ಮೂರ್ತಿ ಪೂಜೆಗೂ ಹಿಂದಿನ ಆಚರಣೆ ಪದ್ಧತಿಯನ್ನು ನೆನಪಿಗೆ ತರುತ್ತದೆ. ಮತ್ತೊಂದು ವಿಶೇಷವಾದ ಆಚರಣೆ ಬಡಿಗೆ ಆಟ. ಈ ಆಟ ಬಹಳ ರೌದ್ರತೆಯಿಂದ ಕೂಡಿದ್ದು, ಹಣಸಿನ ಕಟ್ಟಿಗೆಗಳಿಂದ ಅಣಕ ಯುದ್ಧ ಮಾಡುತ್ತ ಕೊನೆಗೆ ಹೊಡೆದಾಡಿ ಸಾವುಗಳು ಸಂಭವಿಸುತ್ತವೆ. ಇದು ಆದಿಮಾನವರ ಬೇಟೆಯ ಸಂಸ್ಕೃತಿಯನ್ನು ನೆನಪಿಗೆ ತರುತ್ತದೆ. ಇಂತಹ ಆಚರಣೆಯನ್ನು ಸಾಮಾನ್ಯವಾಗಿ ನಾವು ಎಲ್ಲಿಯೂ ಕಾಣಲಾರೆವು. ಈ ಬಡಿಗೆ ಆಟದಲ್ಲಿ ಹೆಣಗಳು

ಉರುಳುವುದರ ಕುರಿತು ಮುಖ್ಯ ಕಾರಣಗಳನ್ನು ಹುಡುಕಿದಾಗ ನೂಕು ನುಗ್ಗಲಿನಲ್ಲಿ ಕೆಲವೊಮ್ಮೆ ಆಯ ತಪ್ಪಿ ನೆಲಕ್ಕೆ ಬಿದ್ದವರು ಮೇಲೇಳಲಾಗದೇ ಸಾವನ್ನಪ್ಪುವ ಸಂಭವವುಂಟು. ಈ ರೀತಿಯ ಆಕಸ್ಮಿಕ ಘಟನೆಗಳು ತೀರಾ ಅಪರೂಪ. ಆದರೆ ಜಗಳಗಳಾಗಿ ಬಡಿದಾಡಿ ಹಿಂಸೆ ಮಾರ್ಗ ಅನುಸರಿಸುವ ಸಂದರ್ಭಗಳೇ ಹೆಚ್ಚು. ಕಾರಣ ಊರು, ಊರುಗಳ ಮಧ್ಯೆ ಇರುವ ಜಗಳ, ಜಾತೀಯ ಕಾರಣ, ವೈಯಕ್ತಿಕ ಕಾರಣ, ರಾಜಕೀಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಪಾರ್ಟಿ ಜಗಳಗಳು ಮುಂತಾಗಿ ಈ ಹಿನ್ನೆಲೆಯಲ್ಲಿ ಮೊದಲೇ ಸಿದ್ಧತೆಯನ್ನು ಕೈಗೊಂಡು ತಮ್ಮಲಿಯ ವೈಷಮ್ಯಗಳು ಸಾಕಾರವಾಗಲು ಬಡಿಗೆ ಆಟದಲ್ಲಿ ಕಾಲು ಕೆದರಿ ಜಗಳ ಮಾಡಿ ಈ ರೀತಿಯ ಮಾರಣಾಂತಿಕ ಕೃತ್ಯಕ್ಕೆ ಕಾರಣರಾಗುತ್ತಾರೆ. ಇಲ್ಲಿ ನಡೆವ ಸಾವು ನೋವುಗಳಿಗೆ ಯಾವುದೇ ಕೇಸುಗಳು ಇಲ್ಲದಿರುವುದರಿಂದ ಬಡಿಗೆ ಆಟದಲ್ಲಿ ಸಾಯುವವರ ಸಂಖ್ಯೆ ಜಾಸ್ತಿ. ಈಗ ಕಳೆದ ವರ್ಷದಿಂದ ಸ್ವಲ್ಪ ಕಡಿಮೆಯಾಗಿದೆ. ಕಾರಣ ಯಾವುದೇ ವ್ಯಕ್ತಿ ಅನುಮಾನಾಸ್ಪದ ವ್ಯಕ್ತಿಯ ಮೇಲೆ ಇಲ್ಲ, ಆತನ ತಂಡದವರ ಮೇಲೆ ಆರೋಪ ಹೋರಿಸಿದ್ದೇ ಆದರೆ ಪೋಲೀಸಿನವರು ಕೇಸನ್ನು ದಾಖಲಿಸುತ್ತಾರೆ. ಕಳೆದ ೨೦೦೧ನೇ ವರ್ಷದ ಬನ್ನಿ ಹಬ್ಬದಲ್ಲಿ ನಡೆದ ಘಟನೆಯಾದ ಆ ತಿಂಗಳಲ್ಲಿ ನಲವತ್ತು ಜನರನ್ನು ಬಂಧಿಸಿದ್ದು, ಇದೇ ಹಿನ್ನೆಲೆಯಲ್ಲಿ. ಆ ಘಟನೆಗೆ ಕಾರಣ ಎಳ್ಳಾರ್ಥಿಯವರು, ಆ ದಿನ ಎಸ್.ಐ.ವರನ್ನು ಸಹ ಹೊಡೆದಿರುವುದು (ಈ ಘಟನೆಯಲ್ಲಿ ಎಸ್.ಐ.ಯವರು ಬಡಿಗೆಗಳ ಹೊಡೆತದಿಂದ ಜರ್ಜರಿತರಾಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದು ಶುಶ್ರೂಷೆಯ ಹಂತದಲ್ಲಿಯೇ ಮರಣವನ್ನಪ್ಪಿದರು) ಇವರೇ ಎಂದು ಸಾಕ್ಷಿ ಹೇಳಿದಾಗ ಅವರನ್ನೆಲ್ಲಾ ಬಂಧಿಸಿದರು. ನಂತರ ೨೦೦೨ರ ಬನ್ನಿಯಲ್ಲಿ ಯಾವುದೇ ಸಾವು ಸಂಭವಿಸಲಿಲ್ಲ. ಅದಕ್ಕೆ ಈ ಕೇಸನ್ನು ದಾಖಲಿಸುವ ಕಾರಣವೇ ಆಗಿರಬಹುದು. ಅಂತೂ ಇತ್ತೀಚಿನ ದಿನಗಳಲ್ಲಿ ಬಡಿಗೆ ಆಟದಲ್ಲಿ ಸಾವುಗಳು ಸಂಭವಿಸುತ್ತಿರುವುದು ಕಡಿಮೆಯಾಗಿದೆಯೆಂದರೆ ಅದು ಒಳ್ಳೆಯ ಬೆಳವಣಿಗೆಯೇ ಆಗಿದೆ.

ಇನ್ನು ಬಸವಿಯರನ್ನು ಬಿಡುವ ಒಂದು ಕೆಟ್ಟ ಕಟ್ಟುನಿಟ್ಟಿನ ಪದ್ಧತಿ ಇತರ ಮಲ್ಲಯ್ಯನ ಕ್ಷೇತ್ರಗಳಲ್ಲಿ ಇದ್ದರೂ ಅದು ಕ್ವಚಿತ್ತಾಗಿದೆ. ಜೊತೆಗೆ ಬಸವಿಯರನ್ನು ಹೊತ್ತುಕೊಂಡು ಕುಣಿಯುವ ಪ್ರಮೇಯವೇ ಕಾಣಸಿಗದು. ಆದ್ರೆ ಇಲ್ಲಿಯ ಬಸವಿಯರ ಆಚರಣೆಯನ್ನು ನೋಡಿದರೆ, ದಲಿತರ ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ತಮಗೆ ಬೇಕಾದ ರೀತಿಯಲ್ಲಿ ಆಚರಣೆಗಳನ್ನು ಸೃಷ್ಟಿಸಿ ವಿನೋದ ನೋಡುವ ಕುಚೇಷ್ಟೆ ಸುಮಾರು ಹಿಂದಿನಿಂದಲೂ ಬಂದಿರಬೇಕು. ಹರಿಜನರಿಗೆ ಯಾವುದೇ ರೀತಿಯ ಗೊರವಿಕೆಯ ಸ್ಥಾನವನ್ನು ಕಲ್ಪಿಸಿಕೊಡದೆ ಇರುವುದು, ಇಂಥ ಕಟ್ಟಾ ಜಾತೀಯ ಸಂಸ್ಕೃತಿಯ ಬೇರುಗಳು ಇನ್ನೂ ಜೀವಂತವಾಗಿ ಉಳಿದಿರುವುದನ್ನು ನೋಡಿದರೆ ಇದು ಮೂಲ ಕ್ಷೇತ್ರ ಎಂದೆನಿಸದೇ ಇರದು. ಜೊತೆಗೆ ಈ ಕ್ಷೇತ್ರ ಯಾವುದೇ ಬದಲಾದ ನಾಗರೀಕತೆಗೆ ಒಳಪಡದೇ ಇರುವುದು ಸಹ ಕಾರಣವಾಗಿದೆ. ಒಡೆಯರು ನಾಗರೀಕತೆಗೆ ಒಳಪಡದೇ ಇರುವುದು ಸಹ ಕಾರಣವಾಗಿದೆ. ಒಡೆಯರು ನೀಡುವ ಶ್ರೀಮುಖದಲ್ಲಿ 'ಆದಿ ಮೀನಗೊಂದಿ

ಪುರವಾದೀಶ್ವರರು' ಎಂದಿರುವುದು ಇದರ ಮೂಲ ನೆಲೆ ಆದಿ ಮೀನಗೊಂದಿ ಸಿಂಹಾಸನವೇ ಆಗಿರುವುದು ಖಚಿತ. ಭೌಗೋಳಿಕವಾಗಿ ಈ ಕ್ಷೇತ್ರದ ಪರಿಸರ ಮೂಲಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಜೊತೆಗೆ ತೆಕ್ಕಲಕೋಟೆಯ ಶಾಸನವು ಮತ್ತು ನೆರಣಿಕೆಯ ಶಾಸನವು ಇದೇ ಕ್ಷೇತ್ರ ಮೂಲವೆಂದು ಖಚಿತಪಡಿಸಿವೆ. ಇಷ್ಟಾದರೂ ಈ ಕ್ಷೇತ್ರ ಪ್ರಖ್ಯಾತಿಗೆ ಬರದೇ ಇರುವುದು ಆಶ್ಚರ್ಯಕರ ಸಂಗತಿಯಾಗಿದೆ. ಇದಕ್ಕೆ ಕೆಲ ಕಾರಣಗಳು ಇರಬಹುದೆಂದು ಕಂಡುಕೊಳ್ಳಲಾಗಿದೆ.

ಮುಖ್ಯವಾಗಿ ಈ ಕ್ಷೇತ್ರ ಯಾವುದೇ ಹೆದ್ದಾರಿಯ ಪಕ್ಕದಲ್ಲಿ ಇರದೇ, ಹೆದ್ದಾರಿಯಿಂದ ಸುಮಾರು ೧೨ ರಿಂದ ೧೫ ಕಿ.ಮೀ. ದೂರದಲ್ಲಿರುವುದು. ಹೆದ್ದಾರಿಯಿಂದ ಸಮೀಪವೆನಿಸಿದರೂ ಸಹ ಗುಡ್ಡಗಾಡು ಪ್ರದೇಶ ದಲ್ಲಿ ಈ ದೇವರು ಇರುವುದರಿಂದ ರಸ್ತೆಗಳು ತುಂಬಾ ತೊಡಕಾಗಿವೆ. ಇನ್ನು ಕ್ಷೇತ್ರಕ್ಕೆ ಬರುವ ದಾರಿ ಕಲ್ಲು, ಮುಳ್ಳು, ಚಿಕ್ಕ ಪುಟ್ಟ ಬೆಟ್ಟಗಳಿಂದ, ಏರಿಳಿತಗಳಿಂದ ಕೂಡಿದ್ದು, ಎತ್ತಿನ ಬಂಡಿಗಳೂ ಸಹ ಗಿರಿಯ ಬಳಿಗೆ ಹೋಗಲು ಅನುಕೂಲವಾಗದೇ ಇರುವ ಪರಿಸ್ಥಿತಿಯಿದೆ. ಇಂತಹ ಪರಿಸ್ಥಿತಿಯಲ್ಲಿ ಭಕ್ತರು ಮಲ್ಲಯ್ಯನ ವಾರವಾದ ಭಾನುವಾರದಂದು ಗಿರಿಗೆ ಬರಬೇಕೆಂದರೆ ನಡೆದುಕೊಂಡೇ ಬರಬೇಕು. ಅಮವಾಸೆಗೂ ಸಹ ಅಷ್ಟೇ. ಭಾನುವಾರ ಹಾಗೂ ಅಮವಾಸೆಯ ದಿನಗಳಲ್ಲಿ ಕ್ಷೇತ್ರಕ್ಕೆ ಬರುವ ಭಕ್ತರ ಸಂಖ್ಯೆ ಹೆಚ್ಚಾಗಿದ್ದುದರಿಂದ ಆಲೂರಿನಿಂದ ಮಿನಿಟ್ರಕ್‌ಗಳನ್ನು ಓಡಿಸುತ್ತಾರೆ. ಅದು ಭಕ್ತರ ಸಂಖ್ಯೆ ಅಧಿಕವಾಗಿದ್ದಾಗ. ಇನ್ನು ಗಿರಿಯಲ್ಲಿ ಭಕ್ತರಿಗೆ ನೀರಿನ ಸೌಕರ್ಯ, ವಸತಿ ಸೌಕರ್ಯ, ಊಟ, ಉಪಹಾರದ ಸೌಕರ್ಯ ಇವಾವುವೂ ಇರುವುದಿಲ್ಲ. ಗಿರಿಗೆ ಬಂದ ಅಲ್ಪಸ್ವಲ್ಪ ಭಕ್ತರು ದೇವರಿಗೆ ಕಾಯಿ-ಕರ್ಪೂರ ಬೆಳಗಿಸಿ ತಮ್ಮ ಊರುಗಳಿಗೆ ತೆರಳುತ್ತಾರೆ. ದಸರಾ ಬನ್ನಿಗೆ ಸಾಕಷ್ಟು ಜನ ಭಕ್ತರು ಸೇರಿ ಜಾತ್ರೆಯ ಆಚರಣೆಗಳನ್ನೆಲ್ಲಾ ಆಚರಿಸುತ್ತಾರೆ. ಒಂದೆರೆಡು ದಿನಗಳವರೆಗೆ ಶಿವಸಾನ ಗದ್ದಿಗೆಯ ಬಯಲಲ್ಲಿ ಮಂಟಪಗಳ ಬಳಿ, ವನ್ನಿ ಕೆರೆಕಟ್ಟೆಯ ಬಳಿ ಉಳಿದಿದ್ದು, ನಂತರ ತಮ್ಮ ಊರುಗಳಿಗೆ ಹೋಗುತ್ತಾರೆ. ಮತ್ತೆ ಆ ರೀತಿ ಭಕ್ತರು ಸೇರುವುದು ಮುಂದಿನ ವರ್ಷದ ಬನ್ನಿಗೇನೆ. ಭಾನುವಾರ ಮತ್ತು ಅಮವಾಸೆಗೆ ಅನುಕೂಲವಾದವರು ಬರುತ್ತಿರುತ್ತಾರೆ.

ಇತ್ತೀಚಿನ ದಿನಗಳಲ್ಲಿ ಈ ಕ್ಷೇತ್ರ ಅಭಿವೃದ್ಧಿ ಪಥದತ್ತ ಸಾಗುತ್ತಲಿದೆ. ಕ್ಷೇತ್ರದಲ್ಲಿ 'ಶ್ರೀ ಮಾಳಾ ಮಲ್ಲೇಶ್ವರ ಸ್ವಾಮಿ ಸೇವಾ ಸಂಘ'ವನ್ನು ಸ್ಥಾಪಿಸಿ ಆ ಮೂಲಕ ರಸ್ತೆಗೆ ಕಲ್ಲು ಮಣ್ಣನ್ನು ಹಾಕಿಸಿ, ಬೇಕಾದ ಕಡೆ ರಸ್ತೆಗೆ ಸಿಮೆಂಟನ್ನು ಹಾಕಿಸಿ, ವಾಹನಗಳ ಓಡಾಟಕ್ಕೆ ಅನುಕೂಲ ಮಾಡಿದ್ದಾರೆ. ದೇವಸ್ಥಾನಕ್ಕೆ ಅಮವಾಸೆಯ ದಿನ ಬಂದ ಭಕ್ತರಿಗೆ ಮಧ್ಯಾಹ್ನದ ಹಾಗೂ ರಾತ್ರಿಯ ಊಟದ ಸೌಕರ್ಯವನ್ನು ಏರ್ಪಡಿಸಿರುವರು. ಭಾನುವಾರ ಬಂದ ಭಕ್ತರಿಗೆ ಒಡೆಯರು ತಮ್ಮ ಖರ್ಚಿನಲ್ಲಿಯೇ ಅನ್ನ ದಾಸೋಹವನ್ನು ಏರ್ಪಡಿಸಿರುವರು. ಗಿರಿಯನ್ನು ಹತ್ತಲು ಮೆಟ್ಟಿಲುಗಳ ಸೌಕರ್ಯ, ನೀರಿನ ವ್ಯವಸ್ಥೆ, ವಿದ್ಯುತ್ ವ್ಯವಸ್ಥೆಯನ್ನು ಮಾಡಿಸಿರುತ್ತಾರೆ. ಈ ಎಲ್ಲಾ ಸೌಕರ್ಯಗಳ ಪ್ರಭಾವದಿಂದ ಇತ್ತೀಚಿಗೆ ಕ್ಷೇತ್ರಕ್ಕೆ ಹೆಚ್ಚಿನ ಭಕ್ತರು ಬಂದು ಹೋಗುತ್ತಾರೆ.

ಮಲ್ಲಯ್ಯನ ಜಾತ್ರೆಗೆ ಕಳೆದ ಬಾರಿ (೨೦೦೨ರಲ್ಲಿ) ಆಂಧ್ರ ಪ್ರದೇಶದ ಹಾಗೂ ಕರ್ನಾಟಕದ ಸರ್ಕಾರದ ವಿಶೇಷ ಬಸ್ಸಿನ ಸೌಕರ್ಯವನ್ನು ಮಾಡಲಾಗಿತ್ತು. ಈ ರೀತಿ ವಾಹನಗಳ ಓಡಾಟ ಹೆಚ್ಚಾಗಿರುವುದರಿಂದ ಭಕ್ತರು ವಾರವನ್ನು ಪರಿಗಣಿಸಿದೇ , ತಮಗೆ ಅನುಕೂಲವಾದ ಸಂದರ್ಭಗಳಲ್ಲಿ ಈ ಕ್ಷೇತ್ರಕ್ಕೆ ಬಂದು ಹೋಗುವ ವಾಡಿಕೆ ಹೆಚ್ಚಾಗಿದೆ.

ಇಷ್ಟೆಲ್ಲಾ ಅನುಕೂಲತೆಗಳಿದ್ದರೂ ಸಹ ಇನ್ನೂ ಅನೇಕ ಮೂಲಭೂತ ಸೌಕರ್ಯಗಳ ಅವಶ್ಯಕತೆ ಇದೆ. ಈ ಬಗ್ಗೆ ಸರ್ಕಾರ, ಸೇವಾ ಟ್ರಸ್ಟಿನವರು, ಸಾರ್ವಜನಿಕರು ಹೆಚ್ಚಿನ ರೀತಿಯಲ್ಲಿ ಸಹಾಯ , ಸಹಕಾರಗಳನ್ನು ನೀಡಿ ಶ್ರೀಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸಿದರೆ, ಇನ್ನೂ ಹೆಚ್ಚಿನ ಪ್ರಚಾರ ಈ ಕ್ಷೇತ್ರಕ್ಕೆ ಲಭಿಸುವುದರಲ್ಲಿ ಯಾವುದೇ ಅನುಮಾನವಿಲ್ಲ.

ಒಟ್ಟಾರೆಯಾಗಿ 'ಶ್ರೀ ಮೀನಗೊಂದಿ ಮಲ್ಲಯ್ಯನ ಆಚರಣೆ ಒಂದು ಜಾನಪದೀಯ ಅಧ್ಯಯನ'ದ ಕುರಿತಾಗಿ ಸಾಕಷ್ಟು ವಿಷಯಗಳನ್ನು ಸಂಗ್ರಹಿಸಿ, ಸಂದರ್ಭಾನುಸಾರವಾಗಿ ವಿಶ್ಲೇಷಿಸುವಲ್ಲಿ ಪ್ರಯತ್ನಿಸಿದ್ದೇನೆ. ಆಧಾರಗ್ರಂಥಗಳ, ಸಂಬಂಧಿಸಿದ ಲೇಖನಗಳ ಹಾಗೂ ವಕ್ತೃಗಳ ಮಾಹಿತಿಯ ಆಧಾರದ ಹಿನ್ನೆಲೆಯಲ್ಲಿ ವ್ಯವಸ್ಥಿತ ಅಧ್ಯಯನವನ್ನು ಕೈಗೊಂಡಿದ್ದೇನೆ.

ಅಂತಿಮವಾಗಿ ಈ ಅಧ್ಯಯನದಲ್ಲಿ ಎಲ್ಲವನ್ನು ಹೇಳಿದ್ದೇನೆ ಎಂದು ನನಗನಿಸುವುದಿಲ್ಲವಾದರೂ, ಮಾಹಿತಿಗಳನ್ನು ಸಂಗ್ರಹಿಸುವಲ್ಲಿ ಪರಿಪೂರ್ಣತೆಯನ್ನು ಕಂಡುಕೊಂಡಿದ್ದೇನೆ ಎಂಬ ಭಾವನೆ ನನ್ನಲ್ಲಿದೆ.

# ಅನುಬಂಧ

ವಕ್ತ್ರುಗಳ ವಿವರ

ಆಧಾರ ಗ್ರಂಥಗಳು

ಸಾಂಸ್ಕೃತಿಕ ಪದಕೋಶ

ಛಾಯಾ ಚಿತ್ರಗಳು

ಕರಪತ್ರಗಳು

# ವಕ್ತೃಗಳ ವಿವರ

| ಕ್ರ. ಸಂ | ಹೆಸರು | ವಯಸ್ಸು | ಜಾತಿ | ವೃತ್ತಿ | ಶಿಕ್ಷಣ | ಊರು | ತಾಲೂಕು | ಜಿಲ್ಲೆ | ರಾಜ್ಯ |
|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| 1. | ಮಲ್ಲಯ್ಯಪ್ಪ ಒಡೆಯರು | 48 | ಒಡೆಯರು | ಧರ್ಮಾಧಿಕಾರಿ | ಅನಕ್ಷರಸ್ಥ | ಬಲ್ಲೂರು | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 2. | ಕಪಿಲಮುನಿಸ್ವಾಮಿ | 35 | ಒಡೆಯರು | ಧರ್ಮಾಧಿಕಾರಿ | ಎಸ್‌ಎಸ್‌ಎಲ್‌ಸಿ | ಗುಳ್ಯಂ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 3. | ವೆಂಕಪ್ಪಯ್ಯ ಒಡೆಯರ್ | 30 | ಒಡೆಯರು | ಧರ್ಮಾಧಿಕಾರಿ | ಪದವಿ | ಮೈಲಾರ | ಹಡಗಲಿ | ಬಳ್ಳಾರಿ | ಕರ್ನಾಟಕ |
| 4. | ಮಲ್ಲಯ್ಯ ಸ್ವಾಮಿ | 48 | ಜೀರರು | ಪೂಜಾರಿಕೆ | ಎಸ್‌ಎಸ್‌ಎಲ್‌ಸಿ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 5. | ಲೋಕೇಶ್ | 17 | ಕುರುಬರು | ವ್ಯವಸಾಯ | - - - | ಪತ್ತಿಕೊಂಡ | ಪತ್ತಿಕೊಂಡ | ಕರ್ನೂಲು | ಆಂಧ್ರ ಪ್ರದೇಶ |
| 6. | ಒಗ್ಗರ ಹನುಮಂತಪ್ಪ | 41 | ಕುರುಬರು | ಗೊರವಿಕೆ | ಅನಕ್ಷರಸ್ಥ | ದ್ಯಾಪಲಾಪುರ | ಹೊಸಪೇಟೆ | ಬಳ್ಳಾರಿ | ಕರ್ನಾಟಕ |
| 7. | ಹನುಮಕ್ಕ | 45 | ಹರಿಜನ | ಬಸವಿ | ಅನಕ್ಷರಸ್ಥ | ಕುಡುತಿನಿ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 8. | ಸಿದ್ದಪ್ಪ | 30 | ಕುರುಬರು | ವ್ಯವಸಾಯ | 6ನೇ ತರಗತಿ | ಲಿಂಗದಹಳ್ಳಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 9. | ಗೊರವ ಮಲ್ಲಪ್ಪ | 45 | ಹರಿಜನರು | ವ್ಯವಸಾಯ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 10. | ಚಂದ್ರಶೇಖರ್ | 11 | ಕುರುಬರು | ಗೊರವ | ಅನಕ್ಷರಸ್ಥ | ಪತ್ತಿಕೊಂಡ | ಪತ್ತಿಕೊಂಡ | ಕರ್ನೂಲು | ಆಂಧ್ರ ಪ್ರದೇಶ |
| 11. | ಹುಚ್ಚೀರಪ್ಪ | 56 | ಗೊಲ್ಲರು | ಕೃಷಿಕ | ಅನಕ್ಷರಸ್ಥ | ಬಳೆಹಾಳ್ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 12. | ಜಿ. ರಮೇಶ್ | 35 | ಹರಿಜನರು | ವ್ಯಾಪಾರ | ಬಿ.ಇ. | ಕೋಪಣಿ | ಆದೋನಿ | ಕರ್ನೂಲು | ಆಂಧ್ರ ಪ್ರದೇಶ |
| 13. | ಗೊರವರ ತಿಪ್ಪಣ್ಣ | 35 | ಕುರುಬರು | ಗಣಾಚಾರಿ-ಗೊರವ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 14. | ಬಾರಿಕರ ಮಲ್ಲಯ್ಯ | 30 | ಬಾರಿಕರು | ಕೃಷಿಕ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 15. | ಸಿದ್ದಮ್ಮ | 50 | ಕುರುಬರು | ಗೊರವಿಕೆ | ಅನಕ್ಷರಸ್ಥೆ | ಹೊಳಲು | ಹಡಗಲಿ | ಬಳ್ಳಾರಿ | ಕರ್ನಾಟಕ |
| 16. | ರವಿಕುಮಾರ್ | 28 | ಕುರುಬರು | ದೀಕ್ಷಾಕಾರ | ಎಸ್‌ಎಸ್‌ಎಲ್‌ಸಿ | ಮೈಲಾರ | ಹಡಗಲಿ | ಬಳ್ಳಾರಿ | ಕರ್ನಾಟಕ |
| 17. | ಶಿವಪುತ್ರಪ್ಪ | 40 | ಹರಿಜನರು | ಗೊರವಿಕೆ | ಅನಕ್ಷರಸ್ಥ | ಮೈಲಾರ | ಹಡಗಲಿ | ಬಳ್ಳಾರಿ | ಕರ್ನಾಟಕ |

| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
|---|---|---|---|---|---|---|---|---|---|
| 18. | ಮಾಲತೇಶ ದಳವಾಯಿ | 50 | ಮರಾಠಿ | ಗೊರವಿಕೆ | ಅನಕ್ಷರಸ್ಥೆ | ಮೈಲಾರ | ಹಡಗಲಿ | ಬಳ್ಳಾರಿ | ಕರ್ನಾಟಕ |
| 19. | ಶಿವಮ್ಮ | 40 | ಕುರುಬರು | ವ್ಯವಸಾಯ | ಅನಕ್ಷರಸ್ಥೆ | ಕಾಂತೆಬೆನ್ನೂರು | ಹಡಗಲಿ | ಬಳ್ಳಾರಿ | ಕರ್ನಾಟಕ |
| 20. | ಬಸಮ್ಮ | 39 | ಹರಿಜನರು | ವ್ಯವಸಾಯ | ಅನಕ್ಷರಸ್ಥೆ | ಕಾಂತೆಬೆನ್ನೂರು | ಹಡಗಲಿ | ಬಳ್ಳಾರಿ | ಕರ್ನಾಟಕ |
| 21. | ಕೆ.ಬಿ. ಬಡಿಗೇರ್ | 45 | ಬಡಿಗೇರರು | ಸರ್ಕಾರಿ ಕೆಲಸ | ಎಸ್‌ಎಸ್‌ಎಲ್‌ಸಿ | ಸೋಮಸಮುದ್ರ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 22. | ಕೆ. ಬಸವರಾಜ | 23 | ಕುರುಬರು | ಸೆಕ್ಯುರಿಟಿಗಾರ್ಡ್ | ಎಸ್‌ಎಸ್‌ಎಲ್‌ಸಿ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 23. | ಸುಶೀಲಮ್ಮ | 35 | ಹರಿಜನರು | ಕೂಲಿ | ಅನಕ್ಷರಸ್ಥೆ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 24. | ಮಲ್ಲಮ್ಮ | 45 | ಕುರುಬರು | ಗೊರವಿಕೆ | ಅನಕ್ಷರಸ್ಥೆ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 25. | ದುರ್ಗಮ್ಮ | 46 | ವಾಲ್ಮೀಕಿ | ಗೊರವಿಕೆ | ಅನಕ್ಷರಸ್ಥೆ | ನೆಂದವಾಳ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 26. | ಮಾಳಮ್ಮ | 50 | ಹರಿಜನರು | ಗೊರವಿಕೆ | ಅನಕ್ಷರಸ್ಥೆ | ಲಿಂಗದಹಳ್ಳಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 27. | ಶರಣಮ್ಮ | 40 | ಜೀರರು | ಹೂಕಟ್ಟುವುದು, ಕೃಷಿ | - - - | ಮಾಲಳ್ಳಿ | ಪತ್ತಿಕೊಂಡ | ಕರ್ನೂಲು | ಆಂಧ್ರ ಪ್ರದೇಶ |
| 28. | ಕೆಂಚವೀರ ಮಲ್ಲಣ್ಣ | 65 | ಕುರುಬರು | ಕೃಷಿಕ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 29. | ಗಣಾಚಾರಿ ಮಲ್ಲಯ್ಯ | 20 | ಕುರುಬರು | ಗೊರವಿಕೆ | ಎಸ್‌ಎಸ್‌ಎಲ್‌ಸಿ | ಬಳ್ಳಾರಿ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 30. | ಗಿರಿಮಲ್ಲಪ್ಪ | 45 | ಕುರುಬರು | ಗೊರವಿಕೆ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 31. | ಸುಬ್ರಹ್ಮಣ್ಯ ಶಾಸ್ತ್ರಿ | 61 | ಬ್ರಾಹ್ಮಣ | ಶಿಕ್ಷಕ, ಪೌರೋಹಿತ್ಯ | ಎಂ.ಎ. | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 32. | ಮುದ್ದ ಬಸವನಗೌಡ | 65 | ವೀರಶೈವ | ವ್ಯಾಪಾರಸ್ಥ | 7ನೇ ತರಗತಿ | ಬಲ್ಲೂರು | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 33. | ಗುಂಡೂರು ಶೇಷಗಿರಿಯಪ್ಪ | 71 | ಕುರುಬರು | ಕೃಷಿಕ | 4ನೇ ತರಗತಿ | ಗುಳ್ಯಂ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 34. | ಪ್ರಹ್ಲಾದ | 38 | ಕುರುಬರು | ಪುರಾಣ ಪಠಣೆ | 7ನೇ ತರಗತಿ | ಆದೋನಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 35. | ಜಾಜಿ ದೇವೇಂದ್ರಪ್ಪ | 27 | ವೀರಶೈವ | ಸಂಶೋಧಕ | ಪಿಎಚ್.ಡಿ. | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 36. | ನೆಣಿಕೆಪ್ಪ | 82 | ಕುರುಬರು | ವ್ಯವಸಾಯ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 37. | ಉಳೂರು ಬಸವರಾಜ | 28 | ಕುರುಬರು | ಪತ್ರಕರ್ತರು | ಎಂ.ಎ., ಬಿ.ಈಡಿ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 38. | ನರಸಪ್ಪ | 30 | ಹರಿಜನರು | ಕೃಷಿಕ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 39. | ಶೇಕಪ್ಪ | 35 | ಹರಿಜನರು | ಕೃಷಿಕ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |

| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
|---|---|---|---|---|---|---|---|---|---|
| 40. | ಪೂಜಾರ ಸ್ವಾಮಪ್ಪ | 35 | ಕುರುಬರು | ಕೃಷಿಕ | ಅನಕ್ಷರಸ್ಥ | ಗುಳ್ಯಂ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 41. | ಖಾಜಾಪೀರ್. ಎಂ. | 38 | ಮುಸ್ಲಿಂ | ಗುತ್ತಿಗೆದಾರ | ಪಿಯುಸಿ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 42. | ಗಿರಿಯಪ್ಪ | 30 | ಕುರುಬರು | ಕೃಷಿಕ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 43. | ಮಡಿವಾಳರ ಹನುಮಂತಪ್ಪ | 32 | ಮಡಿವಾಳರು | ಕೃಷಿಕ | 3ನೇ ತರಗತಿ | ಲಿಂಗದಹಳ್ಳಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 44. | ತಿಪ್ಪಣ್ಣ | 35 | ವೀರಶೈವ | ಕೃಷಿಕ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 45. | ಶೇಕಪ್ಪ | 38 | ಕುರುಬರು | ಕೃಷಿಕ | ಅನಕ್ಷರಸ್ಥ | ದಮ್ಮೂರು | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 46. | ಜಯಮ್ಮ | 36 | ಕುರುಬರು | ಕೃಷಿಕ | ಅನಕ್ಷರಸ್ಥ | ದಮ್ಮೂರು | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 47. | ಸುರೇಶ | 24 | ಕುರುಬರು | ಕೃಷಿಕ | ಅನಕ್ಷರಸ್ಥ | ನೇಮಕಲ್ಲು | ರಾಯದುರ್ಗ | ಅನಂತರಪುರ | ಆಂಧ್ರ ಪ್ರದೇಶ |
| 48. | ಶಿವಲಿಂಗ | 19 | ಕುರುಬರು | ಕೃಷಿಕ | ಅನಕ್ಷರಸ್ಥ | ಹಿರುಪಾಪುರ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 49. | ಈಶಪ್ಪ | 30 | ಹರಿಜನರು | ಕೃಷಿಕ | ಅನಕ್ಷರಸ್ಥ | ತೆಕ್ಕಲಕೋಟೆ | ಸಿರುಗುಪ್ಪ | ಬಳ್ಳಾರಿ | ಕರ್ನಾಟಕ |
| 50. | ಮಲ್ಲಿಕಾರ್ಜುನಗೌಡ | 60 | ವೀರಶೈವ | ಪದಾಧಿಕಾರಿ | - - - | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 51. | ಶಿವನಗೌಡ | 50 | ವೀರಶೈವ | ಕೃಷಿಕ | ಅನಕ್ಷರಸ್ಥ | ದಮ್ಮೂರು | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 52. | ಹನುಮಮ್ಮ | 35 | ಹರಿಜನರು | ಬಸವಿ | ಅನಕ್ಷರಸ್ಥೆ | ಕುಡುತಿನಿ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 53. | ತಳವಾರ ಸಣ್ಣಮ್ಮ | 45 | ಹರಿಜನರು | ಬಸವಿ | ಅನಕ್ಷರಸ್ಥೆ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 54. | ಮುರಾಜ್‌ರಾಯ್ ದೇಸಾಯಿ | 53 | ದೇಸಾಯಿ | ಅರ್ಚಕರು | ಅನಕ್ಷರಸ್ಥೆ | ತೆಕ್ಕಲಕೋಟೆ | ಸಿರುಗುಪ್ಪ | ಬಳ್ಳಾರಿ | ಕರ್ನಾಟಕ |
| 55. | ಆರ್.ಪಿ. ಕೃಷ್ಣಭಟ್ಟ | 70 | ಬ್ರಾಹ್ಮಣ | ಶಿಕ್ಷಕ (ನಿವೃತ್ತಿ) | - - - | ತೆಕ್ಕಲಕೋಟೆ | ಸಿರುಗುಪ್ಪ | ಬಳ್ಳಾರಿ | ಕರ್ನಾಟಕ |
| 56. | ಬಸವರಾಜ | 31 | ಕುರುಬರು | ವ್ಯಾಪಾರ | ಅನಕ್ಷರಸ್ಥ | ಅಡವಿಗೊಲ್ಲರಟ್ಟಿ | ಚಿತ್ರದುರ್ಗ | ಚಿತ್ರದುರ್ಗ | ಕರ್ನಾಟಕ |
| 57. | ಹೆಚ್.ಸಣ್ಣಶಿವರಾಂ | 29 | ಹರಿಜನರು | ಉಪನ್ಯಾಸಕ | ಎಂ. ಎ. | ಕೆ.ಕೆ.ಹಾಳ್ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 58. | ಹೆಚ್. ಕುಮಾರಸ್ವಾಮಿ | 29 | ಹರಿಜನರು | ಸಂಶೋಧಕ | ಪಿಎಚ್.ಡಿ. | ಕೊಳಗಲ್ಲು | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 59. | ಕೆ.ಹೆಚ್. ರಮೇಶ್ | 20 | ಹರಿಜನರು | ವಕೀಲರು | ಎಲ್ಎಲ್‌ಬಿ | ಕುಡುತಿನಿ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 60. | ಮಲ್ಲಿಕಾರ್ಜುನ | 29 | ಕುರುಬರು | ಸರ್ಕಾರಿ ನೌಕರರು | ಬಿ.ಈಡಿ. | ಕೊರ್ಲಗುಂದಿ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 61. | ಉರುಕುಂದ | 35 | ವಡ್ಡರು | ಕೈಗಾರಿಕಾ ಕೆಲಸ | ಎಸ್ಎಸ್ಎಲ್‌ಸಿ | ಕನ್ಯಾಕುಮಾರಿ | - - - | - - - | ತಮಿಳುನಾಡು |

| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
|---|---|---|---|---|---|---|---|---|---|
| ೬೨. | ಲಕ್ಷ್ಮಿ | 25 | ಕುರುಬರು | ಗೃಹಿಣಿ | ಅನಕ್ಷರಸ್ಥೆ | ಹೊಸಪೇಟೆ | ಹೊಸಪೇಟೆ | ಬಳ್ಳಾರಿ | ಕರ್ನಾಟಕ |
| ೬೩. | ಮಲ್ಲಯ್ಯ | 40 | ನಾಯಕ | ಸನ್ಯಾಸಿ | ಅನಕ್ಷರಸ್ಥ | ಹೊಳಗುಂದ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೬೪. | ಪಂಪಣ್ಣ | 58 | ಲಿಂಗಾಯತ | ಕೃಷಿಕ | 6ನೇ ತರಗತಿ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೬೫. | ಶರಭಣ್ಣ | 48 | ವೀರಶೈವ | ಕೃಷಿಕ | ಎಸ್‌ಎಸ್‌ಎಲ್‌ಸಿ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೬೬. | ಸುಂಕಣ್ಣ | 60 | ಹರಿಜನರು | ಕೃಷಿಕ | ಅನಕ್ಷರಸ್ಥ | ಕಾಸಾಪುರ | ಗುಂತಕಲ್ಲು | ಅನಂತಪುರ | ಆಂಧ್ರ ಪ್ರದೇಶ |
| 67. | ಅಂಬಮ್ಮ | 55 | ಕುರುಬರು | ವ್ಯಾಪಾರ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೬೮. | ಶೇಷಗಿರಿಯಪ್ಪ | 30 | ಕುರುಬರು | ಸರ್ಕಾರಿ ನೌಕರಿ | ಪಿಯುಸಿ. | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೬೯. | ಮಲ್ಲೇಶ | 40 | ಕುರುಬರು | ವ್ಯವಸಾಯ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೭೦. | ಈರಣ್ಣ | 45 | ಕುರುಬರು | ವ್ಯವಸಾಯ | 5ನೇ ತರಗತಿ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 71. | ಯಲ್ಲಪ್ಪ | 40 | ಕುರುಬರು | ವ್ಯವಸಾಯ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೭೨. | ಚಂದ್ರಪ್ಪ | 30 | ಕುರುಬರು | ಕೃಷಿಕ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| 73. | ವೈ. ರಾಘವೇಂದ್ರರಾವ್ | 55 | ಬ್ರಾಹ್ಮಣ | ಸರ್ಕಾರಿ ನೌಕರಿ | ಎಸ್‌ಎಸ್‌ಎಲ್‌ಸಿ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೭೪. | ಅಯ್ಯಪ್ಪ | 58 | ಹರಿಜನ | ಸರ್ಕಾರಿ ನೌಕರಿ | 5ನೇ ತರಗತಿ | ಕೊಳಗಲ್ಲು | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| ೭೫. | ಈ. ರಾಮಪ್ಪ | 55 | ಹರಿಜನ | ಸರ್ಕಾರಿ ನೌಕರಿ | ಬಿ. ಎ. | ಅಗಸನೂರು | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| ೭೬. | ಹರಿರೆಡ್ಡಿ | 25 | ರೆಡ್ಡಿ | ವಿದ್ಯಾರ್ಥಿ | ಬಿ.ಎಸ್ಸಿ. | ಕಾಳಕೇರಿ | ರಾಯದುರ್ಗ | ಅನಂತಪುರ | ಆಂಧ್ರ ಪ್ರದೇಶ |
| 77. | ಕೃಷ್ಣಮೂರ್ತಿ | 24 | ಬ್ರಾಹ್ಮಣ | ಖಾನಾವಳಿ ಮಾಲಿಕ | ಎಸ್‌ಎಸ್‌ಎಲ್‌ಸಿ | ಆದವಾನಿ | ಆದವಾನಿ | ಕರ್ನೂಲು | ಆಂಧ್ರ ಪ್ರದೇಶ |
| ೭೮. | ದೊಡ್ಡ ಈರಣ್ಣ | 60 | ಹರಿಜನ | ಕೃಷಿಕ | ಅನಕ್ಷರಸ್ಥ | ಕೆ.ಕೆ.ಹಾಳ್ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| ೭೯. | ಹನುಮಂತಪ್ಪ | 38 | ಹರಿಜನ | ಜವಾನ | ಪಿಯುಸಿ. | ಕೆ.ಕೆ.ಹಾಳ್ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| ೮೦. | ಗಾದಿಲಿಂಗಪ್ಪ | 35 | ಹರಿಜನ | ಕಾರ್ಯಕರ್ತ: ದಸಸಂ | ಬಿ. ಎ. | ಕೆ.ಕೆ.ಹಾಳ್ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| 81. | ದುರುಗಪ್ಪ | 35 | ಹರಿಜನ | ಜಿಲ್ಲಾ ಸಂಚಾಲಕ: ,, | ಎಲ್.ಎಲ್.ಬಿ. | ಕೆ.ಕೆ.ಹಾಳ್ | ಬಳ್ಳಾರಿ | ಬಳ್ಳಾರಿ | ಕರ್ನಾಟಕ |
| ೮೨. | ಚನ್ನಬಸಪ್ಪ | 60 | ಲಿಂಗಾಯತ | ಕೃಷಿಕ | ಅನಕ್ಷರಸ್ಥ | ಎಳ್ಳಾರ್ಥಿ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೮೩. | ಮಲ್ಲಿಕಾರ್ಜುನ | 55 | ಕುರುಬರು | ಕಂಬಳಿ ನೇಯ್ಗೆ | ಅನಕ್ಷರಸ್ಥ | ನೆರಣಿಕೆ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |
| ೮೪. | ಜಿ. ವೀರನಗೌಡ | 20 | ವೀರಶೈವ | ವಿದ್ಯಾರ್ಥಿ | ಡಿಪ್ಲೋಮೋ. | ಸಜಿರಗಪುರ | ಆಲೂರು | ಕರ್ನೂಲು | ಆಂಧ್ರ ಪ್ರದೇಶ |

# ಆಧಾರ ಗ್ರಂಥಗಳು

| ಕ್ರ. ಸಂ. | ಲೇಖಕರು/ ಸಂಪಾದಕರು | ಕೃತಿಗಳು | ವರ್ಷ | ಪ್ರಕಾಶಕರು |
|---|---|---|---|---|
| 1. | ಡಾ. ಅಂಬಳಿಕೆ ಹಿರಿಯಣ್ಣ | ಜಾನಪದ ಕೆಲವು ಅಧ್ಯಯನಗಳು | ೧೯೯೪ | ಮಿತ್ರ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು |
| 2. | ಅರ್ಚಕ ಬಿ. ರಂಗಸ್ವಾಮಿ | ಹುಟ್ಟಿದ ಹಳ್ಳಿ | ೧೯೭೧ | ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾಲಯ |
| 3. | ಡಾ. ಕಲಬುರ್ಗಿ ಎಂ.ಎಂ.(ಸಂ) | ಜಾನಪದ ಸಾಹಿತ್ಯ ದರ್ಶನ ಭಾಗ (೧) | ೧೯೮೭ | ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿ.ವಿ. ಧಾರವಾಡ |
| 4. | ಡಾ. ಕಲಬುರ್ಗಿ ಎಂ. ಎಂ. | ಮಾರ್ಗ - ೩ | ೧೯೯೮ | ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು. |
| 5. | ಕೃಷ್ಣಶರ್ಮ ಬೆಟಗೇರಿ | ಕರ್ನಾಟಕ ಜನ ಜೀವನ | ೧೯೩೯ | ಸಮಾಜ. ಪು., ಧಾರವಾಡ |
| 6. | ಕ್ಯಾತನ ಹಳ್ಳಿ ರಾಮಣ್ಣ | ಗೊಂದಲಿಗರ ಒಂದು ಅಧ್ಯಯನ | ೧೯೮೨ | ಸಮಾಜ ಪುಸ್ತಕಾಲಯ ಧಾರವಾಡ. |
| 7. | ಕ್ಯಾತನಹಳ್ಳಿ ರಾಮಣ್ಣ | ಜಾನಪದ ವಿಹಾರ | ೧೯೮೫ | ದಿನಕರ ಪ್ರಕಾಶನ, ಬೆಂಗಳೂರು |
| 8. | ಡಾ. ಕಾಳೇಗೌಡ ನಾಗವಾರ | ತ್ರಿಪದಿ ರಗಳೆ ಮತ್ತು ಜನಪದ ಸಾಹಿತ್ಯ | ೧೯೭೫ | ಪ್ರಸಾರಾಂಗ : ಬೆ. ವಿ.ವಿ. ಬೆಂಗಳೂರು. |
| 9. | ಗದ್ದಿಗಿ ಮಠ. ಬಿ. ಎಸ್. | ಕನ್ನಡ ಜಾನಪದ ಗೀತೆಗಳು | ೧೯೬೨ | ಕ.ವಿ.ವಿ., ಧಾರವಾಡ |
| 10. | ಡಾ. ಗುರುಮೂರ್ತಿ ಕೆ. ಜಿ | ಜನಪದ ಸಮಾಜ ಮತ್ತು ಸಂಸ್ಕೃತಿ | ೧೯೭೯ | ಪ್ರಸಾರಾಂಗ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |

| | | | | |
|---|---|---|---|---|
| 11. | ವಿ.ಕೃ.ಗೋಕಾಕ್ | ಸೌಂದರ್ಯ ಸಮೀಕ್ಷೆ | ೧೯೭೩ | ಕನ್ನಡ ಅಧ್ಯಯನ ಸಂಸ್ಥೆ |
| 12. | ಡಾ.ಚನ್ನಣ್ಣ ವಾಲೀಕಾರ | ಹೈದ್ರಾಬಾದ್ ಕರ್ನಾಟಕ ಗ್ರಾಮ ದೇವತೆಗಳು ಜಾನಪದಿಯ ಅಧ್ಯಯನ | ೧೯೯೮ | ವಾಲೀಕಾರ ವಿರಸಂ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಬಡೇಪೂರ್ ಕಾಲೋನಿ ಗುಲ್ಬರ್ಗ |
| 13. | ಎಂ. ಚಿದಾನಂದ ಮೂರ್ತಿ | ಗ್ರಾಮೀಣ | | ಬಾಪ್ಕೊ ಪ್ರ. ಬೆಂಗಳೂರು |
| 14. | ಎಂ. ಚಿದಾನಂದ ಮೂರ್ತಿ | ಪ್ರಾಚೀನ ಕನ್ನಡ ಶಾಸನಗಳ ಸಂಸ್ಕೃತಿ ಅಧ್ಯಯನ | ೧೯೬೬ | ಪ್ರಸಾರಾಂಗ: ಮೈಸೂರು ವಿ.ವಿ., ಮೈಸೂರು |
| 15. | ಚೆನ್ನಪ್ಪ. ಗೊ.ರು. | ಕರ್ನಾಟಕ ಜಾನಪದ ಕಲೆಗಳು | ೧೯೭೭ | ಕ.ಸಾ.ಪ.ಬೆಂಗಳೂರು. |
| 16. | ಜವರೇಗೌಡ | ಜಾನಪದ ಕರ್ನಾಟಕ | ೧೯೭೬ | ಡಿ.ವಿ.ಕೆ. ಮೂರ್ತಿ ಮೈಸೂರು |
| 17. | ಜವರೇಗೌಡ | ಜಾನಪದ ಅಧ್ಯಯನ | | ಡಿ.ವಿ.ಕೆ. ಮೂರ್ತಿ ಮೈಸೂರು |
| 18. | ಡಾ. ಜವಳಿ.ಬಿ.ಸಿ. | ಜಾನಪದ ಸಾಹಿತ್ಯ ದರ್ಶನ | ೧೯೮೭ | ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ.,ಧಾರವಾಡ |
| 19. | ಡಾ.ಜೋಗನ್ ಶಂಕರ್ | ದೇವದಾಸಿ ಸಂಪ್ರದಾಯ | ೧೯೯೩ | ವಿಮೋಚನ ಪ್ರಕಾಶನ, ಅರ್ಥತೆ. |
| 20. | ದೇವೆಂದ್ರ ಕುಮಾರ ಹಕಾರಿ | ಜಾನಪದ ಮೂಲಭೂತ ತತ್ವಗಳು | ೧೯೬೪ | ಕರ್ನಾಟಕ ವಿ.ವಿ. ಧಾರವಾಡ. |
| 21. | ದೇವೇಂದ್ರ ಕುಮಾರ ಹಕಾರಿ | ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ | ೧೯೮೫ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| 22. | ಎ.ವಿ.ನಾವಡ | ಜಾನಪದ ಸಮಾಲೋಚನೆ | ೧೯೯೩ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು. |

| | | | | |
|---|---|---|---|---|
| 23. | ಹಂ. ಪ. ನಾಗರಾಜಯ್ಯ | ಕರ್ನಾಟಕ ಶಕ್ತಿ ದೇವತೆಗಳು | ೧೯೭೬ | ಕಾವ್ಯಾಲಯ, ಮೈಸೂರು |
| 24. | ಡಾ. ಎಂ. ಬಿ. ನೇಗಿನಹಾಳ | ಮೈಲಾರ ಲಿಂಗನ ಪದಗಳು | ೧೯೮೩ | ಕ.ವಿ.ವಿ., ಧಾರವಾಡ. |
| 25. | ಎಂ. ಬಿ. ನೇಗಿನಹಾಳ | ಕನ್ನಡ ಶಾಸನಗಳ ಭಾಷಿಕ ಅಧ್ಯಯನ | ೧೯೮೨ | ಕ.ವಿ.ವಿ. ಧಾರವಾಡ. |
| 26. | ಆರ್. ಎಸ್. ಪಂಚಮುಖಿ | ಕರ್ನಾಟಕ ಜಾನಪದ ಗೀತೆಗಳು | ೧೯೫೩ | ಕನ್ನಡ ಅಧ್ಯಯನ ಪೀಠ, ಧಾರವಾಡ |
| 27. | ಬಸವರಾಜ ನೆಲ್ಲಿಸರ | ಜಾನಪದ ಸಂಕಲನ | | |
| 28. | ಬೋರಲಿಂಗಯ್ಯ ಹಿ.ಚಿ | ದಾಸಪ್ಪ-ಜೋಗಪ್ಪ | ೧೯೮೧ | ಕ.ಸಾ.ಪ. ಬೆಂಗಳೂರು |
| 29. | ಡಾ. ಬೋರಲಿಂಗಯ್ಯ. ಹಿ.ಚಿ. | ಕರ್ನಾಟಕ ಜಾನಪದ | ೧೯೮೯ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು. |
| 30. | ಡಾ. ಭದ್ರಾಪುರ್ ಎಸ್. ಎಸ್. | ದೇವರ ಗುಡ್ಡ | ೧೯೯೫ | ಕರ್ನಾಟಕ ಜಾನಪದ ಮತ್ತು ಯಕ್ಷತಾನ ಅಕಾಡೆಮಿ |
| 31. | ಡಾ. ಮಂಜುನಾಥ ಬೇವಿನ ಕಟ್ಟಿ | ಜನಪದ ಸಂಸ್ಕೃತಿ | ೧೯೯೪ | ತೇಜಸ್ವಿ ಪ್ರಕಾಶನ ಹ್ಯಾರಡ (೫೮೩೨೧೭) |
| 32. | ಡಾ. ಮಂಜುನಾಥ ಬೇವಿನ ಕಟ್ಟಿ | ಜಾನಪದ ಕರ್ನಾಟಕ | ೨೦೦೨ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 33. | ಡಾ. ಮಂಜುನಾಥ ಬೇವಿನಕಟ್ಟಿ | ಮೈಲಾರಲಿಂಗನ ಕಾವ್ಯ | ೧೯೯೯ | ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 34. | ರತ್ನ ನಗುವಿನಹಳ್ಳಿ | ಜಾನಪದ ವಿವೇಚನೆ | | ಪ್ರಶಾಂತಿ. ಪ್ರ. ಮೈಸೂರು |
| 35. | ರಾಜಪ್ಪ ಟಿ. ಎಸ್. | ರಾಯಚೂರು ಜಿಲ್ಲೆಯ ಜನಪದ ಕಥೆಗಳು | ೧೯೯೭ | ಪ್ರಸಾರಂಗ ಮೈ.ವಿ.ವಿ ಮೈಸೂರು. |
| 36. | ಪ್ರೊ. ಡಿ. ಲಿಂಗಯ್ಯ, ಡಾ. ಕೆ. ಆರ್. ಸಂಧ್ಯಾರೆಡ್ಡಿ | ಜಾನಪದ ಸ್ವರೂಪ ಮತ್ತು ಸಾಹಿತ್ಯ | | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು. |
| 37. | ಡಿ. ಲಿಂಗಯ್ಯ | ಕರ್ನಾಟಕ ಜಾನಪದ ಕಾವ್ಯಗಳು | ೧೯೭೬ | ಕ.ವಿ.ವಿ., ಧಾರವಾಡ. |

| | | | | |
|---|---|---|---|---|
| 38. | ಡಾ.ವೀರಣ್ಣ ದಂಡೆ | ಜಾನಪದ-೧೯೯೨ | ೧೯೯೫ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು. |
| 39. | ಡಾ. ವೀರಣ್ಣ ದಂಡೆ | ಕನ್ನಡ ಜಾನಪದ ಪ್ರಜ್ಞೆ | ೧೯೯೩ | ಕವಿಮಾರ್ಗ ಪ್ರಕಾಶನ, ಗುಲ್ಬರ್ಗಾ |
| 40. | ಡಾ. ಶಿವಶಂಕರ್ ಚಕ್ಕರೆ | ಜಾನಪದ ಚಿಂತನೆ | ೧೯೮೦ | ಕಲ್ಯಾಣಿ ಪ್ರಕಾಶನ ಬೆಂಗಳೂರು. |
| 41. | ಡಾ. ಶಿವಶಂಕರ ಚಕ್ಕರೆ | ಗೊರವರ ಸಂಸ್ಕೃತಿ | ೧೯೯೩ | ಕ.ಸಾ.ಪ. ಬೆಂಗಳೂರು |
| 42. | ಡಾ. ಜಿ.ಎಸ್.ಶಿವರುದ್ರಪ್ಪ | ಕರ್ನಾಟಕ ಜಾನಪದ | ೧೯೮೧ | ಬೆ.ವಿ.ವಿ.ಬೆಂಗಳೂರು |
| 43. | ಶ್ರೀನಿವಾಸ ರಿತ್ತಿ | ಮೈಲಾರ ದೇವರು | ೧೯೭೦ | ಕ.ವಿ.ವಿ.ಧಾರವಾಡ |
| 44. | ಡಾ.ಸಂಧ್ಯಾ ರೆಡ್ಡಿ ಕೆ. ಆರ್ | ಕರ್ನಾಟಕ ಜಾನಪದ ಕಥೆಗಳು | ೧೯೮೨ | ಕ.ಸಾ.ಪ.ಚಾಮರಾಜ ಪೇಟೆ ಬೆಂಗಳೂರು |
| 45. | ಡಾ. ಸುಂಕಾಪುರ. ಎಂ. ಎಸ್. | ಜಾನಪದ ಸಾಹಿತ್ಯ ದರ್ಶನ (ಜಾನಪದ ಹಬ್ಬಗಳು) | ೧೯೮೩ | ಬೆಂ.ವಿ.ವಿ., ಬೆಂಗಳೂರು. |
| 46. | ಡಾ. ಸೋಮಶೇಖರ್ ಇಮ್ರಾಪುರ | ಜಾನಪದ ಸಾಹಿತ್ಯ ದರ್ಶನ (ಮೈಲಾರಲಿಂಗ) | ೧೯೯೭ | ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ. ಧಾರವಾಡ. |
| 47. | ಎಸ್. ಎಸ್. ಹಿರೇಮಠ | ಜಾತ್ರೆಗಳು | ೧೯೯೨ | ಸಮತಾ ಪ್ರಕಾಶನ ಹರಪನಹಳ್ಳಿ |
| 48. | ಆರ್. ಸಿ. ಹಿರೇಮಠ (ಸಂ) | ಜಾನಪದ ಸಾಹಿತ್ಯ ದರ್ಶನ | ೧೯೭೧ | ಕ.ವೆಂ. ಸ್ಮಾರಕ ಮಾಲೆ ಮೈಸೂರು. |
| 49. | Kenneth & Mory Dorke | Introducing Folklore | 1963 | Holt Rineheart & Winstoning |
| 50. | Sankersengupta | Folklore at Bengal | 1997 | India Pulication, Calcutta. |

# ಸಾಂಸ್ಕೃತಿಕ ಪದಕೋಶ

| | | | |
|---|---|---|---|
| 1. | ಲಾಂಛನ | → | ಗುರುತು, ಮುದ್ರೆ |
| 2. | ಕಂಕಣ | → | ಬನ್ನಿಯ ಪ್ರಯುಕ್ತ ಮೀನಗೊಂದಿ ಸಿಂಹಾಸನದಲ್ಲಿ ಅಮವಾಸೆಯಾದ ೫ನೇ ದಿನದಂದು ಸ್ಥಾನಿಕರ ಮುಂಗೈಗೆ ಕಟ್ಟುವ ರಕ್ಷಸೂತ್ರ |
| 3. | ಸೂತಕ | → | ಜನನ, ಮರಣಗಳಿಂದಾಗುವ ಮೈಲಿಗೆ |
| 4. | ಖಡ್ಗ | → | ಕತ್ತಿ, ಗಣಾಚಾರಿಗಳು ಒಡಪು ಹೇಳುವುದಕ್ಕೆ 'ಖಡ್ಗ ಹೇಳುವುದು' ಎನ್ನುತ್ತಾರೆ |
| 5. | ಕವಡೆಸರ | → | ಸಮುದ್ರದಲ್ಲಿ ಸಿಗುವ ಒಂದು ಬಗೆಯ ಮಡಿಚಿದಂತಹ ಚಿಪ್ಪುಗಳಂತಹ ವಸ್ತು ಇದರ ಹಾರ |
| 6. | ಕಾರಣಿಕ | → | ಅವತಾರ ಪುರುಷ, ಹೇಳಿಕೆ |
| 7. | ನೈವೇದ್ಯ | → | ಭೋಜ್ಯ ಪದಾರ್ಥಗಳನ್ನು ಅರ್ಪಿಸಲು ತಯಾರಿಸಿದ್ದು |
| 8. | ಹೇಳಿಕೆ ಸ್ವಾಮಿ | → | ಕಾರಣಿಕ ನುಡಿಯುವ ಸ್ವಾಮಿ |
| 9. | ಒಂದೊತ್ತು | → | ದಿನಕ್ಕೊಂದು ಸದಾರಿ ಊಟ ಮಾಡುವ ವ್ರತ |
| 10. | ಫೂಟು | → | ಅಡಿ |
| 11. | ಬಿಲ್ಲು | → | ಬಾಣವನ್ನು ಬಿಡಲು ಬಳಸುವ ಆಯುಧ |
| 12. | ಪವಾಡ | → | ಆಶ್ಚರ್ಯಕರವಾದ ಘಟನೆ, ಅತಿಮಾನುಷ ಕಾರ್ಯ |
| 13. | ಪಂಜು | → | ದೀವಟಿಗೆ |
| 14. | ಮಗ್ಗು | → | ತಂಬಿಗೆಯಂತೆ ನೀರನ್ನು ತುಂಬಲು ಬಳಸುವ ಪ್ಲಾಸ್ಟಿಕ್ ಸಾಧನ |
| 15. | ಬೀಸಾಕಲ್ಲು | → | ಬೀಸುವಕಲ್ಲು (ಆಹಾರ ಪದಾರ್ಥಗಳಾದ ಅಕ್ಕಿ, ಜೋಳ, ಗೋಧಿಗಳಂತವುಗಳನ್ನು ಹಿಟ್ಟಾಗಿಸುವ ಸಾಧನ) |
| 16. | ಸಾಣೆ ಕಾಗದ | → | ತೇಯುವ ಅಥವಾ ಉಜ್ಜವ ಸಲುವಾಗಿ ಬಳಸುವ ಕಾಗದ |
| 17. | ಪರವಳ | → | ಮೈಮರೆಯುವುದು |
| 18. | ಸನ್ಯಾಕ | → | ಹತ್ತಿರಕ್ಕೆ, ಪಕ್ಕಕ್ಕೆ |
| 19. | ಗವಿಕಡಿಗೆ | → | ಗವಿಯ ಕಡೆಗೆ |
| 20. | ಉಗ್ಗಿ ಬಿಡ್ತೀನಿ | → | ಎರಚಿ ಬಿಡುತ್ತೇನೆ |

| | | | |
|---|---|---|---|
| 21. | ಷಮೀವೃಕ್ಷ | → | ಬನ್ನೀಮರ |
| 22. | ಹಚ್ಚಡ | → | ಹೊದಿಕೆ |
| 23. | ನನ್ನ ಮೈಯ್ಯಾಗ | → | ನನ್ನ ಮೈಯಲ್ಲಿ |
| 24. | ಸ್ಯಾನೆ | → | ಬಹಳ |
| 25. | ರೋವಸ್ಟು | → | ಸ್ವಲ್ಪ |
| 26. | ಆಟೀಟು | → | ಅಷ್ಟು- ಇಷ್ಟು |
| 27. | ನಿಂತರಃ | → | ನಿನ್ನ ತರಹ |
| 28. | ರಗುತ | → | ರಕ್ತ |
| 29. | ಕೇಳ್ಯಾರ | → | ಕೇಳಿದ್ದಾರೆ |
| 30. | ಸ್ವತಂತ್ರ ಕುದುರೆ | → | ದೀಕ್ಷೆ ಪಡೆಯುವುದು ಎಂದರ್ಥ |
| 31. | ದೇಶಭ್ರಷ್ಟ | → | ನಾಡಿಗೆ, ದೇಶಕ್ಕೆ ಕಂಟಕವಾಗುವವನು |
| 32. | ಮೆರಿಬೇಕು | → | ವಿಜೃಂಬಿಸಬೇಕು |
| 33. | ಬಾನ | → | ಅನ್ನ, ಆಹಾರ |
| 34. | ನಿಶ್ಚಿತಾರ್ಥ | → | ಮದುವೆಯನ್ನು ನಿಶ್ಚಯ ಮಾಡುವ ಒಂದು ವಿಧಿ |
| 35. | ಹಣಸಿನ ಬಡಿಗೆ | → | ಬಿದುರಿನ ಕಟ್ಟಿಗೆಯ ಮುಂದೆ ಕಬ್ಬಿಣದ ಸರವನ್ನು ಬಿಗಿದ ಕಟ್ಟಿಗೆಗೆ ಈ ರೀತ ಕರೆಯಲಾಗುತ್ತದೆ |
| 36. | ಇಲಾಲು | → | ತ್ರಿಶೂಲಕ್ಕೆ ಕೊಬ್ಬರಿ, ಬಟ್ಟೆ ಮುಂತಾದ ವಸ್ತುಗಳನ್ನು ಸುತ್ತಿರುವ ಒಂದು ದೀವಟಿಗೆ |
| 37. | ಗೊಣುಮಕ್ಕಳು | → | ಗಂಡು ಮಕ್ಕಳು |
| 38. | ಸೊಸ್ತ್ರು | → | ಸೊಸೆಯಂದಿರು |
| 39. | ಪಡುಗ | → | ಅರಿವೆ, ಗಡಿಗೆ |
| 40. | ಒಂದೂವರೆಸೇರು | → | ಸೇರು = ಲೀಟರ್‌ಗಿಂತ ಹೆಚ್ಚಿನ ಅಳತೆಯ ಸಾಧನ. ಅದರಿಂದ ಅಳಿದ ಒಂದು ಮತ್ತು ಅರ್ಧ ಭಾಗ. |
| 41. | ನೆಲ್ಲಕ್ಕಿ | → | ಭತ್ತದ ಕಾಳು |
| 42. | ಉಂಬಳಿ | → | ಮಾನ್ಯವಾಗಿ ಕೊಡುವ ಭೂಮಿ, ಗ್ರಾಮ ಮುಂತಾದವು |
| 43. | ದೇವರನ್ನು ಕಟ್ಟೆದೀವಿ | → | ದೇವರ ದೀಕ್ಷೆ ನೀಡುತ್ತಿದ್ದೇವೆ |

| | | | |
|---|---|---|---|
| 44. | ಮನ್ಯಾಗ | → | ಮನೆಯಲ್ಲಿ |
| 45. | ಬಿಡ್ತೈದೀವಿ | → | ಬಿಡುತ್ತಿದ್ದೇವೆ |
| 46. | ತೊಳ್ಕಂಡು | → | ತೊಳೆದುಕೊಂಡು |
| 47. | ಕುಂದ್ರಸ್ತೀವಿ | → | ಕೂಡಿಸುತ್ತೇವೆ |
| 48. | ಹೂವಿನ ಕೂಟ | → | ಹೂಲಿನಿಂದ |
| 49. | ತಿಕ್ಕಡಿ | → | ತೊಂದರೆ |
| 50. | ಹಡ್ಲಿಗಿ | → | ಜೋಗಿತಿಯರ ಕೈಯಲ್ಲಿರುವ ಬಿದುರಿನ ಪುಟ್ಟಿ |
| 51. | ನಡತೆ | → | ನಡಾವಳಿ |
| 52. | ಅಂಗೇ | → | ಹಾಗೇ |
| 53. | ಹಾಕ್ಯಂಡು | → | ಹಾಕಿಕೊಂಡು |
| 54. | ಸನ್ಯಾಕ | → | ಹತ್ತಿರಕ್ಕೆ |
| 55. | ತಿಕ್ಕಮಂದಿ | → | ಹುಚ್ಚು ಜನರು |
| 56. | ಹೊಲಸು | → | ಕೆಟ್ಟದು |
| 57. | ಗೊರಮೆಂಟು | → | ಸರಕಾರ |
| 58. | ಸಪೋಟು | → | ಸಹಾರ್ಯವಾಗಿ ನಿಲ್ಲುವುದು, ದು ಇಂಗ್ಲೀಷ್ ನ ಸಪೋರ್ಟ್ ಪದ ಜನಪದರಲ್ಲಿ ಸಪೋಟು ಆಗಿದೆ. |
| 59. | ಬಿಟ್ಟಕಂಡಿದ್ದು | → | ಬಿಟ್ಟಿದ್ದರು |
| 60. | ಉರಕೋನಿ | → | ನಾರಿನ ತೆಳುವಾದ ಹಗ್ಗ |
| 61. | ಇರ್ತೈತೆ | → | ಇರುತ್ತೆ |
| 62. | ಬ್ಯಾಗಾರ | → | ಚಲುವಾದಿಯರು |
| 63. | ಮಾದಿಗರು | → | ಹರಿಜನರು |
| 64. | ತಾಯಿ-ಪಿಳ್ಳೆ | → | ತಾಯಿ ಮಗಳು (ಪಿಳ್ಳೆ ಎಂಬುದು ತೆಲುಗಿನ ಪಿಲ್ಲ(ಹೆಣ್ಣು)ದ ರೂಪವಾಗಿದೆ) |
| 65. | ಬೇಸು | → | ಚೆನ್ನಾಗಿ |
| 66. | ಅವುಟು | → | ಸ್ಫೋಟಕ |
| 67. | ತುಬಾಕು | → | ಬಂದೂಕು |

| | | | |
|---|---|---|---|
| 68. | ವಾಸಿ | → | ಚೆನ್ನಾಗಿ, ಕಡಿಮೆಯಾಗಿ |
| 69. | ಮುಟ್ಟುಸ್ತೀವಿ | → | ಮುಟ್ಟಿಸುತ್ತೇವೆ, ತಲುಪಿಸುತ್ತೇವೆ |
| 70. | ಎಕ್ಕಡ-ದಿಕ್ಕಡಿ | → | ಹೆಚ್ಚುಕಡಿಮೆ |
| 71. | ಮಾಡಾತಟಿಗೆ | → | ಮಾಡುವ ಹೊತ್ತಿಗೆ, ಆಗುವ ಹೊತ್ತಿಗೆ |
| 72. | ಕೊಡಂಗಿಲ್ಲ | → | ಕೊಡುವುದಿಲ್ಲ |
| 73. | ಮಗಲಾಯ | → | ಕ್ಷೇತ್ರ ಜನರು ಬಡಿಗೆ ಆಟವನ್ನು ಮಗಲಾಯಿ ಎನ್ನುತ್ತಾರೆ. ರತ್ನಕೋಶದಲ್ಲಿ - ಗಂಡು ಆನೆ ಎಂದಿದೆ. |
| 74. | ಪರವು | → | ಅನ್ನ ದಾಸೋಹ |
| 75. | ಅನುಕೋ | → | ಅಂದುಕೋ |
| 76. | ಪಿಳ್ಳಂಗೋವಿ | → | ಕೊಳಲು |
| 77. | ವಾಲಗ | → | ಬಸವಿಯರು ಮಲ್ಲಯ್ಯನ ಸ್ಮರಣೆಯನ್ನು ಮಾಡುವಾಗ ಹಾಡುವ ಶ್ಲೋಕವನ್ನು ವಾಲಗ ಹಾಕುವುದು ಎನ್ನುತ್ತಾರೆ |
| 78. | ಲಸುಮವ್ವ | → | ಲಕ್ಷ್ಮಮ್ಮ |
| 79. | ನಡಕಳ್ತೀವಿ | → | ನಡೆದು ಕೊಳ್ಳೀವಿ |
| 80. | ಎಡೆ | → | ನೈವೇದ್ಯ |
| 81. | ಡ್ರೆಸ್ | → | ಉಡುಪು |
| 82. | ದಾಸೋಹ | → | ಶಿವಭಕ್ತರಿಗೆ ಮಾಡುವ ಆರೋಗಣ |
| 83. | ಪಾವು | → | ಕಾಲು ಲೀಟರ್‌ನ ಅಳತೆ |
| 84. | ಅಚ್ಚೇರು | → | ಅರ್ಧ ಲೀಟರ್‌ನ ಅಳತೆ |
| 85. | ಮಾಡಂಗಿಲ್ಲ | → | ಮಾಡುವುದಿಲ್ಲ |
| 86. | ಸಂಗಟಿ | → | ಮುದ್ದೆ, ಹಿಟ್ಟು |
| 87. | ಮೀಸಲು | → | ಪ್ರತ್ಯೇಕವಾಗಿ ತೆಗೆದಿರಿಸಿದ ಮುಡಿಪು |
| 88. | ಬರ್ರೆಪ್ಪ | → | ಬೇಗ ಬರಲು ಹೇಳುವುದು |
| 89. | ನೀಸು ಪದಾರ್ಥ | → | ಮಾಂಸ |
| 90. | ಸಣ ಮಾಡಿ | → | ನಮಸ್ಕಾರ ಮಾಡಿ |
| 91. | ಗುಡ್ಯಾಗ | → | ಗುಡಿಯಲ್ಲಿ |

| | | | |
|---|---|---|---|
| 92. | ಬರ್ತೀವಿ | → | ಬರುತ್ತೇವೆ |
| 93. | ಹೊತ್ಕಂಡು | → | ಹೊತ್ತುಕೊಂಡು |
| 94. | ಮುಡುಪು | → | ಕಾಣಿಕೆ |
| 95. | ಕಕ್ಷೆ | → | ಸೇಡು |
| 96. | ಪ್ರಮಾದ | → | ತೊಂದರೆ |
| 97. | ಚೆಕ್ ಮಾಡಿಕೊಂಡು | → | ವಿಚಾರಿಸಿಕೊಂಡು |
| 98. | ಪರವಳ | → | ಮಗ್ನನಾಗು |
| 99. | ಬರಾದೇವರಿಗೆ | → | ಬರುವ ದೇವರಿಗೆ |
| 100. | ತರಾತುರಿ | → | ಅವಸರ, ಆತರುವಾಗಿ, ಬೇಗ ಬೇಗ |
| 101. | ರಟ್ಟೆಗಳು | → | ತೋಳುಗಳು |
| 102. | ಯದೋ ಮೂಳ | → | ಯಾರೋ ಬೆಪ್ಪ, ನಾಚಿಕೆ ಬಿಟ್ಟವನು, ಯಾರೋ ಗಂಡ ಅಥವಾ ಹೆಂಡತಿ ಕಳೆದುಕೊಂಡವರು |
| 103. | ಅತ್ತಾಗ | → | ಅತ್ತ ಕಡೆ |
| 104. | ಇನಾಮು | → | ಬಹುಮಾನ, ಬಳುವಳಿ |
| 105. | ಸ್ವಾದೀನ | → | ವಶಕ್ಕೆ |
| 106. | ದು(ಇ)ಪ್ಪಟ್ಟು | → | ಎರಡು ಪಟ್ಟು |
| 107. | ದೇವ್ರುಮನಿ | → | ದೇವರ ಮನೆ |
| 108. | ಕರ್‍ರಗೆ | → | ಕಪ್ಪಾಗಿ |
| 109. | ಕರುಕು | → | ಸುಟ್ಟ ಕಟ್ಟಿಗೆಯ ತುಂಡು |
| 110. | ತಿಕ್ಕೋದು | → | ತಿಕ್ಕುವುದು |
| 111. | ಅಂಬೋದು | → | ಅನ್ನುವುದು |
| 112. | ಏನೈತಿ | → | ಏನಿದೆ |
| 113. | ಮಾಫಿ | → | ತಪ್ಪನ್ನು ಮನ್ನಿಸುವುದು, ರಿಯಾಯಿತಿ |
| 114. | ಕೊಡ್ತೀವಿ | → | ಕೊಡುತ್ತೇವೆ |
| 115. | ಶಾಟ್ ಬಡಿಗೆ | → | ಹಣಸಿನ ಬಡಿಗೆ, ತಲೆಗೆ ಬೀಳುವುದನ್ನು ಶಾಟ್ ಬಡಿಗೆ ಎಂದು ಕರೆಯಲಾಗುತ್ತದೆ |

| | | | |
|---|---|---|---|
| 116. | ಬಾಣಾಕಟ್ಟಿಗೆ | → | ಬಿದುರಿನ ಕಟ್ಟಿಗೆ |
| 117. | ಡೌನ್ಸ್‌ಗೆ | → | ಕೆಳ ಭಾಗದಲ್ಲಿ, ಕಳಗಡೆಗೆ |
| 118. | ದೊಬ್ಬಿಕ್ಯಾಂತ | → | ದಬ್ಬುತ್ತಾ, ತಳ್ಳುತ್ತಾ |
| 119. | ಒತ್ತುತ್ತೀಯ | → | ಒತ್ತುತ್ತಿರುವೆ |
| 120. | ಹುರ್ರೆ | → | ಬಡಿಗೆ ಆಟದ ಸಂಭ್ರಮದಲ್ಲಿ ವಿಚಿತ್ರವಾಗಿ ಕೂಗವ ಧ್ವನಿ |
| 121. | ಬಡಕಂಮ್ಮಾದು | → | ಬಡಿದುಕೊಳ್ಳುವುದು |
| 122. | ದಡಗ್ಗನ | → | ಇದ್ದಕ್ಕಿದ್ದಂತೆ |
| 123. | ದೇವರುತಾಗೇನೇ | → | ದೇವರು ಹತ್ತಿರಾನೇ |
| 124. | ಜವಾಬು | → | ಉತ್ತರ |
| 125. | ಎತ್ತಂಗಿಲ್ಲ | → | ಎತ್ತುವ ಹಾಗಿಲ್ಲ |
| 126. | ಹಾಲುಭಾಕ್ಷಿ | → | ತುಂಬಿದ ಹಾಲಿನ ಬಟ್ಟಲದ ಸನ್ನಿಧಿಯಲ್ಲಿ ಒಗ್ಗಟ್ಟಾಗಿ ಎಲ್ಲರೂ ಪ್ರಮಾಣ ಮಾಡುವ ಬಗ್ಗೆ. |
| 127. | ನಾನ್ಯಾಕಲೇ | → | ನಾನೇತಕ್ಕಲೇ |
| 128. | ಗೊಂಡ್ರಗೊಡ್ಲಿ | → | ಪರಶುರಾಮನ ಬಳಿಯಿರುವ ಒಂದು ಆಯುಧ |
| 129. | ನಡೆಮ್ಮ | → | ನಡಿಯಮ್ಮ |
| 130. | ಅತ್ಲಾಗೆ | → | ಆ ಕಡಿಗೆ, ಅತ್ತ ಕಡೆ |
| 131. | ಗೊಟ್ಟ | → | ಪಶುಗಳಿಗೆ ಔಷಧ ಕುಡಿಸಲು ಉಪಯೋಗಿಸುವ ಬೊಂಬಿನ ಸಾಧನ |
| 132. | ಗ್ವಾದ್ಲಿ | → | ದನಕರುಗಳು ಕಟ್ಟುವ ಜಾಗ |
| 133. | ಕುಡತೆ | → | ಮುಸರೆ ನೀರಿನ ತೊಟ್ಟಿ |
| 134. | ತೊಟ್ಲ | → | ತೊಟ್ಟಿಲು |
| 135. | ಸಾಯ್ತಾನೆ | → | ಸಾಯುತ್ತಾನೆ |
| 136. | ದೇವ್ರೈದಾನ | → | ದೇವರಿದ್ದಾನೆ |
| 137. | ದೀಪಾರಾಧನೆ | → | ದೀಪವನ್ನು ಬೆಳಗಿಸಿ ಆರಾಧಿಸುವುದು |
| 138. | ತೂರ್ವ | → | ಪೂರ್ವ |
| 139. | ಕುಚ್ಚಬ್ಯಾಡ | → | ಕುದಿಸಬೇಡ |

| | | | |
|---|---|---|---|
| 140. | ಅಂಗೇನೆ | → | ಹಾಗೇನೆ |
| 141. | ನನ್ನ ಕೈಯ್ಯಾಗಹುಟ್ಟೋ ಬದುಕಾದ್ರೆ | → | ನನ್ನ ಕೈಯಲ್ಲಿ ಮಾಡುವ ಕೆಲಸವಾದರೆ |
| 142. | ಭಯಬಿದ್ದು | → | ಭಯಗೊಂಡು |
| 143. | ಕೊಯ್ಯೋದಿಲ್ಲ | → | ಕೊಯ್ಯುವುದಿಲ್ಲ, ಕತ್ತರಿಸುವುದಿಲ್ಲ |
| 144. | ರಟ್ಟಿಗೆ | → | ರೊಟ್ಟಿಗೆ |
| 145. | ಮುದಮಲ್ಲ | → | ಮುದಿಮಲ್ಲ ಎಂದರೆ ಹಿರಿಯ ಎಂದರ್ಥ |
| 146. | ಗಗ್ಗಾರಿ | → | ಕಾಲಿಗೆ ಹಾಕಿಕೊಳ್ಳುವ ಗೆಜ್ಜೆ |
| 147. | ಅವುತಾರ | → | ಅವತಾರ |
| 148. | ಆಳ್ಳಲಿ | → | ಆರಳಲಿ |
| 149. | ಆಯಿತವಾರ | → | ಭಾನುವಾರ |
| 150. | ಇಬ್ಬಾರು | → | ಇಬ್ಬರು |
| 151. | ಎದುರತ್ತಿ | → | ಎದುರು ಹತ್ತಿ |
| 152. | ಐತಿ | → | ಇದೆ |
| 153. | ಐದಾನೆ | → | ಇದ್ದಾನೆ |
| 154. | ಒಂದೊತ್ತು | → | ಒಪ್ಪತ್ತು, ಒಂದೇ ಹೊತ್ತು |
| 155. | ಕತ್ತೀಲಿ | → | ಖಡ್ಗದಲ್ಲಿ |
| 156. | ಕರ್ಪಿನ | → | ಕಪ್ಪಾದ |
| 157. | ಕಮ್ಮಿ | → | ಕಡಿಮೆ |
| 158. | ಕಾಸ್ಯಾಳ | → | ಕಾಯಿಸಿದ್ದಾಳೆ |
| 159. | ಕಿವ್ಯಾಗ | → | ಕಿವಿಯಲ್ಲಿ |
| 160. | ಕುತನಿ | → | ಒಂದು ಉಡುಗೆ ವಿಶೇಷ |
| 161. | ಕುಂತಿಲ್ಲ | → | ಕುಳಿತಿಲ್ಲ |
| 162. | ಕೊಣ್ಣು | → | ಕಣ್ಣು |
| 163. | ಖಂಡುಗ | → | ಅಳತೆ ಮಾಪಕದ ಒಂದು ಕ್ರಮ |

| | | | |
|---|---|---|---|
| 164. | ಗದ್ದಿಗೆ | → | ಕರಿ ಕಂಬಳಿಯಿಂದ ಚೌಕಾಕಾರವಾದಲ್ಲಿ ಹಾಸಿದ ಹಾಗೂ ಪೂಜಾ ಸಾಮಗ್ರಿಗಳನ್ನು ಇಡುವ ಜಾಗ, ಮಣೆ, ಪೀಠ, ಆಸನ |
| 165. | ಗಂಜಿ | → | ಅನ್ನದಿಂದ ತೆಗೆಯಲ್ಪಟ್ಟ ಗಟ್ಟಿನೀರಿನಂತಹ ದ್ರವ |
| 166. | ಗಾವುದ | → | ದೂರವನ್ನು ಅಳೆಯುವ ಮಾಪಕ |
| 167. | ಘನ | → | ದೊಡ್ಡದಾದ |
| 168. | ಜವಳಿ | → | ಬಟ್ಟೆ |
| 169. | ಡುಮುಕ | → | ಶಬ್ಧ |
| 170. | ತಿಪ್ಪಲು | → | ಕಷ್ಟ |
| 171. | ತಿರಕಂಡು | → | ಭಿಕ್ಷೆ |
| 172. | ತಿಂಬಾಕ | → | ತಿನ್ನುವುದಕ್ಕೆ |
| 173. | ತೊಗಣಿ | → | ತಗಣಿ, ತಿಗಣೆ |
| 174. | ನಾಲರು | → | ನಾಲ್ವರು |
| 175. | ನೇಮಚಾರ | → | ನಿಯಮ |
| 176. | ಪೆಂಡಿ | → | ಕಟ್ಟು |
| 177. | ಪೊವಡಿ | → | ಆಡವಿ |
| 178. | ಬರ್ರ್ರೋ | → | ಬನ್ನಿ ರೋ |
| 179. | ಭಾ ಸೆ | → | ಬಾರೋ (ಸ್ನೇಹಿತನನ್ನು ಕರೆಯುವ ವಿಧಾನ) |
| 180. | ಬಾಸೆಯ | → | ಪ್ರಮಾಣ |
| 181. | ಮಂತ್ಯಾಕ | → | ಮನೆ ಹತ್ತಿರ |
| 182. | ಮನ್ತ್ಯೆನ | → | ಮನೆವರೆಗೆ, ಮನೆತನಕ |
| 183. | ಮೊಗ | → | ಮುಖ |
| 184. | ಯಕ್ಕ | → | ಅಕ್ಕ |
| 185. | ಯಾಕರ | → | ಯಾಕಾಗಿ |
| 186. | ರಸೆಕಡಗ | → | ಬಂಗಾರದ ಕಡಗ |
| 187. | ರಕ್ಷಿಪಡೆ | → | ರಾಕ್ಷಸರಿರುವ ಪಡೆ, ಗುಹೆ |
| 188. | ರಿಣ ತೀರ್ಸು | → | ಋಣವನ್ನು ತೀರಿಸು |

| | | | |
|---|---|---|---|
| 189. | ವಟ್ಟೆ | → | ಹೊಟ್ಟೆ |
| 190. | ವಂಟ | → | ಹೋದ |
| 191. | ಶಡಗರ | → | ಸಡಗರ |
| 192. | ಸಾಟೆಗಾರ | → | ಸಮನಾದ |
| 193. | ಸಿರ | → | ಕುತ್ತಿಗೆ |
| 194. | ಸೀನೀರು | → | ಸಿಹಿ ನೀರು |
| 195. | ಸೌಳು | → | ಬಟ್ಟೆ ಸೆಳೆಯಲು ಕಾಡಿನಲ್ಲಿ ಸಿಗುವ ಒಂದು ಪದಾರ್ಥ |
| 196. | ಹಾದಿಕಾರ | → | ದಾರಕಾರ |
| 197. | ಹೂವಿನ್ಯಾಗ | → | ಹೂವಿನಲ್ಲಿ |
| 198. | ಹುಟ್ಯಾಳ | → | ಹುಟ್ಟಿದ್ದಾಳೆ |
| 199. | ಕೊಡ್ಲಿ | → | ಕೊಡಲಿ |
| 200. | ಪಾರು | → | ಹಾರು |
| 201. | ನಿಮ್ಮಿಂದೆ | → | ನಿಮ್ಮ ಹಿಂದೆ |
| 202. | ಕಾಟ | → | ತೊಂದರೆ |
| 203. | ನಿಲ್ಲಂಗಿಲ್ಲ | → | ನಿಲ್ಲುವುದಿಲ್ಲ |
| 204. | ನಡುವಂತರ | → | ಮಧ್ಯಂತರದಲ್ಲಿ |
| 205. | ಓತೀಯ | → | ಹೋಗುತ್ತೀಯಾ |
| 206. | ಹೋಗ್ತೈತಿ | → | ಹೋಗುತ್ತದೆ |
| 207. | ಸುನೇತನ | → | ಒಳ್ಳೆಯ ಆಚಾರಗಳಿಂದ ಕೂಡಿದ |
| 208. | ಸೀದಾ | → | ನೇರವಾಗಿ |
| 209. | ಕುಡಿತ್ತೈತೆ | → | ಕುಡಿಯುತ್ತಿದೆ |
| 210. | ಕಣ್ತುಂಬ | → | ಕಣ್ಣ ತುಂಬಾ |
| 211. | ಬಾರೀ | → | ಬಹಳ |
| 212. | ರೆಡ್ಡ್ಯೋರು | → | ರೆಡ್ಡಿಯವರು |
| 213. | ಇಡ್ಕಂಡು | → | ಹಿಡಿದುಕೊಂಡು |
| 214. | ಬ್ಯಾನೆ | → | ರೋಗ |

# ಶ್ರೀ ಮಾಲತೇಶ ಪ್ರಸನ್ನ

ಖಡ್ಗಂ ಕಪಾಲಂ, ಢಮರುಗಂ, ತ್ರಿಶೂಲಂ। ಭುಜೈಶ್ಚತುರ್ಭಿ ಚತುರಂ ವಹಂತಂ।
ಅಶೇಷು ಸಂಪತ್ಸುಖದಾಯಕಾಕ್ಷಂ। ಮಲ್ಲಾರಿನಾಥಂ ನವೇಸಾಸ್ಮರಾಮಿ॥

ಶ್ರೀಮಾನ್ ಮಹಾ ಕಪಿಲ ಮುನಿವರ ಆದಿ ಮೈಲಾರ ಮೂಲ ಕ್ಷೇತ್ರ ಸಿಂಹಾಸನಕ್ಕೆ ಅಧ್ಯಕ್ಷ್ಯರಾದ ಶ್ರೀ ಮಾರ್ತಾಂಡ ಭೈರವ ಕರಿಯಾಳ ಭಂಡಾರಕ್ಕೆ ಕಾರಣ ಕರ್ತರಾದ, ಆಚಾರ ವಿಚಾರಕ್ಕೆ ಅಗ್ರಗಣ್ಯರಾದ ಆದಿಮೈಲಾರ ಕಲಿ ಮೈಲಾರಪುರ ವರಾಧೀಶರಾದ, ಗುರುಗೋವಪ್ಪನ ಸಾಂಪ್ರದಾಯಕರಾದ, ಮೈಲಾರ ಕ್ಷೇತ್ರ ತುಂಗಭದ್ರಾ ತೀರ ನಿವಾಸರಾದ ನಿತ್ಯ ಕರ್ಮ ಅನುಷ್ಠಾನ ಹರಿಹರ ಧ್ಯಾನ್ಯ ಪಾರಾಯಣರಾದ ವ್ರತ ನೇಮ ನಿತ್ಯ ಆಚಾರರಾದ ಗೋಬ್ರಾಹ್ಮಣ ಪ್ರತಿಪಾಲಕರಾದ ನಯ, ವಿನಯ, ದಯ, ದಾಕ್ಷಣ್ಯ ಪರೋಪಕಾರಿಗಳಾದ, ವಿಭೂತಿ ರುದ್ರಾಕ್ಷಿಗಳಾದ, ತ್ರಿಕಾಲ ಶಿವ ಪೂಜಾ ಧುರಂಧರಾದ ನೀತಿ ಕಾರ್ಯ ಪ್ರವೀಣರಾದ. ನಿತ್ಯಾನ್ನ ದಾನ ವಿನೋದರಾದ ಏಕವಾಕ್ಯ ಪ್ರತೀಪಾಲಕರಾದ, ಸತ್ಯ ಸದಾಚಾರ ನಿತ್ಯ ಪರಿಪೂರ್ಣರಾದ, ಅಖಂಡಿತ ಲಕ್ಷ್ಮೀ ಸದಾ ಪ್ರಸನ್ನರಾದ. ಮಹಾರಾಜಾಧಿರಾಜ ರಾಜಪೂಜಿತ ರಾಜಮಾನ್ಯ ರಾಜಶ್ರೀ ಶ್ರೀ ಗುರು ಕಪಿಲಮುನಿ ಸ್ವಾಮಿ ಒಡೆಯರ್ ಇವರ ಮಗ ಶ್ರೀ ಗುರುಮಲ್ಲಪ್ಪಯ್ಯಸ್ವಾಮಿ ಒಡೆಯರ್ ನಾನು ಬರೆದು ಕೊಟ್ಟ ಶ್ರೀ ಮುಖ ಏನೆಂದರೆ ಯಾರಿಗೆ ಆಗಲಿ ಈ ಶ್ರೀಮುಖ ಕೆದಿಟ್ಟ ನಂತರ ಇನ್ನೊಬ್ಬರ ಇದಕ್ಕೆ ಆಟಂಕ ಮಾಡಕೂಡದು ಮಾಡಿದ ಪಕ್ಷದಲ್ಲಿ ಅವಕ್ಕೆ ತಗಲುವ ಖರ್ಚುಗಳು ಯಾವತ್ತು ಅವರೇ ಭರಿಸಿ ಕೊಂಡು ಹೋಗಬೇಕು ಮತ್ತು ಗುರುಗಳು ಎಷ್ಟು ತಪ್ಪು ಕೇಳುತ್ತಾರೋ ಅಷ್ಟು ಕೊಡಬೇಕಾಗುತ್ತದೆ ಇಷ್ಟೇ ಮಂಗಳ ಆಶಿರ್ವಾದಗಳು

ವಗ್ಗರ ಹೆಸರು :

ತಂದೆ/ತಾಯಿ :

ಗ್ರಾಮ :

ತಾಲೂಕ :

ಜಿಲ್ಲಾ :

ಬಿಟ್ಟಂತ ಗಣಾಚಾರಿ :

M.S. ಕಪಿಲ ಮುನಿಸ್ವಾಮಿ
S/O ಶ್ರೀ ನಂದಗಿರಿಸ್ವಾಮಿ ಒಡೆಯರ್

ಶ್ರೀಮಾನ್ ಗುರುಗಳ ಸಂತಕ

ಶ್ರೀ ಮಾಳಾ ಮಲ್ಲೇಶ್ವರಸ್ವಾಮಿ ಪ್ರಸನ್ನಃ




## ದಸರ್ರಾ ಕಾರಣಿಕೆ

ಸ್ವಸ್ತಿಶ್ರೀ ವೃಷನಾಮ ಸಂ|| ಅಶ್ವೀಯಜ ಶುದ್ಧ ಏಕಾದಶಿ ಶನಿವಾರ ದಿನಾಂಕ **27-10-2001** ಶ್ರೀ ಮಾಳಾ ಮಲ್ಲೇಶ್ವರ ಸ್ವಾಮಿ ತಿಳಿಸಿರುವ ಹೇಳಿಕೆ.

## ಬಹುಪರಾಕ್

(1) **2800** ನಗಹಳ್ಳಿ

(2) **460** ಜೋಳ

(3) **6-3, 3-6** ಆದೀತು

(4) ಹತ್ತಿಸಾಲಿನಲ್ಲಿ ಅಮ್ಮಣ್ಣ ಚೀಲ ಕಟ್ಟಿದ್ದಾಳೆ

(5) ಭೂದೇವಿ ಕುಣಿದಾಡಿದ್ದಾಳೆ

ಇತಿ

**ಶ್ರೀ ಮಲ್ಲೇಶ್ವರಸ್ವಾಮಿ ಸೇವಾ ಸಮಿತಿ**

ದೇವರಗುಡ್ಡ.

---

ಭವಾನಿ ಪ್ರಿಂಟರ್ಸ್, ಆದವಾನಿ.



ರೋಜೇದ ಹೂವಿನ ಅಲಂಕಾರ (ಬಲಬದಿ)



ಮಾದರ ಮಲ್ಲಯ್ಯನ ಗುಡಿ



ಹಿರೇಮೈಲಾರದ ಮೈಲಾರಲಿಂಗನ ದೇವಸ್ಥಾನ



ಅದಿಲಿಂಗನಗುಡಿ (ತೆಕ್ಕಲಕೋಟೆ)



ಜಾತ್ರೆಯ ದೃಶ್ಯ



ಸ್ವಾಮಿ ಮಲ್ಲಯ್ಯನ ರಥೋತ್ಸವ



ಒಡೆಯರೊಂದಿಗೆ ವಗ್ಗರು ಮತ್ತು ಬಿಲ್ಲೆ ಜವಾನ



ವಗ್ಗರ ಕುಣಿತ



ಕುದುರೆಕಾರರ ಆಟ



ಓಕುಳಿ ಆಟದಲ್ಲಿ ಬಸವಿಯರು



ದೋಣಿ ತುಂಬುವುದು



ಕುಂಭ ಹೊರುವುದು



ಗಣಾಚಾರಿ ತಮ್ಮ ಕಾಯಕದಲ್ಲಿ ನಿರತರವಾಗಿರುವುದು



ಭಕ್ತರಿಂದ ದಾಸೋಹ ಕಾರ್ಯಕ್ರಮ



ಮುಂಡಿ ಕೊಡುವುದು



ಸರಪಳಿ ಪವಾಡ



ವನ್ನಿಕೆರೆ ಕಟ್ಟೆ



ಗುಹೆಯಲ್ಲಿ ವಾಸವಾಗಿರುವ ನಿವಾಸಿಗಳು



ಓಕುಳಿಯಾಟ



ಮಲ್ಲಯ್ಯನ ಗುಡಿ (ಹಿಂಧವಾಳ)

